ಅಂತರ ಭಾರತೀಯ ಪುಸ್ತಕಮಾಲೆ

# ಔಷಧಿ

ಪುನತ್ತಿಲ್ ಕುಞ್ಞಬ್ದುಲ್ಲ

ಅನುವಾದ:
ಎಂ.ಎಸ್. ಲಕ್ಷ್ಮಣಾಚಾರ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಮುಖಪುಟ: ಶ್ರೀ ಸುಬ್ರತೋ ಕುಂಡು ಅವರ ವರ್ಣಚಿತ್ರ ಆಧಾರಿತ

ISBN 81-237-3513-8

ಮೊದಲ ಮುದ್ರಣ : 2001 (ಶಕ 1922)



Original Title: Marunnu (*Malayalam*)

Kannada Translation: Aushadhi

**ರೂ. 90.00**

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ಎ-5, ಗ್ರೀನ್ ಪಾರ್ಕ್, ಹೊಸದೆಹಲಿ-110016-ಇವರಿಂದ ಪ್ರಕಟಿತ.

# ಮುನ್ನುಡಿ

ಶ್ರೀ ಪುನತ್ತಿಲ್ ಕುಞ್ಞಬ್ದುಲ್ಲ ಎಂಬ ಲೇಖಕನ ಮನಸ್ಸಿನಲ್ಲಿ ಒಂದು ಅಪೂರ್ಣ ಇತಿಹಾಸದ ರಥ ಚಕ್ರಗಳು ನಾದದ ಅಲೆಗಳನ್ನೆಬ್ಬಿಸುತ್ತಾ ಚಲಿಸುತ್ತಿರುವುದಾಗಿ ಅನೇಕ ಸಲ ನನಗನ್ನಿಸಿದೆ. ಅವರ 'ಸ್ಮಾರಕ ಶಿಲೆಗಳು' (1978) ಪುರಾತನವಾದ ಒಂದು ಮಸೀದಿಯ ಮತ್ತು ಮಸೀದಿಯ ಆವರಣದ ಓನ್ನಲೆಯಲ್ಲಿ ಜೀವನದಲ್ಲಿ ಏನೆಲ್ಲಾ ಸುಖ ಅನುಭವಿಸಿ ಕೊನೆಗೆ ಅಸಹನೀಯ ನೋವಿನಿಂದ ಸಾವನ್ನಪ್ಪುವ ಕೆಲವು ಜೀವಿಗಳ ಸುತ್ತ ಹೆಣೆಯಲಾಗಿದ್ದು ಈ ಕಥೆಗಳು ಕಹಿ-ಸಿಹಿ ಅನುಭವಗಳ ಈ ಐತಿಹಾಸಿಕ ಸಂಕಲನಕ್ಕೆ ಆಧಾರ ಕಲ್ಪಿಸಿ ಕೊಟ್ಟಿವೆ. ಬದುಕು ಮತ್ತು ಸಾವು ಎರಡರಲ್ಲೂ ಪರಾಕ್ರಮಿಯಾಗಿದ್ದ ಒಬ್ಬ ವೀರನೂ, ಆಶ್ರಿತ ವತ್ಸಲನೂ, ರಸಿಕನೂ ಆಗಿದ್ದ ಪೂಕ್ಕೋಯ ತಂಗಳ್ ಒಬ್ಬ ಅಮರ ಜೀವಿ. ಊರಿನ ಹಿರಿಯನಾಗಿದ್ದ ಆತನ ಅದ್ಭುತವಾದ ಜೀವನದ ಕಥೆ-ಪ್ರಸಂಗಗಳು 'ಸ್ಮಾರಕ ಶಿಲೆಗಳ'ಲ್ಲಿ ಸತ್ವಯುತವಾಗಿ ಮೂಡಿಬಂದಿವೆ. ಒಂದು ಹುಣ್ಣಿಮೆಯ ದಿನ ಉಸಿರುಕಟ್ಟಿ ಅಳುತ್ತಿರುವ ಒಂದು ಹಸುಗೂಸಿಗೆ ಒಂದು ಪುಟ್ಟ ಕನ್ನಡಿಯಲ್ಲಿ ಪೂರ್ಣಚಂದ್ರನನ್ನು ತೋರಿಸಿ ಅವಳ ಅಳುವನ್ನು ನಿಲ್ಲಿಸಿದ ಕೋಮಪ್ಪನ್ ವೈದ್ಯರು, ಅರಬ್ಬಿ ಕಥೆಗಳಲ್ಲಿ ಇರುವಂತೆ ಯಜಮಾನನ ಮನಸ್ಸನ್ನು ತಿಳಿದುಕೊಂಡು ವಾಯುವೇಗದಲ್ಲಿ ಓಡುವ ಪೂಕ್ಕೋಯ ತಂಗಳರ ಇಷ್ಟವಾಹನವಾದ ಆ ಕುದುರೆ, ಗೋಸಾಯಿ ಗುಡ್ಡದ ಕಣಿವೆಯಲ್ಲಿನ ಸಮುದ್ರ ತೀರದ ನಿರ್ಜನವಾದ ಸ್ಥಳದಲ್ಲಿ ಚಿನ್ನದ ಮೀನಿನಂತೆ ಬಂದು ಬಿದ್ದುಕೊಂಡಿರುವ ಪೂಕ್ಕುಞ್ಞೆಬೀ - ಇವೆಲ್ಲಾ ಈ ಪ್ರಾದೇಶಿಕ ಇತಿಹಾಸಕ್ಕೆ ಮೆರುಗು ನೀಡಿದ ಕಥಾಪಾತ್ರಗಳು. ನಿಶ್ಚಿತವಾದೊಂದು ಸಾಮುದಾಯಿಕ ಸಂದರ್ಭದಲ್ಲಿ ಉತ್ತರ ಮಲಬಾರ್‌ನಲ್ಲಿನ ಒಂದು ಗ್ರಾಮದಲ್ಲಿ ನಡೆಯುವ ಘಟನೆಗಳು 'ಸ್ಮಾರಕ ಶಿಲೆಗಳ' ಮೂಲ ಆಧಾರ.

ಆಸ್ಪತ್ರೆಯ ಭೀತಿ ತುಂಬಿದ ಸನ್ನಿವೇಶದಲ್ಲಿ ಡಾಕ್ಟರು ಮತ್ತು ನರ್ಸುಗಳ ಲೋಕದ ಏಳೆ ಎಳೆಗಳನ್ನು ಹಾಸ್ಯರಸ ಮಿಶ್ರಿತ ಲಘು ಚಿತ್ರಣಗಳಲ್ಲಿ ಹೆಣೆದಿಟ್ಟ ಸಣ್ಣ ಕತೆಗಳನ್ನು ಕುಞ್ಞಬ್ದುಲ್ಲಾ ಇದಕ್ಕೆ ಮುಂಚೆಯೂ ಬರೆದಿದ್ದಾರೆ. ಮಲಯಾಳ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಧಾರಾಳವಾಗಿ ಇನ್ನೂ ಕಂಡುಹಿಡಿಯಬೇಕಿರುವ ಈ ವಸ್ತು-ವಿಷಯದ ಬಗ್ಗೆ ಪ್ರಕಾಶವನ್ನೂ ಬೀರಿದ ಕೆಲವೇ ಬರಹಗಾರರಲ್ಲಿ ಕುಞ್ಞಬ್ದುಲ್ಲಾ ತಮ್ಮದೇ ಸ್ಥಾನ ಹೊಂದಿದ್ದಾರೆ. ಆದರೆ 'ಔಷಧಿ' ಕೃತಿ ರಚನೆಯಲ್ಲಿ ಕುಞ್ಞಬ್ದುಲ್ಲಾರ ಕ್ಯಾನ್‌ವಾಸ್ ಸ್ವಲ್ಪ ಮಟ್ಟಿಗೆ ವಿಸ್ತೃತವಾಗಿದೆ. ಇದರಲ್ಲಿ ಕಥಾಪಾತ್ರಗಳು ತಮ್ಮದೇ ಆದ ಆಯಾಮ ಪಡೆದಿವೆ. ತತ್ವಚಿಂತನೆಗನುಸಾರವಾಗಿರುವ ಸಮಸ್ಯೆಗಳು ಬಲು ಆಳಕ್ಕೆ

ಹೋಗಿ ನಾಟುತ್ತವೆ. ಒಂದು ವಿಧದಲ್ಲಿ ನೋಡಿದರೆ 'ಔಷಧಿ'ಯ ರಚನೆಯು ಕುಞ್ಞಬ್ದುಲ್ಲಾರ ಆತ್ಮಶೋಧನೆಯ ಪ್ರತೀಕವಾಗಿದೆ. ಅವರೇ ಕಂಡುಹಿಡಿದ ಅರ್ಥಪೂರ್ಣ ಧ್ವನಿಗಳು ಅಡಗಿರುವ ಒಂದು ಕೃತಿಯಾಗಿದೆ. ಈ ಕಾದಂಬರಿಯಲ್ಲಿ ಅವರು ತಮ್ಮ ಜೀವನೋಪಾಯದ ಅಂತಸ್ಸತ್ವವನ್ನು ಮುಂದೆ ನಿಲ್ಲಿಸಿ, ಧರ್ಮಾಧರ್ಮ ವಿವೇಚನೆಗೆ ಪ್ರಯತ್ನಿಸಿದ್ದಾರೆ. ವೈದ್ಯಶಾಸ್ತ್ರದ ಆಗು-ಹೋಗುಗಳ ಅದರ ಪರಿಮಿತಿಗಳ ಬಗ್ಗೆ ದೀರ್ಘ ಶಾಸ್ತ್ರೀಯ ವಿಶ್ಲೇಷಣೆ ಮಾಡಿ, ಆಧುನಿಕ ಯುಗದಲ್ಲಿನ ವೈದ್ಯವೃತ್ತಿಯ ಕೆಲ ನೈತಿಕ ಸಮಸ್ಯೆಗಳ ತೀವ್ರ ಚರ್ಚೆ ಈ ಕಾದಂಬರಿಯ ಭಾವ ಪರಿಮಿತಿಯಲ್ಲಿ ಸೇರಿದೆ. ಡಾಕ್ಟರ್ ಕ್ವಾಜ, ಬ್ರಿಗೇಡಿಯರ್ ತಾಜುದ್ದೀನ್, ಈ ಎರಡು ಕಥಾ ಪಾತ್ರಗಳನ್ನು ಎದುರು ಬದುರಾಗಿ ನಿಲ್ಲಿಸಿ ವೈದ್ಯವೃತ್ತಿಯ ವಿರೋಧಾಭಾಸಗಳನ್ನು ಎತ್ತಿ ತೋರಿಸುವುದರಿಂದ ಇಲ್ಲಿ ಕಾದಂಬರಿಕಾರರು ಒಂದು ಬಗೆಯ ಆತ್ಮವಿಶ್ಲೇಷಣೆಗೆ ತೊಡಗಿದ್ದಾರೆ. ವಿಜ್ಞಾನದ ತೃಷ್ಣೆಯಿಂದ ಪ್ರೇರಿತನಾಗಿ, ಕರುಣೆ, ಸಹಾನುಭೂತಿ ಇವುಗಳೇ ಬಂಡವಾಳ ವಾಗಿರುವ ಈ ರಂಗವನ್ನು ಪ್ರವೇಶಿಸಿದ ಒಬ್ಬನ ಅರ್ಪಣಾಭಾವ ಒಂದು ಭಾಗದಲ್ಲಿ ಯಾದರೆ; ಇನ್ನೆಲ್ಲಾ ಕೆಲಸಗಳ ಪರಿಸರದಲ್ಲಿ ಇರುವಂತೆ ಚಿಕಿತ್ಸಾಲೋಕದಲ್ಲೂ ಪ್ರತಿಫಲಿಸುವ ಅಧಿಕಾರಶಾಹಿಯ ಬಿಗಿಮುಷ್ಟಿಯಲ್ಲಿ ಸಿಲುಕಿದ ಉದ್ಯೋಗಸ್ಥ ಮನೋಭಾವ ಇನ್ನೊಂದು ಭಾಗದಲ್ಲಿ ವ್ಯಕ್ತವಾಗಿದೆ. ನಮ್ಮ ಕಾಲಘಟ್ಟಕ್ಕೆ ಸೇರಿದ, ಜಯಶೀಲರಾದ ಇನ್ಯಾವುದೇ ಡಾಕ್ಟರಂತೆಯೇ ಕುಞ್ಞಬ್ದುಲ್ಲಾ ತಮ್ಮೊಳಗೆ ವಾಸವಾಗಿರುವ ಈ ದ್ವಂದ್ವ ಮನೋಭಾವಗಳನ್ನು ಗುರುತಿಸಿ ತಿಳಿದುಕೊಂಡಿರ ಬೇಕು. ಆದುದರಿಂದಲೇ ಅವರು ತೀರ್ಪನ್ನು ಕೊಡದೆ ತಪ್ಪಿಸಿಕೊಂಡು ಅಂತ್ಯ ಕಾಣದ ಒಂದು ಬಗೆಯ ವಿದಾಯದೊಂದಿಗೆ ತಮ್ಮ ಲೋಕದಲ್ಲಿನ ಆದರ್ಶ ಘಟನೆಗಳನ್ನು ನಿರೂಪಿಸಿದ್ದಾರಷ್ಟೆ. ಕಾದಂಬರಿಯ ಮೂವತ್ತೈದನೆಯ ಅಧ್ಯಾಯದಲ್ಲಿ 'ಮರ್ಸಿ ಕಿಲ್ಲಿಂಗ್' (ದಯಾ ಮರಣ) ಬಗ್ಗೆ ನಡೆಯುವ ದೀರ್ಘವಾದ ಚರ್ಚೆಯಲ್ಲಿ ಆಂತರಿಕ ಪ್ರವಾಹದ ರೂಪದಲ್ಲಿ ವೈದ್ಯಕೀಯ ವೃತ್ತಿಯ ನೈತಿಕ ಆಯಾಮಗಳ ಬಗ್ಗೆ ಒಂದು ತೆರನಾದ ಹಠವಾದ - ತರ್ಕ ಕಂಡು ಬರುತ್ತದೆ. ಹಾಗೆ 'ಔಷಧಿ'ಯ ಲೇಖನ-ಕುಞ್ಞಬ್ದುಲ್ಲಾರಿಗೆ ಪರಸ್ಪರ ವಿರೋಧಾಭಾಸಗಳಲ್ಲಿ ಸಿಲುಕಿದ ಮಮತೆ-ಮಮಕಾರಗಳ ಆಳಗಳನ್ನು ಅಳೆದು ಹುಡುಕಿಕೊಳ್ಳುವ ಆಸ್ಪದ ಒದಗಿಸಿದೆ.

ಈ ಕಾದಂಬರಿಯನ್ನು ಓದಲೆಂದು ಕೈಯಲ್ಲಿ ತೆಗದುಕೊಳ್ಳುವುದಕ್ಕಿಂತ ಮೊದಲು ಒಬ್ಬ ಸಹೃದಯನ ಮನಸ್ಸಿನಲ್ಲಿ ಥಟ್ಟನೆ ಹೊಳೆಯುವ ಇನ್ನೊಂದು ಮಾದರಿಯ ಆದರ್ಶ ಸಾಹಿತ್ಯವೂ ಇದೆ. ಸ್ವಾತಂತ್ರ್ಯದ ನಂತರ ಭಾರತೀಯ ಸಾಹಿತ್ಯದಲ್ಲಿ ಕಾದಂಬರಿಗಳ ಗುಂಪಿನಲ್ಲಿ ತನ್ನ ಮಾದರಿಯ ಅಪರೂಪವಾದ ಮೇರು ಕೃತಿ ಬಂಗಾಳಿ ಕಾದಂಬರಿ ('ಆರೋಗ್ಯನಿಕೇತನ'-ಮಲಯಾಳ ಅನುವಾದ, 1961ರಲ್ಲಿ) ಅಷ್ಟರ ಮಟ್ಟಿಗೆ ನಮ್ಮ ಶ್ರೇಷ್ಠಸಾಹಿತ್ಯದ ಒಂದು ಭಾಗವಾಗಿದೆ. ಅನೇಕ ಆಳವಾದ ವ್ಯಥೆಗಳನ್ನೊಳಗೊಂಡು, ವಿರಕ್ತಿಯ ಬದಿಗೆ ಬಂದು ನಿಲ್ಲುವ ಜೀವನ್ ಮಹಾಶಯ ಎಂಬ ವೈದ್ಯನ ದೂರದೃಷ್ಟಿಯ ಮೂಲಕ ಮರಣದ ಸಮಸ್ಯೆಯನ್ನೂ, ಮರಣವನ್ನು ತನ್ನ ಅಧೀನಕ್ಕೆ ಒಳಪಡಿಸಲು ಮನುಷ್ಯನು ನಡೆಸುವ ಅನುಕಂಪಾರ್ಹವಾದ

ಯತ್ನಗಳನ್ನೂ ನೋಡುವ ಒಂದು ಪ್ರಯತ್ನವನ್ನು 'ಆರೋಗ್ಯನಿಕೇತನ'ದಲ್ಲಿ ತಾರಾಶಂಕರ್ ಬಂದೋಪಾಧ್ಯಾಯ ನಡೆಸಿದ್ದಾರಷ್ಟೆ. ಅಂಧಳೂ, ಕಿವುಡಿಯೂ, ನಸು ಹಳದಿ ವರ್ಣದವಳೂ ಆದ ಮೃತ್ಯು ದೇವತೆಯ ಕಾಲಸಪ್ಪಳವನ್ನು ಗುರುತಿಸಿ ತಿಳಿಯಬಹುದು ಎಂಬುದೇ ಜೀವನ್ ಮಹಾಶಯನ ವಿಶೇಷವಾದ ಒಂದು ಸಿದ್ಧಿ. ಅವನ ರೋಗನಿರ್ಣಯ ರೀತಿಯನ್ನೂ, ಚಿಕಿತ್ಸಾವಿಧಿ ಪದ್ಧತಿಯನ್ನು ನಿಶ್ಚಯಿಸು ವುದು ಈ ಅಪೂರ್ವ ಸಿದ್ಧಿಯೇ. ತನ್ನ ಮುಂದೆಯೇ ಕೈಕಾಲುಗಳನ್ನು ಅಪ್ಪಳಿಸಿ, ಜಗಳವಾಡಿ, ಉಪಶಮನಕ್ಕಾಗಿ ದುಃಖಿಸಿ ಒದ್ದಾಡುವ ರೋಗಿಗಳಲ್ಲಿ ಒಬ್ಬೊಬ್ಬರ ಹಣೆಯ ಬರೆಹವನ್ನು ಮಹಾಶಯ ಮೊದಲೇ ನೋಡಬಲ್ಲನು. ಊಹಿಸಲಸಾಧ್ಯ ವಾದ ಯಾವುದೋ ಶಕ್ತಿಗಳು ಅವನ ಮುಖಾಂತರ ಮಾತನಾಡುತ್ತಿರುವಂತೆ ಅವನ ಸುತ್ತಮುತ್ತ ಇರುವವರಿಗೆ ಅನ್ನಿಸುವುದು ಇದರಿಂದಲೇ. ಆಧುನಿಕ ಯುಗದಲ್ಲಿ ಕ್ಷಯಿಸಿ ಹೋಗುತ್ತಿರುವ ಗ್ರಾಮೀಣ ಸಂಸ್ಕೃತಿ-ಸಂಸ್ಕಾರದ ಹಿನ್ನೆಲೆಯಲ್ಲಿ ಪರಂಪರಾಗತವಾದ ಚಿಕಿತ್ಸಾರೀತಿ ಮತ್ತು ಅಲೋಪತಿ ವೈದ್ಯಕೀಯ ಪದ್ಧತಿಯ ನಡುವಣ ದ್ವಂದ್ವ ವಿರೋಧಾಭಾಸಗಳ ಚಿತ್ರೀಕರಣವನ್ನು ಒಳಗೊಂಡ ಈ ಕಾದಂಬರಿ ಆಧ್ಯಾತ್ಮಿಕ ಜಿಜ್ಞಾಸೆ-ಕುತೂಹಲಗಳಿಗ ಬೇರೊಂದು ಆಯಾಮ-ಚೌಕಟ್ಟು ಕಲ್ಪಿಸಿಕೊಡುತ್ತದೆ.

ಕಲಾತ್ಮಕ ಸೃಜನತೆಯ ದೃಷ್ಟಿಯಿಂದ ಇಲ್ಲವೆ ಜೀವನದ ವಿಮರ್ಶೆ ಹಾಗೂ ಸಮಾಲೋಚನೆಯ ದೃಷ್ಟಿಯಿಂದ ತಾರಾಶಂಕರ್ ಬಂದೋಪಾಧ್ಯಾಯ ಅವರ ಈ ಕಾದಂಬರಿಯು ಕಳೆದು ಹೋದ ಸುವರ್ಣಯುಗದ ಕೃತಿಯಾಗಿದೆ. ಅದರ ಪುನರಾವರ್ತಿ-ಪುನರ್‌ಸೃಷ್ಟಿ ಸಾಧ್ಯವಿಲ್ಲ. ಇನ್ನೊಂದು ಮಣ್ಣಿನಲ್ಲಿ ಅಥವಾ ವ್ಯತ್ಯಸ್ತವಾದ ಒಂದು ಸಾಂಸ್ಕೃತಿಕ ವಾತಾವರಣದಲ್ಲಿ, ಈ ಕಾದಂಬರಿಯಲ್ಲಿನ ಕಥಾಪಾತ್ರಗಳನ್ನೋ, ಪ್ರಮೇಯಗಳನ್ನೋ ಬಿತ್ತಿ-ಸೃಷ್ಟಿಸುವ ಪ್ರಶ್ನೆಯೇ ಇಲ್ಲವಾಗಿದೆ.

ತಾರಾಶಂಕರ್ ಬಂದೋಪಾಧ್ಯಾಯರಂತೆ ಒಬ್ಬ ಸಾಹಿತಿ ಐತಿಹಾಸಿಕ ಮಟ್ಟದಲ್ಲಿ ವಸ್ತು ವಿಷಯಕ್ಕೆ ಆಧುನಿಕ ರೂಪ-ರಂಗು ನೀಡುವುದು ಭಾರತೀಯ ಕಾದಂಬರೀ ಸಾಹಿತ್ಯದಲ್ಲಿ ಪ್ರಾರಂಭದಿಂದಲೇ ಮುಂದುವರಿದುಕೊಂಡು ಬಂದಿರುವ ಸನಾತನ ವಾದ ಒಂದು ಭಾವಬದ್ಧತೆಯ ಪ್ರಕಾಶನಕ್ಕೆ ಹೊಸ ಸಮೀಕರಣ ಕಂಡು ಹಿಡಿಯುವ ಕೆಲಸವನ್ನು ಈ ಕಾದಂಬರಿಯ ರಚನೆಯಲ್ಲಿ ಕುಞ್ಞಬ್ದುಲ್ಲಾ ವಹಿಸಿಕೊಂಡಿದ್ದಾರೆ. ('ಆರೋಗ್ಯನಿಕೇತನ'ದಿಂದ ಸ್ಫೂರ್ತಿ ಪಡೆದು ಮಲಯಾಳಿ ಕವಯಿತ್ರಿ ಶ್ರೀಮತಿ ಸುಗತ ಕುಮಾರಿಯವರು ಬರೆದಿರುವ ಕವಿತೆಯೊಂದನ್ನು ಕುಞ್ಞಬ್ದುಲ್ಲಾರವರು ತಮ್ಮ 'ಔಷಧಿ' ಕಾದಂಬರಿಯಲ್ಲಿ ಒಂದು ಕಡೆ ಉದ್ಧರಿಸಿರುವುದು ಸಮಯೋಚಿತವೆಂದು ಮನಃಪೂರ್ವಕ ಒಪ್ಪಬೇಕಿದೆ.) ಕುಞ್ಞಬ್ದುಲ್ಲಾರವರ ಈ ಕಾದಂಬರಿ ತತ್ವಚಿಂತನೆಯ ಅತಿವ್ಯಾಪ್ತಿ ಇಲ್ಲದೆ ಪರೋಕ್ಷವಾದ ರೀತಿಯಲ್ಲಾದರೂ ಸಹ ಮರಣಕ್ಕೆ ಸಂಬಂಧಿಸಿದ ಒಂದು ಬಗೆಯ ದರ್ಶನ (Meta-physics of Death)ವನ್ನು ಇದು ಪ್ರದರ್ಶಿಸುತ್ತದೆ. ಇದರ ಶೇಕಡ ನೂರು ಭಾಗ ಅವರದೇ. ಅದಕ್ಕಿಂತ ಹೆಚ್ಚಾಗಿ ಹೇಳಬೇಕೆಂದರೆ ಆಧುನಿಕ ವೈದ್ಯಶಾಸ್ತ್ರವು ನೀಡುವ ವಿಷಯಗಳಿಂದ ಆಯ್ದು ತೆಗೆದ ಸಂವೇದನೆಗಳ ಒಟ್ಟು ಮೊತ್ತ ಇದೇ ಆಗಿದೆ.

ಈ ಕಾದಂಬರಿಯ ವಿನ್ಯಾಸದತ್ತ ಕಣ್ಣೋಡಿಸುವುದಾದರೆ ಮೊದಲು ಮನಸ್ಸಿನಲ್ಲಿ ನಾಟುವ ಸಂಗತಿಯೆಂದರೆ ಒಂದು ನಿರೂಪಣಾ ಕೇಂದ್ರ (Narrative Centre)ದ ಅಭಾವ. ಓದಲು ಮೊದಲಿಟ್ಟಾಗ ಈ ಕಾದಂಬರಿಯ ಮುಖ್ಯ ಕಥಾಪಾತ್ರವು ದೇವದಾಸ್ ಎಂದೂ, ಅವನ ದೃಷ್ಟಿಕೋನವನ್ನೇ ಈ ಕಾದಂಬರಿಕಾರರು ಅನುಸರಿಸಿರುವುದೆಂದೂ ನಮಗೆ ಅನ್ನಿಸುತ್ತದೆ. ಆದರೆ ಕಥೆಯ ಸುರುಳಿಯು ಬಿಚ್ಚಿಕೊಂಡು ಹೋದಂತೆ ಕಾದಂಬರಿಕಾರರ ಒಟ್ಟಾರೆ ಅಖ್ಯಾನ ಪದ್ಧತಿಯಲ್ಲಿ ದೇವದಾಸ್‌ಗಿರುವ ಸ್ಥಾನವು ಸ್ಪಷ್ಟವಾಗಿ ಬಿಡುತ್ತದೆ. ಅವನ ಅಸ್ತಿತ್ವವು ಒಂದು ನೆರಳಿನಂತೆ ಹೆಚ್ಚು ದೊಡ್ಡದಾದ ಯಥಾರ್ಥದಲ್ಲಿ ಕರಗಿ ವಿಲೀನಗೊಳ್ಳುತ್ತದೆ. ಅದರ ಅನುಭೂತಿ ನಮಗಾಗುತ್ತದೆ. ಮಿನಿಯೇಚರ್‌ಗಳನ್ನು ಸೃಷ್ಟಿಸಿಕೊಂಡು ಸಾಹಿತ್ಯರಂಗದಲ್ಲಿ ಪ್ರವೇಶ ಮಾಡಿದ ಕುಞ್ಞಬ್ದುಲ್ಲಾ ಇಲ್ಲಿ ರೆಂಬ್ರಾಂಡ್‌ನ ಸೃಷ್ಟಿ ಸಾಮರ್ಥ್ಯಗಳನ್ನು ನೆನೆಯುವಂತೆ ಅನೇಕ ಸ್ತ್ರೀ ಪುರುಷರ ಚಿಕ್ಕದೂ ದೊಡ್ಡದೂ ಆದ ಚಿತ್ರಗಳನ್ನು ಬಿಡಿಸಿದ್ದಾರೆ. ಆತನಿಗೆ ಪರಿಚಯವಿರುವ ಮನುಷ್ಯರ ಸಾದೃಶ್ಯ ಮಾತ್ರವಲ್ಲ ಅವರುಗಳ ಬದಲಾಗುತ್ತಿರುವ ಮುಖಭಾವಗಳ ಮೂಲಕ ನಾವು ಒಳಸಾರವೆಂದು ಕರೆಯುವ ಜೀವನದ ದುಃಖವನ್ನೂ, ದುರಂತವನ್ನೂ, ಜುಗುಪ್ಸೆಯನ್ನೂ ಕುಞ್ಞಬ್ದುಲ್ಲಾರವರು ಪ್ರತಿಬಿಂಬಿಸುತ್ತಾರೆ. ಕುಞ್ಞಬ್ದುಲ್ಲಾರಂತೆ ತಮ್ಮ ಕಥಾಪಾತ್ರಗಳಲ್ಲೇ ಲೀನರಾಗುವ ಇನ್ನೊಬ್ಬ ಕಾದಂಬರಿ ಕರ್ತೃ ಬಹುಶಃ ಆಧುನಿಕ ಪೀಳಿಗೆಯಲ್ಲಿಲ್ಲ. ಇವರು ಪಾತ್ರವನ್ನು ಸೃಷ್ಟಿಸುವಾಗ ಬಿಟ್ಟು ಹೋಗದ ಈ ವಿಶಿಷ್ಟ ಅಂಶವೇ ಮಲಯಾಳ ಕಾದಂಬರಿಯಲ್ಲಿನ ಒಂದು ಪ್ರಧಾನ ಪಾರಂಪರ್ಯದೊಂದಿಗೆ ಆತನನ್ನು ಬಂಧಿಸುವ ಅಂಶವೆಂದು ತೋರುತ್ತದೆ. ....ಆದರೆ 'ಔಷಧಿ'ಯಲ್ಲಿನ ಒಂದೊಂದು ಕಥಾಪಾತ್ರಕ್ಕೂ ತನ್ನದೇ ಆದ ಅಸ್ತಿತ್ವವಿದೆ ಎಂದು ಹೇಳುವಂತೆಯೇ, ಸತ್ಯವೂ ಈ ಕಾದಂಬರಿಯನ್ನು ಮೊದಲಿನಿಂದ ಕೊನೆಯವರೆಗೂ ಸುತ್ತಿ ನಿಂತಿರುವ ಒಂದು ವಿವಾದ ವಿಷಾದ-ಸಂಧ್ಯಾ, ಕಥಾ ಪಾತ್ರಗಳ ಸಾಧ್ಯತೆಗಳನ್ನು ಪರಿಮಿತಿಗಳನ್ನೂ ಬೇರೊಂದು ಬೆಳಕಿನಲ್ಲಿ ನೋಡಲು ನಮ್ಮನ್ನು ಪ್ರೇರೇಪಿಸುತ್ತದೆ. ಬಹುಶಃ ಈ ಸಮಸ್ಯೆಯೊಂದಿಗೆ ಸಂಯೋಜಿಸಿ ಮಾತ್ರವೇ ಹಿಂದಿನಿಂದ ದಾರ ಕಟ್ಟಿ ಆಟವಾಡಿಸುವ ಅಜ್ಞಾತನಾದ ಒಬ್ಬ ಬೊಂಬೆಯಾಟದವನ ಮರ್ಜಿಯನ್ನು ಅನುಸರಿಸಿ ನಿಯಂತ್ರಣದಲ್ಲಿರುವಂತೆ ನಡೆದುಕೊಳ್ಳುವ ಇವರುಗಳ ಮನಸ್ಸಿನ ಪ್ರಕಟನೆಗಳು ನಮಗೆ ಪೂರ್ಣಾರ್ಥದಲ್ಲಿ ಒಳಗೊಳ್ಳಲು ಸಾಧ್ಯ. ಕಾದಂಬರಿ ಮುಗಿಯುವಾಗ ಇವರುಗಳ ಜೀವನವು ಅನಿವಾರ್ಯವಾದ ಶೈಥಿಲ್ಯದೊಂದಿಗೆ ಚಲಿಸುವುದರೊಂದಿಗೆ ಕಾದಂಬರಿಕಾರರ ಭಗ್ನ ಪ್ರೇಮಿಯಾದ ದೇವದಾಸ್‌ನ ಚಿಂತನೆಯ ಮೂಲಕ ತಾವು ತಿಳಿಸಲಿಚ್ಛಿಸುವ ಯಥಾರ್ಥವನ್ನು ನಮ್ಮ ಮುಂದೆ ಮಂಡಿಸಲಾಗಿದೆ.

"ಭವಿಷ್ಯದಲ್ಲಿ ಏನಾಗಬೇಕು ಏನು ಮಾಡಬೇಕು ಯಾವ ವೃತ್ತಿ ಅನುಸರಿಸಬೇಕು-ಎಂಬುದನ್ನು ಯೋಚಿಸಿಲ್ಲ". ಔಷಧಿ ಮತ್ತು ಮೃತ್ಯುವಿನ ಲೋಕವು ತನಗಾಗಿ ಕಾದಿರುವುದೆಂಬ ವಾಸ್ತವದ ಅರಿವು ದೇವದಾಸ್‌ಗೆ ಇದೆ. ಔಷಧಿಯೇ, ಅಥವಾ ಮೃತ್ಯುವೇ ಯಾವುದು ದೊಡ್ಡದೆಂಬ ವಾಸ್ತವವು

ದೇವದಾಸ್‌ಗೆ ಗೊತ್ತಿಲ್ಲ. ಅವುಗಳಲ್ಲಿ ಒಂದು ಮತ್ತೊಂದನ್ನು ನಿರಂತರ ಸೋಲಿಸುತ್ತದೆ. ಅದು ನಿಜ. ಡಾಕ್ಟರ್ ಕ್ವಾಜರ ಮಾತುಗಳನ್ನು ದೇವದಾಸ್ ನೆನೆಸಿಕೊಂಡನು:

"ಮೃತ್ಯುವಿನ ನಂತರ ಶರೀರದಲ್ಲಿ ಔಷಧಿಗೆ ಯಾವ ಸ್ಥಾನ ಸಂಬಂಧವೂ ಇರುವುದಿಲ್ಲ. ಮೃತ್ಯುವಿಗೆ ಔಷಧಿಯನ್ನು ಕಂಡರೆ ಭಯ. ಮೃತ್ಯು, ಔಷಧಿಯ ಲೋಕದಲ್ಲಿ ಒಂದು ಹದ್ದು ಇದ್ದಂತೆ. ಅದು ಸದಾ ತಲೆಯ ಮೇಲೆ ಸುತ್ತುತ್ತಾ ಹಾರುತ್ತಾ ಇರುತ್ತದೆ. ಅವಕಾಶ ಸಿಕ್ಕಾಗ ಅದು ಮೇಲಿನಿಂದ ಎರಗಿ ಪ್ರಾಣವನ್ನು ದೋಚಿ ಹಾರಿಹೋಗುತ್ತದೆ."

ಕಾದಂಬರಿಯ ಪ್ರಶ್ನೆಗಳ ಜಾಲ ಮೇಲೆ ಉದಾಹರಿಸಿದ ನುಡಿ-ವಾಕ್ಯಗಳಲ್ಲಿ ಅಡಗಿದೆ. ಔಷಧಿ ಮತ್ತು ಮೃತ್ಯುವಿನ ಶಕ್ತಿಗಳ ನಡುವಣ ನಿರಂತರ ಸಂಘರ್ಷದಿಂದ ಕಾದಂಬರಿಕಾರರು ಹೊಸದೊಂದು ಸತ್ಯವನ್ನು ಸೃಷ್ಟಿಸುತ್ತಾರೆ.

ಔಷಧಿಯೂ, ಮೃತ್ಯುವೂ ತಮ್ಮಲ್ಲಿರುವ ಬಲಾಬಲಗಳನ್ನೂ ಸರಿಯಾಗಿ ಪರೀಕ್ಷಿಸಿಕೊಳ್ಳುವುದು ನಿತ್ಯರೋಗಿಯಾದ ಜಾನ್ ಬಲ್‌ದೇವ್ ಮಿರ್ಜಾನಲ್ಲಿಯಾಗಿದೆ. ಆಧುನಿಕ ವೈದ್ಯಶಾಸ್ತ್ರದ ಎಲ್ಲೆಯನ್ನು ಗುರುತಿಸುವ ಒಂದು ಘಟನೆಯಾಗಿಯೇ ಅವನು ಪ್ರಾಣಕ್ಕಾಗಿ ನಡೆಸುವ ಹೋರಾಟವನ್ನು ಕಾದಂಬರಿಕಾರರು ವರ್ಣಿಸಿರುವುದು. ತಾನು ಮಾಡಿದ ಪಾಪಗಳನ್ನು ನಿವೇದಿಸಲೆಂದು ಪಾದ್ರಿಯನ್ನು ಹುಡುಕುವ ಒಬ್ಬ ಮನುಷ್ಯನನ್ನಾಗಿಯೇ ಜಾನ್ ಬಲ್‌ದೇವ್ ಮಿರ್ಜಾನನ್ನು ಮೊದಲು ನಾವು ನೋಡುವುದು. ಸದಾ ಭಾಷಣ ಮಾಡುತ್ತಿದ್ದ ಅವನು ಥಟ್ಟನೆ ಮೌನ ತಾಳುತ್ತಾನೆ. ಮೆಲ್ಲ ಮೆಲ್ಲನೆ ಒಂದು ಟ್ಯೂಬ್‌ನಿಂದ ಕೊಡಲಾಗುವ ಪಾನೀಯಗಳನ್ನು ಮೂತ್ರವನ್ನಾಗಿ ಬದಲಾಗಿಸುವ ಒಂದು ಯಂತ್ರವಾಗಿ ಉಳಿಯುತ್ತಾನೆ. ಅವನಿಗೆ ಪ್ರಜ್ಞೆ ಬರಿಸಲೆಂದು ಆಸ್ಪತ್ರೆಯಲ್ಲಿನ ಪಂಡಿತರಾದ ಸರ್ಜನ್‌ಗಳೂ, ನರ್ಸ್‌ಗಳೂ, ಹಗಲಿರುಳೆನ್ನದೆ ಕೆಲಸ ಮಾಡುತ್ತಾರೆ. ಅವನ ಜೀವವನ್ನು ನೆಲೆ ನಿಲ್ಲಿಸುವುದೆಂಬುದು ಅವರಿಗೆ ಸಂಬಂಧಿಸಿದಂತೆ ಒಂದು ರಣಕಹಳೆಯಂತಾಗುತ್ತದೆ. ಕಾದಂಬರಿಯ ಅಂತ್ಯದಲ್ಲಿ ಆಯಾ ಓದಿ ಹೇಳುವ ಸುವಾರ್ತೆಗಳಲ್ಲಿನ ಭಕ್ತಿಪೂರಿತವಾದ ವಿಷಯಗಳನ್ನೂ, ವಚನಗಳನ್ನೂ ಅವನು ಆಲಿಸಿ ಪರಮಾನಂದ ಪಡೆಯುತ್ತಾನೆ. ಸನ್ನಿಹಿತವಾದ ಮೃತ್ಯು, ಸ್ವಲ್ಪ ಹೊತ್ತು ಸಂದೇಹಿಸಿದ ನಂತರ ಅವನ ಎದುರಿನಿಂದ ದೂರವಾಗುತ್ತದೆ. ಅವನ ಕಣ್ಣಿನಲ್ಲಿ ಪ್ರತಿಫಲಿಸುವ ವೈರಾಗ್ಯವೇ ಅವನ ಮೃತ್ಯುವನ್ನೂ ಹಿಂಜರಿಯುವಂತೆ ಮಾಡಿದ್ದು? ನೋವನ್ನೂ ಹಲ್ಲು ಕಚ್ಚಿ ಸಹಿಸುವ ರೋಗಿಗಳ ಒಂದು ದೀರ್ಘ ಸಾಲನ್ನು ಗುರುತಿಸಿ ಪರಿಚಯಿಸಿದ ನಂತರ-ಎಲ್ಲವೂ ಬಂದು ಅಪ್ಪಳಿಸುವ ಆ ಕೊನೆಯ ಸಂಕೇತದಲ್ಲಿ ಆದಿ ಸಾಗರದಲ್ಲಿನ ಅಲೆಯ ಮಾಲೆಗಳಂತೆ ಸೆಳೆದು ಹೋಗುವ ಮನುಷ್ಯರು ಬಂಧುಬಾಂಧವರಿಂದ ಬೀಳ್ಕೊಳ್ಳುವ ಮುಂಚೆಯೇ ಜೀವ ತೊರೆಯುವ ರಂಗಗಳನ್ನು ತಳಮಳ ಅಣು ಮಾತ್ರವಿಲ್ಲದ ಭಾಷೆಯಲ್ಲಿ ವಿವರಿಸಿದ ನಂತರ - ಕಾದಂಬರಿಕಾರರು ಕೇವಲ ಮಾನವ ಪ್ರತೀಕವೆನಿಸಿದ ಜಾನ್ ಬಲ್‌ದೇವ್ ಮಿರ್ಜಾಗೆ (ಈ ಹೆಸರಲ್ಲಿ ಅಡಗಿರುವ ಪ್ರತೀಕಾತ್ಮಕವಾದ ಧ್ವನಿಯನ್ನು ಗಮನಿಸಿ) ಏಕೆ ಈ ಇಹ

ಜೀವನವನ್ನು ಹಿಂದಿರುಗಿಸಿದರು ? ಮಿರ್ಜಾನ ಆರೋಗ್ಯ ಲಾಭ, ವೈದ್ಯಶಾಸ್ತ್ರದ ಭವಿಷ್ಯತ್ತಿನ ಬಗ್ಗೆ ಕಾದಂಬರಿಕಾರ ಹೊಂದಿರುವ ಆಶಾಭಾವನೆಯ ಇಣುಕು ನೋಟವೇ ?

'ವೆಡ್‌ಲಾಕ್'ನಲ್ಲಿ ಅಕ್ಷರಶಃ ಸಿಕ್ಕಿಕೊಂಡ ನಂತರ ಲಕ್ಷ್ಮಿಯು ದೇವದಾಸ್‌ಗೆ ಕಳುಹಿಸುವ ದೀರ್ಘವಾದ ಪತ್ರದ ಬಗ್ಗೆ ನೀವೇನೆನ್ನುತ್ತೀರಿ ? 'ಆತನು ನನ್ನನ್ನು ಅನುಭವಿಸುವ ಪ್ರತೀ ಕ್ಷಣವೂ ನನ್ನ ಮನಸ್ಸಿಲ್ಲಿ ದೇವದಾಸ್‌ನ ಚಿತ್ರವೇ ಮೂಡಿರುತ್ತದೆ.' ಪತ್ರದಲ್ಲಿ ಅವಳು ಬರೆದ ಈ ವಾಕ್ಯದಲ್ಲಿ ಜ್ವಲಿಸಿ ಏಳುವ ಪ್ರೀತಿಯ ಬಗ್ಗೆ ನಿಮಗೆ ಏನನ್ನಿಸುತ್ತದೆ ? ಈ ಕಾದಂಬರಿಯಲ್ಲಿನ ಮನಸೆಳೆಯುವ ಘಳಿಗೆಗಳಲ್ಲಿ ಇದೂ ಒಂದು. ಈ ಮಾತನ್ನು ಅವಳು ಮತ್ತೆ ಮತ್ತೆ ಹೇಳುವುದರಿಂದ ಸ್ಪಷ್ಟವಾಗುವ ಇನ್ನೊಂದು ಸಂಗತಿಯೆಂದರೆ. ಒಬ್ಬ ಸಾಧಾರಣ ಹುಡುಗಿಯಂತೆ ಅವಳು ತನ್ನ ತಂದೆ ಎನಿಸಿಕೊಂಡವನಿಂದ ವಿಮೋಚನೆ ಪಡೆಯಲಾರಳು. ಅವಳು ತನ್ನದೇ ರೀತಿಯಲ್ಲಿ ಯಾವುದನ್ನೂ ಆಯ್ದುಕೊಳ್ಳಲಾರಳು. ಅವಳ ತಂದೆ ಆಚಾರಿಯವರು ತಾವು ಕೆಲಸ ಮಾಡುವ ಸ್ಥಳದಲ್ಲಿ ಸಂಸ್ಥೆಯಲ್ಲಿ ರೋಗಿಗಳ ಮೇಲೆ ನಡೆಸುವ ಸರ್ವಾಧಿಕಾರವನ್ನು ತಮ್ಮ ಮಗಳ ಮೇಲೂ ಚಲಾಯಿಸುತ್ತಾರೆ. ಅದು ಅವರ ಸರ್ವಾಧಿಕಾರಿ ಮನೋಭಾವವನ್ನು ಸಾರಿ ಹೇಳುತ್ತದೆ. ಈಗಿನ ಕಾಲದಲ್ಲೂ ಭಾರತದಲ್ಲಿ ಮನೆಯೊಳಗೂ, ಕೆಲಸ ಮಾಡುವ ಸ್ಥಳದಲ್ಲೂ ಅಸ್ತಿತ್ವದಲ್ಲಿರುವ ಈ ಮನೋಭಾವವು ಅಲ್ಲಿ ನಡೆಯುವ ಘಟನೆಗಳಿಗೆ ಪರಸ್ಪರ ಹೊಂದಿಕೊಂಡಿವೆ. ಇಂತಹ ಘಟನೆಗಳಿಗೆ ಅನೇಕ ವ್ಯಕ್ತಿಗಳು ವೈಯುಕ್ತಿಕವಾಗಿ ಬಲಿಯಾಗುತ್ತಾರೆ. ಎಷ್ಟೋ ಸಲ ಈ ದುರಂತವನ್ನು ಮಾತುಗಳಲ್ಲಿ ಬಣ್ಣಿಸಲಾಗುವುದಿಲ್ಲ.

ಈ ಪಾತ್ರಗಳಿಗೆ ಹೋಲಿಸಿದರೆ ಅಷ್ಟೇನೂ ಪ್ರಧಾನವಲ್ಲದ ಒಂದು ಪಾತ್ರವಾದ ಮೇರಿಯ ದೃಷ್ಟಿಕೋನದ ಮೂಲಕ ಕಾದಂಬರಿಯ ಅಂತ್ಯವನ್ನು ರೂಪಿಸಲಾಗಿದೆ. ನಿಷ್ಕಳಂಕತೆಯ ಪ್ರತಿರೂಪವೆಂಬಂತೆ ಪ್ರತ್ಯಕ್ಷವಾಗುವ ಒಂದು ಕಥಾಪಾತ್ರವೇ ಈ ಮೇರಿ. ಆದರಿಂದಲೇ ಅವಳು ಕಾದಂಬರಿಯ ಕರ್ತೃ ಸೃಷ್ಟಿಸಿರುವ ಎಲ್ಲಾ ಬಗೆಯ ಆಪತ್ತುಗಳಿಂದಲೂ ಪಾರಾಗುತ್ತಾಳೆ. ಕಥೆಯ ಅಂತ್ಯದಲ್ಲಿ ಯಮುನಾ ನದೀ ತೀರದಲ್ಲಿ, ಇದಕ್ಕೆ ಮುಂಚೆ ಕುಞ್ಞಮ್ಮ ಆಗತಾನೇ ಹೆತ್ತ ಶಿಶುವನ್ನು ಗುಂಡಿ ತೋಡಿ ಹೂತು ಹಾಕಿದ ಅದೇ ಸ್ಥಳದಲ್ಲಿ, ಅದೇ ಮರಳಿನ ಹರವಿನಲ್ಲಿ, ಮೇರಿ ಹೆಜ್ಜೆ ಹಾಕುತ್ತಾ ಹೋಗುತ್ತಿರುವಾಗ ಅವಿವಾಹಿತೆಯಾದ ಅವಳಿಗೆ ಮಾತೃತ್ವದ ಕರೆ ಕೇಳಿಸಿದಂತಾಗುತ್ತದೆ. ಸ್ವಪ್ನಾತ್ಮಕವಾದ ಒಂದು ಅನುಭೂತಿಯ ರೂಪದಲ್ಲಿ ಕಾದಂಬರಿಯ ಕರ್ತೃ ಇದನ್ನು ಹೊರತಂದಿದ್ದಾರೆ.

ಆಗ ತಾನೆ ಹುಟ್ಟಿದ ಒಂದು ಮಗುವಿನ ಅಳು ಆ ಸಮಯದಲ್ಲಿ ಅವಳಿಗೆ ಕೇಳಿಸಿತು. ಅತಿ ಸಮಿಪದಿಂದಲೇ ಅದು ಕೇಳಿ ಬರುತ್ತಿತ್ತು. ಮಸುಕಾದ ಕತ್ತಲೆಯಲ್ಲಿ ಮೇರಿ ಮಗುವನ್ನು ಹುಡುಕಾಡಲು ಆರಂಭಿಸಿದಳು. ಅವಳ ಕೈಗಳು ಥಟ್ಟನೆ ಬೆಚ್ಚಗೆ, ಮೃದುವಾದ ಒಂದು ಪುಟ್ಟ ಶರೀರವನ್ನು ಸ್ಪರ್ಶಿಸಿದವು.

"ಹೌದು, ಆಗ ತಾನೆ ಹುಟ್ಟಿದ ಒಂದು ಮಗುವಾಗಿತ್ತದು."

"ಆವೇಶದಿಂದಲೊ, ವಾತ್ಸಲ್ಯದಿಂದಲೊ ಮೇರಿ ಆ ಮಗುವನ್ನೆತ್ತಿಕೊಂಡು ತನ್ನ

ಮಡಿಲಲ್ಲಿ ಮಲಗಿಸಿಕೊಂಡಳು.”

‘ಔಷಧಿ’ಯಲ್ಲಿ ವಿಶಿಷ್ಟವಾದ ರೀತಿಯಲ್ಲಿ ವರ್ಣಿಸಿರುವ ಮತ್ತೊಂದು ಘಟನೆಯೆಂದರೆ ತಿವಾರಿ ಬಾಬು ಅಪಘಾತಕ್ಕೀಡಾಗಿ ಅಪಮೃತ್ಯುವನ್ನಪ್ಪಿಕೊಂಡು ರಾತ್ರಿ ಮೇಟ್ರನ್ ಹೆಲೆನ್ ಸಿಂಗ್ ಆತನನ್ನು ಮನಸ್ಸಿನಲ್ಲೇ ನೆನೆದು ತನ್ನ ಮಲಗುವ ಕೋಣೆಯಲ್ಲಿ ಆತನೊಂದಿಗೆ ಸುಖಿಸಿದಂತೆ ತೋರಿಸುವ ರಂಗ. ಈ ಘಟನೆಯನ್ನು ಹೆಲೆನ್ ಸಿಂಗ್‌ರ ಮೋಹದ ಚಿಂತೆಯಲ್ಲೇ ವರ್ಣಿಸಲಾಗಿದೆ. ಅವರ ಬಂಧವನ್ನು ಸಮಾಜವು ಎಂದಿಗೂ ಅಂಗೀಕರಿಸುದಿಲ್ಲವೆನ್ನುವುದು ಕಟುವಾದ ಸತ್ಯ. ಇದರ ಬಗ್ಗೆ ಹೆಲೆನ್ ಸಿಂಗ್‌ಗೆ ತಪ್ಪಿತಸ್ಥ ಮನೋಭಾವವಿದ್ದೇ ಇದೆ. ಕುಟುಂಬ ಜೀವನದ ಹದ್ದಿನೊಳಗೇ ಕಳೆಯುವ ತಿವಾರಿ ಬಾಬುವನ್ನು ಒಂದೇ ಒಂದು ರಾತ್ರಿಯಾದರೂ ತಮ್ಮವರನ್ನಾಗಿ ಮಾಡಿಕೊಳ್ಳಬೇಕೆಂಬ ಆಸೆ ಹೆಲೆನ್ ಸಿಂಗ್‌ರದು. ಹಳೆಯ ಒಂದು ಪ್ರೇಮಬಂಧನದ ನೆನಪುಗಳೊಂದಿಗೆ ಮಲ್ಲಯುದ್ಧ ಮಾಡುತ್ತಿರುವ ಈ ಸುಂದರಿಯಾದ ಹೆಣ್ಣಿಗೆ ಅಂತಃಪ್ರಜ್ಞೆಯಲ್ಲಿ ಕಾಡುತ್ತಿರುವ ಅಭಿಲಾಷೆಯದು. ಆದರೆ ಆ ನವ ವಧುವಿನ ಕೆನ್ನೆಯಲ್ಲಿನ ನಸುಗೆಂಪು ಮಾಯವಾಗುವುದಕ್ಕೂ, ಮೊದಲೇ ಆ ಪ್ರಣಯಿಯ ಮೃತದೇಹವು ಶವಾಗಾರಕ್ಕೆ ಬರುತ್ತದೆ. ಈ ಗಾಬರಿಗೆ ನಮ್ಮನ್ನು ಸಿದ್ಧ ಮಾಡಲೆಂದೇ ಈ ಕಾದಂಬರಿಯ ಕರ್ತೃ ಮಾತುಗಳನ್ನು ಮಿತವಾಗಿ ಉಪಯೋಗಿಸಿ ಒಂದು ಹನಿಮೂನಿನ ಚಿತ್ರಣವನ್ನೂ ನೀಡಿರಬೇಕು.

ಒಂದೊಂದೇ ಪದವನ್ನು ನಾಟ್ಯವಾಡಿಸಿ, ಚಿತ್ರ ಬಿಡಿಸಲುಪಯೋಗಿಸಿದ ಕತೆಗಾರರು ಮಲಯಾಳದಲ್ಲಿದ್ದಾರೆ. ಕುಞ್ಞಬ್ದುಲ್ಲಾರವರಿಗೆ ಆ ಗುಂಪಿನಲ್ಲಿ ಸ್ಥಾನವಿಲ್ಲ. ಒಬ್ಬ ಡಾಕ್ಟರ್, ರೋಗಿಗಳಿಗೆ ಔಷಧಿಯ ಚೀಟಿಯನ್ನು ಬರೆದು ಕೊಡುವಾಗ ತನ್ನ ಕರ್ತವ್ಯವನ್ನು ಗುರಿಯಾಗಿಟ್ಟುಕೊಂಡಿರುತ್ತಾನೆ. ಅಕ್ಷರಗಳು ಒಂದೇ ಒಂದು ಗುಂಜಿ ತೂಕ ಹೆಚ್ಚಿದರೂ, ಕಡಿಮೆಯಾದರೂ ಆಗುವ ಅನಾಹುತದ ಬಗ್ಗೆ ಅವನಿಗೆ ಅರಿವಿದೆ. ಓ.ವಿ. ವಿಜಯನ್ ಎಂಬ ಕಾದಂಬರಿಕಾರ ರೂಪಕಗಳ ಮೂಲಕ ಚಿಂತಿಸುವುದನ್ನು ತಮ್ಮ ಒಂದು ಸ್ವಭಾವವಾಗಿಟ್ಟುಕೊಂಡು ಬರೆಯುತ್ತಿರುವಾಗ, ಕುಞ್ಞಬ್ದುಲ್ಲಾದವರು ಭಾಷೆಯ ವ್ಯಾವಹಾರಿಕವಾದ ಅರ್ಥ ಹೇತುವನ್ನು ಕೈಬಿಡಲು ಇಚ್ಛಿಸದಿರುವುದರ ವಿವರಣೆಯು ಬಹುಶಃ ಈ ಹೇಳಿಕೆಯಲ್ಲಿ ಅಡಗಿದೆ.

ಕುಞ್ಞಬ್ದುಲ್ಲಾರು ಸರಳವಾದ ಚಿಕ್ಕ ಚಿಕ್ಕ ವಾಕ್ಯಗಳನ್ನು ಇಷ್ಟಪಡುತ್ತಾರೆ. ಲಲಿತವೂ ಶುಭ್ರತೆಯೂ ಅವರ ಪದಸಂಕುಲದ ಚಿಹ್ನೆಗಳು. ಈ ಕಾದಂಬರಿಯ ಮುವ್ವತ್ತೇಳನೆಯ ಅಧ್ಯಾಯದಲ್ಲಿ ಒಂದು ಕಥಾಪಾತ್ರವಾಗಿ ಬರುವ ಮರಣದ ಆಗುಹೋಗುಗಳ ಬಗ್ಗೆ ಆಲೋಚಿಸುವ ಸಮಯದಲ್ಲಿ ಕಾದಂಬರಿಕರ್ತೃವಿನ ಶೈಲಿಯು ಧ್ಯಾನಾತ್ಮಕವೂ ನಿರಾಕಾರವೂ ಆಗಿರುವುದನ್ನು ಕಾಣಬಹುದು.

1980-90ರಲ್ಲಿ ಮಲಯಾಳ ಕಾದಂಬರಿಗಳಲ್ಲುಂಟಾದ ಭಾವಭೇದಗಳಿಗೆ ಸಂಬಂಧಿಸಿದ ಅತ್ಯುನ್ನತ ಆಹ್ಲಾದಕರವಾದ ವಿಷಯವೆಂದರೆ, ವಿಸ್ತೃತವಾದ ಅನುಭವದ ಕ್ಷೇತ್ರಗಳನ್ನು ಹುಡುಕಲೂ, ಗೆಲ್ಲಲೂ, ನಮ್ಮ ಬರಹಗಾರರು ತೋರಿಸುವ ಆವೇಶವಾಗಿದೆ. ಒಂದೊಮ್ಮೆ ಕಾದಂಬರಿಯ ಬಗೆಗಿನ ತಾತ್ವಿಕ

ಚರ್ಚೆಯಲ್ಲಿ ಯಾರೋ ಹೇಳಿದ ಮಹತ್ತಾದ ಕಾದಂಬರಿ ಎಂಬ ಸಂಕಲ್ಪವು ಅದೇ ರೂಪದಲ್ಲಿಲ್ಲದಿದ್ದರೂ ನಮ್ಮ ಕಾದಂಬರಿಕಾರರನ್ನೂ ಪ್ರಲೋಭಿಸಲು ಆರಂಭಿಸಿದೆ. ಉದಾಹರಣೆಗೆ 'ರಂಡಾ ಮೂಳ' (ಎರಡನೆಯ ಬಾರಿ)ದಲ್ಲಿ ವ್ಯಾಸನ ಪುನಃಗಳನ್ನು ಕುರುಡರಂತೆ ಹುಡುಕಾಡುವ ಶ್ರೀ ಎಂ.ಟಿ. ವಾಸುದೇವನ್ ನಾಯರ್‌ರ ಪ್ರಯತ್ನ, ಅದರ ಪರಿಮಿತಿಗಳು ಏನೇ ಆದರೂ, ಮಹಾಭಾರತ ಕಥೆಯ ಪುನರ್‌ವ್ಯಾಖ್ಯಾನಕ್ಕೆ ಫಲಪ್ರದವಾಗಿ ದಾರಿ ಮಾಡಿಕೊಟ್ಟಿತು. 'ಅಭಯಾರ್ಥಿಗಳ್' (ನಿರಾಶ್ರಿತರು) ಗಳಲ್ಲಿ ಆನಂದ್ ಭಾರತದ ಮಣ್ಣು, ಭೂಪ್ರಕೃತಿ, ಸಾಂಸ್ಕೃತಿಕ ಪರಂಪರೆ ಎಂಬಿವುಗಳನ್ನೂ ಆಸ್ಪದ ಮಾಡಿಕೊಂಡು ಅಗಾಧವಾದ ಒಂದು ಚರಿತ್ರ ವೀಕ್ಷಣೆಯನ್ನು ರೂಪಿಸಿ ತಡೆಯಲು ಶ್ರಮಿಸಿದ್ದಾರೆ. ನಾವು ಇಂದು ತಿಳಿದಿರುವ ರೀತಿಯಲ್ಲಿರುವ ನಾಗರಿಕತೆಯ ಮೂಲ ಬೇರುಗಳನ್ನೂ ಹುಡುಕಲೂ, ಅದರ ಮೂಲಕ ರಾಷ್ಟ್ರವನ್ನೂ, ದೇಶಭಕ್ತಿಯನ್ನೂ ಕುರಿತಾದ ಮಿಥ್ಯಾಧೋರಣೆಗಳನ್ನು ಪ್ರಶ್ನಿಸಲಿರುವ ಪ್ರಯತ್ನವು ಇದರಲ್ಲಿ ನಡೆದಿದೆ. ಮಲಯಾಳದಲ್ಲಿನ ಪ್ರಥಮ 'ಆಶಯಗಳ ನಾವೆಲ್' ಎಂದು ವಿಶ್ಲೇಷಿಸಲ್ಪಡುವಂತಹ 'ಅಭಯಾರ್ಥಿಗಳಿ'ಗೆ ಮನೋಸ್ಥೈರ್ಯವನ್ನು ದೊರಕಿಸಿಕೊಟ್ಟಿತು. ಓ.ವಿ. ವಿಜಯನ್‌ರವರ 'ಧರ್ಮ ಪುರಾಣಂ' ಎಂಬ ಕಾದಂಬರಿಯಲ್ಲಿ ಮೂರನೆಯ ಲೋಕರಾಷ್ಟ್ರಗಳಲ್ಲಿ ಡಿ-ಕಾಲನೈಸೇಷನ್‌ನ ದಶಕಗಳಲ್ಲಿ ಪೀಡಿತನು ಪೀಡಕನಾಗಿ ಬದಲಾಗಿದ್ದುದರೊಂದಿಗೆ ಬೆಳವಣಿಗೆಯನ್ನು ಪಡೆದ ವಿಕೃತವಾದ ರಾಜಕೀಯ ಸದಾಚಾರದ ಬಗ್ಗೆ ಪ್ರವಾಚಕ ಸದೃಶವಾದ ತೀರ್ಪನ್ನೀಯುವಂತಾಯಿತು. 'ಔಷಧಿ' ಕಾದಂಬರಿ ಬರೆದು ಕುಞ್ಞಬ್ದುಲ್ಲಾ ತಮ್ಮ ಐತಿಹಾಸಿಕವಾದ ಕಲಾಲಕ್ಷ್ಯಗಳನ್ನೂ ಮನಸ್ಸಲ್ಲಿ ಹುದುಗಿಸಿ ಕಾಪಾಡುವ ಲೇಖಕರೆಂದು ಲೋಕಕ್ಕೇ ತೋರಿಸಿಕೊಟ್ಟರು.

'ಔಷಧಿ' ಕೃತಿಯನ್ನು ರಚಿಸುವ ಸಮಯದಲ್ಲಿ ಪುನತ್ತಿಲ್ ಕುಞ್ಞಬ್ದುಲ್ಲಾರವರು ತಮ್ಮ ಮನಸ್ಸಿನಲ್ಲಿ ಕಂಡಿದ್ದ ವಿಷಯಗಳು ಏನೇನಾಗಿರಬೇಕು ? ಒಬ್ಬ ಒಳ್ಳೆಯ ಓದುಗನೂ ಆದ ಕುಞ್ಞಬ್ದುಲ್ಲಾ ಖಂಡಿತವಾಗಿಯೂ ಥಾಮಸ್ ಮ್ಯಾನ್‌ನ 'ಮ್ಯಾಜಿಕ್ ಆಫ್ ದಿ ಮಾಂಟನ್' ಅನ್ನು ಜ್ಞಾಪಿಸಿಕೊಂಡಿರಬೇಕು. ವಿನಾಶದ ಕಡೆಗೂ, ಯುದ್ಧಭೀತಿಯ ಕಡೆಗೂ ಸಾಗುತ್ತಿದ್ದ ಯೂರೋಪಿಯನ್ ಸಂಸ್ಕೃತಿಯನ್ನು ಹಿನ್ನೆಲೆಯನ್ನಾಗಿಟ್ಟುಕೊಂಡು ರೋಗ ನಿರೋಗದ ದ್ವಂದ್ವಗಳನ್ನು ಸುತ್ತು ಹಾಕುತ್ತಾ ಥಾಮಸ್ ಮ್ಯಾನ್ ಸೃಷ್ಟಿಸಿದ ವಿಚಿತ್ರವಾದ ಆ ಶುಶ್ರೂಷಾ ಕೇಂದ್ರದ ಮತ್ತು ಅಲ್ಲೇ ವಾಸಿಸುವವರ ಕಥೆ ಅವರ ಮನಸ್ಸಿನಲ್ಲಿ ಕಲಾತ್ಮಕವಾದ ಪೂರ್ಣತೆಯ ಮಾದರಿಯಾಗಿ ನೆಲೆಗೊಂಡಿರಬೇಕು. ಕಾಮೂವಿನ 'ದಿ ಪ್ಲೇಗ್', ಅದರ ನಾಯಕನಾದ ಡಾಕ್ಟರ್‌ರ ದೌತ್ಯ ಪ್ರಜ್ಞೆಯೂ, ಹೊಸದೊಂದು ದಾರಿಯಲ್ಲಿ ಚಿಂತಿಸಲು ಕುಞ್ಞಬ್ದುಲ್ಲರನ್ನೂ ಪ್ರೇರೇಪಿಸಿರಬಹುದು. ಒಂದು ಕ್ಯಾನ್ಸರ್ ವಾರ್ಡ್‌ನ ಸುತ್ತಲೂ ನಡೆಯುವ ಘಟನೆಗಳ ವಿಸ್ತಾರವಾದ ವಿವರಣೆಗಳ ಮೂಲಕ, ಭಯದ, ಸಂಶಯದ, ಸೂಕ್ಷ್ಮಕ್ರೋಶಗಳು ಬೆಳೆದು ವರ್ಧಿಸಿ ವಿಪ್ಲವದ ನಂತರದ ವ್ಯವಸ್ಥೆಯ ಆತ್ಮವನ್ನೂ ಅಗಿದು ನುಂಗಿದ ಪ್ರಕ್ರಿಯೆಯತ್ತ ಲೋಕ ಮನಸ್ಸಾಕ್ಷಿಯನ್ನು ಎಬ್ಬಿಸಿದ ಸೋಲ್‌ಷನಿತ್‌ಸಿನ್‌ನ ಕಾದಂಬರಿ, ಯಥಾರ್ಥವಾದ 'ಡಾಕ್ಯುಮೆಂಟೇಷನ್'ನಿಂದ

ಪ್ರತಿರೂಪಾತ್ಮಕವಾದ ಅರ್ಥಹೇತುವಿನತ್ತ ಕಥೆಯನ್ನು ಹೆಣೆದು ತೆಗೆಯುವ ವಿದ್ಯೆಯೂ ಗಮನಾರ್ಹವಲ್ಲವೇ ? ಈ ಸಾಹಿತ್ಯ ಕೃತಿಗಳೆಲ್ಲವೂ ಕುಞ್ಞಬ್ದುಲ್ಲಾರ ಸೃಷ್ಟಿ ಪ್ರೇರಣೆಗೆ ಹೊಸ ಹುರುಪನ್ನು ಕೊಟ್ಟಿರಬೇಕೆಂದು ಭಾವಿಸುತ್ತೇನೆ. ಹಾಗೆ ತಾವು ವಹಿಸಿಕೊಂಡು ಯುದ್ಧದ ಕರೆಯ ಸ್ವಭಾವವನ್ನೂ ಅರ್ಥ ಮಾಡಿಕೊಂಡಿದ್ದರ ಫಲವಾಗಿ, ಇದೇ ಕಥಾಹಿನ್ನೆಲೆಯನ್ನೂ, ಪ್ರಮೇಯಗಳನ್ನೂ ಇಟ್ಟುಕೊಂಡು 'ಔಷಧಿ'ಯ ಮುಂದುವರಿದ ಕಾದಂಬರಿಯಂತೆ ಇನ್ನೊಂದು ಕಾದಂಬರಿಯನ್ನು ಅವರು ಬರೆಯಬಾರದೆಂದೇನಿಲ್ಲ. ಇವರು ತಾವು ದಿನದಲ್ಲಿನ ಅರ್ಧಕ್ಕಿಂತ ಹೆಚ್ಚು ಸಮಯವನ್ನು ಮುಗಿಸುವ ಕನ್‌ಸಲ್ಟೇಷನ್ ರೂಮ್‌ನಲ್ಲಿ ನಿಸ್ಸಹಾಯಕತೆಯು ಪ್ರತಿಬಿಂಬಿಸುವ ಮುಖಭಾವದೊಂದಿಗೆ ಪ್ರವೇಶಿಸುವ 'ಒಬ್ಬೊಬ್ಬ ರೋಗಿಯೂ ಮನುಷ್ಯನು' ಎಂಬ ಸಂಕೀರ್ಣವಾದ ಸತ್ಯದ ಬಗ್ಗ ಅವರಿಗೆ ಅರಿವನ್ನು ಉಂಟುಮಾಡುತ್ತಾರೆ. ಇದಕ್ಕೆ ಕಾರಣ ರೋಗವೆನ್ನುವುದು ಜೀವನದ ಅಮೂರ್ತ ಭಾಗವು. ಶೂನ್ಯತೆಯತ್ತ ದೀರ್ಘವಾಗಿ ಹೋಗುವ ಮನುಷ್ಯನ ಅಸ್ತಿತ್ವದ ಭೂಗರ್ಭ ದಾರಿಯು. ಅದರ ಮೂಲಕ ಹಾದು ಹೋಗುವ ಅಂತ್ಯವಿಲ್ಲದ ಪ್ರಯಾಣವು ಉಂಟು ಮಾಡುವ ಜುಗುಪ್ಸೆಯೂ, ಕ್ಲೇಶವೂ, ಮತ್ತೆ ಒಂದಿಷ್ಟು ಚಾರಿತಾರ್ಥ್ಯವೂ ತುಂಬಿದ ಅನುಭವಗಳು ಕುಞ್ಞಬ್ದುಲ್ಲಾರಿಗೆ ಸಂಬಂಧಿಸಿದಂತೆ ಮಹತ್ತಾದ ಒಂದು ಕಲಾಸೃಷ್ಟಿಯ ವೈಭವಗಳಾಗಿ ಪರಿಣಮಿಸುವುದೆಂದು ನಾವು ನಿರೀಕ್ಷಿಸೋಣ.

**ಡಾ ವಿ. ರಾಜಕೃಷ್ಣನ್**

# ಒಂದು

ಪಂಗಸ್ಥಳದವನಾದ ದೇವದಾಸ್ ಯಮುನಾತೀರದಲ್ಲಿ ಟ್ರೈನ್‌ನಿಂದ ಇಳಿದ. ಅವನು ತನ್ನ ಬಾಳಿನ ವೈಪರೀತ್ಯದ ಯಾವುದೋ ಒಂದು ಅಂತಃಪ್ರೇರಣೆಯಿಂದ ವೈದ್ಯಕೀಯ ಶಾಸ್ತ್ರವನ್ನು ಕಲಿಯಲು ಮೆಡಿಕಲ್ ಕಾಲೇಜನ್ನು ಹುಡುಕಿಕೊಂಡು ಬಂದಿದ್ದ.

ನದಿಯ ದಡದಲ್ಲಿ ತಲೆಯೆತ್ತಿ ವಿಶಾಲವಾಗಿ ಹರಡಿಕೊಂಡಿರುವ ಆ ನಗರವನ್ನು ದೇವದಾಸ್ ದೂರದಿಂದ ನೋಡಿದ. ಅಲ್ಲಿಂದ ಅಲೆಅಲೆಯಾಗಿ ಬರುತ್ತಿದ್ದ ಶಬ್ದಘೋಷಗಳನ್ನು ಕೇಳಿದ.

ಅದು ಒಂದು ಸಾಧಾರಣ ನಗರವಲ್ಲ. ನಗರವನ್ನು ಅರ್ಧವಾಗಿ ವಿಭಾಗಿಸುವ ರಾಜಮಾರ್ಗವು ನಾಲ್ಕು ರಸ್ತೆಗಳಾಗಿ ವಿಭಾಗವಾಗಿತ್ತು. ಅವು ಒಂದೊಂದೂ ಉದ್ದಕ್ಕೆ ಬೆಳೆದು ಶಾಖೋಪಶಾಖೆಗಳಾಗಿದ್ದವು. ಮೊದಲು ಕಾಣುವ ಭಾರೀ ಬಂಗಲೆ ಮೆಡಿಕಲ್ ಕಾಲೇಜಾಗಿತ್ತು. ಆ ಏಳು ಅಂತಸ್ತಿನ ಕಟ್ಟಡವು ಲೈಬ್ರರಿಯಾಗಿತ್ತು. ಅದು ಏಷ್ಯಾದಲ್ಲೇ ಬಹುದೊಡ್ಡ ಲೈಬ್ರರಿಯಾಗಿತ್ತು. ಇಲ್ಲಿ ಕಲಿಕೆಯ ಜೊತೆ, ಸಂಶೋಧನೆಯೂ ನಡೆಯುತ್ತದೆ. ಇಲ್ಲಿ ದೀಪಗಳನ್ನು ಆರಿಸುವುದೇ ಇಲ್ಲ.

ದೇವದಾಸ್ ಮುಂದೆ ಮುಂದೆ ನಡೆದ. ಕಟ್ಟಡಗಳ ಈ ಸಮೂಹವು ಆಸ್ಪತ್ರೆಗೆ ಸೇರಿದ್ದಾಗಿತ್ತು. ರಾಜ್ಯದ ನಾನಾ ಭಾಗಗಳಿಂದ ಬರುವ ಹದಿನಾರು ಸಾವಿರದಷ್ಟು ರೋಗಿಗಳನ್ನು ಇಲ್ಲಿ ಪ್ರತಿನಿತ್ಯವೂ ಆರೋಗ್ಯ ತಪಾಸಣೆ ಮಾಡಿ ಚಿಕಿತ್ಸೆ ನೀಡಲಾಗುತ್ತಿತ್ತು. ಸಾವಿರಾರು ರೋಗಿಗಳು ಈ ಆಸ್ಪತ್ರೆಯಲ್ಲೇ ಇದ್ದು ಶುಶ್ರೂಷೆ ಪಡೆಯುತ್ತಿದ್ದರು. ಗುಣವಾಗದ ರೋಗವನ್ನು ಹೊತ್ತು ನಿತ್ಯಸಂಕಟವನ್ನೂ ಅನುಭವಿಸುವವರು ತ್ರಾಹಿ ತ್ರಾಹಿ ಎನ್ನುತ್ತಾ ಇಲ್ಲಿ ಸಾಲುಸಾಲಾಗಿ ಬರುತ್ತಿದ್ದರು. ಕಣ್ಣು ಹೋದರೆ ಕಣ್ಣು ಬದಲಾಯಿಸಿ ದೃಷ್ಟಿ ಕೊಡುವವರೂ, ಮೂಗು ಹೋದರೆ ಮೂಗನ್ನೂ ಬದಲಾಯಿಸುವವರೂ, ರಕ್ತವಿಲ್ಲದವರಿಗೆ ಶುದ್ಧರಕ್ತವನ್ನೂ ಕೊಡುವವರೂ, ಕಾಲಿಲ್ಲದವರಿಗೆ ಕಾಲನ್ನೇ ಕೊಡುವವರೂ, ಎಲ್ಲದಕ್ಕಿಂತ ಹೆಚ್ಚಾಗಿ ಹೃದಯದಲ್ಲಿ ಕತ್ತರಿ ಸೋಕಿಸುವ ಸಾಮರ್ಥ್ಯವುಳ್ಳವರೂ ಈ ಆಸ್ಪತ್ರೆಯಲ್ಲಿ ಇದ್ದಾರೆ.

ದೇವದಾಸ್ ಹಾಗೆಯೇ ಮುನ್ನಡೆದ. ಸಾಲುಸಾಲಾಗಿ ಅನಂತವಾಗಿ ಹರಡಿರುವ ಆ ಪುಟ್ಟ ಪುಟ್ಟ ಮನೆಗಳು ನರ್ಸ್‌ಗಳದ್ದು. ಅದರ ಆಚೆ ತಲೆ ಎತ್ತಿ ನಿಂತಿರುವ ದೊಡ್ಡ ದೊಡ್ಡ ಮಹಡಿ ಮನೆಗಳು ಪ್ರೊಫೆಸರ್, ಡಾಕ್ಟರ್‌ಗಳದ್ದು. ಮತ್ತೆ ಅಗೋ, ಅಲ್ಲಿ ಕಾಣುವುದು ಸಿನೆಮಾ ಥಿಯೇಟರ್. ಅದರಾಚೆ ಚಿಕ್ಕದೊಂದು ಮಾರ್ಕೆಟ್, ಸಂಕ್ಷೇಪವಾಗಿ ಹೇಳುವುದಾದರೆ ಅದು ಒಂಭತ್ತು ಚದರಮೈಲಿಯಷ್ಟು ವಿಸ್ತಾರದಲ್ಲಿ ಹರಡಿರುವ ಒಂದು ವೈದ್ಯ ನಗರವು.

ಈ ನಗರ ಈಗ ತನ್ನ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿದೆ.

ಹಿಂದೆ, ಬಹು ಹಿಂದೆ, ಅದೊಂದು ಸಂಪೂರ್ಣ ಗ್ರಾಮವಾಗಿತ್ತು. ಬಹಳ ವರ್ಷಗಳ ನಂತರ ನಿರ್ಜನವಾಗಿ ಹೋದ ಆ ಗ್ರಾಮದಲ್ಲಿ ಇಂಜಿನಿಯರ್‌ಗಳೂ, ಕೆಲಸಗಾರರೂ, ಬುಲ್‌ಡೋಜರ್‌ಗಳನ್ನೂ ಉಪಯೋಗಿಸಿ ಅಗೆದು ತೆಗೆದಾಗ ಆ ಮಣ್ಣಿನಡಿಯಲ್ಲಿ ಅಸಂಖ್ಯಾತ ಅಸ್ಥಿಪಂಜರಗಳು ಸಿಕ್ಕಿದ್ದುವಂತೆ. ಆ ಅಸ್ಥಿಪಂಜರಗಳ ರಾಶಿಗಳನ್ನು ಟ್ರಕ್‌ಗಳಲ್ಲಿ ತುಂಬಿಸಿ ಸಾಗಿಸಿ ಸಮುದ್ರದಲ್ಲಿ ಸುರಿದು ಬಿಟ್ಟರಂತೆ.

ಆ ಅಸ್ಥಿಪಂಜರಗಳು ಅಲ್ಲಿ ಹೇಗೆ ಬಂದುವೆನ್ನುತ್ತೀರಾ ?

ಸಮಗ್ರವಾಗಿ ಇದ್ದ ಆ ಗ್ರಾಮದಲ್ಲಿ ಒಮ್ಮೆ ಒಂದು ಭಾರಿ ಮಳೆ ಹಿಡಿಯಿತಂತೆ.

ಹೌದು, ಹಿಂದೆ ಅದು ಬಹು ಹಿಂದೆಯೇ ಆಗಿತ್ತು.

ಗ್ರಾಮದ ಎಲ್ಲೆಯೇ ಬದಿಗೆ ಸೇರಿಕೊಂಡಂತೆ ಒಂದು ನದಿಯು ಹರಿಯುತ್ತಿತ್ತು. ಆ ನದಿ ಈಗ ಅಲ್ಲಿ ಇಲ್ಲವೇ ಇಲ್ಲ. ಪ್ರಕೃತಿಯ ಮಾಯಾಜಾಲದಲ್ಲಿ ಆ ನದಿ ಎಲ್ಲೋ ಅದೃಶ್ಯವಾಗಿದೆ.

ಆ ಗ್ರಾಮದಲ್ಲಿ ಧನಿಕಳಾದ ಓರ್ವ ಸ್ತ್ರೀ ವಾಸವಾಗಿದ್ದಳಂತೆ. ಆಕೆಯ ಮನೆಯು ನದಿಯ ದಡದಲ್ಲಿತ್ತಂತೆ. ನದಿಯ ದಡದಲ್ಲಿ ಮಹಾಗನಿ ಮರದ ಕೊಂಬೆಯಲ್ಲಿ ಆಕೆಯು ಮನೋಹರವಾದ ಒಂದು ಗೂಡನ್ನು ತಗಲು ಹಾಕಿ ಅದರಲ್ಲಿ ಎರಡು ಮುದ್ದಾದ ಪಕ್ಷಿಗಳನ್ನೂ ಬೆಳೆಸಿದ್ದಳು. ಅವು ದಂಪತಿಗಳಾಗಿದ್ದವು.

ಒಂದು ದಿವಸ ನದಿಯಲ್ಲಿ ನೀರಿನ ಮಟ್ಟ ಮೇಲೇರತೊಡಗಿತು. ನದಿಯ ನೀರು ದಡವನ್ನು ಮೀರಿ ನುಗ್ಗಿತು. ಕೆಲ ಸ್ಥಳಗಳಲ್ಲಿ ನೀರು ಭೋರ್ಗರೆಯುತ್ತಾ ನುಗ್ಗುತ್ತಿತ್ತು. ಮತ್ತೆ ಕೆಲ ಸ್ಥಳಗಳಲ್ಲಿ ಚಲಿಸುತ್ತಿದ್ದ ನೀರನ್ನು ಯಾರೋ ಎರಡು ಕೈಗಳಿಂದ ಅದುಮಿ ನೆಲಕ್ಕೆ ಸಮವಾಗಿ ತಟ್ಟುವಂತಿತ್ತು.

ಅಂದು ರಾತ್ರಿ ಇದ್ದಕ್ಕಿದ್ದಂತೆ ನದಿಯು ಸ್ವಲ್ಪ ಹಿಂದಕ್ಕೆ ಹರಿದು ಹೋದಾಗ ಮಹಾಗನಿ ಮರದ ಕೆಳಭಾಗದಲ್ಲಿನ ಮಣ್ಣು ಕೊಚ್ಚಿ ಹೋಯಿತು. ಗೂಡಿನಿಂದ ಕೆಳಕ್ಕೆಸೆಯಲ್ಪಟ್ಟು ತಮ್ಮ ರೆಕ್ಕೆಗಳನ್ನು ಕ್ಷೀಣವಾಗಿ ಬಡಿಯುತ್ತಿದ್ದ ಗಿಳಿಗಳು ಇದ್ದಕ್ಕಿದ್ದಂತೆ ಒಂದು ಸಲ ತಮ್ಮ ಕಣ್ಣುಗಳನ್ನು ಅರಳಿಸಿ ನೋಡಿದುವು. ಅನಂತರ ಮುಚ್ಚಿದ ಕಣ್ಣುಗಳು ಶಾಶ್ವತವಾಗಿ ಮುಚ್ಚಿಯೇ ಹೋದವು. ಸತ್ತು ಹೋದ ಆ ಗಿಳಿಗಳು ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುತ್ತಿರುವುದು ಯಾರ ಕಣ್ಣಿಗೂ ಬಿದ್ದಿರಲಿಲ್ಲ. ಅದರ ಮರಣ ವೃತ್ತಾಂತ ಯಾರಿಗೆ ತಿಳಿಯುತ್ತದೆ ?

ಮಾರನೆಯ ದಿನ ಎಚ್ಚೆತ್ತಾಗ ಆ ಧನಿಕ ಹೆಂಗಸು ತನ್ನ ತುಂಬಲಾರದ ನಷ್ಟವನ್ನು ಕಂಡು ಬಹಳ ದುಃಖಿಸಿದಳು. ಆಕೆ ಸಕಲವನ್ನೂ ಅಡಗಿಸಿಕೊಂಡಿರುವ ಪ್ರಕೃತಿಯ ಮುಂದೆ ಬಹಳ ಹೊತ್ತು ಕೈಜೋಡಿಸಿ ನಿಂತಳು.

ಆ ಧನಿಕ ಹೆಂಗಸು ವಿಧವೆಯಾಗಿದ್ದಳು. ಆಕೆಯ ಪತಿ ತೀರಿಹೋಗಿ ಬಹು ವರ್ಷಗಳಾಗಿದ್ದುವು. ಆಕೆಯ ಬಂಗಲೆಯು ಎರಡಂತಸ್ತಿನ ಕಟ್ಟಡವಾಗಿತ್ತು. ಆ ಬಂಗಲೆಯ ಕೆಳಅಂತಸ್ತಿನಲ್ಲೆ ಆಕೆ ಏಕಾಕಿಯಾಗಿ ವಾಸಿಸುತ್ತಿದ್ದಳು. ಆಕೆಯ ಜೊತೆಯಲ್ಲಿ ಆಕೆಯ ಸೇವಕರು, ಪಲ್ಲಕ್ಕಿಯನ್ನು ಹೊರುವವರು ಇದ್ದರಲ್ಲದೆ, ನೆಂಟರಾಗಿ ಯಾರೂ ಇರಲಿಲ್ಲ.

ಸಾಯಂಕಾಲವಾದಾಗ ನದಿಯಲ್ಲಿ ನೀರು ಇಳಿಯಿತು. ಆಕಾಶದಲ್ಲಿ ಬೆಳಕು

ಕಾಣಿಸಿಕೊಂಡಿತು. ಪಕ್ಷಿಗಳ ಇಂಚರ ಕೇಳಿಸಿತು.

ಆ ದಿನದ ರಾತ್ರಿ ಮೇಘಗಳಿಂದಾವೃತವಾದ ಕರಾಳ ರಾತ್ರಿಯಾಗಿತ್ತು. ಸುಮಾರು ಮೂರು ಗಂಟೆಯಾದಾಗ ಆ ಸ್ತ್ರೀಯ ವಿಶ್ರಾಮದ ಕೋಣೆಯನ್ನು ಯಾರೋ ಒಬ್ಬಾತನು ಹೊಕ್ಕನು. ಅವನಾರು ? ಅವನೆಲ್ಲಿಂದ ಬಂದ ? ಏತಕ್ಕಾಗಿ ಬಂದ ? ಎಂಬುದನ್ಯಾರೂ ಅರಿಯರು. ನಿಶ್ಶಬ್ದವಾಗಿದ್ದ ಆ ಕೊಠಡಿಯಲ್ಲಿ ಅವನು ನಿಂತು ಜೋರಾಗಿ ಕೇಳಿದನು:

"ಎಲ್ಲಿ ಬೀಜಗಳು ?"

ಅಕಸ್ಮಾತ್ ಎದ್ದ ಆ ಸ್ತ್ರೀಯ ಹೃದಯ ಬಡಿದುಕೊಳ್ಳುತ್ತಿತ್ತು. ಆಕೆ ಉತ್ತರಿಸಿದಳು:

"ನನಗೆ ಗೊತ್ತಿಲ್ಲ"

ಅವನು ಘನಗಂಭೀರವಾದ ಧ್ವನಿಯಲ್ಲಿ ಹೇಳಿದನು: "ಹಾಗಾದರೆ ಇಗೋ ನಾನಿಲ್ಲಿ ಬಿತ್ತುತ್ತೇನೆ."

ಹೇಳುತ್ತಿದ್ದಂತೆಯೇ ಆ ಗಾಢಾಂಧಕಾರದಲ್ಲಿ ಅವನು ಮಾಯವಾದನು.

ಬೆಳಕು ಹರಿಯುವ ವೇಳೆಗೆ ವಿಧವೆಯೂ, ಧನಿಕಳೂ ಆದ ಆ ಸ್ತ್ರೀಗೆ ಇನ್ನು ನಿದ್ರಿಸಲು ಸಾಧ್ಯವಾಗಲಿಲ್ಲ. ಆಕೆಗೆ ಜ್ವರ ಬಹಳವಾಗಿ ಏರಿ ಸನ್ನಿಪಾತ ಜ್ವರವು ಹಿಡಿಯಿತು. ಅದರೊಂದಿಗೇ ವಾಂತಿ, ಅತಿಸಾರ ಆರಂಭವಾಗಿತ್ತು. ವೈದ್ಯರನ್ನು ಕರೆಸಲೂ, ಔಷಧಿ ತೆಗೆದುಕೊಳ್ಳಲೂ ಆಕೆ ಒಪ್ಪಲಿಲ್ಲ. ಹಿಂದಿನ ದಿನ ರಾತ್ರಿ ಬೀಜಗಳನ್ನು ಹುಡುಕಿಕೊಂಡು ಬಂದ ಮನುಷ್ಯ ದೇವರೇ ಕಳುಹಿಸಿದ್ದರಿಂದ ಬಂದಿದ್ದನೇನೋ ? ಆತನ ಕರೆಯನ್ನು ಮನ್ನಿಸದೆ ಗತ್ಯಂತರವಿಲ್ಲ.

ಆ ಹಾಸಿಗೆಯಲ್ಲಿ ಮಲಗಿಕೊಂಡೇ, ಮಾರನೆಯ ದಿನ ಬೆಳಗಾಗುವ ಮುಂಚೆಯೇ ಆಕೆ ಇಹಲೋಕವನ್ನು ತ್ಯಜಿಸಿದ್ದಳು. ಆಕೆಯ ಮುದ್ದುಮುದ್ದಾದ ಗಿಣಿ ದಂಪತಿಗಳ ಆತ್ಮಗಳೊಂದಿಗೆ ಆಕೆಯ ಆತ್ಮವೂ ನದಿಯ ಮೇಲ್ಭಾಗದಲ್ಲಿ ಬಹಳ ಹೊತ್ತು ಹಾರಾಡಿ ಅನಂತರ ಆಕಾಶದಲ್ಲಿ ಮೇಲೇರಿತು.

ಆನಂತರದ ಒಂದು ದಿನ ಆ ಅಜ್ಞಾತನು ಒಬ್ಬ ವೃದ್ಧನ ಕೊಠಡಿಯನ್ನು ಪ್ರವೇಶಿಸಿದನು. ಆ ವೃದ್ಧನು ಕಳೆದ ಎಷ್ಟೋ ವರ್ಷಗಳಿಂದ ಏಳಲಸಾಧ್ಯವಾದ ಸ್ಥಿತಿಯಲ್ಲಿದ್ದನು. ನಾಯಿಗಳ ಬೊಗಳುವಿಕೆಯನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಬೆಣಚುಕಲ್ಲುಗಳೂ ಮುಳ್ಳುಗಳೂ ತುಂಬಿದ ಮಾರ್ಗದಲ್ಲಿ ಪ್ರಯಾಣಮಾಡಿ ಬಂದು ಆ ಮನುಷ್ಯನು ಇಲ್ಲಿಗೆ ಸೇರಿದ್ದನು. ಆಗ ಆ ಮನೆಯಲ್ಲಿ ಅವನ ವಯಸ್ಸಾದ ಹೆಂಡತಿಯಲ್ಲದೆ ಮತ್ಯಾರೂ ಇರಲಿಲ್ಲ. ಅಜ್ಞಾತನು ಹಳೆಯ ಪ್ರಶ್ನೆಯನ್ನೇ ಪುನಃ ಕೇಳಿದನು.

"ಬೀಜಗಳು ಎಲ್ಲಿ ?"

ಈ ಸಲ ಆತನು ಪದಗಳನ್ನು ಅದಲುಬದಲು ಮಾಡಿದ್ದನಷ್ಟೆ.

ನಿದ್ರೆಯ ಮಂಪರಿನ ಮಧ್ಯೆ ಎಲ್ಲೋ ಕೇಳಿದ ಆ ಪ್ರಶ್ನೆಗೆ ಉತ್ತರವಾಗಿ ವೃದ್ಧನ ತುಟಿಗಳು ಅಲ್ಲಾಡಿದುವು.

"ನನಗೆ ತಿಳಿಯದು."

ಬಹಳ ದೂರ ದೇಶದಿಂದ ಬೀಜಗಳನ್ನು ಹುಡುಕಿಕೊಂಡು ಬಂದ ಆ ಅಜ್ಞಾತ

ಮನುಷ್ಯನನ್ನು ನೋಡಲು ಆ ವೃದ್ಧನಿಗೆ ಆಗಲೇ ಇಲ್ಲ. ಅಷ್ಟರಲ್ಲಿಯೇ ಆ ಮನುಷ್ಯ ಅದೃಶ್ಯನಾದನು.

ವೃದ್ಧನನ್ನು ವಾಂತಿಭೇದಿಗಳು ಬಾಧಿಸಿದವು. ಮಂಚದಿಂದ ಅಲುಗಾಡಲು ಸಾಧ್ಯವಾಗದಿದ್ದ ಆ ವೃದ್ಧನಿಗೆ ಮೊದಲ ಎರಡು ದಿವಸಗಳು ದೂರದ ಸಂಬಂಧಿಕರು ಶಪಿಸುವ ಮಾತುಗಳನ್ನು ಆಡುತ್ತಾ ಉಪಚಾರ ಮಾಡಿದರು. ಅವರು ಅವನ ವಾಂತಿಭೇದಿಗಳನ್ನು ಬಾಚಿ ತೆಗೆದು ಮನೆಯ ಹೊರಗೆ ಬಿಸಾಡಿದರು. ನೆಲವನ್ನು, ನೆಲದ ಮೇಲೆ ಹಾಸಿದ್ದನ್ನು ಅವರು ಶುಭ್ರಗೊಳಿಸಿದರು. ಮೂರನೆಯ ದಿವಸ ಆ ಮುದುಕನು ತನ್ನ ವಾಂತಿಭೇದಿಗಳಲ್ಲೇ ಬಿದ್ದು ಹೊರಳಾಡಿ ಪ್ರಾಣಬಿಟ್ಟನು. ಆ ವೇಳೆಗೆ ಮುದುಕನ ಮುದಿಹೆಂಡತಿಯೂ ಸಹ ಸತ್ತುಬಿದ್ದಳು.

ಸತ್ತವರ ಮರಗಟ್ಟಿದ ಶವವನ್ನು ಯಾರ್‍ಯಾರೋ ಬಂದು ಸೇರಿ ಗುಂಡಿ ತೋಡಿ ಮಲಗಿಸಿ ಮಣ್ಣುಹಾಕಿ ಮುಚ್ಚಿದರು.

ಮಾರನೆಯ ದಿವಸ, ಅರ್ಧರಾತ್ರಿ, ಅಜ್ಞಾತನು ಸತ್ತ ವೃದ್ಧನ, ಮೊಮ್ಮಗನ ಮನೆಯನ್ನು ಪ್ರವೇಶಿಸಿದನು. ಬಣ್ಣಬಣ್ಣದ ಬೆಲೂನುಗಳನ್ನು, ಕೆಂಪು ಹೂವುಗಳನ್ನು ತೋರಿಸುತ್ತಾ ಆ ಎಳೆಯ ಮಗುವನ್ನವನು ಹೆದರಿಸಿದನು. ಅರ್ಧರಾತ್ರಿಯಲ್ಲಿ ಆ ಮಗು ಗೊಳೋ ಎಂದು ದೀನರೋದನವನ್ನಾಲಾಪಿಸಿತು. ಆ ರೋದನವು ಆರ್ತನಾದವಾಗಿ ಪರಿಣಮಿಸಿತು. ಆ ಮಗುವಿಗೆ ಕೇವಲ ಎರಡು ವರ್ಷವಾಗಿತ್ತಷ್ಟೆ. ಅನಂತರ ಮಂತ್ರವಾದಿಯೂ ವೈದ್ಯನೂ ಆ ಮಗುವಿಗೆ ಒಬ್ಬರಾದ ನಂತರ ಒಬ್ಬರಂತೆ ಚಿಕಿತ್ಸೆ ನೀಡಿದರಾದರೂ ಮಾರನೆಯ ದಿನ ಆ ಮಗು ತೀರಿಕೊಂಡಿತು.

ಆ ಮನೆಯಲ್ಲಿ ದೀನರೋದನ ರಾಜ್ಯವಾಳಿತು.

ಅವರೆಲ್ಲರೂ ಸೇರಿ ಚಿಕ್ಕ ಒಂದು ಗುಂಡಿಯನ್ನು ತೋಡಿ ಆ ಮಗುವಿನ ಮೃತದೇಹವನ್ನು ಅದರಲ್ಲಿ ಮಲಗಿಸಿ ಮಣ್ಣು ಹಾಕಿ ಮುಚ್ಚಿದರು.

ಅದರೊಂದಿಗೆ ಅಜ್ಞಾತನು ಅದೃಶ್ಯನಾದನು. ಅಷ್ಟರಲ್ಲಿ ಅವನು ಗ್ರಾಮದಲ್ಲೆಲ್ಲಾ ಬೀಜವನ್ನು ಬಿತ್ತಿದ್ದನು.

ಅಂಟುಜಾಡ್ಯವು ಕಾಲರಾ ರೂಪದಲ್ಲಿ ಊರೆಲ್ಲ ನಡೆದಾಡಲು ಪ್ರಾರಂಭಿಸಿತು.

ಈ ಕಾಲರಾ ಹೊಂಚು ಹಾಕಿ ಕಾದು ಅಕ್ಕಪಕ್ಕದಲ್ಲಿದ್ದ ಎರಡು ಮನೆಗಳನ್ನು ಪ್ರವೇಶಿಸಿತು. ಮೊದಲನೆಯ ಮನೆಯಲ್ಲಿ ನವದಂಪತಿಗಳಿದ್ದರು. ರೋಗವು ಅಕ್ಷತೆ ಕೊಟ್ಟು ಕರೆಸಿದ ಅತಿಥಿಯಂತೆ ಪ್ರವೇಶಿಸಿತು. ಹಿಂದಿನ ದಿನ ರಾತ್ರಿ ಅವರಿಬ್ಬರೂ ರೂಢಿಗಿಂತ ಹೆಚ್ಚು ಕಬ್ಬಿನ ರಸವನ್ನು ಕುಡಿದಿದ್ದರು. ಮೊಟ್ಟೆಯನ್ನು ಹಾಲನ್ನು ಸೇರಿಸಿ ಮಾಡಿದ ಹಲ್ವವನ್ನೇ ತಿಂದಿದ್ದರು. ವಿಶಿಷ್ಟವಾದ ಆ ಸಿಹಿತಿಂಡಿ ತಿನ್ನುವಾಗಲೇ ವಯಸ್ಸಿಗೆ ಮೀರಿದ ಅನುಭವವಿದ್ದ ಗಂಡನು ಭೇದಿಯಾಗುವ ಮುನ್ಸೂಚನೆಯನ್ನು ನೀಡಿದನು. ಆದರೆ ಮಧುಚಂದ್ರದ ಮಾಧುರ್ಯದಲ್ಲಿ ಆ ಮುನ್ಸೂಚನೆಯನ್ನು ಲೆಕ್ಕಿಸದ ವಧುವು ಸಿಕ್ಕಾಪಟ್ಟೆ ಹಲ್ವ ತಿಂದಿದ್ದಳು. ವಿಪರ್ಯಾಸವೆಂದೇ ಹೇಳಬಹುದು. ಮಾರನೆಯ ದಿನ ಬೆಳಗಾಗುವ ಹೊತ್ತಿಗೆ ವರನಿಗೆ ಭೇದಿ ಆರಂಭವಾಯಿತು. ಮಧ್ಯಾಹ್ನವಾಗುವ ಹೊತ್ತಿಗೆ ಅವನು ಬಲು ನಿಶ್ಶಕ್ತನಾದನು. ಹೊರಕ್ಕೆ ನಡೆಯಲು ಸಾಧ್ಯವಾಗದಂತೆ ಕಾಲುಗಳು ಸೇದತೊಡಗಿ ಅವನು ಮನೆಯಲ್ಲೇ ಮಲಗಿದನು.

ಸಾಯಂಕಾಲವಾಗುವ ಹೊತ್ತಿಗೆ ವಧುವಿಗೂ ರೋಗ ಲಕ್ಷಣಗಳು ತಲೆದೋರಿದುವು. ಅವಳು ವಾಂತಿ ಮಾಡಿ ಮಾಡಿ ನಿಶ್ಶಕ್ತಳಾದಳು. ಅವರು ಪರಸ್ಪರ ಶುಶ್ರೂಷೆ ಮಾಡಿಕೊಳ್ಳಲೂ ಸಾಧ್ಯವಾಗದೆ ಪಕ್ಕಪಕ್ಕ ಬಿದ್ದುಕೊಂಡರು.

ಎರಡು ರಾತ್ರಿ ಎರಡು ಹಗಲುಗಳು ಕಳೆದುಹೋದುವು. ಮೂರನೆಯ ದಿನ ಜೀವವಿಲ್ಲದ ಎರಡು ದೇಹಗಳು ಆ ಮನೆಯಲ್ಲಿ ಉಳಿದುಕೊಂಡವು.

ಎರಡನೆಯ ಮನೆ ಹತ್ತು ಹದಿನೈದು ಜನರಿದ್ದ ಒಂದು ಅವಿಭಕ್ತ ಕುಟುಂಬವಾಗಿತ್ತು. ಮಳೆನೀರು ಹರಿಯುವಂತೆ ರೋಗವು ಆ ಮನೆಗೆ ಜುಳುಜುಳು ಹರಿದು ಸೇರಿತು. ಒಂದೇ ದಿವಸ ಎಲ್ಲರಿಗೂ ರೋಗ ಹಿಡಿದುಕೊಂಡಿತು. ಹಿರಿಯರಿಂದ ಹಿಡಿದು ಬಹು ಚಿಕ್ಕ ಮಕ್ಕಳವರೆಗೆ ಒಬ್ಬೊಬ್ಬರಾಗಿ ನೆಲದ ಮೇಲೂ ಚಾಪೆಯ ಮೇಲೂ ಸುಸ್ತಾಗಿ ಬಿದ್ದಿದ್ದರು.

ನೆರೆಹೊರೆಯವರು ಯಾರೂ ಅಲ್ಲಿಗೆ ಬರಲಿಲ್ಲ. ಅಷ್ಟು ಹೊತ್ತಿಗೆ ಇದು ಹರಡುವ ಅಂಟುಜಾಡ್ಯವೆಂದು ಗ್ರಾಮದಲ್ಲಿ ಎಲ್ಲರಿಗೂ ತಿಳಿದುಹೋಗಿತ್ತು.

ದಾಹಗೊಂಡು ಕ್ಷೀಣತರಾಗಿ ನಿಶ್ಶಕ್ತರಾಗಿದ್ದವರ ಆರ್ತನಾದವು ಆ ಮನೆಯಿಂದ ಹೊರಕ್ಕೆ ಕೇಳಿಸುತ್ತಿತ್ತು. ಕೇಳಿದವರೆಲ್ಲಾ ಕಿವಿ ಮುಚ್ಚಿಕೊಂಡು ಗ್ರಾಮದ ಎಲ್ಲೆಗೆ ಓಡಿಹೋದರು. ಅವರಿಗೆ ಸಹಾಯ ಮಾಡಲು ಯಾರೂ ಮುಂದೆ ಬರಲಿಲ್ಲ. ಅವರೆಲ್ಲಾ ಒಬ್ಬೊಬ್ಬರೇ ಸಾಯುಹತ್ತಿದ್ದರು.

ಅಷ್ಟು ಹೊತ್ತಿಗೆ ಈ ಸಾಂಕ್ರಾಮಿಕರೋಗವು ಗ್ರಾಮದಲ್ಲಿನ ಅನೇಕ ಮನೆಗಳಿಗೆ ಪ್ರವೇಶಿಸಿಯಾಗಿತ್ತು. ನಿಸ್ಸಹಾಯಕರಾದ ರೋಗಿಗಳು ದೇವರಿಗೆ ಮೊರೆ ಇಡುತ್ತಾ ಮರಣವನ್ನು ಆಲಿಂಗಿಸುತ್ತಿದ್ದರು.

ಗ್ರಾಮ ಮುಖ್ಯಸ್ಥನು ಎಚ್ಚೆತ್ತನು. ಅಂತಹ ಸಂದಿಗ್ಧ ಘಟ್ಟದಲ್ಲೇ ಆತನು ಎಚ್ಚೆತ್ತು ಬರುವುದು.

ಜ್ಯೋತಿಷಿಗಳು ಮಂತ್ರವಾದಿಗಳೂ, ಗ್ರಾಮವೈದ್ಯರೂ, ಪೂಜಾರಿಗಳೂ ಇವರೆಲ್ಲರೂ ಗ್ರಾಮ ಮುಖ್ಯಸ್ಥನ ಮನೆಯಲ್ಲಿ ಸಭೆ ನಡೆಸಿದರು.

ಈ ರೋಗಕ್ಕೆ ದೇವೀಕೋಪವೇ ಕಾರಣವೆಂದು ದೇವೀ ಪ್ರಶ್ನೆಯ ನಂತರ ಜ್ಯೋತಿಷಿ ಹೇಳಿಬಿಟ್ಟರು. ದೇವಿ ಕೋಪಗೊಂಡಿದ್ದಾಳೆ. ದೇವಸ್ಥಾನದಲ್ಲಿ ದೀಪ ಹೊತ್ತಿಸಲು ಜನರಿಲ್ಲ. ಉತ್ಸವವನ್ನು ನಡೆಸಲು ಪ್ರಧಾನ ಪುರುಷರುಗಳಿಲ್ಲ. ಗ್ರಾಮವನ್ನೆಲ್ಲಾ ವಧಾಸ್ಥಾನವನ್ನಾಗಿ ಮಾಡುತ್ತೇನೆಂದೇ ದೇವಿ ಹೇಳುತ್ತಿರುವುದು.

ಗ್ರಾಮಮುಖ್ಯಸ್ಥನು ದೇವೀ ಕೋಪಕ್ಕೆ ಪರಿಹಾರ ಕಂಡುಹಿಡಿಯುವ ಜವಾಬ್ದಾರಿಯನ್ನು ಪೂಜಾರಿಗಳಿಗೇ ವಹಿಸಿದನು.

ಮಂತ್ರವಾದಿಗಳನ್ನು ಜಪತಪ ಮಂತ್ರಗಳೊಂದಿಗೆ ಗ್ರಾಮವನ್ನೆಲ್ಲಾ ಸುತ್ತುವಂತೆ ನಿಯೋಜಿಸಿದನು.

ರೋಗವು ನೀರಿನಿಂದಲೇ ಹರಡುವುದೆಂದು ವೈದ್ಯರುಗಳು ಅಭಿಪ್ರಾಯಪಟ್ಟರು. ಆದ್ದರಿಂದ ಯಾರೂ ನೀರನ್ನು ಕುಡಿಯಬಾರದೆಂದು ವೈದ್ಯರುಗಳು ಹೇಳಿದರು. ರೋಗಿಗಳೂ, ರೋಗಿಗಳಲ್ಲದವರೂ ಎಳನೀರು ಮಾತ್ರ ಕುಡಿಯಬೇಕೆಂದು ಅವರು ಉಪದೇಶಿಸಿದರು.

ಗ್ರಾಮದ ಮುಖ್ಯಸ್ಥನು ಕೇಳಿದನು:

"ರೋಗಿಗಳ ಶುಶ್ರೂಷೆಗೆ ಯಾರು ಹೋಗುತ್ತಾರೆ ?"

ಪೂಜಾರಿಗಳು ಮಾತನಾಡಲಿಲ್ಲ.

ಜೋತಿಷಿ ಏನೂ ಹೇಳಲಿಲ್ಲ.

ಮಂತ್ರವಾದಿಗಳು ತುಟಿಗಳು ಹೊಲಿದಂತೆ ನಿಂತಿದ್ದರು.

ವೈದ್ಯನು ಕಣ್ಣು ಮುಚ್ಚಿಕೊಂಡು ನಿಂತನು.

"ಹಾಗಾದರೆ ಸರಿ, ನಾವು ಕೆಳಜಾತಿಯುವರನ್ನು ಕರೆಯೋಣ."

ಗ್ರಾಮಮುಖ್ಯಸ್ಥನು ಹೇಳಿದನು: "ಆದರೆ ರೋಗವು ಅವರಿಗೂ ಬಂದರೆ ?" "ಅದಕ್ಕೊಂದು ಉಪಾಯವಿದೆ." ಕಣ್ಣುಮುಚ್ಚಿದ ವೈದ್ಯನು ಹೇಳಿದನು. "ಶುಶ್ರೂಷೆಗೆ ಹೋಗುವ ಮುಂಚೆ ಹೊಟ್ಟೆ ತುಂಬ ಸಾರಾಯಿ ಅವರಿಗೆ ಕೊಟ್ಟರೆ ಸಾಕು. ಅದಲ್ಲದೆ ತಿನ್ನಲೂ ಕುಡಿಯಲೂ ಏನೂ ಕೊಡಬಾರದು."

ಕೆಲಗಂಟೆಗಳೊಳಗೆ ಗ್ರಾಮದ ಎಲ್ಲೆಯಿಂದ ಹುಡುಕಿ ಆರು ಜನ ಕೆಳಜಾತಿಯುವರನ್ನು ಕರೆತರಲಾಯಿತು.

ಸಾರಾಯಿ ತುಂಬಿದ ಶೀಷೆಗಳೊಂದಿಗೆ ಕೆಳಜಾತಿಯ ಜನರು ಶುಶ್ರೂಷೆಗೆಂದು ಹೊರಟರು.

ಗ್ರಾಮದ ಮುಖ್ಯಸ್ಥನು ಗುಡಾಣಗಳಲ್ಲಿ, ಮರದ ಪೀಪಾಯಿಗಳಲ್ಲಿ ಸಾರಾಯಿಯನ್ನು ಶೇಖರಿಸಿಡಲು ಪ್ರಾರಂಭಿಸಿದನು.

ವಾಂತಿ, ಅತಿಸಾರ, ಕಾಡುಬೆಂಕಿಯಂತೆ ಹರಡುತ್ತಿತ್ತು. ಸಾರಾಯಿ ಕುಡಿದು ತಲೆ ತಿರುಗಿದ, ಕಣ್ಣು ಕೆಂಪಡರಿದ ಕೆಳಜಾತಿಯುವರು ಮನೆ ಮನೆಗಳನ್ನು ಪ್ರವೇಶಿಸಿ ಹೊರಬರಲು ಪ್ರಾರಂಭಿಸಿದರು. ಅಷ್ಟು ಹೊತ್ತಿಗೆ ಬದುಕಿರುವವರಿಗಿಂತ ಸತ್ತವರ ಸಂಖ್ಯೆಯೇ ಹೆಚ್ಚಾಯಿತು.

ರೋಗದಿಂದ ನರಳುತ್ತಿರುವವರ ಶುಶ್ರೂಷೆ ಮಾಡಲು ಬಿಡುವಿಲ್ಲದೆ ಕೆಳಜಾತಿಯುವರು ಕಷ್ಟಪಟ್ಟರು. ಒಬ್ಬನನ್ನು ಗುಂಡಿ ತೋಡಿ ಅದರಲ್ಲಿ ಹಾಕುವಷ್ಟರೊಳಗೆ ಮತ್ತೊಬ್ಬನು ಸಾಯುತ್ತಿದ್ದನು.

ಗ್ರಾಮವೇ ಒಂದು ರೋಗಶಯ್ಯೆಯಾಗಿ ಬದಲಾಗಿತ್ತು. ಈ ಕೆಳಜಾತಿಯುವರು ಆ ರೋಗಶಯ್ಯೆಯನ್ನು ಒಂದು ಸ್ಮಶಾನವನ್ನಾಗಿ ಬದಲಾಯಿಸುತ್ತಿದ್ದರು.

ಗುಂಡಿ ತೋಡಿ, ತೋಡಿ, ಶವಗಳನ್ನು ಹೂತು ಹೂತು ಅವರು ಬಹು ಸುಸ್ತಾದರು.

ದೇವಸ್ಥಾನದಲ್ಲಿ ದೀಪವನ್ನು ಹೊತ್ತಿಸಲು ಜನರೇ ಇಲ್ಲದಂತಾಯಿತು. ಮಂತ್ರ ಹೇಳಲು ಜನರಿಲ್ಲದಂತಾಯಿತು. ಔಷಧಿ ತಯಾರಿಸಲು ವೈದ್ಯರಿಲ್ಲದಂತಾಯಿತು.

ಗ್ರಾಮವು ಬಿಕೋ ಎನ್ನತೊಡಗಿತು.

ಒಂದು ದಿನ ಇದ್ದಕ್ಕಿದಂತ ಆಕಾಶದಲ್ಲಿ ಕತ್ತಲಾವರಿಸತೊಡಗಿತು. ಪಶ್ಚಿಮ ದಿಕ್ಕಿನಿಂದ ಕಪ್ಪು ಮೋಡಗಳು ತೇಲಿ ಒಂದು ಗ್ರಾಮದ ಮೇಲ್ಭಾಗದಲ್ಲಿ ಮರೆಯಾಗಿ ನಿಂತವು. ಅಂತರಿಕ್ಷವು ಅದರೊಂದಿಗೆ ನಿಶ್ಚಲವಾಯಿತು. ಶವಗಳ ವಾಸನೆಯು ನಾಲ್ಕು ದಿಕ್ಕಿಗೂ ಹರಡತೊಡಗಿತು. ಮೊದಮೊದಲಿಗೆ ಗ್ರಾಮಕ್ಕೆ ಪ್ರವೇಶಿಸಿದ

ಮರಣದ ವಾಸನೆಯು ಕಡಿಮೆಯಾಗುತ್ತಾ ಬಂದು ಕ್ರಮೇಣ ನಿಶ್ಶೇಷವಾಯಿತು.

ಗ್ರಾಮದ ವಾತಾವರಣದಲ್ಲಿ ತೇವವೂ ಶವದಾಹವೂ ತುಂಬಿ ನಿಂತಿತ್ತು. ಸಣ್ಣನೆಯ ಗಾಳಿ ಬಂದಾಗ ಮಳೆ ಬೀಳತೊಡಗಿತು. ಹನಿಹನಿಯಾಗಿ ಕೂಡಿ ಧಾರಾಳವಾಗಿ ಮಳೆ ಸುರಿಯತೊಡಗಿತು. ಮಳೆ ಸುರಿದು ಸುರಿದು ಜಡಿ ಮಳೆಯಾಯಿತು.

ವಾಂತಿಯೂ, ಮಲವೂ, ಮಳೆಯ ನೀರೂ ಎಲ್ಲಾ ಕಾಲುಹಾದಿಗಳಲ್ಲೂ, ಕೊಳಗಳಲ್ಲೂ, ಬಾವಿಗಳಲ್ಲೂ ಬೆರೆತು ತುಂಬಿಕೊಂಡಿತು.

ಇದರಿಂದ ಅಳಿದುಳಿದ ಜನರಿಗೂ ರೋಗ ಹರಡಿತು.

ಕೊನೆಗೆ ಗ್ರಾಮದ ಮುಖ್ಯಸ್ಥನ ಮನೆಯಲ್ಲಿ ಕಾಲರಾ ಹಿಡಿಯಿತು. ದೃಢವಾಗಿ ಎತ್ತರವಾಗಿ ಬಲಶಾಲಿಯಾಗಿದ್ದ ಆ ಗ್ರಾಮದ ಮುಖ್ಯಸ್ಥನು ಎರಡು ರಾತ್ರಿ ಎರಡು ಹಗಲು ರೋಗದೊಂದಿಗೆ ಸೆಣಸಾಡಿದನು. ಮೂರನೆಯ ದಿನ ಬೆಳಗಾಗುವ ವೇಳೆಗೆ ಗ್ರಾಮಮುಖ್ಯಸ್ಥನು ತಾನು ಮಾಡಿದ ಕೊಳಕಿನಲ್ಲೇ ಹೊರಳಾಡಿ ಸತ್ತುಬಿದ್ದಿದ್ದನು.

ಆರು ಜನ ಕೆಳಜಾತಿಯವರು ಸೇರಿ ಗ್ರಾಮಮುಖ್ಯಸ್ಥನನ್ನೇ ಹೊತ್ತು, ಗುಂಡಿ ತೋಡಿ ಆ ಮಣ್ಣಿನಲ್ಲಿ ಹುಗಿದರು. ಆ ಶವದ ಗುಂಡಿಯ ಮೇಲೆ ಒಂದು ಕಬ್ಬಿನ ಜಲ್ಲೆಯನ್ನು ನೆಟ್ಟರು.

ಕೊನೆಗೆ ಆ ಆರು ಜನ ಕೆಳಜಾತಿಯವರಲ್ಲದೆ ಗ್ರಾಮದಲ್ಲಿ ಯಾರೂ ಇಲ್ಲದಂತಾದರು. ಗ್ರಾಮಮುಖ್ಯಸ್ಥನ ಗುಡಾಣದಲ್ಲಿ ಉಳಿದಿದ್ದ ಸಾರಾಯಿಯನ್ನು ಇಬ್ಬರು ಕೆಳಜಾತಿಯವರು ಸೇರಿ ಅಡಗಿಸಿಟ್ಟರು.

ಸಾರಾಯಿ ಸಿಕ್ಕದಿದ್ದಾಗ ಉಳಿದಿದ್ದ ಆ ನಾಲ್ಕು ಕೆಳಜಾತಿಯವರು ಒಬ್ಬೊಬ್ಬರಾಗಿ ಕಾಲರಾ ಬಂದು ಸತ್ತರು. ಮಿಕ್ಕ ಇಬ್ಬರು ಆ ನಾಲ್ಕು ಕೆಳಜಾತಿಯವರ ಹೆಣಗಳನ್ನು ಒಂದು ಗುಂಡಿ ತೋಡಿ, ಅದರೊಳಕ್ಕೆ ಹಾಕಿ ಮೇಲೆ ಮಣ್ಣು ಮುಚ್ಚಿ, ಆ ಗುಂಡಿಯ ಮೇಲೆ ನಾಲ್ಕು ಕಬ್ಬಿನಜಲ್ಲೆಗಳನ್ನು ನೆಟ್ಟರು. ಅನಂತರ ಅವರಿಬ್ಬರೂ ತೃಪ್ತಿಯಾಗುವಷ್ಟು ಸಾರಾಯಿ ಕುಡಿದರು.

ಕೊನೆಗೆ ಅವರಿಬ್ಬರೂ, ಎರಡು ಕೊಡ ಸಾರಾಯಿಯೂ ಉಳಿಯಿತು.

ಸ್ವಲ್ಪ ಬುದ್ಧಿವಂತನಾದ ಮೊದಲನೆಯವನು ಒಂದು ಸೂಕ್ಷ್ಮವನ್ನು ಹೇಳಿದನು: "ನಮ್ಮಿಬ್ಬರಲ್ಲಿ ಯಾರು ಮೊದಲು ಸಾಯುತ್ತೇವೆಂದು ಹೇಳಲಾಗುವುದಿಲ್ಲ ಅಲ್ಲವೇ ? ಆದ್ದರಿಂದ ಮುಂಚೆಯೇ ಎರಡು ಗುಂಡಿಗಳನ್ನು ತೋಡಿ ಇಬ್ಬರೂ ಒಂದೊಂದು ಕೊಡ ಸಾರಾಯಿ ತೆಗೆದುಕೊಂಡು ಒಂದೊಂದು ಗುಂಡಿಯಲ್ಲಿ ಮಲಗೋಣ."

ಎರಡನೆಯವನು ಒಪ್ಪಿದನು.

ಇಬ್ಬರೂ ಸೇರಿ ಒಂದು ಶವದ ಗುಂಡಿ ತೋಡಿದರು.

ಆಗ ಮತ್ತೆ ಮೊದಲನೆಯವನು ಇನ್ನೊಂದು ವಿಷಯ ಕೇಳಿದನು:

"ಗುಂಡಿ ಉದ್ದ ಸಾಕು ತಾನೆ ?"

"ನನಗೇನು ಗೊತ್ತು."

"ಒಂದು ಕೆಲಸ ಮಾಡು. ನೀನು ಅದರಲ್ಲಿ ಮಲಗಿಕೊಂಡು ನೋಡು. ಆಗ ಗೊತ್ತಾಗಬಹುದು."

"ಸರಿ" ಎಂದವನೇ ಆ ಎರಡನೆಯವನು ಆ ಗುಂಡಿಯಲ್ಲಿಳಿದನು. ಅವನು ಗುಂಡಿಯಲ್ಲಿ ಅಂಗಾತವಾಗಿ ಮಲಗಿಕೊಂಡ ತಕ್ಷಣ ಮೊದಲನೆಯವನು ಅವನ ಮೇಲೆ ದಪದಪನೆ ಮಣ್ಣು ಹಾಕಿದನು. ಮೊದಲನೆಯವನಿಗೆ ಒಂಟಿಯಾಗಿಯಾದರೂ ಪ್ರಪಂಚದಲ್ಲಿ ಎಲ್ಲೆಲ್ಲಾ ಏನೆಲ್ಲಾ ಇದೆ ಎಂದು ನೋಡಿ ತಿಳಿಯಬೇಕಿತ್ತು. ಇನ್ನು ಸ್ವಲ್ಪ ದಿನಗಳು ಬದುಕಬೇಕು ಎಂದಿತ್ತು.

ಇದೆಲ್ಲಾ ಮುಗಿಯುವ ವೇಳೆಗೆ ಸುಂಟರಗಾಳಿಯೂ, ಮಳೆಯೂ ಬಂತು. ಮಳೆ ಸುರಿದು ಪ್ರಳಯವಾಯಿತು. ಪ್ರಳಯದ ಮಳೆ ನೀರಿನ ಪ್ರವಾಹವು ಆ ಉಳಿದಿದ್ದ ಕೆಳಜಾತಿಯವನನ್ನು ಕಬಳಿಸಿತು. ಎರಡು ಕೊಡ ಸಾರಾಯಿಯೂ ಎಲ್ಲಿಗೋ ಹರಿದುಹೋಯಿತು.

# ಎರಡು

ಎಲ್ಲಿಂದಲೋ ಬಲು ವೇಗದಿಂದ ಬಂದ ಒಂದು ಆಂಬುಲೆನ್ಸ್ ಔಟ್ ಪೇಷೆಂಟ್ ಡಿಪಾರ್ಟ್‌ಮೆಂಟ್‌ನ ಮುಂದೆ ಬಂದು ಬ್ರೇಕ್ ಹಾಕಲಾಗಿ ನಿಂತಿತು. ಡ್ರೈವರ್ ತಾನು ಕುಳಿತಿದ್ದ ಸ್ಥಳದಿಂದ ಅಲ್ಲಾಡಲಿಲ್ಲ. ಹಿಂದಕ್ಕೆ ಬಾಗಿ ಕಷ್ಟಪಟ್ಟು ಪ್ಯಾಂಟ್‌ನ ಪ್ಯಾಕೆಟ್‌ನಿಂದ ಒಂದು ಉದ್ದನೆಯ ಬೀಡಿಯಷ್ಟೆ ಹೊರತೆಗೆದು ಹತ್ತಿಸಿದನು. ಕ್ರಾಸ್ ಬರೆದಿದ್ದ ವ್ಯಾನ್‌ನ ಬಾಗಿಲನ್ನು ಬಹು ಕಷ್ಟದಿಂದ ತೆರೆಯಲಾಯಿತು. ಮೂರು-ನಾಲ್ಕು ಜನರು ಬದುಕಿದೆಯಾ ಬಡಜೀವವೇ ಎಂಬುವ ರೀತಿಯಲ್ಲಿ ಹೊರಕ್ಕಿಳಿದರು. ಅವರ ಮುಖದ ತುಂಬಾ ದಿಗ್ಭ್ರಮೆ ತುಂಬಿತ್ತು. ಹಣೆಯ ಮೇಲೆಲ್ಲಾ ಬೆವರು ಹನಿ ತುಂಬಿತ್ತು.

ಅದಾದ ನಂತರ ಒಂದು ಸ್ಟ್ರೆಚರ್ ಹೊರಕ್ಕೆ ಬಂದಿತು. ಕಾಲುಗಳಿಲ್ಲದ ಖಾಕಿ ಬಟ್ಟೆಯನ್ನು ಧರಿಸಿದ್ದ ಕಬ್ಬಿಣದ ಚೌಕಟ್ಟಿನಿಂದ ಆವೃತವಾದ ಒಂದು ಸ್ಟ್ರೆಚರ್. ಅದರ ಮೇಲೊಬ್ಬ ಮನುಷ್ಯ. ಚಲನರಹಿತನಾಗಿ ಮಲಗಿದ್ದ.

ಹೊರಗೇ ನಿಂತವರು ಹಲವಾರು ಧ್ವನಿಗಳಲ್ಲಿ ಆಜ್ಞೆಗಳನ್ನು ಕೊಟ್ಟನಂತರ, ಆ ಸ್ಟ್ರೆಚರನ್ನು ಹೊರತೆಗೆಯಲಾಯಿತು. ಖಾಕಿ ಬಟ್ಟೆಯಲ್ಲಿ ಮಲಗಿದ್ದ ಮನುಷ್ಯರೂಪವು ಆಕಾಶವನ್ನು ನೋಡುತ್ತಾ ಮಲಗಿತ್ತು.

ಸ್ಟ್ರೆಚರನ್ನು ಗೇಟಿನ ಬಳಿ ತರಲಾಯಿತು. ಮರದ ದಿಮ್ಮಿಗಳಂತೆ ಅದನ್ನು ಹಿಡಿದು ನಿಂತವರು ಮುಂದಕ್ಕೆ ಹೋಗುತ್ತಿದ್ದರು.

ಪ್ಯಾರೇಲಾಲ್ ಗೇಟ್ ಎಳೆದು ತೆರೆದನು. ಅದರ ಕಬ್ಬಿಣದ ಚಕ್ರಗಳು ಕಿರ್ರೆಂದು ಶಬ್ದ ಮಾಡಿದುವು. ತೆರೆದುಕೊಂಡ ಗೇಟಿನ ಮೂಲಕ ಸ್ಟ್ರೆಚರ್, ಮರದ ದಿಮ್ಮಿಯಂತಿದ್ದ ಮನುಷ್ಯ ರೋಗಿ, ಮಿಕ್ಕ ಜನರು ಒಳಕ್ಕೆ ಪ್ರವೇಶಿಸಿದರು.

ಸೆಂಟ್ರಲ್ ಔಟ್‌ಡೋರಿನಲ್ಲಿ ಮತ್ತೆ ಜೀವನವು ಪ್ರಾರಂಭವಾಯಿತು. ಹೊಸ ದಿನದ ಜೀವನವು.

ಆಸ್ಪತ್ರೆಯ ಕಿರಣಗಳು ಹೋಗಿ ಸೇರುವ ದಿಕ್ಕುಗಳಿಂದೆಲ್ಲಾ ಬಂದ ಮನುಷ್ಯರು ರೋಗಿಗಳೊಂದಿಗೆ ರಿಕ್ಷಾ ಗಾಡಿಗಳಲ್ಲೂ, ಸೈಕಲ್‌ಗಳಲ್ಲೂ, ಅಪೂರ್ವವಾಗಿ ಟ್ಯಾಕ್ಸಿಗಳಲ್ಲೂ ಗೇಟಿನೆದುರಿಗೆ ಬಂದಿಳಿಯುತ್ತಿದ್ದರು. ಬೇಸಿಗೆ ಕಾಲವಾಗಿದ್ದರೂ ಗಾಢವಾದ ಬಣ್ಣದ ಹೊದಿಕೆಗಳನ್ನು ಹೊದ್ದುಕೊಂಡು ಕಾಲುನಡಿಗೆಯಲ್ಲಿ ಬರುತ್ತಿದ್ದ ರೋಗಿಗಳೂ, ತಲೆಗೆ ಬಟ್ಟೆ ಕಟ್ಟಿಕೊಂಡವರೂ ಕಡಿಮೆ ಏನಿರಲಿಲ್ಲ. ಆಶೆಯಿಂದ ತುಂಬಿದ ಕಣ್ಣುಗಳಿಂದ ಅವರೆಲ್ಲರೂ ತೆರೆದಿಟ್ಟಿದ್ದ ಗೇಟಿನ ಮೂಲಕ ಒಳಕ್ಕೆ ಪ್ರವೇಶಿಸಿದರು. ಅವರ ಬೆವರಿನ ನಾತ, ರೋಗದ ತೀಕ್ಷ್ಣತೆ, ನಿಟ್ಟುಸಿರಿನ ಬಿಸಿಯುಸಿರನ್ನು ಪ್ಯಾರೇಲಾಲ್ ಅನುಭವಿಸಿದನು.

ಯಾವುದೋ ಗ್ರಾಮದಿಂದ ಬಂದ ಉಬ್ಬಿದ ಹೊಟ್ಟೆಯ ರೋಗಿಯೊಬ್ಬ ನೊಂದಿಗೆ ಕೆಲವರು ಒಳ ಪ್ರವೇಶಿಸಿದರು. ಹಾಗೆ ಒಳಕ್ಕೆ ಪ್ರವೇಶಿಸಿದಾಗ ಅಪರಿಚಿತವಾದ ಸ್ಥಳವನ್ನು ಬೆಳಗಾದ ನಂತರ ಪ್ರವೇಶಿಸಿದ ನರಿಗಳಂತೆ, ಅವರು ವಿಸ್ಮಯಗೊಂಡರು. ತಮ್ಮ ಜೊತೆ ಬಂದ ರೋಗಿಯನ್ನು ಕರೆದುಕೊಂಡು ಎಲ್ಲಿಗೆ ಹೋಗಬೇಕೆಂದು ಅವರಿಗೇ ನಿಶ್ಚಯವಾಗಿ ಗೊತ್ತಿರಲಿಲ್ಲ. ಅನೇಕ ದಿಕ್ಕುಗಳ ಕಡೆ ಉದ್ದೇಶಪೂರ್ವಕವಾಗಿ ಮುಂದೆ ಹೋಗುತ್ತಿದ್ದ ಜನರ ಗುಂಪನ್ನು ನೋಡುತ್ತಾ ಬಹಳ ಹೊತ್ತು ದಿಗ್ಭ್ರಮೆಯಿಂದ ಅವರು ನಿಂತರು. ಅನಂತರ ಅವರಲ್ಲೊಬ್ಬನು ಮೆಲ್ಲನೆ ಗೇಟಿನ ಬಳಿ ಬಂದು ಪ್ಯಾರೇಲಾಲನನ್ನು ಕೇಳಿದನು.

"ಡಾಕ್ಟರ್ ಇರುವ ಕೋಣೆ ಯಾವುದು ?"

ಪ್ಯಾರೇಲಾಲ್‌ಗೆ ನಗು ಬಂತು. ಡಾಕ್ಟರುಗಳು ಹದಿನಾರು ಕಟ್ಟಡಗಳಲ್ಲಿ ಕುಳಿತಿದ್ದರು. ರೋಗಗಳನ್ನು ಹದಿನಾರಾಗಿ ಅವರು ವಿಂಗಡಿಸಿಕೊಂಡಿದ್ದರು. ತಲೆ ನೋವಿನಿಂದ ಹಿಡಿದು ಸಿಫಿಲಿಸ್‌ವರೆಗೆ ಆ ವಿಂಗಡಣೆ ನಡೆದಿತ್ತು.

ಸೆಂಟ್ರಲ್ ಔಟ್ ಡೋರ್‌ನತ್ತ ಬೆರಳನ್ನು ತೋರಿಸುತ್ತಾ ಪ್ಯಾರೇಲಾಲ್ ಹೇಳಿದನು.

"ಅಲ್ಲಿ ಹೋಗಿ, ಎಲ್ಲಿ ಹೋಗಬೇಕೆಂದು ಅವರು ಹೇಳುತ್ತಾರೆ."

ಉದ್ದವಾಗಿ ವಿಶಾಲವಾಗಿರುವ ಕೌಂಟರ್‌ನಲ್ಲಿ ಡಾಕ್ಟರ್‌ಗಳಿಗೂ ಕ್ಲಾರ್ಕ್‌ಗಳೂ ಕುಳಿತಿದ್ದರು. ಒಬ್ಬೊಬ್ಬ ರೋಗಿಗೂ ಮೊದಲನೆಯ ಚೀಟಿಯನ್ನು ಅವರು ಹರಿದು ಕೊಡಲಾರಂಭಿಸಿದರು. ಅದರಲ್ಲಿ ಒಂದು ನಂಬರ್ ಇತ್ತು. ಆ ಚೀಟಿಯೊಂದಿಗೆ ರೋಗಿಗಳು ಅವರಿಗೆ ಗೊತ್ತು ಮಾಡಿರುವ ಆ ನಂಬರ್ ಇರುವ ಕೋಣೆಗೆ ಹೋಗಬೇಕು. ಅಲ್ಲಿ ಆ ರೋಗಿಯನ್ನು ಪರೀಕ್ಷಿಸಿ ರೋಗ ನಿರ್ಣಯಿಸಲಾಗುತ್ತಿತ್ತು.

ಆಗ ಉದ್ದವಾಗಿದ್ದ ಒಂದು ಕಾರು ಬಂದು ನಿಂತಿತು. ಕಾರಿನ ಬ್ರೇಕ್ ಹಾಕಿದಾಗ ಶಬ್ದವೇ ಆಗಲಿಲ್ಲ. ಒಂದು ಹಕ್ಕಿಯ ಗರಿಯು ಬೀಳುವ ಹಗುರವಾದ ರೀತಿಯಲ್ಲಿ ಅದು ಅಲ್ಲಿ ಬಂದು ನಿಂತಿತ್ತು. ಆದರೆ ಪ್ಯಾರೇಲಾಲ್ ಬೆಚ್ಚಿಬಿದ್ದನು. ಅವನು ಯಾವಾಗಲೂ ಬೆಳಿಗ್ಗೆ ಒಮ್ಮೆ ಬೆಚ್ಚುವನು.

ಹಾಗೆ ಬಂದದ್ದು ಸೂಪರಿಂಟೆಂಡೆಂಟ್‌ರ ಕಾರಾಗಿತ್ತು. ದೇವರು ಒಬ್ಬೊಬ್ಬ ಮನುಷ್ಯನಿಗೂ ಅವನ ಜೀವನದ ಅವಧಿಯಲ್ಲಿ ಅವನಿಗೇ ಒಬ್ಬ ದೇವರನ್ನು ನೀಡಿರುತ್ತಾನೆ. ಪ್ಯಾರೇಲಾಲ್‌ಗೆ ಕಣ್ಣಿಗೆ ಕಾಣುವ ದೇವರೇ ಆ ಕಾರಿನಲ್ಲಿ ಬಂದಿಳಿದಿದ್ದನು.

ಪ್ಯಾರೇಲಾಲ್ ಗೇಟಿನ ಹೊರಗಿದ್ದ, ಸಿಮೆಂಟ್ ಹಾಕಿದ್ದ, ಚೆನ್ನಾಗಿ ಅಗಲವಿದ್ದ ಮೆಟ್ಟಲಿನ ಮೇಲೆ ಭದ್ರವಾಗಿ ನಿಂತನು. ತನ್ನ ಖಾಕಿ ಯೂನಿಫಾರಂ ಅನ್ನು ಸಾಧ್ಯವಿದ್ದ ಕಡೆಯಲ್ಲೆಲ್ಲಾ ಟೈಟ್ ಮಾಡಿಕೊಂಡು ಸರಕಿನಿಂದ ತುಂಬಿದ ಹಡಗಿನಂತೆ ಭದ್ರವಾಗಿ ತಳವೂರಿ ನಿಂತನು. ಅವನು ಅನಂತರ ಆರಡಿ ಎತ್ತರದ ತನ್ನ ಬೆನ್ನು ಮೂಳೆಯನ್ನು ನೆಟ್ಟಗೆ ನಿಲ್ಲಿಸಿಕೊಂಡು ನಿಂತನು.

ಡ್ರೈವರ್ ಥಟ್ಟನೆ ಇಳಿದನು. ಕಪ್ಪಗಿನ ಸಣಕಲ ದೇಹಕ್ಕೆ ಬಿಳಿಯ ಯೂನಿಫಾರಂ ಧರಿಸಿದ್ದನು. ಅವನು ಕಾರನ್ನು ಒಮ್ಮೆ ಸುತ್ತುಹಾಕಿ ಹಿಂದಕ್ಕೆ ಬಂದು ಬಾಗಿಲನ್ನು

ತೆರೆದನು. ಸೂಪರಿಂಟೆಂಡೆಂಟ್ ಸಾಹೇಬ್ ಇಳಿದರು. ಸೈನ್ಯದಲ್ಲಿ ಇಪ್ಪತ್ತು ವರ್ಷಗಳ ಸರ್ವೀಸ್‌ನ ನಂತರ ಬ್ರಿಗೇಡಿಯರ್ ಆಗಿ ನಿವೃತ್ತರಾದ ಸೂಪರಿಂಟೆಂಡೆಂಟ್‌ಗೆ ಬೆನ್ನು ಬಾಗಿರಲಿಲ್ಲ. ಆರಡಿ ಎತ್ತರದವರು ಅದೇ ಪ್ರಕಾರವಾಗಿ ಕುಳಿತಿದ್ದು, ಇಳಿದು ತಮ್ಮ ಕಾಲುಗಳನ್ನು ಮೆಲ್ಲನೆ ಮುಂದಕ್ಕೆ ಹಾಕಿದರು.

ಪ್ಯಾರೇಲಾಲ್ ಸೆಟೆದು ನಿಂತು ಸೆಲ್ಯೂಟ್ ಮಾಡಿದನು. ಅವನ ಸೆಲ್ಯೂಟಿನಲ್ಲಿ ಸೈನ್ಯದ ಶಿಸ್ತಿತ್ತು.

ಸೂಪರಿಂಟೆಂಡೆಂಟ್ ಸಾಹೇಬರಾದರೋ ಹೀಗೊಬ್ಬ ಮನುಷ್ಯ ಕಷ್ಟಪಟ್ಟು ತನಗೆ ಸಲಾಂ ಹಾಕಿದ್ದನ್ನು ಲೆಕ್ಕಿಸದೇನೇ ಗೇಟನ್ನು ದಾಟಿ ಒಳಗಿನ ಗುಂಪಿನಲ್ಲಿ ಸೇರಿಕೊಂಡರು. ಪ್ಯಾರೇಲಾಲ್ ಬಿಲ್ಲಿನಂತೆ ಬಾಗಿಸಿದ ತನ್ನ ಶರೀರವನ್ನು ಸಡಿಲಮಾಡಿ ಹಣೆಯಲ್ಲಿನ ಬೆವರನ್ನು ಒರೆಸಿ ಗೇಟಿನ ಹಿಂದೆ ಭದ್ರವಾಗಿಟ್ಟಿದ್ದ ಸ್ಟೂಲಿನಲ್ಲಿ ಮತ್ತೆ ಕುಳಿತನು.

ಸೈನಿಕ ಶಿಸ್ತುಗಳ ಬಗ್ಗೆ ಪ್ಯಾರೇಲಾಲ್‌ಗೆ ಚೆನ್ನಾಗಿ ಗೊತ್ತಿತ್ತು. ಮನುಷ್ಯನಿಗೆ ಜಂತುಗಳೆಂದರೆ ಕೇವಲ ಜಂತುಗಳು ಮಾತ್ರ ಆಗಿರುತ್ತೆ. ಆದರೆ ಸೈನ್ಯದಲ್ಲಿ ಮನುಷ್ಯರು ಮೃಗಗಳೂ, ಮೃಗಗಳು ಮನುಷ್ಯರೂ ಆಗುತ್ತಾರೆ.

ಸೂಪರಿಂಟೆಂಡೆಂಟ್ ದಾರಿಯುದ್ದಕ್ಕೂ ನಡೆದು ತಮ್ಮ ಕೊಠಡಿಯಲ್ಲಿ ಮಾಯವಾಗುವವರೆಗೂ ಪ್ಯಾರೇಲಾಲ್ ಅವರನ್ನು ನೋಡುತ್ತಲೇ ಇದ್ದನು.

ಪ್ಯಾರೇಲಾಲ್ ಗಡಿಯಾರವನ್ನು ನೋಡಿದನು-ಎಂಟೂವರೆ ಗಂಟೆ. ಇನ್ನೂ ಎರಡೂವರೆ ಗಂಟೆಗಳ ಕಾಲ ತಾನಿಲ್ಲೇ ಕಾದಿರಬೇಕು. ಹನ್ನೊಂದು ಗಂಟೆಯಾದರೇನೇ ತನ್ನ ಅಧಿಕಾರವು ಜಾರಿಯಲ್ಲಿ ಬರುತ್ತಷ್ಟೆ. ಹನ್ನೊಂದು ಗಂಟೆಯಾಗುವ ಹೊತ್ತಿಗೆ ಬರುವ ಯಾವುದೇ ರೋಗಿಯನ್ನೂ ಹಿಂದಕ್ಕೆ ಕಳುಹಿಸಲು ಪ್ಯಾರೇಲಾಲ್‌ಗೆ ಸಾಧ್ಯ. ಇನ್ನೂ ಎರಡೂವರೆ ಗಂಟೆಯ ಕಾಲ ಕಳೆಯಬೇಕು. ಮುಜುಗರದಿಂದ ಮಲಗಿರುವ ಒಂದು ರೋಗಾಣುವಿನಂತೆ ಈ ಅಧಿಕಾರಭಾವವು ಪ್ಯಾರೇಲಾಲ್‌ನೊಳಗೇ ವಾಸವಾಗಿತ್ತು.

ಸೆಂಟ್ರಲ್ ಔಟ್‌ಡೋರ್‌ನಲ್ಲಿ ನೂಕುನುಗ್ಗಲು ಜಾಸ್ತಿಯಾಗುತ್ತಿತ್ತು. ತೆರೆದಿದ್ದ ಗೇಟಿನ ಮೂಲಕ ನೂರಾರು ಜನರು ಒಳನುಗ್ಗುತ್ತಿದ್ದರು. ಅದರಲ್ಲಿ ರೋಗಿಗಳೂ ಇರುತ್ತಿದ್ದರು, ಅವರ ಬಂಧುಗಳು ಇರುತ್ತಿದ್ದರು. ನಿಸ್ಸಹಾಯನಾಗಿದ್ದರೂ ಒಬ್ಬೊಬ್ಬ ರೋಗಿಯೂ ರಾಜಕೀಯ ಪ್ರೌಢಿಮೆಯಿಂದಲೇ ಒಳ ಪ್ರವೇಶಿಸುತ್ತಿದ್ದನು. ಅವನೊಂದಿಗೆ ಅವನ ಸೇವೆಗೆಂದು ಮೂರು-ನಾಲ್ಕು ಜನ ಬಂದಿರುತ್ತಿದ್ದರು.

ಪ್ಯಾರೇಲಾಲ್ ಒಂದು ಬೀಡಿ ಹೊತ್ತಿಸಿದನು. ಅವನನ್ನು ಬೇಸರದಿಂದ ಕಾಪಾಡುವುದು ಬೀಡಿಮಾತ್ರವೇ. ಕಳೆದ ಎಷ್ಟೋ ವರ್ಷಗಳಿಂದ ಹೊತ್ತಿಸಿ ಸುಡುವ ಬೀಡಿಗಳು. ಚಿಕ್ಕಂದಿನಿಂದಲೇ ಅಭ್ಯಾಸ ಮಾಡಿಕೊಂಡಿದ್ದ ಒಂದೇ ಒಂದು ಆನಂದವಾಗಿತ್ತದು.

ಸೂಪರಿಂಟೆಂಡೆಂಟ್ ಬಂದ ಮೇಲೆ ಪ್ಯಾರೇಲಾಲ್ ಜೈಲಿನಿಂದ ವಿಮುಕ್ತನಾದ ಖೈದಿಯಂತೆ. ಇನ್ನು ಯಾರಿಗೆ ಭಯಪಡಬೇಕು? ವಾಸ್ತವದಲ್ಲಿ ಯಾರಿಗೂ

ಭಯಪಡಬೇಕಾಗಿಲ್ಲ. ದೇವರೊಬ್ಬರನ್ನು ಬಿಟ್ಟು. ಆದರೆ ಊಟ ಕೊಡುವವರನ್ನು ಕಂಡರೆ ಹೆದರದಿರಲು ಸಾಧ್ಯವೇ ?

ಒಂಭತ್ತು ಗಂಟೆಯಾದಾಗ ವಿದ್ಯಾರ್ಥಿಗಳು ಬರತೊಡಗಿದರು. ಏಪ್ರನ್ ಧರಿಸಿದ, ನಗುನಗುತ್ತಾ ನಡೆದು ಬರುವ ವಿದ್ಯಾರ್ಥಿಗಳನ್ನು ಪ್ಯಾರೇಲಾಲ್ ನೋಡುತ್ತಲಿದ್ದನು. ಪ್ಯಾರೇಲಾಲ್‌ಗೆ ಹುಡುಗಿಯರನ್ನು ಕಂಡರೆ ಬಲು ಇಷ್ಟ. ಅವರು ಯಾವಾಗಲೂ ಕೋಮಲ ಸ್ವಭಾವದವರು. ಸ್ಟೆತೋಸ್ಕೋಪನ್ನು ಒಮ್ಮೆಯಾದರೂ ಕೈಯಲ್ಲಿ ಹಿಡಿದು ಅದನ್ನು ನೇತಾಡಿಸುತ್ತಾ ಅಥವಾ ಹೆಗಲಿನ ಮೇಲೆ ಅದನ್ನೊಂದು ಭೂಷಣವಾಗಿ ಹಾಕಿಕೊಂಡೂ ಇರುವುದಿಲ್ಲ.

ಔಟ್‌ಡೋರ್‌ನ ಕೌಂಟರ್‌ನಲ್ಲಿ ಜೇನುನೊಣಗಳಂತೆ ರೋಗಿಗಳು ಹೆಚ್ಚತೊಡಗಿದರು. ಅಲ್ಲಿ ಬಹುಹೊತ್ತು ನಿಂತಿದ್ದವರು ನೂಕಿ ನುಗ್ಗತೊಡಗಿದರು. ತಮಗೆ ಸಿಕ್ಕಿದ್ದ ಚೀಟಿಯನ್ನು ಚಿನ್ನದಂತೆ ಜೋಪಾನವಾಗಿಟ್ಟುಕೊಂಡು ಅದರಲ್ಲಿ ಬರೆದಿದ್ದ ನಂಬರನ್ನು ನೋಡಿ ನಡೆದರು.

ರಿಸೆಪ್ಷನಿಸ್ಟ್ ಹುಡುಗಿ ತನ್ನ ಸೀಟಿಗೆ ಬಂದು ಕುಳಿತಳು. ಅವಳು ಪ್ಯಾರೇಲಾಲ್‌ನಿಂದ ಇಪ್ಪತ್ತು ಗಜ ದೂರದಲ್ಲಿದ್ದಳು. ಹೊರಗಿನಿಂದ ಬರುವವನು ಅವಳ ಕತ್ತನ್ನು ಮಾತ್ರ ನೋಡಲು ಸಾಧ್ಯವಷ್ಟೆ. ಅವಳ ದೇಹದ ಮಿಕ್ಕಭಾಗ ಪೂರ್ತಿ ಅಲ್ಲಿ ಕಟ್ಟಿ ನಿಲ್ಲಿಸಿದ ಅಮೃತಶಿಲೆ ಕಲ್ಲುಗಳಿಂದ ಮುಚ್ಚಲ್ಪಟ್ಟಿತ್ತು. ಅವಳ ಕೈ ಯಾವಾಗಲೂ ಫೋನ್ ಮೇಲೆಯೇ ಇರುತ್ತಿತ್ತು. ಹಾಗೆಯೇ ತುಟಿಗಳು ಮಂದಹಾಸವನ್ನು ಬೀರುತ್ತಲೇ ಇದ್ದುವು.

ಹೊತ್ತು ಕಳೆಯಲೆಂದು ಪ್ಯಾರೇಲಾಲ್ ಯಾವಾಗಲೂ ಅವಳತ್ತ ನೋಡುತ್ತಲಿರುತ್ತಾನೆ. ಅವಳ ಭಾರೀ ವಕ್ಷಸ್ಥಳವನ್ನು ನೋಡಲು ಅವನಿಗೆ ಇಷ್ಟ. ಆದರೆ ಅದು ಹೊರಕ್ಕೆ ಕಾಣುತ್ತಿರಲಿಲ್ಲ. ರಿಸೆಪ್ಷನ್ ಕೌಂಟರ್‌ನಲ್ಲಿನ ಅಮೃತಶಿಲೆ ಕಲ್ಲುಗಳಿಂದ ಅದು ಸುರಕ್ಷಿತವಾಗಿತ್ತು. ಕಲ್ಲುಗಳ ಹಿಂದೆ ಬ್ರೇಸಿಯರ್ ಇತ್ತು.

ಸೆಂಟ್ರಲ್ ಔಟ್‌ಡೋರ್‌ನಲ್ಲಿ ಅವನ ಜೀವನವು ಅತ್ಯುಚ್ಚಸ್ಥಾನದಲ್ಲಿ ಇತ್ತು. ಜನರು ನುಗ್ಗಾಡಿಕೊಂಡು ಮುಂದೆ ಹೋಗುತ್ತಿದ್ದರು. ಪ್ರೊಫೆಸರ್‌ಗಳು, ಲೆಕ್ಚರರ್‌ಗಳು, ಹೌಸ್ ಸರ್ಜನ್‌ರು, ನರ್ಸ್‌ಗಳು ಜನರ ಗುಂಪಿನ ಮಧ್ಯೆ ಸ್ವಯಂ ಸಂತೋಷಪಡುತ್ತಾ ನಡೆಯುತ್ತಿದ್ದರು.

ಧೋತಿಯನ್ನು ಜುಬ್ಬವನ್ನು ಧರಿಸಿದ ಒಬ್ಬ ಲಾಲ್‌ನು ಗೇಟನ್ನು ದಾಟಿದನು. ಪ್ಯಾರೇಲಾಲ್ ಕೇಳಿದನು:

"ಗಂಟೆ ಎಷ್ಟು ?"

ದಪ್ಪವಾಗಿ ದೃಢವಾಗಿ ರೋಮಗಳಿಂದಾವೃತವಾದ ತನ್ನ ಕೈಯನ್ನು ಮೇಲಕ್ಕೆತ್ತಿ ಏನೇನೋ ಕಸರತ್ತುಗಳನ್ನು ನಡೆಸಿದ ಮೇಲೆ ಲಾಲ್‌ನು ಹೇಳಿದನು:

"ಹತ್ತೂವರೆ."

ಇನ್ನೂ ಅರ್ಧ ಗಂಟೆ. ಆಮೇಲೆ ಗೇಟಿಗೆ ಬೀಗಹಾಕಿ ಮುಚ್ಚಿ ಬಿಡಬಹುದು. ಕ್ಯಾಂಟೀನ್‌ಗೆ ಹೋಗಿ ಟೀ ಕುಡಿಯಬಹುದು. ಆದರೆ ಬೀಗ ಹಾಕಿದ ಗೇಟಿನಲ್ಲಿ ಡ್ಯೂಟಿ ಸಾಯಂಕಾಲ ನಾಲ್ಕೂವರೆಗಿದೆಯಲ್ಲಾ, ನಾಲ್ಕು ಗಂಟೆಗೆ ಬೇರೊಬ್ಬ

ಸರದಿಯ ಪ್ರಕಾರ ಬರುತ್ತಾನೆ. ಆ ಗೇಟಿನಲ್ಲಿ ಮೂರು ಜನರಿಗೆ ಡ್ಯೂಟಿ ಇತ್ತು. ಒಬ್ಬೊಬ್ಬರಿಗೆ ಎಂಟೆಂಟು ಗಂಟೆಯಂತೆ.

ಪ್ಯಾರೇಲಾಲ್‌ಗೆ ಅಂದು ಎಂದಿಗಿಂತ ಬೇಸರವಾಗಿ ತೋರಿತು. ತನ್ನ ಸ್ವಂತ ಮಗುವನ್ನು ಡಾಕ್ಟರ್‌ಗೆ ತೋರಿಸಬೇಕಾದರೆ ಆ ಗಂಟೆಗೆ ಬೀಗಹಾಕಿ ಕರೆದೊಯ್ಯಬೇಕು. ಮಗುವಿಗೆ ಜ್ವರ ಪ್ರಾರಂಭವಾಗಿ ಮೂರು ದಿನಗಳಾದವು.

ತನ್ನ ಮಕ್ಕಳ ದುರದೃಷ್ಟದ ಬಗ್ಗೆ ಪ್ಯಾರೇಲಾಲ್‌ನು ಚಿಂತಿಸತೊಡಗಿದನು. ತಾನು ಚಿಕ್ಕ ಮಗುವಾಗಿದ್ದಾಗ ಇಲ್ಲೇನು ಆಸ್ಪತ್ರೆ ಇರಲಿಲ್ಲ. ಆಗೆಲ್ಲಾ ರೋಗ ಬಂದರೆ ಸಾಯುವುದೇ ರೂಢಿಯಾಗಿತ್ತು.

ಹತ್ತೊಂಬತ್ತು ವರ್ಷಗಳಾದ ಮೇಲೆ ಈಗ ಈ ಆಸ್ಪತ್ರೆ ಬಂದಿರುವ ಈ ಗ್ರಾಮದಲ್ಲಿ ಹಿಂದೊಮ್ಮೆ ಸಾಂಕ್ರಾಮಿಕರೋಗ ಹರಡಿ ಜೀವಜಾಲಗಳಷ್ಟನ್ನು ಮಣ್ಣು ಮಾಡಿದ ಕಥೆಯನ್ನು ಎಲ್ಲೋ ಕೇಳಿರುವುದುಂಟು.

ಕಾಲ ಎಷ್ಟು ಬೇಗ ಸರಿಯುತ್ತಿದೆ ? ಹೆಣ್ಣು ಮಕ್ಕಳ ಯೌವನದಂತೆ !

ಅಂದು ಈ ಸ್ಥಳವೆಲ್ಲಾ ಪಾಳುಭೂಮಿಯಾಗಿತ್ತು. ಪಾಳುಭೂಮಿಯ ಆಚೆ ಕಡೆ ಇರುವ ತೇವವಿರುವ ಬಯಲುಗಳಲ್ಲಿ ತನ್ನ ಕುಟುಂಬದವರೆಲ್ಲಾ ಗೋಧಿಯನ್ನು ಜೋಳವನ್ನು ಬಿತ್ತಿದರು. ಕಳೆ ಕಿತ್ತು ಹಾಕಿ, ಗೊಬ್ಬರವನ್ನು ಹಾಕಿ, ಕುಯ್ಲು ಮಾಡಿ ಮುಗಿಸುವಾಗ, ಜಮೀನುದಾರರ ಉಗ್ರಾಣವು ಧಾನ್ಯಗಳಿಂದ ತುಂಬುತ್ತಿತ್ತು. ಜಾತ್ರೆಗಳ ದಿವಸಗಳಲ್ಲಿ ಮಾತ್ರ ತಾವು ಹೊಟ್ಟೆಗೆ ಧಾರಾಳವಾಗಿ ತಿನ್ನುತ್ತಿದ್ದೆವಷ್ಟೆ.

ಕಾಲವು ಸರಿಯಿತು. ನಮಗೆ ಸ್ವಾತಂತ್ರ್ಯವು ದೊರಕಿತು. ಬಹಳಷ್ಟು ಓಟುಗಳನ್ನು ಮಾಡಿಯಾಯಿತು. ಬಹು ಜನನಾಯಕರನ್ನು ಕಂಡಾಯಿತು. ಯುದ್ಧ ಮಾಡಿದೆವು. ಅನೇಕರನ್ನು ಕಂಡೆವು. ತಾನು ಮಾತ್ರ ತಪ್ಪಿಸಿಕೊಂಡು ತನ್ನ ಗ್ರಾಮದಿಂದ ರಿಟೈರ್ ಆಗಿ ಮರಳಿದ್ದನು.

ಗ್ರಾಮದ ಚರ್ಯೆಯೇ ಬದಲಾಯಿತು. ಉದ್ದಕ್ಕೆ ವಿಶಾಲವಾಗಿರುವ ಪಾಳುಭೂಮಿಯಲ್ಲಿ ಒಂದು ದಿನ ಅನೇಕ ಜನರು ಕಂಡುಬಂದರು. ವಿಚಾರಿಸಿದಾಗ ಆ ಪಾಳುಭೂಮಿಯಲ್ಲಿ ಆಸ್ಪತ್ರೆಯನ್ನು ಕಟ್ಟುತ್ತಾರೆಂಬ ವಿಷಯ ತಿಳಿದುಬಂದಿತು.

ಗ್ರಾಮ ಮೈಕೊಡವಿಕೊಂಡು ಎದ್ದಿತು.

ರಿಟೈರ್ ಆದ ಪ್ಯಾರೇಲಾಲ್‌ಗೆ ಬೇರೇನೂ ಉದ್ಯೋಗವಿರಲಿಲ್ಲ. ರಿಟೈರ್ ಆಗುವುದೇ ಕೆಲಸಕ್ಕೆ ಅನರ್ಹನೆಂದು ಕಂಡುಬಂದಾಗ ಅಲ್ಲವೇ ? ಎಷ್ಟೋ ದಿನಗಳು ಮೂರು ಕಾಲಿನ ಮೇಲೆ ನಿಲ್ಲಿಸಿದ ಯಾವುದೋ ಒಂದು ಕೊಳವೆಯ ಮೂಲಕ ಎಂಜಿನೀಯರ್‌ಗಳು ನೋಡುವುದನ್ನು, ಗೆರೆಗಳು ಎಳೆಯುವುದನ್ನು ನೋಡುತ್ತಾ ನಿಲ್ಲುವುದು ಪ್ಯಾರೇಲಾಲ್‌ಗೆ ರೂಢಿಯಾಗಿ ಹೋಗಿತ್ತು. ಅನಂತರ ಹೊಸದಾಗಿ ನಿರ್ಮಿಸಿದ ರಸ್ತೆಯ ಮೂಲಕ ಲಾರಿಗಳು ರಭಸವಾಗಿ ಬಂದವು. ಅವು ಕಲ್ಲನ್ನು, ಮಣ್ಣನ್ನು ತಂದು ಸುರಿದುವು.

ಅನಂತರ ಕಲ್ಲುಗಳು ಮೇಲೇರತೊಡಗಿದವು. ರಸ್ತೆಗಳನ್ನು ನಿರ್ಮಿಸತೊಡಗಿದರು. ಕೆಂಪಗಿನ ರಸ್ತೆಗಳು ಕಪ್ಪಾದವು. ಕೂಲಿಗಾರರೂ, ಮೇಸ್ತ್ರಿಗಳೂ; ಕಂಟ್ರಾಕ್ಟರುಗಳೂ ಗ್ರಾಮದ ಅಂದಕ್ಕೆ ಕಾರಣರಾದರು.

ಗ್ರಾಮಕ್ಕೆ ವಸಂತಕಾಲವು ಬರತೊಡಗಿತು.

ಒಂಭತ್ತು ಚದುರ ಕಿಲೋಮೀಟರ್ ಸ್ಥಳದಲ್ಲಿ ಕಲ್ಲಿನ ಕೆಲಸಗಳನ್ನು ರಸ್ತೆಗಳನ್ನು ಆರಂಭಿಸಿದರು. ಬಹುದೂರದಿಂದ ಕೂಲಿಗಾರರು ಗ್ರಾಮಕ್ಕೆ ಬಂದರು. ಅವರು ಹಾಕಿದ್ದ ವಸ್ತ್ರಗಳೂ, ಅವರ ದೇಹಗಳೂ ಕೊಳಕು ಬಣ್ಣದಲ್ಲಿದ್ದವು, ಕೆಂಪು-ಕೊಳಕು ಬಣ್ಣ, ಗಂಡಸರೂ ಹೆಂಗಸರೂ ಎಲ್ಲಾ ಬಂದಿದ್ದರು.

ಅವರು ಬಿಳಿಯ ಗುಡಾರವನ್ನು ಹಾಕಿ ಮೈದಾನಗಳಲ್ಲಿ ವಾಸಮಾಡತೊಡಗಿದರು. ಅವರು ಶ್ರಮವಹಿಸಿ ಕೆಲಸ ಮಾಡಿದರು. ತಿನ್ನಲೂ, ನೈಸರ್ಗಿಕ ಕ್ರಿಯೆಗಳಿಗೆ ಹೋಗಿ ಬರಲೂ ಮಾತ್ರ ಅವರು ಕೆಲ ನಿಮಿಷಗಳು ತೆಗೆದುಕೊಂಡರಷ್ಟೆ. ಅವರ ಆಹಾರ ಸರಳವಾಗಿತ್ತು. ಜೋಳದ ಒಣಗಿದ ರೊಟ್ಟಿ, ಈರುಳ್ಳಿ ಅಷ್ಟೆ. ಸ್ತ್ರೀಯರು ಈರುಳ್ಳಿಯನ್ನೇ ಕಡಿಯುವ ಶಬ್ದವನ್ನು ಕೇಳಲು ಪ್ಯಾರೇಲಾಲ್‌ಗೆ ತಮಾಷೆಯಾಗುತ್ತಿತ್ತು. ಈರುಳ್ಳಿಯನ್ನು ಕಡಿದು ಕಣ್ಣಿನಲ್ಲಿ ನೀರು ತುಂಬಿಸುವ ಸ್ತ್ರೀಯರನ್ನು ನೋಡಲು ಪ್ಯಾರೇಲಾಲ್‌ಗೆ ಕೌತುಕವೆನಿಸುತ್ತಿತ್ತು. ಅವರ ಕಿವಿಗಳು ದೊಡ್ಡದಾಗಿದ್ದುವು. ಕಿವಿಯಲ್ಲಿ ಭಾರವಾದ ಲೋಹಗಳ ಬಳೆಗಳಿದ್ದುವು. ಮೂಗಿನಲ್ಲಿ ಬೆಳ್ಳಿಯ ಬಳೆಗಳೂ ಇದ್ದವು.

ರೊಟ್ಟಿಯನ್ನು ತಿಂದು ನೀರು ಕುಡಿದು ಮುಖವನ್ನು ಚೆನ್ನಾಗಿ ತೊಳೆದುಕೊಂಡು ಅವರು ನಡೆದುಹೋಗುವಾಗ ಕಾಲಿನ ಗೆಜ್ಜೆಗಳು ಗಲ್‌ಗಲ್ ಎಂದು ಸದ್ದು ಮಾಡುತ್ತಿದ್ದವು. ಆ ಸದ್ದನ್ನು ಪ್ಯಾರೇಲಾಲ್ ಕೇಳುತ್ತಿದ್ದನು.

ಆ ಸ್ತ್ರೀಯರೂ, ಅವರ ಗಂಡಸರುಗಳೂ ಕಟ್ಟಿದ್ದೇನೇ ಈ ಒಂಭತ್ತು ಚದರ ಕಿಲೋಮೀಟರ್ ಪ್ರದೇಶದಲ್ಲಿ ಎತ್ತರವಾಗಿ ಉದ್ದಕ್ಕೆ ವಿಶಾಲವಾಗಿ ಸ್ಥಾಪಿತವಾಗಿರುವ ಮಹಾ ಆಸ್ಪತ್ರೆ.

ಕೆಲಸ ಮುಗಿದಾಗ ಅವರೆಲ್ಲಾ ಆ ಗ್ರಾಮವನ್ನು ಬಿಟ್ಟು ಹೊರಟು ಹೋದರು. ಅವರ ಎತ್ತಿನ ಗಾಡಿಗಳು ಗಂಟೆ ಹೊಡೆಯುತ್ತಾ ಅವರ ಯಜಮಾನರ ಜೋಡಿ ಕುದುರೆ ಸಾರೋಟಿನ ಹಿಂದೆ ಸಾಲಾಗಿ ನಿಂತವು. ಒಂದು ಸಾಯಂಕಾಲ ಅವರು ಗ್ರಾಮವನ್ನು ಬಿಟ್ಟು ಹೊರಟರು. ಗಾಡಿಯ ಚಕ್ರಗಳು ಮುಂದಕ್ಕೆ ಸರಿದಾಗ ಕರಿವಳ*ಗಳನ್ನು ಧರಿಸಿದ ಕೈಗಳ ಚಪ್ಪಾಳೆ ಶಬ್ದದೊಂದಿಗೆ ದೇಶ ಭಕ್ತಿಗಾನಗಳನ್ನು ಹಾಡುತ್ತಾ, ಅವರು ಮುಂದೆ ಮುಂದೆ ಹೋದರು. ರಸ್ತೆಗಳು, ವಿದ್ಯುತ್ ಕಂಬಗಳು, ಪಾಳುಭೂಮಿಗಳು, ಅವರ ಹಿಂದೆ ನಿಶ್ಚಲವಾಗಿ ನಿಂತವು.

ಅವರು ಬೇರೆ ಯಾವುದೋ ಭಾರಿ ಕಟ್ಟಡದ ನಿರ್ಮಾಣವನ್ನು ಗುರಿಯಾಗಿಟ್ಟುಕೊಂಡು ಮುಂದೆ ಮುಂದೆ ಹೋದರು.

ಆ ಪ್ರಯಾಣವನ್ನು ಪ್ಯಾರೇಲಾಲ್ ನೋಡುತ್ತಾ ನಿಂತನು.

ಅವರು ಗ್ರಾಮದ ಎಲ್ಲೆಯನ್ನು ಬಿಟ್ಟಾಗ ಗಾಡಿಗಳು ತೂಗಾಡುವಿಕೆಯ ಶಬ್ದವು ಮಾತ್ರ ಅವನ ಕಿವಿಗಳಲ್ಲಿ ಮೊಳಗಿತು.

ಅಂದು ರಾತ್ರಿ ಪ್ಯಾರೇಲಾಲ್ ಊಟ ಮಾಡಲಿಲ್ಲ.

ಹೆಂಡತಿ ಕೇಳಿದಳು:

---

* ಕರಿವಳ: ಒಳಗೆ ಮಣಿಗಳನ್ನು ತುಂಬಿದ ಕರಿಬಳೆ

"ಇದೇನು ಹಸಿವಿಲ್ಲವೇ ?"

"ಹೊಟ್ಟೆ ನೋಯುತ್ತಿದೆ."

ಪ್ಯಾರೇಲಾಲ್ ಸುಳ್ಳು ಹೇಳಿದ್ದನು.

ಆದರೆ ಅವನ ಮನಸ್ಸಿನಲ್ಲಿ ನೋವು ತುಂಬಿಕೊಂಡಿತ್ತು. ಭಾರೀ ಆಸ್ಪತ್ರೆಯನ್ನು ಕಟ್ಟಿ ತಿಂಗಳುಗಟ್ಟಲೆ ಅವನ ಜೊತೆಗಾರರಾಗಿದ್ದ ಕೆಲಸಗಾರರು ಈಗ ಗ್ರಾಮವನ್ನು ಬಿಟ್ಟು ಹೊರಟುಹೋಗಿದ್ದರು.

ಗ್ರಾಮ ಒಂಟಿತನವನ್ನನುಭವಿಸಿತು. ಗ್ರಾಮವನ್ನು ಕಾಪಾಡಲು ಇನ್ನೂ ಯಾರಿದ್ದಾರೆ ? ಈ ಆಸ್ಪತ್ರೆಯೇ ?

ಪ್ಯಾರೇಲಾಲ್ ಒಂದೆರಡು ರಾತ್ರಿಗಳು ಬಲು ವ್ಯಸನಪಟ್ಟನು. ಮತ್ತೆ ಜೀವನವು ಆರಂಭಿಸಿದಂತೆ ಕಟ್ಟಡಗಳಿಗೆ ಜನರು ಬರತೊಡಗಿದರು.

ಮೊದಲು ಬಂದವು ಕಾರುಗಳಾಗಿದ್ದವು.

ಆಸ್ಪತ್ರೆಯ ಕಟ್ಟಡದ ಹಿಂದೆ ಒಂದು ಫರ್ಲಾಂಗ್ ದೂರದಲ್ಲಿ ಕಟ್ಟಿಸಿದ ಮನೆಗಳಲ್ಲಿ ಕಾರುಗಳೂ ಮನುಷ್ಯರೂ ಬಂದು ಸೇರಿದರು.

ಕೆಲಸದಾಳುಗಳ ಮನೆಗಳಲ್ಲಿ ಒಲೆ ಹತ್ತಿದವು.

ಕೊನೆಗೊಂದು ದಿನ ಮಂತ್ರಿ ಬಂದನು. ಅವರಲ್ಲವೇ ಎಲ್ಲದರ ಅಂತ್ಯವನ್ನು ನಿಶ್ಚಯಿಸುವುದು! ಗಾಂಧೀ ಟೋಪಿ ಧರಿಸಿದ ಚೂಪಾದ ಷೂಸನ್ನು ಹಾಕಿದ್ದ ಕೆಂಪು ಕಣ್ಣುಗಳಿರುವ ಎತ್ತರವಾಗಿದ್ದ ಒಬ್ಬ ಮನುಷ್ಯನಾಗಿದ್ದನವನು. ಆತನು ಕೈಗಳನ್ನು ಅಂತರಿಕ್ಷಕ್ಕೆ ಎತ್ತಿ ಧ್ವನಿವರ್ಧಕದ ಮೂಲಕ ಅಟ್ಟಹಾಸ ಮಾಡುತ್ತಿದ್ದನು. ಅಟ್ಟಹಾಸ ಮುಗಿದಾಗ ರೂಢಿಯಂತೆ ಜನರು ಚಪ್ಪಾಳೆ ಹೊಡೆದರು.

ಮಾರನೆಯ ದಿವಸ ಆಸ್ಪತ್ರೆ ಪ್ರಾರಂಭವಾಯಿತು.

ಅಂದು ರಾತ್ರಿ ಪ್ಯಾರೇಲಾಲ್ ತನ್ನ ಗ್ರಾಮದಲ್ಲಿದ್ದುಕೊಂಡು ದ್ವೀಪಗಳು ಸ್ಪಷ್ಟವಾಗಿ ಕಾಣುತ್ತಿದ್ದ ಆಸ್ಪತ್ರೆಯನ್ನು ಕಂಡನು. ದ್ವೀಪಗಳು ಸ್ಪಷ್ಟವಾಗಿ ಕಾಣುತ್ತಿರುವ ಒಂದು ದೊಡ್ಡ ಹಡಗನ್ನು ಅಲ್ಲಿ ಲಂಗರು ಹಾಕಿರುವಂತೆ ಪ್ಯಾರೇಲಾಲ್‌ಗೆ ತೋರಿತು. ಅವನು ಹೆಂಡತಿಯನ್ನು ಕರೆದು ಹೇಳಿದನು:

"ನೋಡು, ನಮ್ಮ ಆಸ್ಪತ್ರೆ ಎಷ್ಟು ಸ್ಪಷ್ಟವಾಗಿ ಕಾಣುತ್ತಿದೆ."

ಯಾವತ್ತೂ ರಾತ್ರಿಗಳಲ್ಲಿ ಆಸ್ಪತ್ರೆ ಸ್ಪಷ್ಟವಾಗಿ ಕಾಣುತ್ತಿತ್ತು.

ಎರಡು ರಿಕ್ಷಾಗಾಡಿಗಳು ಗೇಟಿನ ಮುಂದೆ ಬಂದು ನಿಂತಾಗಲೇ ಪ್ಯಾರೇಲಾಲ್ ಕ್ಲಾಕ್ ಅನ್ನು ನೋಡಿದ್ದು. ಹನ್ನೊಂದೂವರೆ ಗಂಟೆಯಾಗಿತ್ತು. ದೊಡ್ಡಮುಳ್ಳು, ಚಿಕ್ಕ ಮುಳ್ಳು ಕರ್ತವ್ಯನಿಷ್ಠೆಯಿಂದ ಹನ್ನೊಂದೂವರೆ ಗಂಟೆಯಾಗಿದೆ ಎಂದು ತಿಳಿಸಿತು.

ಪ್ಯಾರೇಲಾಲ್ ಗೇಟ್ ಎಳೆದು ಮುಚ್ಚಿದನು. ಅಷ್ಟು ಹೊತ್ತಿಗೆ ರಿಕ್ಷಾದಿಂದ ಇಳಿದ ಕಚ್ಚೆ, ಪಂಚೆ ಉಟ್ಟಿದ್ದ ಹಳ್ಳಿಯವನೊಬ್ಬನು ಗೇಟ್ ಬಳಿ ಬಂದು ನಿಂತನು. ಗೇಟಿನ ಕಂಬಿಗಳ ಮಧ್ಯೆ ಕಿರಿದಾಗ ಸ್ಥಳದಲ್ಲಿ ಕೈ ನುಸುಳಿಸಿ ಪ್ಯಾರೇಲಾಲ್‌ನನ್ನು ಕರೆಯುತ್ತಾ ಹೇಳಿದನು:

"ಬಾಗಿಲು ತೆರೆಯಪ್ಪಾ."

ಪ್ಯಾರೇಲಾಲ್ ಏನೂ ಕೇಳಿಸಲಿಲ್ಲವೆಂಬಂತೆ ರಿಸೆಪ್ಷನ್ ಕೌಂಟರ್‌ನಲ್ಲಿನ

ಹುಡುಗಿಯ ಅಸ್ಪಷ್ಟ ರೂಪವನ್ನು ನೋಡುತ್ತಾ ನಿಂತನು."

"ಸ್ನೇಹಿತ, ಬಾಗಿಲು ತೆರೆಯಪ್ಪಾ. ಬಹಳ ಸೀರಿಯಸ್ ಕೇಸ್."

ಪ್ಯಾರೇಲಾಲ್ ಹೊರಗೆ ನೋಡಿದನು. ಅನಂತರ ಶಾಂತವಾಗಿ ಹೇಳಿದನು:

"ಟೈಂ ಆಗಿಹೋಯಿತು."

"ಅಪ್ಪಾ, ಅವನು ಸಾಯುವುದರಲ್ಲಿದ್ದಾನೆ. ಚೂರಿಯಿಂದ ಇರಿದದೇಹ ಕಣಪ್ಪಾ."

ಪ್ಯಾರೇಲಾಲ್ ಮುಂದೆ ಬಂದುನಿಂತ ರಿಕ್ಷಾವನ್ನು ಆಗ ದಿಟ್ಟಿಸಿ ನೋಡಿದನು. ರಿಕ್ಷಾ ತುಳಿಯುವವನು ಬೆವರಿದ ದೇಹದೊಂದಿಗೆ, ನೆನೆದು ಅಂಟಿಕೊಂಡಿರುವ ಬನಿಯನ್‌ನೊಂದಿಗೆ ರಿಕ್ಷಾ ಹ್ಯಾಂಡಲ್ ಹಿಡಿದು ನಿಂತಿದ್ದಾನೆ. ಸೀಟಿನಲ್ಲಿ ಇಬ್ಬರಿದ್ದಾರೆ. ಒಬ್ಬನ ಮಡಿಲಲ್ಲಿ ಇನ್ನೊಬ್ಬನು ಮಲಗಿದ್ದನು. ಇಬ್ಬರೂ ರಕ್ತದಲ್ಲಿ ಮಿಂದಿದ್ದರು. ಮಡಿಲಲ್ಲಿರುವವನು ಕಣ್ಣುಮುಚ್ಚಿಕೊಂಡು ಬಿದ್ದಿದ್ದನು. ಮಲಗಿಸಿಕೊಂಡಿದ್ದವನು ಕಣ್ಣು ಮುಚ್ಚಿದ್ದವನನ್ನು ಬಿಗಿಯಾಗಿ ಹಿಡಿದುಕೊಂಡಿದ್ದನು. ಕಣ್ಣು ಮುಚ್ಚಿದವನು ಬಾಡಿ ಸುಸ್ತಾಗಿ ಗಾಳಿಯಲ್ಲಿ ಸೊರಗಿ ಒರಗಿ ಬಿದ್ದಿರುವ ನೇಂದ್ರಬಾಳೆ ಗಿಡದಂತೆ ಮತ್ತೊಬ್ಬನ ಹೆಗಲಮೇಲೆ ಬಿದ್ದಿದ್ದನು. ಗಟ್ಟಿಯಾದ ರಕ್ತವು ರಿಕ್ಷಾಗಾಡಿಯನ್ನು ಹತ್ತುವ ಸ್ಥಳದಲ್ಲಿ ಮೇಣದಂತೆ ಕರಗಿ ಹರಡಿಕೊಳ್ಳುತ್ತಿತ್ತು.

ಪ್ಯಾರೇಲಾಲ್ ಗೇಟ್ ತೆರೆದು ಹೊರ ಬಂದನು. ಅನಂತರ ರಿಕ್ಷಾ ಗಾಡಿಯ ಬಳಿಗೆ ಬಂದು ನಿಂತನು. ಕಣ್ಣು ತೆರೆದು ಕುಳಿತಿರುವವನು ಬಹುವಾಗಿ ನೋವನ್ನು ಅನುಭವಿಸುತ್ತಿರುವವನಂತೆ ಪ್ಯಾರೇಲಾಲ್‌ನನ್ನು ನೋಡಿದನು. ಅನಂತರ ಹೇಳಿದನು:

"ಅಯ್ಯೋ, ಸ್ನೇಹಿತನೇ, ನಮ್ಮನ್ನು ಕಾಪಾಡಬೇಕಪ್ಪಾ."

ಪ್ಯಾರೇಲಾಲ್ ಇರಿತದ ಗಾಯಗಳಿಂದ ಮಲಗಿದ್ದವನನ್ನು ಮುಟ್ಟಿ ನೋಡಿದನು. ಅವನ ದೇಹವು ತಣ್ಣಗಾಗಿ ಮರಗಟ್ಟಿತ್ತು. ಮುಖದಲ್ಲೂ ತಲೆಯಲ್ಲೂ ಹಾಗೆಯೇ ಮೆತ್ತಿಕೊಂಡಿತ್ತು. ಹಾಕಿಕೊಂಡಿದ್ದ ಬಟ್ಟೆಗಳು ಹಲವಾರು ಕಡೆ ಹರಿದು ಹೋಗಿದ್ದುವು. ತಣ್ಣಗೆ ಗುಂಡಗಿದ್ದ ದೇಹಕ್ಕೆ ಆಗಲೂ ಒಳ್ಳೆಯ ದಾರ್ಢ್ಯ ಇರುವಂತೆ ತೋರಿತು.

ಪ್ಯಾರೇಲಾಲ್ ತನ್ನ ಸಂಶಯವು ತೀರದಿರಲು ರೋಗಿಯ ಮುಚ್ಚಿದ್ದ ಕಣ್ಣುಗಳನ್ನು ಅರಳಿಸಿ ನೋಡಿದನು. ಕಣ್ಣಿನ ಗುಡ್ಡೆಯು ಒಂದು ನಯಾಪೈಸೆಯಂತೆ ಅರಳಿತ್ತು. ಆಮೇಲೆ ಪ್ಯಾರೇಲಾಲ್ ಸ್ವಲ್ಪವೂ ತಡ ಮಾಡಲಿಲ್ಲ.

"ನೆಟ್ಟಗೆ ಹೋಗಿ, ಪಕ್ಕದಲ್ಲಿ ಕಾಣುತ್ತಿರುವ ಆ ಕಟ್ಟಡದಲ್ಲಿ ಹೋಗಿ ಕ್ಯಾಷುಯಾಲಿಟಿ ಎಲ್ಲಿ ಎಂದು ಕೇಳಿದರೆ ಯಾರು ಬೇಕಾದರೂ ಹೇಳುತ್ತಾರೆ."

"ಹಾಗಾದರೆ ಇಲ್ಲಿ", ಕಚ್ಚೆಪಂಚೆಯುಟ್ಟ, ಬೆವರುತ್ತಾ ನಿಂತಿದ್ದ, ∩ ಆಕೃತಿಯಲ್ಲಿ ಮೀಸೆ ಇರುವ ವೃದ್ಧನು ಕೇಳಿದನು.

"ಇಲ್ಲಿ ಸಮಯ ಆಗಿಹೋಗಿದೆ", ಉದಾಸೀನದಿಂದ ಪ್ಯಾರೇಲಾಲ್ ಹೇಳಿದನು. ವೃದ್ಧನು ಮತ್ತೆಯೂ ಸಂಶಯಿಸಿದನು:

"ಕ್ಯಾಷುಯಾಲಿಟಿಗೆ ಈಗ ಹೋದರೆ ಡಾಕ್ಟರ್ ಇರುತ್ತಾರೆಯೇ ?"

"ಓ, ಬೇಕಾದಷ್ಟು, ಅಲ್ಲೇ ಮೂರು-ನಾಲ್ಕು ಡಾಕ್ಟರುಗಳಿದ್ದಾರೆ." ಗೇಟ್ ಎಳೆದು

ಬಿಗಿಯಾಗಿ ಹಾಕಿ ಪ್ಯಾರೇಲಾಲ್ ಹೇಳಿದನು. ಆದರೆ ಪ್ಯಾರೇಲಾಲ್‌ಗೆ ಜೋರಾಗಿ ಕೂಗಿ ಹೇಳಬೇಕೆಂದೆನ್ನಿಸಿತು -"ಸ್ನೇಹಿತ ಇನ್ನು ಯಾವ ಪರಿಹಾರವೂ ಇಲ್ಲ."

ರಕ್ತವು ಧಾರಾಕಾರವಾಗಿ ಹರಿದು ಹೋಗಿದ್ದ ಶವ ಶರೀರವನ್ನಿಟ್ಟುಕೊಂಡು ಎರಡು ರಿಕ್ಷಾಗಾಡಿಗಳೂ, ಕೆಲವು ಜನರೂ ಕ್ಯಾಷುಯಾಲಿಟಿಯನ್ನೇ ಗುರಿಯಾಗಿಟ್ಟು ಮುಂದೆ ಹೋದರು.

ಪ್ಯಾರೇಲಾಲ್ ಅದನ್ನು ನೋಡುತ್ತಾ ನಿಂತನು.

# ಮೂರು

ದೇವದಾಸ್ ಮೆಡಿಕಲ್ ಕಾಲೇಜಿನ ಆರಂತಸ್ತಿನ ಕಟ್ಟಡದ ಮುಂದೆ ಬಂದು ನಿಂತನು. ಪ್ರಧಾನಗೇಟಿನ ಮುಂದೆ ಜನಸಂದಣಿಯು ವರ್ಧಿಸಿದೆ. ಕಾರಿನಲ್ಲೂ, ಸ್ಕೂಟರ್‌ನಲ್ಲೂ, ಕಾಲುನಡಿಗೆಯಲ್ಲೂ ಬಂದವರೂ, ವಿದ್ಯಾರ್ಥಿಗಳೂ, ನರ್ಸ್‌ಗಳೂ ಇವರೆಲ್ಲರನ್ನೊಳಗೊಂಡ ಚಿಕ್ಕದೊಂದು ಜನರ ಗುಂಪನ್ನು ಸ್ವಲ್ಪ ಹೊತ್ತು ನೋಡುತ್ತಾ ನಿಂತನು.

ದೇವದಾಸ್ ಹೊಸದಾಗಿ ಪ್ರವೇಶ ಪಡೆದಿದ್ದ ಒಬ್ಬ ಮೆಡಿಕಲ್ ವಿದ್ಯಾರ್ಥಿ. ಅದು ಮೆಡಿಕಲ್ ಕಾಲೇಜಿನಲ್ಲಿನ ಅವನ ಮೊದಲ ದಿನವಾಗಿತ್ತು. ಚಿನ್ನದ ಅಕ್ಷರಗಳಲ್ಲಿ ಬರೆದಿಡಬೇಕಾದ ಒಂದು ದಿನ.

ಹೊಸ ವಾಸನೆ ಬರುತ್ತಿದ್ದ ನೂತನವಾದ ಏಪ್ರನ್ ಎಡ ಮುಂದೋಳಿನ ಮೇಲೆ ಹಾಕಿಕೊಂಡು, ನೆಕ್‌ಟೈಯನ್ನು ಕತ್ತಿಗೆ ಒಮ್ಮೆ ಬಿಗಿ ಮಾಡಿಕೊಂಡ ನಂತರ ದೇವದಾಸ್ ಗೇಟ್‌ನ ಬಳಿಗೆ ನಡೆದನು.

ಗೇಟ್‌ಮಾನ್ ಪ್ಯಾರೇಲಾಲ್ ದೇವದಾಸನನ್ನು ಮೌನವಾಗಿ ಸ್ವಾಗತಿಸಿದನು. ಅದು ಆತನ ಭವಿಷ್ಯ ಜೀವನದ ಪ್ರಥಮ ಹೆಜ್ಜೆಯಾಗಿತ್ತು. ಅವನ ಒಂದು ಮುಗುಳ್ನಗೆಯು ದೇವದಾಸನಿಗೆ ಎಷ್ಟೋ ಅಮೂಲ್ಯವಾಗಿತ್ತು. ಉದ್ದಕ್ಕೆ ವಿಶಾಲವಾಗಿರುವ ಹಾಲನ್ನು ಪ್ರವೇಶಿಸಿದ ಅವನಿಗೆ ತಾನು ಯಾವ ದಾರಿಗೆ ಹೋದರೂ ತನ್ನ ಲಕ್ಷ್ಯವನ್ನೇ ಮುಟ್ಟಬಹುದೆಂದು ತಿಳಿಯದು. ಹಾಲ್‌ನ ಎಡಗಡೆ ರಿಸೆಪ್ಷನ್ ಆಗಿತ್ತು. ಅಲ್ಲಿಗೆ ಹೋಗಿ ದಾರಿಯನ್ನು ಕೇಳಲು ಅವನ ಬಿಗುಮಾನ ಬಿಡಲಿಲ್ಲ. ಅವನು ಒಬ್ಬ ಮೆಡಿಕೋ ಅಲ್ಲವೇ ? ರಿಸೆಪ್ಷನ್ ಪಬ್ಲಿಕ್‌ಗೆಂದಲ್ಲವೇ ಇರುವುದು.

ಹಾಲ್‌ನ ನಾಲ್ಕೂ ದಿಕ್ಕುಗಳಿಂದ ಒಂಭತ್ತು ಉದ್ದನೆಯ ಕಾರಿಡಾರ್‌ಗಳು ಮುಂದೆ ಮುಂದೆ ಹೋಗುತ್ತಲೇ ಇದ್ದವು. ಹಾಲಿನೊಳಗೆ ಪ್ರವೇಶಿಸಿದ ಮನುಷ್ಯರು ಅಲ್ಲಿ ಇಲ್ಲಿ ಚೆದುರಿ ಒಂದೊಂದು ಕಾರಿಡಾರ್‌ನಲ್ಲೂ ಮರೆಯಾಗುತ್ತಾ ಇದ್ದರು. ಈಗ ದೇವದಾಸ್‌ಗೆ ಒಂದು ಬೋರ್ಡ್ ಕಾಣಿಸಿತು.

ಪ್ರೀ ಕ್ಲಿನಿಕಲ್ ಸೆಕ್ಷನ್.

ಅದು ಮೂರನೆಯ ಕಾರಿಡಾರ್‌ನಲ್ಲಿದ್ದ ಅನೇಕ ಬೋರ್ಡ್‌ಗಳಲ್ಲಿ ಒಂದಾಗಿತ್ತು. ಆ ಮೂರನೆಯ ಕಾರಿಡಾರೇ ತನ್ನ ದಾರಿಯೆಂದು ದೇವದಾಸ್ ಅರ್ಥ ಮಾಡಿಕೊಂಡನು.

ದೃಷ್ಟಿ ಹಾಯಿಸಲಾಗದಷ್ಟು ದೂರದವರೆಗೂ ಚಾಚಿದ್ದ ಒಂದು ಕಾರಿಡಾರ್ ಆಗಿತ್ತದು. ಅದರ ಉದ್ದಕ್ಕೂ ರೋಗಿಗಳೂ, ಇತರರೂ, ತಳ್ಳಿಕೊಂಡು ಹೋಗುವ ಗಾಡಿಗಳೂ ಚಲಿಸುತ್ತಿದ್ದವು. ಕಾರಿಡಾರ್ ಮೂಲಕ ನಡೆಯುವಾಗ ಎಡಬಲಗಳಲ್ಲಿ

ಉಪಶಾಖೆಗಳನ್ನೂ ಕಂಡನು.

"ಹಲೋ!" ಅಶರೀರವಾಣಿಯಂತೆ ಒಂದು ಧ್ವನಿಯು ಥಟ್ಟನೆ ಕೇಳಿಬಂದಿತು. ದೇವದಾಸ್ ತಿರುಗಿ ನೋಡಿದನು. ಏಪ್ರನ್ನೂ, ಪುಸ್ತಕಗಳನ್ನೂ ಹಿಡಿದುಕೊಂಡು ಒಬ್ಬ ಮೆಡಿಕೋ, (ವೈದ್ಯಕೀಯ ವಿದ್ಯಾರ್ಥಿ) ನಿಂತಿದ್ದನು. ಸೀನಿಯರ್ ಸ್ಟೂಡೆಂಟ್ ಇರಬೇಕು.

"ಗುಡ್‌ಮಾರ್ನಿಂಗ್" ದೇವದಾಸ್ ತುಂಬ ವಿನಮ್ರನಾಗಿ ನಮಸ್ಕಾರ ಹೇಳಿದನು.

"ಬನ್ನಿ.... ನನ್ನ ಜೊತೆ ನಡೆಯಿರಿ" ಮುಂದಕ್ಕೆ ಸರಿದು ಹೋಗುತ್ತಾ ಅವನು ಹೇಳಿದನು. ಆ ಮಾತುಗಳಲ್ಲಿ ಆಜ್ಞಾಪಿಸುವ ಶಕ್ತಿಯು ಪ್ರತಿಬಿಂಬಿಸುತ್ತಿತ್ತು.

ಜನರ ಗುಂಪಿನ ಮೂಲಕ ನಡೆದ ಅವರು ಒಂದು ಕೊಠಡಿಯನ್ನು ಪ್ರವೇಶಿಸಿದರು. ಅಲ್ಲಿ ಹತ್ತಿಪ್ಪತ್ತು ಹೊಸ ಮೆಡಿಕೋಗಳಿದ್ದರು. ಕೆಲವು ಸೀನಿಯರ್ ಮೆಡಿಕೋಗಳು ಅವರನ್ನು ಅತಿ ಸೂಕ್ಷ್ಮವಾಗಿ ಪರಿಶೋಧಿಸುತ್ತಿದ್ದರು.

ದೇವದಾಸ್ ಕೋಣೆಯನ್ನು ಪ್ರವೇಶಿಸಿದೊಡನೆಯೇ ಒಬ್ಬ ಸೀನಿಯರ್ ಮೆಡಿಕೋ ಅವನ ಕತ್ತನ್ನು ಸರ್ರನೆ ಹಿಡಿದು ಟೈಯನ್ನು ಎಳೆದು ಬಿಚ್ಚಿ ತೆಗೆದನು. ಅನಂತರ ಅವನ ಬೆಲ್ಟ್ ಬಿಚ್ಚಿ ಕತ್ತಿನಲ್ಲಿ ಹಾಕಿಕೊಂಡು ಟೈಯನ್ನು ಸೊಂಟಕ್ಕೆ ಕಟ್ಟಲು ಹೇಳಿದನು.

"ಲೇ ನಾಯಿ, ನೀನು ಮೀಸೆ ತೆಗೆಯಲಿಲ್ಲವೇನೋ ?"

ಹೊಸ ವಿದ್ಯಾರ್ಥಿಗಳು ಮೀಸೆಯೊಂದಿಗೆ ಬರಬಾರದೆಂದು ನಿಯಮವಿತ್ತು. ಕ್ಲೀನ್ ಷೇವ್, ನೀಲಿ ಪ್ಯಾಂಟ್, ಬಿಳಿ ಷರ್ಟು, ನೀಲಿ ಟೈ - ಅವರ ವೇಷ ಹಾಗಿರಬೇಕಿತ್ತು.

ಒಂದು ಕನ್ನಡಿಯನ್ನೂ ಸೇಫ್ಟಿ ರೇಜರ್ ಅನ್ನೂ ದೇವದಾಸ್‌ಗೆ ಕೊಟ್ಟುನಂತರ ಬಾತ್‌ರೂಮಿನತ್ತ ಬೆರಳು ಮಾಡಿ ತೋರಿಸುತ್ತಾ ಅವನು ಹೇಳಿದನು:

"ಹೋಗು, ಹೋಗಿ ಕ್ಲೀನ್ ಷೇವ್ ಮಾಡಿಕೊಂಡು ಬಾ."

ದೇವದಾಸ್ ಬಾತ್‌ರೂಮ್ ಅನ್ನು ಪ್ರವೇಶಿಸುತ್ತಿರುವಾಗ ಅವನು ಮತ್ತೆ ಕೂಗಿ ಹೇಳಿದನು:

"ಎಲ್ಲಾ ಕೂದಲುಗಳನ್ನು ತೆಗೆದು ಹಾಕಬೇಕು."

ಎಲ್ಲರೂ ಒಟ್ಟಿಗೆ ಜೋರಾಗಿ ನಕ್ಕರು.

ಬಾತ್‌ರೂಮ್‌ನ ಬಾಗಿಲನ್ನು ತೆರೆದು ದೇವದಾಸ್ ಹೊರಕ್ಕೆ ಬಂದಾಗ ಮತ್ತೆ ಎಲ್ಲರೂ ಒಟ್ಟಿಗೆ ಜೋರಾಗಿ ನಕ್ಕರು. ಕೋಣೆಯಲ್ಲಿ ಗಲಾಟೆ ಹೆಚ್ಚಾಗುತ್ತಿತ್ತು. ನಗು, ಅಳು, ಅಟ್ಟಹಾಸಗಳು - ಇವುಗಳೆಲ್ಲ ಆ ಕೋಣೆಯಲ್ಲಿ ಮೊಳಗುತ್ತಿದ್ದವು.

ಅದೊಂದು ಕ್ಲಾಸ್‌ರೂಮ್ ಆಗಿತ್ತು. ಒಂದು ಮೂಲೆಯಲ್ಲಿ ಗಾಜಿನ ಬೀರುವಿನಲ್ಲಿ ಒಂದು ಅಸ್ಥಿಪಂಜರವನ್ನು ನೇತುಹಾಕಲಾಗಿತ್ತು. ಒಂದು ಕಾಲದಲ್ಲಿ ಜೀವಿಸಿದ್ದ ಒಬ್ಬ ಮನುಷ್ಯನ ಪೂರ್ಣಕಾಯ ಪ್ರತಿಮೆ. ಗೋಡೆಯ ಮೇಲೆ ಮನುಷ್ಯನ ಒಳಅವಯವಗಳನ್ನು ಬರೆದು ಚಿತ್ರಿಸಿದ್ದ ಮ್ಯಾಪುಗಳು ಕಂಡುಬರುತ್ತಿದ್ದವು. ಪಿತ್ತಜನಕಾಂಗ, ಶ್ವಾಸಕೋಶ, ಮೂತ್ರಪಿಂಡ, ಹೃದಯ ಇವುಗಳನ್ನೇ ಸಾಲುಸಾಲಾಗಿ ಕಾಣಬಹುದಿತ್ತು.

ಒಬ್ಬ ಸೀನಿಯರ್ ಮೆಡಿಕೋ ಬ್ಲಾಕ್‌ಬೋರ್ಡ್‌ನಲ್ಲಿ ಬರೆಯುತ್ತಿದ್ದನು. ಬರೆದು ಮುಗಿಸಿದಾಗ ಅದಕ್ಕೊಂದು ಶೀರ್ಷಿಕೆಯನ್ನವನು ಕೊಟ್ಟನು. 'ಟೆನ್ ಕಮ್ಯಾಂಡ್‌ಮೆಂಟ್ಸ್'-ಜೂನಿಯರ್ ವಿದ್ಯಾರ್ಥಿಗಳು ಅನುಸರಿಸಬೇಕಾದ ಹತ್ತು ಆಜ್ಞೆಗಳನ್ನು ಕ್ರಮಸಂಖ್ಯೆಗಳೊಂದಿಗೆ ಸಾಲಾಗಿ ಬರೆದು ತೋರಿಸಿದ್ದನು:

1. ಸೀನಿಯರ್ ಮೆಡಿಕೋಗಳನ್ನು ನೋಡಿದಾಗ ಮರ್ಯಾದೆ ಕೊಡಬೇಕು.
2. ಗಡ್ಡ ಮೀಸೆಗಳಿಟ್ಟುಕೊಳ್ಳಬಾರದು.
3. ನೀಲಿ ಪ್ಯಾಂಟನ್ನು, ಬಿಳಿ ಷರ್ಟನ್ನೂ, ನೀಲಿ ಟೈಯನ್ನು ಮಾತ್ರವೇ ಧರಿಸಬೇಕು.
4. ಷೂಸ್ ಹಾಕದೆ ಕಾಲೇಜಿನ ಕಾಂಪೌಂಡಿನೊಳಗೆ ಪ್ರವೇಶಿಸಬಾರದು.
5. ಧೂಮಪಾನ ಮಾಡಕೂಡದು.
6. ಹುಡುಗಿಯರು ಎದುರಾದಾಗ ಕಣ್ಣು ಮುಚ್ಚಬೇಕು.
7. ಕಕ್ಕಸ್ಸಿಗೆ ಹೋದರೆ ನೀರು ಉಪಯೋಗಿಸಬಾರದು.
8. ತಿಂಗಳಿಗೊಮ್ಮೆ ಆತ್ಮಹತ್ಯೆ ಮಾಡಿಕೊಳ್ಳಬೇಕು.
9. ಪಠ್ಯಪುಸ್ತಕಗಳನ್ನು ಒಮ್ಮೆಯೂ ತೆರೆಯಬಾರದು.
10. ಪರೀಕ್ಷೆಗಳನ್ನು ಬಹಿಷ್ಕರಿಸಬೇಕು.

ಸೀನಿಯರ್ ವಿದ್ಯಾರ್ಥಿಗಳು ಸಾಲಾಗಿ ಹಾಕಿಟ್ಟಿದ್ದ ಕುರ್ಚಿಗಳಲ್ಲಿ ಕುಳಿತರು. ಹೊಸ ವಿದ್ಯಾರ್ಥಿಗಳನ್ನು ಗೋಡೆಗೆ ಅಭಿಮುಖವಾಗಿ ನಿಲ್ಲಿಸಲಾಗಿತ್ತು. ಸುಮಾರು ಮೂವತ್ತು ಜನರಿದ್ದರು.

"ಎಲ್ಲರೂ ಆಕಡೆ ತಿರುಗಿ ನಿಲ್ಲಿ" ಯಾವನೋ ಒಬ್ಬನು ಕೂಗಿ ಹೇಳಿದನು.

ಅವರೆಲ್ಲರೂ ಒಂದು ಪೆರೇಡ್‌ನಲ್ಲೆಂಬಂತೆ ನೂರೆಂಭತ್ತು ಡಿಗ್ರಿ ತಿರುಗಿದರು. ಕತ್ತಿನಲ್ಲಿ ಬೆಲ್ಟ್, ಸೊಂಟದಲ್ಲಿ ಟೈ ಕಟ್ಟಿದ ಒಂದು ಬಫೂನರ ಗುಂಪು.

ದೇವದಾಸ್ ಕಡೆಗಣ್ಣಿನಿಂದ ಜೊತೆಗಾರರೆಲ್ಲರನ್ನು ಒಮ್ಮೆ ನೋಡಿದನು. ಎಲ್ಲರ ಮುಖಗಳಲ್ಲೂ ಹೆದರಿಕೆ ಪ್ರತಿಬಿಂಬಿಸುತ್ತಿತ್ತು. ಕೆಲವರು ಬೆವರಿನಿಂದ ನೆನೆದು ಮುದ್ದೆಯಾಗಿದ್ದರು. ಕೆಲವರ ಮುಖದಲ್ಲಿ ಇತ್ತೀಚೆಗೆ ರಕ್ತ ಹರಿದ ಲಕ್ಷ್ಯ ಸಹ ಇರಲಿಲ್ಲ. ಬರಲಿರುವ ಭವಿಷ್ಯವನ್ನು ನೆನೆದು ಎಲ್ಲರೂ ವ್ಯಾಕುಲರಾಗಿದ್ದರು.

ಸೀನಿಯರ್ ವಿದ್ಯಾರ್ಥಿಗಳು ಬೇಟೆಸಿಕ್ಕಿದ ಉತ್ಸಾಹದಲ್ಲಿ ತಮ್ಮನ್ನೇ ತಾವು ಮರೆತಿದ್ದರು. ಮೀಸೆಯನ್ನು ಹುರಿಮಾಡಿದ್ದ, ಕೆಂಪು ಕಣ್ಣುಗಳಿದ್ದ ಒಬ್ಬ ಧಡಿಯನು ಎದ್ದು ಬಂದು ಒಬ್ಬೊಬ್ಬರ ಹೊಟ್ಟೆಗೂ ಹೊಡೆಯತೊಡಗಿದನು. ಕೆಲವರು ನೋವಿನಿಂದ ನರಳಿದರು. ಕೆಲವರು ನೋವನ್ನು ಹಲ್ಲುಕಚ್ಚಿಕೊಂಡು ಸಹಿಸಿಕೊಂಡರು.

"ಯಾರಾದರೂ ಹೇಳಿದ ಮಾತು ಕೇಳದೆ ಹೋದರೆ ಹೀಗೆ ಚಚ್ಚಿಚಚ್ಚಿ ಚಟ್ನಿ ಮಾಡಿಬಿಡುತ್ತೇನೆ." ಮೀಸೆ ತಿರುಗಿಸುತ್ತಾ ಅವನು ತಾಕೀತು ಮಾಡಿದನು.

ಅನಂತರ ಜೂನಿಯರ್‌ಗಳ ಗುಂಪಿನಿಂದ ಒಬ್ಬ ಧಡಿಯನನ್ನು ಹಿಡಿದುಕೊಂಡು ಮುಂದಕ್ಕೆ ಬಂದನು.

"ನಿನ್ನ ಹೆಸರೇನು ?"

"ಅನಿಲ್ ಕುಮಾರ್."

"ಯಾವ ಕಾಡಿನಿಂದ ಬಂದಿರುವೆ ?"

ಅನಿಲ್ ಕುಮಾರ್ ಏನು ಹೇಳಬೇಕೆಂದು ತಿಳಿಯದೆ ನಾಲ್ಕೂ ದಿಕ್ಕುಗಳನ್ನು ನೋಡಿದನು.

"ನೀನು ಯಾವ ಕಾಡಿನಿಂದ ಬರುತ್ತಿರುವೆ, ಹೇಳು ?"

ಸಂಕೋಚದಿಂದ, ಅಪರಾಧಪ್ರಜ್ಞೆಯಿಂದ ಎಂಬಂತೆ ಅನಿಲ್ ಕುಮಾರ್ ಹೇಳಿದನು:

"ಬರೇಲಿ."

"ಬರೇಲಿ ಎಂದರೆ ಒಂದು ಕಾಡೇನು ?"

"ಕತ್ತೇ ಮಗನೇ, ಬರೇಲಿ ಎಂದರೆ ಒಂದು ಕಾಡೇ ಎಂದು ನಾನು ಕೇಳಿದೆ."

ಏನು ಹೇಳಲೂ ಸಾಧ್ಯವಾಗದೆ ಅನಿಲ್‌ಕುಮಾರ್ ಕಣ್ಣು ಕಣ್ಣುಬಿಡುತ್ತಾ ನಿಂತನು.

"ನೀನು ಗಂಡೋ ಹೆಣ್ಣೋ ?" ಯಾರೋ ಅನಿಲ್‌ಕುಮಾರ್‌ನನ್ನು ಕೇಳಿದರು.

"ಗಂಡು" ಅನಿಲ್ ಹೇಳಿದನು.

"ಗಂಡಿಗೂ, ಹೆಣ್ಣಿಗೂ ಇರುವ ವ್ಯತ್ಯಾಸಗಳೇನು ಹೇಳು."

ಅನಿಲ್‌ಕುಮಾರ್ ವ್ಯತ್ಯಾಸಗಳನ್ನು ಮನಸ್ಸಿನಲ್ಲಿ ನಿರ್ಧರಿಸಿಕೊಂಡು ಹೇಳಲಾರಂಭಿಸಿದನು.

"ಗಂಡಸರಿಗೆ ತಲೆಯಲ್ಲಿ ಚಿಕ್ಕದಾದ ಕೂದಲುಗಳಿರುತ್ತವೆ. ಹೆಂಗಸರಿಗೆ ಕೂದಲು ಉದ್ದವಾಗಿರುತ್ತವೆ.

"ಹ... ಹ... ಹ... ಇನ್ನೊಂದು ಸಲ ಹೇಳು."

"ಗಂಡಸರಿಗೆ ತಲೆಯಲ್ಲಿ ಚಿಕ್ಕ ಕೂದಲುಗಳೂ, ಹೆಂಗಸರಿಗೆ ಉದ್ದನೆಯ ಕೂದಲುಗಳೂ ಇರುತ್ತವೆ."

"ಆಗ ಸರದಾರ್‌ಜೀಗಳೋ ? ಅವರು ಹೆಂಗಸರಾಗಿರಬೇಕು. ಅಲ್ಲವೇನೋ ? ಕತ್ತೇ ಮಗನೇ ?"

ಮತ್ತೂ ಜೋರಾಗಿ ನಗು ಮೊಳಗಿತು.

ಒಬ್ಬನು ಒಂದು ಸೋಡಾಬಾಟಲ್ ತೆಗೆದುಕೊಂಡು ಬಂದನು. ಅದನ್ನು ನೀಡುತ್ತಾ ಅವನು ಅನಿಲ್‌ಕುಮಾರ್‌ನಿಗೆ ಹೇಳಿದನು:

"ಇದನ್ನು ನೆಟ್ಟಗೆ ನೆಲದ ಮೇಲೆ ನಿಲ್ಲಿಸಿ ಅದರ ಮೇಲೆ ಕುಳಿತುಕೋ."

ಬಾಟಲನ್ನು ತೆಗೆದುಕೊಂಡು ಅನಿಲ್‌ಕುಮಾರ್ ಕದಲದೆ ನಿಂತನು. ಅವನ ಉಚ್ಛ್ವಾಸ ನಿಶ್ವಾಸಗಳು ಎಲ್ಲವೂ ನಿಶ್ಚಲವಾದಂತೆ ಅನ್ನಿಸಿತು.

"ಕುಳಿತುಕೋ" ನಾಲ್ಕು ದಿಕ್ಕುಗಳಿಂದಲೂ ಆಜ್ಞೆಗಳು ಬರುತ್ತಲಿದ್ದವು.

ಯಾರೋ ಕೊಳೆತ ಕೋಳಿಮೊಟ್ಟೆಯನ್ನು ಅವನ ಮೇಲೆ ಎಸೆದರು. ದುರ್ಗಂಧವು ಕೋಣೆಯಲ್ಲಿ ಹರಡಿತು.

ಬಾಟಲನ್ನೇ ನೆಲದ ಮೇಲಿಟ್ಟು ಬಹಳ ಬ್ಯಾಲೆನ್ಸ್ ಮಾಡಿ ಅದರ ಮೇಲೆ ಅನಿಲ್‌ಕುಮಾರ್ ಕುಳಿತನು.

"ಎರಡು ಕೈಗಳನ್ನೂ ಮುಂದಕ್ಕೆ ಚಾಚು."

ಅವನು ಕೈಗಳನ್ನೇ ಮುಂದಕ್ಕೆ ಚಾಚಿದನು. ಕೈಕಾಲುಗಳು ಗಾಳಿಯಲ್ಲಿ ಚಲಿಸುತ್ತಿರುವಂತೆ ಅನಿಲ್‌ಗೆ ಅನ್ನಿಸಿತು. ಅವನ ಕೈಗಳೂ ಮಂಡಿಯೂ ನಡುಗಲಾರಂಭಿಸಿದವು.

ಅದರ ಮಧ್ಯೆ, ಯಾರೋ ಹಿಂದಿನಿಂದ ಒಂದು ಕಾಲಿನಿಂದ ಬಾಟಲ್ ಅನ್ನು ಮೆಲ್ಲನೆ ಒಮ್ಮೆ ತಳ್ಳಿದರು. ಅನಿಲ್‌ಕುಮಾರ್ ಸರ್ರನೆ ಹೊರಳಿ ಬಿದ್ದನು.

ಒಟ್ಟಾಗಿ ನಗುವುದರಿಂದ, ಅಟ್ಟಹಾಸಗಳಿಂದ ಕೋಣೆಯು ಮತ್ತೆ ಮೊಳಗತೊಡಗಿತು.

ಸೋಡಾಬಾಟಲನ್ನು ಕೈಯಲ್ಲಿ ಹಿಡಿದುಕೊಂಡು ಜೂನಿಯರ್ ವಿದ್ಯಾರ್ಥಿಗಳನ್ನು ಒಬ್ಬನು ಪ್ರಶ್ನೆ ಕೇಳಿದನು:

"ಈ ಬಾಟಲಿಗೂ ಒಂದು ಹುಡುಗಿಗೂ ಇರುವ ವ್ಯತ್ಯಾಸವೇನು ಹೇಳಬಲ್ಲಿರಾ ?"

ಯಾರಿಂದಲೂ ಮಾತು ಬರಲಿಲ್ಲ.

"ಯಾರಿಗೂ ತಿಳಿಯದಲ್ಲವೇ ? ಕತ್ತೇ ಮಕ್ಕಳೆ, ಗೊತ್ತಿಲ್ಲದಿದ್ದರೆ ಕೇಳಿ."

ಅವನು ಹೇಳಲು ಆರಂಭಿಸಿದನು.

"ಬಾಟಲ್ ಮೊದಲು ತುಂಬಿಸುತ್ತಾರೆ. ಅನಂತರ ಕಾರ್ಕ್ ಹಾಕಿ ಅದನ್ನು ಮುಚ್ಚುತ್ತಾರೆ. ಆದರೆ ಹುಡುಗಿಗೆ ಮೊದಲು ಕಾರ್ಕ್ ಹಾಕಬೇಕು. ಅನಂತರ ತುಂಬಿಸಬೇಕು."

"ಹಾಯ್.... ಹಾಯ್.... ಹೋ.... ಹೋ... ಹರೇ ಹರ ಹರೋಹರ"

ಒಟ್ಟಿಗೆ ನಗು ಚೀರಾಟಗಳು ಕೇಳಿಬರುತ್ತಲೇ ಇದ್ದವು.

ತನ್ನ ಸರದಿ ಬಂದಾಗ ತನಗೇನು ಕಾದಿದೆಯೋ ಎಂದು ಆಲೋಚಿಸಿ ದೇವದಾಸ್ ಬೆವರುತ್ತಿದ್ದನು. ಅದರ ಮಧ್ಯೆ ಒಬ್ಬೊಬ್ಬನನ್ನು ಕರೆಯಲಾಗುತ್ತಿತ್ತು.

ಇದ್ದಕ್ಕಿದ್ದಂತೆ ಕೋಣೆಯ ಬಾಗಿಲು ತೆರೆದುಕೊಂಡು ಮೂರು ನಾಲ್ಕು ಜನರು ಕೋಣೆಯನ್ನು ಪ್ರವೇಶಿಸಿದರು. ಅವರೊಂದಿಗೆ ಒಬ್ಬಳು ಹುಡುಗಿಯೂ ಇದ್ದಳು. ಒಳ್ಳೆಯ ಎತ್ತರವಿದ್ದ ಸುಂದರಿಯಾದ ಒಬ್ಬ ಹುಡುಗಿ ಅವಳು. ತನ್ನ ದೊಡ್ಡ ಕಣ್ಣುಗಳನ್ನರಳಿಸಿ ಅವಳು ಸುತ್ತಲೂ ನೋಡಿದಳು. ಪರಿಭ್ರಮೆಯೋ ತಲ್ಲಣವೋ ಅವಳಿಗಿರುವುದಾಗಿ ತೋರಲಿಲ್ಲ. ಸ್ವಲ್ಪವೂ ಹೆದರಿಕೆಯಿಲ್ಲದೆ ಅವಳು ನಿಂತಿದ್ದಳು. ಆದರೂ ಅವಳ ಹಣೆಯ ಮೇಲೆ ಎರಡೂ ಭಾಗಗಳಿಂದ ಬೆವರುಹನಿಗಳು ಮೂಡತೊಡಗಿದ್ದವು.

ಅವಳು ಕಪ್ಪು ಬಾರ್ಡರಿರುವ ತಿಳಿಹಳದಿ ಸಿಲ್ಕ್ ಸೀರೆಯನ್ನು ಧರಿಸಿದ್ದಳು. ಅದು ಒಂದು ಬೆಲೆಬಾಳುವ ಸೀರೆಯಾಗಿತ್ತು. ದಪ್ಪಗಿದ್ದ ಒಂದು ಚಿನ್ನದ ಸರ ಅವಳ ಕತ್ತಿನಲ್ಲಿ ತೂಗುತ್ತಿತ್ತು. ಹರಳಿದ್ದ ಚಿನ್ನದ ವಾಚೂ ಮತ್ತೊಂದು ಕೈಯಲ್ಲಿ ಚಿನ್ನದ ವಂಕಿ ಬಳೆಗಳು.

ವ್ಯಾನಿಟಿ ಬ್ಯಾಗ್‌ನಿಂದ ಕರ್ಚೀಫ್ ತೆಗೆದು ಅವಳು ಹಣೆಯನ್ನು ಒರೆಸಿಕೊಂಡಳು.

"ನಿನ್ನ ಹೆಸರೇನು ?" ಯಾರೋ ಕೇಳಿದರು.

"ಸುರಯಾ ರೆಹಮಾನ್", ಯಾವ ಹೆದರಿಕೆಯೂ ಇಲ್ಲದೆ ಅವಳು ಹೇಳಿದಳು.

"ನವಾಬ್‌ರ ಮಗಳು", ಕರೆದುಕೊಂಡು ಬಂದವರಲ್ಲೊಬ್ಬನು ಹೇಳಿದನು. "ಧಿಕ್ಕಾರಕ್ಕೆ ಪರ್ಯಾಯವೆಂದರೆ ಇವಳು."

ಕೋಣೆಯು ನಿಶ್ಶಬ್ದವಾಯಿತು.

ಕರೆದುಕೊಂಡು ಬಂದವನು ಮುಂದುವರೆಸಿದನು "ಇವಳು ಯೂನಿಫಾರಂ ಧರಿಸುವುದಿಲ್ಲವಂತೆ. ಬೆಲೆಬಾಳುವ ಸೀರೆಗಳು ಮಾತ್ರವೇ ಇವಳಿಗೊಪ್ಪುವುದೆಂದು ಹೇಳುತ್ತಾಳೆ. ನವಾಬ್‌ನ ಮಗಳಲ್ಲವೇ ? ಅವಳ ಕಣ್ಣಿಗೆ ನಾವ್ಯಾರೂ ಕಾಣಿಸುವುದೇ ಇಲ್ಲ."

"ನೀನು ಯೂನಿಫಾರಂ ಧರಿಸುವುದಿಲ್ಲವೇ ?"

ಅವಳು ಮಾತನಾಡಲಿಲ್ಲ.

"ಲೇ ಹುಡುಗಿ, ಕೇಳಿದ್ದಕ್ಕೆ ಉತ್ತರ ಹೇಳು. ನೀನು ಯೂನಿಫಾರಂ ಧರಿಸುವುದಿಲ್ಲವೇ ?"

"ಇಲ್ಲ." ಮುಖಕ್ಕೆ ಹೊಡೆದಂತೆ ಅವಳೆಂದಳು.

ಅನಂತರ ಒಂದು ನಿಮಿಷವೂ ವ್ಯರ್ಥವಾಗಲಿಲ್ಲ. ಹುಡುಗರು ಅವಳ ಸುತ್ತಲೂ ನಿಂತರು. ಎಲ್ಲರೂ ತಮ್ಮ ಪೆನ್ನನ್ನೇ ತೆಗೆದು ಪನ್ನೀರು ಎರಚುವಂತೆ ಅವಳ ದೇಹದ ಮೇಲೆ ಇಂಕ್ ಚಿಮುಕಿಸತೊಡಗಿದರು. ಆ ಮೆಡಿಕಲ್ ಕಾಲೇಜಿನಲ್ಲಿದ್ದ ಎಲ್ಲರ ಪೆನ್‌ಗಳೂ ಅವಳ ಮೇಲೆ ಸಿಡಿದೆದ್ದವು. ತಿಳಿಹಳದಿ ಸೀರೆ ನೀಲಿಸೀರೆಯಾಗಿ ಮಾರ್ಪಾಡಾಯಿತು. ಅವಳ ಮುಖದಲ್ಲೂ ದೇಹದ ಮೇಲೂ ಇಂಕ್ ಸುರಿಯಲ್ಪಟ್ಟಿತು.

"ನೀಲಿ ಗುಬ್ಬಚ್ಚಿ, ನೀಲಿ ಗುಬ್ಬಚ್ಚಿ, ನಾಳೆಯೂ ನೀನು ಹೀಗೇ ಬರಬೇಕು" ಅವರೆಲ್ಲರೂ ಬೊಬ್ಬೆ ಹಾಕತೊಡಗಿದರು. ಒಂದು ಮೂಲೆಯಲ್ಲಿದ್ದ ಕುರ್ಚಿಯ ಮೇಲೆ ಯಾರೋ ಅವಳನ್ನು ಕುಳ್ಳಿರಿಸಿದರು.

ಅಲ್ಲಿ ಹೊಸದಾಗಿ ಬಂದ ಯಾರಿಗೂ ಒಂದು ಬೆಲೆ ಇರಲಿಲ್ಲ. ಮಿಕ್ಕವರು ಹೇಳುವುದನ್ನು ಅನುಸರಿಸಲೇಬೇಕು. ಗೊತ್ತಿಲ್ಲದೆ ಏನಾದರೂ ಕೈ ಎತ್ತಿದರೆ ಬೀಳುತ್ತಿತ್ತು. ದನಕರುಗಳಂತೆ ಸಾಧುವಾಗಿದ್ದುಬಿಟ್ಟರೆ ತಪ್ಪಿಸಿಕೊಳ್ಳಬಹುದಷ್ಟೆ.

ಇಂಕ್‌ನಲ್ಲಿ ಮಿಂದು ಸುಂದರಿಯಾದ ರಾಜಕುಮಾರಿ ಕುರ್ಚಿಯಲ್ಲಿ ಕಳವಳದಿಂದ ಕುಳಿತಿದ್ದಳು. ಧೈರ್ಯವನ್ನು ತೋರಲು ಅವಳು ಪ್ರಯತ್ನಿಸುತ್ತಿದ್ದರೂ ಅವಳ ಕಣ್ಣುಗಳಲ್ಲಿ ದೈನ್ಯತೆ ಪ್ರತಿಬಿಂಬಿಸುತ್ತಿತ್ತು. ಮಧ್ಯೆ ಮಧ್ಯೆ ಮೆಲ್ಲನೆಯ ನಿಟ್ಟುಸಿರು ಕೇಳಿಬರುತ್ತಿತ್ತು.

ರ್‍ಯಾಗಿಂಗ್ ನಡೆಯುತ್ತಿರುವ ಕೋಣೆಯಲ್ಲಿ ಹೆದರಿ ನಡುಗುತ್ತಿದ್ದ ಹೊಸ ಮೆಡಿಕೋಗಳು ಬೆವರಿನಲ್ಲಿ ಮಿಂದಿದ್ದರು. ಆ ಕೋಣೆಯು ಭೂಲೋಕದ ನರಕದಂತಿತ್ತು.

ಅಗೋ, ಮತ್ತೆ ಬಾಗಿಲು ತೆರೆದುಕೊಂಡು ಒಬ್ಬ ಧಡಿಯನೊಂದಿಗೆ

ಯಾರ್‍ಯಾರೋ ಬಂದರು. ಧಡಿಯನು ಮೀಸೆ ಬಿಟ್ಟಿದ್ದ ಒಬ್ಬ ಹೊಸ ಮೆಡಿಕೋ ಆಗಿದ್ದನು. ಅವನು ಬಾಗಿಲನ್ನೇ ದಾಟಿ ಒಳಬಂದೊಡನೆಯೇ ಮುಗ್ಗರಿಸಿ ಬಿದ್ದನು. ಹಿಂದಿನಿಂದ ಯಾರೋ ಅವನನ್ನು ತಳ್ಳಿಬಿಟ್ಟಿದ್ದರು. ಅವನ ಬಾಯಿಂದ ರಕ್ತ ಸುರಿಯಿತು. ಹೊಸ ಏಪ್ರನ್‌ನಲ್ಲಿ ರಕ್ತ ಹರಡಿತು.

"ರೇಜರ್ ಎಲ್ಲಿ ?"

ಒಬ್ಬ ಸೀನಿಯರ್ ವಿದ್ಯಾರ್ಥಿ ರೇಜರ್ ತೆಗೆದುಕೊಂಡು ಮುಂದೆ ಬಂದನು. ಧಡಿಯನಾದ ಜೂನಿಯರ್‌ನನ್ನ ಒಂದು ಸ್ಟೂಲ್ ಮೇಲೆ ಕುಳ್ಳಿರಿಸಿ ರೇಜರ್ ಅವನ ಮುಖದ ಹತ್ತಿರಕ್ಕೆ ತಂದಾಗ ಒಂದು ಶಬ್ದವು ಕೇಳಿಸಿತು. ಜೂನಿಯರ್‌ನ ಹೊಡೆತದ ಆಘಾತದಿಂದಾಗಿ ಆ ಸೀನಿಯರ್ ತಲೆಕೆಳಗಾಗಿ ಬಿದ್ದನು. ಬಿದ್ದವನು ಉರುಳಾಡಿದನು. ಎಲ್ಲಿಂದಲೋ ಸಿಕ್ಕ ಧೈರ್ಯದಿಂದೆಂಬಂತೆ ಧಡಿಯನು ಎದ್ದು ನಿಂತು ಸವಾಲು ಹಾಕಿ ಕೂಗಿದನು.

"ಯಾವುದಾದರೂ ನಾಯಿಗೆ ಧೈರ್ಯವಿದ್ದರೆ ಮುಂದೆ ಬರಲಿ... ನನ್ನ ಮೀಸೆ ಬೋಳಿಸಲಿ."

ಅವನು ಸುತ್ತಲೂ ನೋಡಿದನು. ಕೈ ಮುಷ್ಟಿಹಿಡಿದು ಮೇಲಕ್ಕೆತ್ತಿ ತಿರುಗಿಸಿ ಮತ್ತೊಮ್ಮೆ ರಣಕಹಳೆ ಊದಿದನು.

ಕೋಣೆಯು ಹಾಗೇ ಶಾಂತವಾಯಿತು. ಕೂಗಾಟ, ಗಲಾಟೆ ಸ್ವಲ್ಪ ಶಾಂತವಾಯಿತು. ಸೀನಿಯರ್ ವಿದ್ಯಾರ್ಥಿಗಳು ಇದುವರೆಗೆ ಒಮ್ಮೆಯೂ ಎದುರಿಸದಿದ್ದ ಸಂದರ್ಭವಾಗಿತ್ತದು. ಹೊಸ ಹೊಸ ಸ್ನೇಹಿತರ ಮುಂದೆ ಅವರು ಅಪಮಾನಿತರಾಗಿದ್ದರು. ಈ ಕಾನೂನಿನ ಉಲ್ಲಂಘನೆಗೆ ಕಠಿಣವಾದ ಶಿಕ್ಷೆಯನ್ನು ತಕ್ಷಣವೇ ಕೊಡದಿದ್ದಲ್ಲಿ ತಮ್ಮ ಆತ್ಮಾಭಿಮಾನವು ಒಡೆದು ಚೂರಾದಂತೆ ಅವರಿಗೆ ಅನ್ನಿಸಿತು.

"ಇವನ ಮೀಸೆಯನ್ನು ಈ ಕೂಡಲೇ ಬೋಳಿಸಬೇಕು" ಗುಂಪಿನಲ್ಲಿ ಧೈರ್ಯವಂತನಾದ ಒಬ್ಬ ಸೀನಿಯರ್ ಎದ್ದನು. ಪಕ್ಕದಲ್ಲಿದ್ದವರಿಗೆ ಉತ್ತೇಜನ ನೀಡುತ್ತಾ ಅವನು ಮುಂದೆ ಬಂದನು.

ವಿಲ್ಲನ್ ಆಗಿದ್ದ ಆ ಧಡಿಯ ಜೂನಿಯರ್ ಕುರ್ಚಿಯಲ್ಲಿ ಏನೂ ನಡೆದೇ ಇಲ್ಲವೆಂಬಂತೆ ಕುಳಿತಿದ್ದನು. ಅವನ ಮುಖದಲ್ಲಿ ಯಾವುದೇ ಬದಲಾವಣೆ ಕಂಡುಬರಲಿಲ್ಲ. ಧೈರ್ಯಶಾಲಿಯಾದ ಸೀನಿಯರ್, ಜೂನಿಯರ್ ಆಗಿದ್ದ ಧಡಿಯನ ಷರ್ಟನ್ನು ಬಲವಾಗಿ ಹಿಡಿದುಕೊಂಡು ಹೇಳಿದನು:

"ಏಳೋ, ನಾಯಿ."

ಧಡಿಯನಾದ ಜೂನಿಯರ್ ತಲೆಯನ್ನು ಮಾತ್ರ ಎತ್ತಿ ಹಿಡಿದುಕೊಂಡು ಅವನನ್ನು ಹೆದರಿಸಿದನು:

"ನಿನ್ನನ್ನು ಚಚ್ಚಿಹಾಕಿಬಿಡುತ್ತೇನೆ."

"ಚಚ್ಚಿ ಹಾಕುತ್ತೀಯಾ ?" ಯಾರೋ ಕೇಳಿದರು.

"ಹೌದು, ನಾನು ಚಚ್ಚಿ ಹಾಕುತ್ತೇನೆ."

ಆ ಸೀನಿಯರ್ ಧಡಿಯನ ಕತ್ತನ್ನು ಬಿಗಿಯಾಗಿ ಹಿಡಿದನು. ಅಷ್ಟು ಹೊತ್ತಿಗೆ

ಮಿಕ್ಕ ಇಬ್ಬರೂ ಅವನ ಬಳಿಗೆ ಬಂದರು. ಅವರಲ್ಲೊಬ್ಬನು ರೇಜರನ್ನು ಧಡಿಯನ ಮುಖದ ಹತ್ತಿರ ತಂದು ಹಿಡಿದನು.

ಯಾವುದೋ ಜಾದೂವಿದ್ಯೆಯಿಂದೆಂಬಂತೆ ಧಡಿಯನಾದ ಜೂನಿಯರ್ ಸಿಡಿದೆದ್ದನು. ಮೈಯನ್ನೂ ಕಾಲುಗಳನ್ನೂ ಅಸಾಧ್ಯವಾಗಿ ಕುಲುಕಿಸುತ್ತಾ ಅವನು ಎದ್ದನು. ಪ್ಯಾಂಟ್‌ನ ಕೆಳಗೆ ಬಚ್ಚಿಟ್ಟುಕೊಂಡಿದ್ದ ಕಠಾರಿಯೊಂದನ್ನು ತೆಗೆದು ಅವನೊಮ್ಮೆ ಬೀಸಿದನಷ್ಟೆ.

ಅನಂತರ ಅಲ್ಲಿ ರಕ್ತ ಮಡುಗಟ್ಟಿದ್ದು ಕಾಣಿಸಿತು.

ಇಂಕ್ ಹರಡಿದ್ದ ತಿಳಿಹಳದಿ ಸೀರೆಯ ಮೇಲೆ ಜೋರಾಗಿ 'ಚಿಟ್' ಎಂದು ರಕ್ತವು ಚಿಮ್ಮಿ ಹಾರಿಬಿದ್ದಾಗ, ನವಾಬ್‌ನ ಮಗಳು ಜೋರಾಗಿ ಅಳುತ್ತಾ ಎದ್ದು ಓಡಿದಳು.

# ನಾಲ್ಕು

ಬಿಳಿಷರಟಿನ ಮೇಲೆ ನೀಲಿಟೈ ಕಟ್ಟಿದ ಮೆಡಿಕೋಗಳು, ಅನಾಟಮಿ ಹಾಲ್‌ನ ಮುಂದೆ ಬಂದು ನಿಂತರು. ಅಂದು ಅವರಿಗೆ ಮೊದಲನೆಯ ಕ್ಲಾಸ್ ಆಗಿತ್ತು. ಅನೇಕರ ಮುಖಗಳಲ್ಲಿ ಗಾಬರಿ ಪ್ರತಿಬಿಂಬಿಸುತ್ತಿತ್ತು. ಅನೇಕರು ನಿಸ್ತೇಜರಾದಂತಿತ್ತು. ಹುಡುಗಿಯರಲ್ಲಿ ವ್ಯಸನವೋ ವ್ಯಾಕುಲತೆಯೋ ಕಾಣಿಸುತ್ತಿರಲಿಲ್ಲ. ಅವರು ತಮ್ಮತಮ್ಮಲ್ಲಿ ಮಾತಾಡಿಕೊಳ್ಳುತ್ತಾ ಮೆಲ್ಲಮೆಲ್ಲನೆ ನಗುತ್ತಿದ್ದರು. ಇಲ್ಲದಿದ್ದರೂ ಹುಡುಗಿಯರು ಹಾಗೇ ಅಲ್ಲವೇ ? ನರಕದಲ್ಲೇ ಆದರೂ ತಮ್ಮಲ್ಲಿ ತಾವು ಮೆಲ್ಲನೆ ಮಾತಾಡಿಕೊಳ್ಳುತ್ತಾರೆ, ನಗುತ್ತಾರೆ.

ಯೂನಿಫಾರಂ ಧರಿಸಿದ ಪ್ಯೂನ್, ಇಬ್ಬರು ಟ್ಯೂಟರ್‌ಗಳು ಅಲ್ಲಿಗೆ ಬಂದರು. ಟ್ಯೂಟರ್‌ಗಳ ಕೈಯಲ್ಲಿ ದಪ್ಪ ದಪ್ಪ ಪುಸ್ತಕಗಳಿದ್ದವು. ಬೀಗದ ಕೈಗೊಂಚಲನ್ನು ಗಲ ಗಲ ಶಬ್ದದೊಂದಿಗೆ ಪ್ಯೂನ್ ಕೋಣೆಯ ಬಾಗಿಲನ್ನು ತೆರೆದನು.

"ಒಳಕ್ಕೆ ಬಂದು ಕುಳಿತುಕೊಳ್ಳಿರಿ" ಟ್ಯೂಟರ್ ಹೇಳಿದನು.

ಅವರು ಬೇಗಬೇಗನೆ ಒಳಕ್ಕೆ ಬಂದು ಕುಳಿತರು.

ವಿಶಾಲವಾದ ಹಾಲ್ ಒಬ್ಬೊಬ್ಬನಿಗೂ ಒಂದೊಂದು ಡೆಸ್ಕ್, ಕುರ್ಚಿಗಳಿದ್ದವು. ಉದ್ದನೆಯ ದೊಡ್ಡ ಮೇಜಿನ ಮೇಲೆ ನೂರಾರು ಗಾಜಿನ ಜಾಡಿಗಳನ್ನಿಟ್ಟಿದ್ದರು. ಒಂದು ಕಾಲದಲ್ಲಿ ಜೀವದಿಂದಿದ್ದವರ ಮೆದುಳು, ಹೃದಯ, ಮೂತ್ರಪಿಂಡ, ಶ್ವಾಸಕೋಶ, ಗರ್ಭಕೋಶ ಆಗಿದ್ದವವು.

ಮುಂದೆ ಆಗಲಿರುವ ಈ ಡಾಕ್ಟರ್‌ಗಳನ್ನು ನೋಡಿ ಆ ಗಾಜಿನ ಜಾಡಿಗಳಲ್ಲಿನ ಅವಯವಗಳು ತಮ್ಮ ಜೀವನದ ದುರಿತಗಳನ್ನು ಮೆಲುಕು ಹಾಕುತ್ತಿರುವುದೆಂದು ದೇವದಾಸ್‌ಗನ್ನಿಸಿತು.

ಅಷ್ಟು ಹೊತ್ತಿಗೆ ಅನಾಟಮಿ ಪ್ರೊಫೆಸರ್ ಡಾಕ್ಟರ್ ಡಿ. ಕುಮಾರ್ ಬಂದರು. ಗಲಾಟೆಯಿಂದ ತುಂಬಿದ್ದ ಕ್ಲಾಸ್‌ರೂಂ ನಿಶ್ಶಬ್ದವಾಯಿತು. ಪ್ರೊಫೆಸರ್‌ರ ಶೂಸ್‌ನ ಶಬ್ದವು ಕ್ಲಾಸ್‌ರೂಂನಲ್ಲಿ ಪ್ರತಿಧ್ವನಿಸಿತು.

ಟ್ಯೂಟರ್ ರಿಜಿಸ್ಟರ್ ತೆರೆದು ಅಟೆಂಡೆನ್ಸ್ ತೆಗೆದುಕೊಳ್ಳಲಾರಂಭಿಸಿದನು. ತಮ್ಮ ಹೆಸರನ್ನು ಕರೆದಾಗ ಎದ್ದುನಿಲ್ಲುವ ಒಬ್ಬೊಬ್ಬ ವಿದ್ಯಾರ್ಥಿ ವಿದ್ಯಾರ್ಥಿನಿಯರೊಂದಿಗೆ ಪ್ರೊಫೆಸರ್ ಸಿಕ್ಕಾಪಟ್ಟೆ ಪ್ರಶ್ನೆಗಳನ್ನು ಕೇಳಲಾರಂಭಿಸುವರು. ಅವು ಅವನ-ಳ-ಊರು, ತಂದೆಯ ಉದ್ಯೋಗ, ಹಿಂದೆ ಓದಿದ ಕಾಲೇಜುಗಳು, ಅವರ ಹಾಬಿ ಮೊದಲಾದ ವಿಷಯಗಳ ಬಗ್ಗೆ ಆಗಿರುತ್ತಿತ್ತು.

ಪ್ರೊಫೆಸರ್ ಡಿ. ಕುಮಾರ್ ಒಂದೊಂದೂ ವಿಷಯವನ್ನು ಸೂಕ್ಷ್ಮವಾಗಿ

ಅವಲೋಕಿಸುತ್ತಿದ್ದರು. ಅವರ ತೀಕ್ಷ್ಣವಾದ ಕಣ್ಣುಗಳು ಕ್ಲಾಸ್‌ರೂಮಿನಲ್ಲೆಲ್ಲಾ ಓಡಿಯಾಡುತ್ತಿದ್ದವು.

ಅವರು ಸಣ್ಣಗೆ, ಬೆಳ್ಳಗೆ ಕೆಂಪಗಿದ್ದರು. ಉಬ್ಬಿದ ಮಾಂಸಖಂಡಗಳುಳ್ಳ ತೋಳುಗಳು. ಕತ್ತು ಸಣ್ಣಗೆ ಉದ್ದವಿತ್ತು. ತೋಳಿನ ಮೇಲೆ ತಲೆಯನ್ನು ಪ್ರತ್ಯೇಕವಾಗಿ ಎತ್ತಿಟ್ಟಿರುವಂತೆ ತೋರುತ್ತಿತ್ತು. ಅವರ ಚಲನೆಗಳು ಬಹಳ ವೃತ್ತಿಪರತೆಯುಳ್ಳವೂ, ಧ್ವನಿ ಮೃದುವಾದುದೂ ಆಗಿದ್ದುವು. ಬಹುಮಟ್ಟಿಗೆ ಅವರ ಎರಡು ಕೈಗಳು ಓವರ್ ಕೋಟಿನ ಪಾಕೆಟ್‌ನಲ್ಲೇ ಇರುತ್ತಿತ್ತು. ಅವರ ನರೆತಕೂದಲು ತಲೆಬುರುಡೆಗೆ ಅಂಟಿಕೊಂಡಿತ್ತು. ಅವರು ಹಾಕಿಕೊಂಡಿದ್ದ ದೊಡ್ಡಕನ್ನಡಕದ ಮೂಲಕ ಅವರ ಕಣ್ಣುಗಳು ದಿಗಂತದತ್ತ ನೆಗೆಯುತ್ತಿರುವಂತೆ ಅವರ ನೋಟವಿರುತ್ತಿತ್ತು.

ಒಬ್ಬ ವಾಗ್ಮಿಯ ಧಾಟಿಯಲ್ಲೇ ಅವರು ವಾಕ್ಯಗಳನ್ನು ಉಚ್ಚರಿಸುತ್ತಿದ್ದರು:

"ಪ್ರಿಯ ಡಾಕ್ಟರ್‌ಗಳೇ...."

ಅವರು ವಿದ್ಯಾರ್ಥಿಗಳನ್ನು ಹಾಗೆಯೇ ಕರೆಯುವುದು. ಮೆಡಿಕಲ್ ಕಾಲೇಜಿನಲ್ಲಿ ಒಂದು ಬೆಕ್ಕೇನಾದರೂ ಸಿಕ್ಕುಹಾಕಿಕೊಂಡರೆ ಅವರು ಅದನ್ನೂ ಒಬ್ಬ ಡಾಕ್ಟರ್ ಎಂಬ ರೀತಿಯಲ್ಲೇ ಕಾಣುತ್ತಿದ್ದರು.

ಪ್ರೊಫೆಸರ್ ಕುಮಾರ್ ಹೇಳಲು ಪ್ರಾರಂಭಿಸಿದರು:

"ನೀವೆಲ್ಲರೂ ಡಾಕ್ಟರುಗಳು. ನಿಮ್ಮ ಬಾಳಿನಲ್ಲಿ ನೀವು ಒಂದು ಮಹತ್ತರ ಕರ್ತವ್ಯವನ್ನು ನಿರ್ವಹಿಸಬೇಕು. ನಿಮಗೆ ಜಾತಿ ಇಲ್ಲ, ಮತವಿಲ್ಲ, ನಿಮಗೆ ಸ್ತ್ರೀ-ಪುರುಷ ಭೇದವಿಲ್ಲ. ನಿಮಗೆ ರಾತ್ರಿ ಹಗಲುಗಳಿಲ್ಲ. ನಿಮಗೆ ಕುಟುಂಬವಿಲ್ಲ, ಮಕ್ಕಳಿಲ್ಲ. ಲೋಕವೇ ನಿಮ್ಮ ಮನೆಯೆಂದೂ, ಅದು ಒಬ್ಬ ಡಾಕ್ಟರ್‌ಗೆ ಸೇರಿದ್ದೆಂದೂ ನಿಮಗೆ ಜ್ಞಾಪಕವಿರಲಿ."

ಅವರು ತಮ್ಮ ಕನ್ನಡಕವನ್ನು ತೆಗೆದು ಅದರ ಗಾಜನ್ನು ಉಜ್ಜಿ ಹೊಳಪು ತರಲೆತ್ನಿಸತೊಡಗಿದರು. ಕಣ್ಣಿನ ಮೇಲಿಂದ ಕನ್ನಡಕ ತೆಗೆದಾಗ ಅವರ ಭಾವವೇ ಬದಲಾದಂತೆ ತೋರಿತು. ತಕ್ಷಣವೇ ಅವರು ಕನ್ನಡಕವನ್ನು ಸರಿಯಾಗಿ ಹಾಕಿಕೊಂಡು ಅವರು ಮತ್ತೆ ಹೇಳಲಾರಂಭಿಸಿದರು:"ನಿಮಗೆ ಒಂದೇ ಒಂದು ಲೋಕವಿರುವುದು. ಅದು ರೋಗಿಗಳ ಲೋಕ. ಅವರೇ ನಿಮ್ಮ ಸಂತೋಷ. ಅವರೇ ನಿಮ್ಮ ಸಂತಾಪ. ಅವರನ್ನು ನಿಮ್ಮ ಆಟದಬೊಂಬೆಗಳೆಂದು ನೀವು ಭಾವಿಸುವುದಾದಲ್ಲಿ ಈ ಪ್ರಾರಂಭದ ಗತಿಯಲ್ಲೇ ಇದನ್ನು ನಿಲ್ಲಿಸಬಹುದು. ಇಲ್ಲೇ ನೀವು ಇದನ್ನು ಬಿಟ್ಟು ಹೋಗಬಹುದು. ಅವರಿಂದ ನಿಮ್ಮ ಊಟ, ಬಟ್ಟೆಗಳನ್ನು ಮಾತ್ರವೇ ನೀವು ನಿರೀಕ್ಷಿಸಬಹುದಷ್ಟೆ. ಅವರಿಂದ ನೀವು ಆಡಂಬರ ಜೀವನವನ್ನು ಪಡೆಯಲಿಚ್ಛಿಸುವುದಾದರೆ, ಇಗೋ ಈ ಬಾಗಿಲುಗಳು ಹೊರಕ್ಕಿರುವ ದಾರಿಯನ್ನು ತೋರುತ್ತವೆ."

ಅವರು ತಿರುಗಿ ಬಾಗಿಲಿಗೆ ನೇರವಾಗಿ ಕೈ ನೀಡಿ ತೋರಿಸಿದರು:

"ನಿಮ್ಮ ಬೆವರು, ನಿಮ್ಮ ಅನುಕಂಪ, ನಿಮ್ಮ ಔದಾರ್ಯ, ನಿಮ್ಮ ಸಹಾನುಭೂತಿ, ನಿಮ್ಮ ಪ್ರೀತಿ ಎಲ್ಲಾ ಅವರಿಗಾಗಿ ಖರ್ಚು ಮಾಡಿ. ಜೀವನದ ಪ್ರಯಾಣವು ಬಹಳ ದೀರ್ಘವಾದದ್ದೇನಲ್ಲ. ಅದು ಹ್ರಸ್ವವಾದದ್ದು. ಕ್ಷಣಿಕವಾದ ಈ ಪ್ರಯಾಣದಲ್ಲಿ

ಬೆಲೆಬಾಳುವ ದೇಣಿಗೆಗಳನ್ನು ಇಲ್ಲಿ ಕೊಡಲೆಂದೇ ನೀವು ಒಬ್ಬೊಬ್ಬರೂ ಶ್ರಮಿಸಬೇಕಷ್ಟೆ.

"ಚರಕನೂ ಸುಶ್ರುತನೂ ಜನಿಸಿದ ಮಣ್ಣಿದು. ಅವಿಸೆನ್ನ*ನನ್ನು ಸ್ಮರಿಸುವ ನಾಡಿದು. ಋಷಿಗಳ ನಾಡಿದು. ಒಬ್ಬೊಬ್ಬ ಡಾಕ್ಟರ್ ಋಷಿತುಲ್ಯನಾಗಿರಬೇಕು.

"ನನ್ನ ಪ್ರಿಯ ವಿದ್ಯಾರ್ಥಿ ವಿದ್ಯಾರ್ಥಿನಿಯರಾದ ಡಾಕ್ಟರುಗಳೇ..... ನಾನೊಬ್ಬ ಭಕ್ತನು. ಈಶ್ವರನಲ್ಲಿ ನಂಬಿಕೆ ಇರುವವನು. ಶಾಸ್ತ್ರಕ್ಕೂ ಯುಕ್ತಿಗೂ ಜೊತೆ ಸೇರಿದ್ದನ್ನು ಚಿಂತಿಸುವವನು ನಾನು. ಕಲ್ಲನ್ನು ಆರಾಧಿಸುವವನು. ಮಂತ್ರವನ್ನು ಜಪಿಸುವವನು. ಸನ್ಯಾಸಿಗಳನ್ನು ಸ್ನೇಹಿತರನ್ನಾಗಿ ಮಾಡಿಕೊಂಡವನು ನಾನು. ಒಬ್ಬ ಡಾಕ್ಟರಾದ ನಾನು ಇದನ್ನೆಲ್ಲಾ ಯಾಕೆ ಮಾಡುತ್ತೇನೆಂದಲ್ಲವೇ ?"

ಅವರು ಭಾವೋದ್ವೇಗಕ್ಕೊಳಗಾದರು.

"ಡಾಕ್ಟರ್ಸ್" ಅವರು ಅಟ್ಟಹಾಸ ಮಾಡುತ್ತಿದ್ದರು.

"ಔಷಧಿಗೂ ರೋಗಕ್ಕೂ ಮಧ್ಯೆ ಒಂದು ದೊಡ್ಡ ರಹಸ್ಯವಿದೆ. ಆ ರಹಸ್ಯವು ಏನೆಂದು ನಾನಿಲ್ಲಿ ಪ್ರತಿಪಾದಿಸುತ್ತಿರಲಿಲ್ಲ. ಮುಂಬರುವ ವರ್ಷಗಳಲ್ಲಿ ಆ ರಹಸ್ಯವನ್ನು ನೀವೇ ಕಂಡುಹಿಡಿಯುತ್ತೀರಿ. ಅಂತಹ ರಹಸ್ಯವಿರುವುದರಿಂದಲೇ ನಾನು ಈಶ್ವರನಲ್ಲಿ ನಂಬಿಕೆಯುಳ್ಳವನೂ, ಭಕ್ತನೂ ಆಗಿರುವುದು. ರೋಗಿಗಳನ್ನು ಕಾಪಾಡುವುದು ಡಾಕ್ಟರ್‌ಗಳೋ ಔಷಧಿಗಳೋ ಅಲ್ಲ.... ದೇವರು..."

ಒಂದು ಗಂಟೆಯ ಹೊತ್ತು ಕಳೆದುದ್ದೇ ತಿಳಿಯಲಿಲ್ಲ. ಒಂದು ಬಿರುಗಾಳಿ ಬೀಸಿ ಶಾಂತವಾದಂತೆ ದೇವದಾಸ್‌ಗನ್ನಿಸಿತು.

"ನಾನು ಇಲ್ಲಿಗೆ ನಿಲ್ಲಿಸುತ್ತೇನೆ. ಹಾಗೆಯೇ ನಿಮ್ಮೆಲ್ಲರನ್ನೂ ನಾನು ಡಿಸೆಕ್ಷನ್ ಹಾಲ್‌ಗೆ ಸ್ವಾಗತಿಸುತ್ತೇನೆ."

ಡಿಸೆಕ್ಷನ್ ಹಾಲ್ ಅದರ ಬಹು ಸಮೀಪದ ದೊಡ್ಡ ಕಟ್ಟಡದಲ್ಲಾಗಿತ್ತು.

ಡಿಸೆಕ್ಷನ್ ಹಾಲ್ ಪ್ರವೇಶಿಸಿದಾಗ ಅಲ್ಲಿಯವರೆಗೆ ಅನುಭವವಾಗದ ಒಂದು ವಾಸನೆಯು ದೇವದಾಸ್‌ನ ನಾಸಿಕರಂಧ್ರಗಳೊಳಕ್ಕೆ ನುಗ್ಗಹತ್ತಿದವು. ಆ ವಾಸನೆಯು ಬೇಸರವನ್ನುಂಟು ಮಾಡುವುದೂ ತೀಕ್ಷ್ಣವೂ ಆಗಿತ್ತು. ಹೊಗೆಯಾಡುವ, ಉರಿಯುವ ಯಾವುದೋ ಒಂದು ವಸ್ತು ತನ್ನ ಮಿದುಳನ್ನು ಪ್ರವೇಶಿಸಿದಂತೆ ದೇವದಾಸ್‌ಗನ್ನಿಸಿತು.

ಅದು ಉದ್ದನೆಯ ವಿಶಾಲವಾದ ಒಂದು ಹಾಲ್. ಅಲ್ಲಿ ಮೂರು ಲೈನ್‌ಗಳಲ್ಲಿ ಸಾಲಾಗಿ ಒಂಭತ್ತು ಟೇಬಲ್‌ಗಳನ್ನು ಹಾಕಿದ್ದರು. ಒಂದೊಂದು ಟೇಬಲ್ ಮೇಲೂ ಉದ್ದಕ್ಕೆ ಸೆಟೆದು ಮಲಗಿದ್ದ ಹೆಣಗಳಿದ್ದವು.

ಹಾಲ್‌ನ ತೆಂಕಣ ಭಾಗದಲ್ಲಿ ಕಾಡವರ್ ಟ್ಯಾಂಕ್. ಆ ಟ್ಯಾಂಕ್ ಒಂದು ದೊಡ್ಡ ಕೊಳದಷ್ಟೇ ಇತ್ತು. ಅದರ ತುಂಬ ಫಾರ್ಮಲಿನ್. ಫಾರ್ಮಲಿನ್‌ನ ವಾಸನೆಯೇ ಹಾಲ್‌ನಲ್ಲಿ ತುಂಬಿಕೊಂಡಿದ್ದಂತಿತ್ತು. ಆ ದ್ರಾವಕದಲ್ಲಿ, ಒಂದು ಮರಣದ ಭಾವಿಯಲ್ಲೆಂಬಂತೆ ಹೆಣಗಳು ವಿಶ್ರಮಿಸುತ್ತಿದ್ದವು. ಹಾಲ್‌ನ ಪೂರ್ವ ದಿಕ್ಕಿನಲ್ಲಿ ಚಿಕ್ಕ ಚಿಕ್ಕ ಕೊಠಡಿಗಳು. ಅಲ್ಲಿ ಟ್ಯೂಟರ್‌ಗಳೂ ಲೆಕ್ಚರ್‌ಗಳು ಕುಳಿತಿರುತ್ತಿದ್ದರು. ತಮ್ಮ

---

*ಅವಿಸನ್ನ: ಅರೇಬಿಯಾದ ಒಬ್ಬ ಹೆಸರಾಂತ ಡಾಕ್ಟರ್

ಸಂದೇಹ ಬಗೆಹರಿಸಿಕೊಳ್ಳಲೆಂಬಂತೆ ಮೆಡಿಕೋಗಳು ರೂಮುಗಳಿಗೆ ಆಗಾಗ್ಗೆ ಬರುತ್ತಿದ್ದರು.

ಒಂದು ಹೆಣವನ್ನು ಎಂಟು ಜನರಿಗೆಂದು ಮೀಸಲಾಗಿಟ್ಟಿದ್ದರು. ಇಬ್ಬರಿಗೆ ಒಂದು ಕೈ, ಇಬ್ಬರಿಗೆ ಒಂದು ಕಾಲು, ಹೀಗೆ ದೇವದಾಸ್‌ಗೆ ಕೈ ಸಿಕ್ಕಿತ್ತು.

ಅವನ ಪಾರ್ಟನರ್ ಲಕ್ಷ್ಮಿ ಎಂಬ ಹುಡುಗಿಯಾಗಿದ್ದಳು. ಲಕ್ಷ್ಮಿಗಾದರೋ ಆ ಸ್ಥಾನವು ಸ್ವಲ್ಪವೂ ಇಷ್ಟವಾಗಲಿಲ್ಲ. ಒಬ್ಬಳು ಜೊತೆಗಾತಿಯನ್ನು ಪಡೆಯಬೇಕೆಂಬ ಆಸೆ ಅವಳದಾಗಿತ್ತು. ಆದರೆ ಹೆಸರಿನ ಮೊದಲಕ್ಷರದ ಕ್ರಮದಲ್ಲಿ ಬ್ಯಾಚ್‌ಗಳನ್ನು ನಿರ್ಣಯಿಸಲಾಗಿತ್ತು. ರೋಲ್‌ಕಾಲ್‌ನಲ್ಲಿ ಅವರು ಜೆ. ಲಕ್ಷ್ಮಿಯೂ, ಕೆ. ದೇವದಾಸ್‌ನೂ ಆಗಿದ್ದರು. ಹೆಸರಿನ ಮೊದಲ ಅಕ್ಷರಗಳು ಚಿಕ್ಕ ಚಿಕ್ಕ ಇಷ್ಟಕಷ್ಟಗಳನ್ನು ಮೊಳಕೆಯಲ್ಲೇ ಚಿವುಟಿ ತೆಗೆದುಹಾಕಿದ್ದವು.

ತನ್ನ ಮುಂದೆ ಉದ್ದಕ್ಕೂ ಸೆಟೆದು ಬಿದ್ದಿರುವ ಆ ಹೆಣವನ್ನು ದೇವದಾಸ್ ಸ್ವಲ್ಪ ಹೊತ್ತು ನೋಡುತ್ತಾ ನಿಂತನು. ಈ ಶರೀರದಿಂದಲೇ ಸಂಕೀರ್ಣವಾದ ಅನಾಟಮಿಯನ್ನೂ ಅವನು ಕಲಿಯಬೇಕಿತ್ತು. ಒಂದೊಂದು ನಾಡಿ, ಒಂದೊಂದು ನರ, ಒಂದೊಂದು ಮಾಸಖಂಡ ಇವುಗಳನ್ನು ಶರೀರದಿಂದ ಬೇರ್ಪಡಿಸಿ ಜೀವದ ಪರಮಾಣುಗಳನ್ನು ವಿಭಜಿಸಬೇಕಿತ್ತು. ಒಂದು ನಿಮಿಷ ದೇವದಾಸ್ ಆ ಶರೀರವನ್ನೇ ಆರಾಧಿಸಿದನು.

ಚಾಕುಗಳೂ, ಕತ್ತರಿಗಳೂ, ಇಕ್ಕಳಗಳೂ ಶಬ್ದ ಮಾಡಲು ಆರಂಭಿಸಿದವು. ಲೆಕ್ಚರರ್‌ಗಳು ಹಾಲ್ ಅನ್ನು ಪ್ರವೇಶಿಸಿದರು.

ಡಿಸೆಕ್ಷನ್ ಹಾಲ್ ಜೀವಂತವಾಗಲಾರಂಭವಾಯಿತು.

ಆಗ ಅಶರೀರವಾಣಿಯಂತೆ ಒಂದು ಧ್ವನಿ ಕೇಳಿಸಿತು.

"ಡಾಕ್ಟರ್ಸ್...."

ಪ್ರೊಫೆಸರ್ ಕುಮಾರ್ ಡಿಸೆಕ್ಷನ್ ಹಾಲನ್ನು ಪ್ರವೇಶಿಸಿದ್ದರು.

"ನೋಡಿ, ನಿಮ್ಮ ಮುಂದೆ ಇರುವುದೇನೆಂದು ಗೊತ್ತೇ ? ಈ ಉಕ್ಕಿನ ಮೇಜಿನ ಮೇಲೆ ಉದ್ದಕ್ಕೆ ಸೆಟೆದು ಮಲಗಿರುವುದು ಶವಗಳೆಂದು ಒಮ್ಮೆಯೂ ಭಾವಿಸಬೇಡಿ. ಮನುಷ್ಯನ ವಿಚಿತ್ರವಾದ ಒಳ ಅವಯವಗಳನ್ನು ಸೂಕ್ಷ್ಮವಾಗಿ ಅವಲೋಕಿಸಲೂ, ಕಲಿಯಲೂ ನಿಮಗಿರುವ ಪ್ರಥಮ ಘಟ್ಟಗಳೇ ಇಲ್ಲಿಟ್ಟಿರುವ ಶವಗಳು. ಜೀವವಿರುವ ಶರೀರದ ಮೇಲೆ ತೋರಿಸುವುದಕ್ಕಿಂತಲೂ ಹೆಚ್ಚಾಗಿ ಆದರವನ್ನು, ದಯೆಯನ್ನು ಈ ಶವದ ಮೇಲೆ ನೀವು ತೋರಿಸಬೇಕು. ಒಮ್ಮೆ ನಮ್ಮಂತೆಯೇ ಗೌರವಾನ್ವಿತರಾಗಿ ಬದುಕಿದ್ದ ಮನುಷ್ಯರು ಇವರು. ನಮ್ಮ ಸಹಾಯಕ್ಕೆ ದೇವರೇ ಇವರನ್ನು ಇಲ್ಲಿಗೆ ಕಳುಹಿಸಿದ್ದಾರೆ. ಸತ್ತರೂ ಸಹ ಈ ಮನುಷ್ಯರು, ಮನುಷ್ಯಪ್ರಾಣಿಗೆ ಉಪಯೋಗಕಾರಿಯಾಗಿದ್ದಾರೆ. ನೀವು ಚಾಕುಗಳನ್ನೇ ಹೊರಕ್ಕೆ ತೆಗೆದಿರಿ ಅಲ್ಲವೇ ? ನಿಮ್ಮ ಚಾಕುಗಳು ಚಲಿಸುವಾಗ ಪ್ರಾಣವಿರುವ ಒಬ್ಬ ಮನುಷ್ಯ ಶರೀರಕ್ಕೆ ಚುಚ್ಚುವಂತೆ ಶ್ರದ್ಧೆಯಿಂದ, ದಯೆಯಿಂದ ಮಾತ್ರವೇ ಈ ಶರೀರದಲ್ಲಿ ಚುಚ್ಚಬೇಕು. ಇಲ್ಲಿ ಮಲಗಿರುವುದು ಶವಗಳಲ್ಲ. ಜೀವಚ್ಛವಗಳು. ಜೀವಾತ್ಮಗಳು." ಅವರು ಕನ್ನಡಕವನ್ನು ಕಣ್ಣಿನ ಮೇಲಿಂದ ತೆಗೆದರು.

"ನಿಮಗೆ ಎಲ್ಲದರಲ್ಲೂ ಜಯವಾಗಲೆಂದು ಹಾರೈಸುತ್ತೇನೆ."

ಇಷ್ಟು ಹೇಳಿ ಪ್ರೊಫೆಸರ್ ಕುಮಾರ್ ಹಾಲ್‌ನ ಉದ್ದಕ್ಕೂ ಒಮ್ಮೆ ನಡೆದರು. ಅನಂತರ ಒಂದು ಉದ್ದನೆಯ ನಿಟ್ಟುಸಿರಿನೊಂದಿಗೆ ತಮ್ಮ ಕೋಣೆಗೆ ಹೋದರು.

ಆದರೆ ತೀರಿ ಹೋದಂತಹ ಈ ಮನುಷ್ಯ ಶರೀರಗಳೊಂದಿಗೆ ಸಂಪೂರ್ಣವಾದ ಹೊಣೆಯನ್ನು ಅತಿಯಾದ ತಿರಸ್ಕಾರವನ್ನು ಬೆಳೆಸಿಕೊಂಡು ಬಂದಿರುವ ಒಬ್ಬನಿದ್ದಾನೆ. ಅವನೇ ಶವಗಳನ್ನು ಜೋಪಾನವಾಗಿಡುವ ಸೋನ. ಸೋನ ಎಂದರೆ ಸ್ವರ್ಣವೆಂಬ ಅರ್ಥವೇ ಆದರೂ ಅವನು ತನ್ನ ಹೆಸರಿಗೆ ಒಂದು ವಿರೋಧಾಭಾಸವು. ಕಪ್ಪಗೆ ಬೀಟೆಮರದಂತಿರುವ ಶರೀರ, ಭದ್ರವಾದ ಕಪ್ಪುಕಲ್ಲಿನಂತಿರುವ ಮಾಂಸ ಖಂಡಗಳು. ಅತಿ ತಿರಸ್ಕಾರದ ಕೆಂಪಗಿನ ರಕ್ತನಾಳಗಳು ಸ್ಪಷ್ಟವಾಗಿ ಕಾಣುವ ಗುಂಡಾದ ಕಣ್ಣುಗಳು. ತಲೆಯನ್ನೂ ಹುಬ್ಬುಗಳನ್ನೂ ಬಿಟ್ಟು ನೋಡಿದರೆ ಶರೀರದಲ್ಲಿ ಮತ್ತೆಲ್ಲೂ ಒಂದು ಕೂದಲೂ ಇಲ್ಲ.

ಕಾಡವರ್ ಟ್ಯಾಂಕ್‌ನಿಂದ ಮರದ ದಿಮ್ಮಿಗಳಂತೆಯೇ ಸೋನನೂ ಅವನ ಜೊತೆಗಾರರೂ ಶವಗಳನ್ನೇ ಎತ್ತಿಡುತ್ತಿದ್ದರು. ಈ ಶರೀರಗಳನ್ನು ಮೇಲೆ ಕೈ ಆಡಿಸಿ ನಿರ್ವಹಿಸುವಾಗ ಆದರವೋ ದಯೆಯೋ ಇವರಿಗೆ ಇರುವುದಿಲ್ಲ. 'ಅಯ್ಯೋ ಶವವೇ' ಎಂದು ಕರೆದು ಶಪಿಸುತ್ತಾ ಸೋನ ಶವದ ಮೇಲೆ ಕೈ ಇಡುತ್ತಿದ್ದನು.

ಡಿಸೆಕ್ಷನ್ ಬಾಕ್ಸ್ ತೆಗೆದು ದೇವದಾಸ್ ಅದರಲ್ಲಿನ ಉಪಕರಣಗಳನ್ನು ಹೊರಕ್ಕೆ ಎತ್ತಿಟ್ಟನು. ಚಾಕುವಿನ ಹಿಡಿಯಲ್ಲಿ ಮಿನುಗುತ್ತಿದ್ದ ಬ್ಲೇಡನ್ನು ಇಟ್ಟನಂತರ ಭಕ್ತಿ ಆದರಗಳೊಂದಿಗೆ ದೇವದಾಸ್ ಆ ಚಾಕುವನ್ನು ಸ್ವಲ್ಪ ಹೊತ್ತು ನೋಡುತ್ತಾ ನಿಂತನು.

ಆ ಶವವನ್ನೇ ದೇವದಾಸ್ ಮೊದಲ ಬಾರಿಗೆ ಮುಟ್ಟಿದನು. ಮನೋಹರವಾದ ತನ್ನ ಉದ್ದನೆಯ ತೋರುಬೆರಳಿನಿಂದ ಲಕ್ಷ್ಮಿಯೂ ಒಮ್ಮೆ ಮುಟ್ಟಿದಳು. ಇಬ್ಬರೂ ಪರಸ್ಪರ ನೋಡಿದರು. ಅನಂತರ ಅನಾಟಮಿಯ ಬಾಲಪಾಠದ ಪೇಜುಗಳನ್ನು ತಿರುವಿ ಹಾಕಿದರು. ಎಲ್ಲಿ ಪ್ರಾರಂಭಿಸಬೇಕು ? ಹೇಗೆ ಪ್ರಾರಂಭಿಸಬೇಕು ಎಂಬ ವಿವರವನ್ನು ವಿಶದವಾಗಿ ಆ ಬಾಲಪಾಠದಿಂದ ಇಬ್ಬರೂ ಓದಿಕೊಂಡರು. ಅಷ್ಟು ಹೊತ್ತಿಗೆ ಅವರಿಗೆ ಸಹಾಯ ಮಾಡಲು ಟ್ಯೂಟರ್ ಮೇಜಿನ ಬಳಿಗೆ ಬಂದನು.

ಚಾಕು ಕತ್ತರಿಗಳು ಶಬ್ದ ಮಾಡತೊಡಗಿದವು.

ಶವದ ಮರಗಟ್ಟಿದ ಚರ್ಮದಲ್ಲಿ ದೇವದಾಸ್ ತನ್ನ ಹೊಸ ಚಾಕುವನ್ನು ಓಡಿಸಿದನು. ಶವದ ಮೇಲೆ ಬೆಳ್ಳಗೆ ಬಿಳಚಿಕೊಂಡ ಒಂದು ಗೆರೆ ಇತ್ತು. ಆದರೆ ನೀರೋ ರಕ್ತವೋ ಆ ದೇಹದಿಂದ ಹೊರಬರಲಿಲ್ಲ. ಆದರೂ ಅಜ್ಞಾತವಾದ ಯಾವುದೋ ಒಂದು ಚೈತನ್ಯವು ಆ ಶರೀರದಲ್ಲಿರುವುದಾಗಿ ದೇವದಾಸ್‌ಗನ್ನಿಸಿತು.

ಗಂಟೆ ಹೊಡೆಯಿತು. ಅಂದಿನ ಕ್ಲಾಸ್ ಮುಗಿಯಿತು.

ವಿದ್ಯಾರ್ಥಿ ವಿದ್ಯಾರ್ಥಿನಿಯರು ತಮ್ಮ ತಮ್ಮ ಸಾಮಗ್ರಿಗಳನ್ನು ಕೈಯಲ್ಲಿ ತೆಗೆದುಕೊಂಡು ಹೊರ ಹೊರಟರು.

ಹೊತ್ತು ಹೋಗಿದ್ದೇ ಗೊತ್ತಾಗಲಿಲ್ಲ. ಸಾಯಂಕಾಲವಾಯಿತು. ಅನೇಕ ಟೇಬಲ್‌ಗಳು ಖಾಲಿಯಾದವು. ಟ್ಯೂಟರ್‌ಗಳು ಅವರವರ ಕೋಣೆಗೆ ಬೀಗ ಹಾಕಿ ಹೊರಟುಹೋದರು. ಚಾಕು, ಕತ್ತರಿಗಳ ಶಬ್ದವು ನಿಂತುಹೋಯಿತು.

ಲಕ್ಷ್ಮಿಯೂ ಹೋದಳು.

ದೇವದಾಸ್ ಹಾಲ್‌ನ ಉದ್ದಕ್ಕೂ ನೋಡಿದನು. ಡಿಸೆಕ್ಷನ್ ಹಾಲ್ ನಿರ್ಜನವಾಗಿತ್ತು. ಕಿಟಕಿಗಳು ಬಾಗಿಲುಗಳು ಎಲ್ಲವನ್ನು ಮುಚ್ಚಲಾಗಿತ್ತು. ಕಾಡವರ್ ಟ್ಯಾಂಕ್ ಬಳಿಯೂ ಯಾರೂ ಇರಲಿಲ್ಲ. ಸೋನನೂ ಅವನ ಜೊತೆಗಾರರೂ ಅಲ್ಲಿಂದ ಹೊರಟುಹೋಗಿದ್ದರು.

ಹಾಲ್‌ನಲ್ಲಿ ನಸುಗತ್ತಲು ಮೆಲ್ಲಮೆಲ್ಲನೆ ಇಣುಕಿ ನೋಡುತ್ತಿತ್ತು. ಕತ್ತಲೆಯು ಗಾಢವಾಗುತ್ತಿತ್ತು. ಹಾಲ್‌ನಲ್ಲಿ ಇದ್ದಕ್ಕಿದ್ದಂತೆ ದೀಪಗಳು ಉರಿಯತೊಡಗಿದವು. ಒಂದು ಮರ್ಮರ ಶಬ್ದ.... ಸುಳಿಗಾಳಿ ಬೀಸುತ್ತಿತ್ತು.

ದೇವದಾಸ್ ತನ್ನ ಮುಂದಿರುವ ಸ್ಟೀಲ್ ಟೇಬಲ್ ಮೇಲೆ ನರಳುವಿಕೆಯನ್ನು ಕೇಳಿದನು. ಅಲ್ಲಿಯವರೆಗೂ ನಿರ್ಜೀವವಾಗಿ ಬಿದ್ದಿದ್ದ ಶವವೂ, ಅಗೋ, ಎದ್ದು ನಿಲ್ಲಲು ಆರಂಭಿಸುತ್ತಿದೆ. ಮೊಣಕೈ ಮೂಳೆ ಕೀಲುಗಳನ್ನು ಮೇಜಿನ ಮೇಲೆ ಊರಿ ಅದು ಕೆಳಕ್ಕಿಳಿಯುತ್ತಿದೆ. ತಾನು ಮಾಡಿದ ಗಾಯವನ್ನು ನೋಡುತ್ತಾ ಅದು ಅಳುತ್ತಿತ್ತು. ಒಣಗಿ ಬರಡಾದ ಅವನ ಕಣ್ಣುಗಳಿಂದ ಇದ್ದಕ್ಕಿದ್ದಂತೆ ಕಣ್ಣೀರಿನ ಹನಿಗಳು ತೊಟ್ಟಿಕ್ಕಲು ತೊಡಗಿದ್ದವು. ತಾನು ಮಾಡಿದ ಗಾಯದಿಂದ ರಕ್ತವು ತೊಟ್ಟಿಕುತ್ತಿರುವುದನ್ನು ಅವನು ಕಂಡನು.

"ಹೆದರಬೇಡ" ಗಡುಸಾದ ಅದರ ಧ್ವನಿ ಕೇಳಿಸಿತು. "ನಾವು ರಾತ್ರಿಯ ವೇಳೆ ಎದ್ದೇಳುವುದುಂಟು."

ಅಷ್ಟು ಹೊತ್ತಿಗೆ ಎಲ್ಲಾ ಮೇಜುಗಳ ಮೇಲಿನಿಂದಲೂ ರಕ್ತವು ತೊಟ್ಟು ತೊಟ್ಟಾಗಿ ಬೀಳುತ್ತಿರುವ ಶವಗಳು ಎದ್ದು ಕೆಳಕ್ಕಿಳಿದಾಗಿತ್ತು. ಕಾಡವರ್ ಟ್ಯಾಂಕ್‌ನಲ್ಲಿ ಫಾರ್ಮಲ್‌ನ ಜಳಜಳ ಶಬ್ದವು ಮೊಳಗುತ್ತಿತ್ತು. ಒಂದು ಈಜುಕೊಳದಲ್ಲೆಂಬಂತೆ ಟ್ಯಾಂಕ್‌ನಿಂದ ಶವಗಳು ಒಂದೊಂದಾಗಿ ದಡ ಸೇರಿದವು. ಕೈಗಳಿಲ್ಲದ ಕಾಲುಗಳಿಲ್ಲದ, ತಲೆಯಿಲ್ಲದ ಶವಗಳು ಮೆಲ್ಲಮೆಲ್ಲನೆ ಡಿಸೆಕ್ಷನ್ ಹಾಲನ್ನು ಪ್ರವೇಶಿಸುತ್ತಿದ್ದವು.

ಪ್ರೇತಗಾನವನ್ನು ಉರು ಹೊಡೆದಂತೆ ಹಾಡುತ್ತಾ ಅವು ನೃತ್ಯ ಮಾಡಲು ಆರಂಭಿಸಿದವು. ಅವೆಲ್ಲವೂ ಸೇರಿ ನೃತ್ಯ ಮಾಡುತ್ತಾ ದೇವದಾಸ್‌ನನ್ನು ಸುತ್ತುಗಟ್ಟಿದವು. ಆ ಸುತ್ತಿನಲ್ಲಿ ಅವನನ್ನು ಸಿಗಿಸಿ ಹಾಕಿದ್ದವು. ಅವರಲ್ಲಿ ಯಾರೋ ಕೂಗಿ ಹೇಳಿದಂತಾಯಿತು.

"ನಮ್ಮನ್ನು ಕುಯ್ದು ಹಾಕಲೆಂದು ನೀನು ಇಲ್ಲಿಗೆ ಬಂದವನಲ್ಲವೇ? ನಿನ್ನನ್ನು ನಾವು ಕೊಂದು ಹಾಕುತ್ತೇವೆ."

ಆ ಪ್ರೇತಗಳು ಕೈಗಳನ್ನು ಚಾಚುತ್ತಾ ದೇವದಾಸ್‌ನನ್ನು ತ್ವರಿತವಾಗಿ ಹಿಡಿಯಲು ಪ್ರಯತ್ನಿಸುತ್ತಿದ್ದವು.

ದೇವದಾಸ್ ತಪ್ಪಿಸಿಕೊಳ್ಳಲು ಓಡಿದನು.

ಹೊರಗೆಲ್ಲಿಗೂ ಹೋಗಲಾಗದೆ ಆ ನಾಲ್ಕು ಗೋಡೆಗಳ ಒಳಗೇ ಸುಸ್ತಾಗಿ, ನಡುಗುವ ಕಾಲುಗಳೊಂದಿಗೆ ಅವನು ಸುತ್ತಿ ಸುತ್ತಿ ಓಡಲಾರಂಭಿಸಿದನು. ಅವನನ್ನು ಅಟ್ಟಿಸಿಕೊಂಡು ಆ ಪ್ರೇತಗಳೂ ಓಡಿದವು.

# ಐದು

ಫಿಸಿಯಾಲಜಿ ಡಿಪಾರ್ಟ್‌ಮೆಂಟ್‌ನ ಹಿಂಭಾಗದಲ್ಲಿ ಖಾಲಿಯಾದ ಒಂದು ಜಾಗವಿತ್ತು. ಅದು ಒಂದು ಪುಟ್ಟ ಹಸಿರು ಹುಲ್ಲಿನ ಮೈದಾನ. ಅದರ ಒಂದು ಪಕ್ಕದಲ್ಲಿ ಸಿಮೆಂಟ್‌ನಿಂದ ಕಟ್ಟಿದ್ದ ಕೊಳವು ಸದಾ ಜಾಗೃತವಾಗಿರುತ್ತಿತ್ತು. ಅದರ ತುಂಬ ದೊಡ್ಡ ದೊಡ್ಡ ಕಪ್ಪೆಗಳು. ಕಪ್ಪೆಗಳನ್ನು ರಕ್ಷಿಸಲು ಹಾಕಿರುವ ತಂತಿಯ ಬಲೆಯ ಮೇಲೆ ಆಗಾಗ್ಗೆ ಗಿಡುಗಗಳು ಪ್ರತ್ಯಕ್ಷವಾಗುತ್ತಿದ್ದವು. ಈಜಾಡುತ್ತಿರುವ ಕಪ್ಪೆಗಳು, ತಮ್ಮ ನೆಟ್ಟದೃಷ್ಟಿಯಿಂದ ಸೋತು ಹಾರಿಹೋಗುತ್ತಿದ್ದ ಈ ಹಕ್ಕಿಗಳನ್ನು ಅಣಕಿಸುವಂತೆ ನೋಡಿ ಆನಂದಪಡುತ್ತಿದ್ದವು. ಕಪ್ಪೆಗಳಿಗೆ ತಾವು ಸುರಕ್ಷಿತ ವಾಗಿರುವೆವೆಂದು ಚೆನ್ನಾಗಿ ಅರಿವಾಗಿತ್ತು. ಆದರೆ ತಾವು ಡಾಕ್ಟರ್‌ಗಳ ಪ್ರಯೋಗ ಶಾಲೆಯಲ್ಲಿನ ಮುಸ್ಸಂಜೆ ಬೆಳಕೆಂದೂ, ಅದರಂತೆ ಯಾವುದೇ ನಿಮಿಷದಲ್ಲಿ ತಾವು ಹಿಡಿಯಲ್ಪಡುತ್ತೇವೆಂದೂ ಈ ಸಾಧುಪ್ರಾಣಿಗಳು ಯೋಚಿಸುತ್ತಿರಲಿಲ್ಲ. ಪ್ರಯೋಗಶಾಲೆಯ ಮೇಜಿನ ಮೇಲೆ ತಮ್ಮ ಜೀವನವನ್ನು ಬಲಿಕೊಡುವವರೆಗೆ, ಅಲ್ಲಿಯೆ ಸೇವಕರು ಹಾಕಿಕೊಡುವ ಎರೆಹುಳುಗಳನ್ನು ತಿಂದು ಅವು ಸುಖವಾಗಿ ಈಜಾಡುತ್ತಾ ಬದುಕಿರುತ್ತಿದ್ದವು.

ಮೊಲಗಳ ಪಂಜರವು ಕೊಳಕ್ಕೆ ಅತಿ ಹತ್ತಿರದಲ್ಲಿತ್ತು. ಅಲ್ಲಿ ನಾಲ್ಕೈದು ದೊಡ್ಡ ದೊಡ್ಡ ಕೋಣೆಗಳಿದ್ದವು. ಸವರ್ಣೀಯರಂತೆ ಹಸಿರೆಲೆಗಳನ್ನು ಕಚ್ಚಿ ಸೀಳಿ ತಿನ್ನುತ್ತಾ ಮೊಲಗಳು ತಮ್ಮ ವಂಶವೃದ್ಧಿ ಮಾಡುತ್ತಿದ್ದವು. ಅವು ಹಲವಾರು ಹಗಲು ರಾತ್ರಿಗಳನ್ನು ಕಳೆಯುತ್ತಿದ್ದವು. ಅವುಗಳ ಆಯುಸ್ಸೂ ಸಹ ನಿರ್ಣಯಿಸಲ್ಪಟ್ಟಿತ್ತು. ಹಣೆಯ ಮೇಲೆ ಬರೆದು ಅವುಗಳನ್ನು ಇಲ್ಲಿಗೆ ತಳ್ಳಲಾಗಿತ್ತು. ಓಡಿ ನೆಗೆದು ಹಾರುವ ಆ ಸಾಧು ಮೃಗಗಳನ್ನು ಇಂತಹ ಯಾವ ಚಿಂತೆಯೂ ಕಾಡುತ್ತಿಲ್ಲ.

ತಂತಿಯಬಲೆ ಹಾಕಿದ ಇನ್ನೂ ಕೆಲವು ಕೋಣೆಗಳು ಮೈದಾನವನ್ನು ಅಲಂಕರಿಸಿದ್ದವು. ಅವುಗಳ ತುಂಬ ಇಲಿಗಳೂ, ಗಿನಿಪಿಗ್‌ಗಳೂ ಇದ್ದವು.

ಖಾಲಿಯಾದ ಸ್ಥಳದ ಒಂದು ಮೂಲೆಯಲ್ಲಿ ನಾಯಿಗಳ ಗೂಡು ಇತ್ತು. ನಾಯಿಗಳು ಆಗಾಗ ಬೊಗಳುತ್ತಾ ಸೇವಕರ ಶ್ರದ್ಧೆಯನ್ನು ಆಕರ್ಷಿಸುತ್ತಿದ್ದವು. ಡಾಕ್ಟರ್ ಹಸನ್ ಲ್ಯಾಬೋರೇಟರಿಯ ಹಿಂದಿನ ಬಾಗಿಲನ್ನು ತೆರೆದುಕೊಂಡು ಮೈದಾನಕ್ಕಿಳಿದರು. ಅವರ ಕೈಯಲ್ಲಿ ಒಂದು ಪುಸ್ತಕವೂ ಕೆಲ ಪೇಪರ್‌ಗಳೂ ಇದ್ದುವು. ಆ ಪುಸ್ತಕ ಕೈಯಲ್ಲಿಲ್ಲದೆ ಡಾಕ್ಟರ್ ಹಸನ್‌ರ ಬರುವಿಕೆಯನ್ನು ಕಾಣಲು ಸಾಧ್ಯವಿಲ್ಲ. 'ನಾನು ಸತ್ತರೆ ನನ್ನ ಪುಸ್ತಕಗಳನ್ನು ನನ್ನೊಂದಿಗೇ ಸಮಾಧಿ ಮಾಡಿಬಿಡಿ' ಎಂದು ಹಸನ್‌ರೇ ಒಮ್ಮೆ ಹೇಳಿದ್ದರು.

ವೈದ್ಯ ವಿದ್ಯಾರ್ಥಿಗಳು ಅವರ ಹಿಂದೆ ಇಳಿದುಬರುತ್ತಿದ್ದರು. ಡಾಕ್ಟರ್ ಹಸನ್‌ರ

ವಸ್ತ್ರಗಳು ಹಾಳಾದದ್ದೂ, ಕೊಳೆಯಾದದ್ದೂ ಆಗಿದ್ದವು. ನೆಕ್‌ಟೈ ಸುಕ್ಕಾಗಿ ಮುದುರಿ ಹೋಗಿತ್ತು. ತಲೆಗೂದಲನ್ನು ಬಾಚಿರಲಿಲ್ಲ. ಸ್ನಾನ ಮಾಡಿ ಎಷ್ಟೋ ದಿನಗಳಾಗಿರಬೇಕು.

"ಇಲ್ಲಿ ಬಾ" ವಿದ್ಯಾರ್ಥಿ ವಿದ್ಯಾರ್ಥಿನಿಯರ ಗುಂಪನ್ನು ಸ್ವಲ್ಪ ಹೊತ್ತು ದಿಟ್ಟಿಸಿ ನೋಡಿದನಂತರ ಡಾಕ್ಟರ್ ಹಸನ್ ಅವರಲ್ಲೊಬ್ಬನನ್ನು ಹುಡುಕಿ ಕರೆದರು. ಅವನು ಮುಂದೆ ಬಂದು ನಿಂತನು.

ಡಾಕ್ಟರ್ ಹಸನ್ ಅವನನ್ನು ಮೇಲಿನಿಂದ ಕೆಳಗಿನವರೆಗೂ ನೋಡಿದರು. ಅಂಗೈನಿಂದ ಅವನ ಗಡ್ಡವನ್ನು ತಡವಿದರು. ಟೈ ಹಿಡಿದು ನೋಡಿದರು. ಪ್ಯಾಂಟ್ ಮೇಲಕ್ಕೆತ್ತಿ ಷೂಸ್ ನೋಡಿದರು.

"ಡಾಕ್ಟರಾಗಲು ಬಂದಿದ್ದೀಯೇನೋ ಕತ್ತೆ? ನಿನ್ನ ಮುಖ ನೋಡಲು ಚೆನ್ನಾಗಿಲ್ಲ. ಸಾಲದ್ದಕ್ಕೆ ನೀನು ಚೆನ್ನಾಗಿ ಕ್ಷೌರ ಮಾಡಿಕೊಂಡಿಲ್ಲ. ನಿನ್ನ ಟೈ ಇಸ್ತ್ರಿ ಮಾಡಿಲ್ಲ. ಷೂಸ್ ಪಾಲಿಷ್ ಮಾಡಿಲ್ಲ. ಹೋಗು ಹೊರಕ್ಕೆ. ನನ್ನ ಮುಂದೆ ನೀನು ನಿಂತು ಕೊಳ್ಳುವುದನ್ನು ನೋಡಲು ನಂಗಿಷ್ಟ ಇಲ್ಲ."

ಅವನು ಒಂದು ನಿಮಿಷವೂ ಹಾಳುಮಾಡದೆ ಹೊರಗೆ ಹೋಗಲಿರುವ ದಾರಿಯತ್ತ ನಡೆದನು.

"ಇಲ್ಲಿ ಬಾರೋ ಕತ್ತೆ" ಹಸನ್ ಅವನನ್ನು ತಿರುಗಿ ಕರೆದರು. ಪ್ಯಾಂಟ್‌ನ ಪಾಕೆಟ್‌ನಿಂದ ಹುಡುಕಿ ತೆಗೆದ ಹತ್ತು ಪೈಸೆಯ ನಾಣ್ಯವೊಂದನ್ನು ಹೊರತೆಗೆದು ಕ್ಲಾಸ್‌ನಲ್ಲಿರುವವರಿಗೆಲ್ಲಾ ತೋರಿಸಿದ ನಂತರ ಅವನಿಗೆ ಕೊಡುತ್ತಾ ಹೇಳಿದರು:

"ಒಂದು ಹೊಸ ಬ್ಲೇಡ್ ತೆಗೆದುಕೋ."

ಕ್ಲಾಸ್‌ನಲ್ಲಿದ್ದವರೆಲ್ಲಾ ನಕ್ಕರು. ನಗುವೋ ನಗು.

ಕೆಲ ನಿಮಿಷಗಳು ಕಳೆದರೂ ನಗು ನಿಲ್ಲಿಸದ ಒಬ್ಬನನ್ನು ನೋಡಿ ಡಾಕ್ಟರ್ ಹಸನ್ ಹೇಳಿದರು.

"ನೀನು ಬಹಳ ನಗಬೇಡ. ಯುವರ್ ಟರ್ನ್ ವಿಲ್ ಆಲ್ ಸೋ ಕಮ್."

ಡಾಕ್ಟರ್ ಹಸನ್ ಹೊಸದಾಗಿ ಬಂದ ಮೆಡಿಕೋಗಳನ್ನು ರ್‍ಯಾಗಿಂಗ್ ಮಾಡುವುದ ರಲ್ಲಿ ತಜ್ಞರಾಗಿದ್ದರು.

"ರ್‍ಯಾಗಿಂಗ್ ವೈದ್ಯ ವಿದ್ಯಾಭ್ಯಾಸದ ಒಂದು ಸಂಸ್ಕಾರ. ರ್‍ಯಾಗಿಂಗ್ ನಿಮ್ಮನ್ನು ಉತ್ತಮವಾದ ಡಾಕ್ಟರ್‌ಗಳನ್ನಾಗಿ ಮಾಡುತ್ತೆ. ಬಿಸಿಲಿನಲ್ಲೇ ಬಾಡಿ ಹೋಗುವವರು ಇಲ್ಲಿಗೆ ಬರಬೇಕಾಗಿಲ್ಲ. ಅವರು ಇಲ್ಲಿಗೆ ಬೇಕಿಲ್ಲ. ಡಾಕ್ಟರ್‌ಗಳೆಂದರೆ ಯಾವುದೇ ಸಂಕಷ್ಟಗಳನ್ನೆದುರಿಸುವ ಸಾಮರ್ಥ್ಯವುಳ್ಳವರಾಗಿರಬೇಕು. ಎಷ್ಟು ತಮಾಷೆ ಮಾಡಿದರೂ ನೀವು ಹುಬ್ಬುಗಂಟಿಕ್ಕಬಾರದು. ಎಷ್ಟೇ ನೋವಾದರೂ ಅಳಬೇಡಿ. ಮನಸ್ಸು ಕಲ್ಲಿನಂತಿರಬೇಕು. ಆದರೆ ಚಿಕಿತ್ಸೆ ಮಾಡುವಾಗ ಆ ಮನಸ್ಸಿನಲ್ಲಿ ದಯೆ ತೋರಬೇಕು."

ಡಾಕ್ಟರ್ ಹಸನ್ ತಂತಿಯ ಬಲೆಗೂಡಿನ ಸನಿಹದ ಮೂಲಕ ನಡೆಯ ತೊಡಗಿದರು. ವಿದ್ಯಾರ್ಥಿಗಳು ಅವರನ್ನು ಅನುಸರಿಸಿದರು. ಮೊಲಗಳನ್ನು ಗಿನಿಪಿಗ್‌ಗಳನ್ನು ಬೆರಳು ಮಾಡಿ ತೋರಿಸುತ್ತಾ ಅವರು ಹೇಳಿದರು:

"ಈ ಜೀವ ಜಂತುಗಳು ನಿಮಗಿಂತ ಬುದ್ಧಿವಂತರು. ಇವು ಕೋಟನ್ನೂ ಟೈಯನ್ನೂ ಧರಿಸುವುದಿಲ್ಲ ಅಷ್ಟೆ. ಇವು ಮಾಡುವ ಸೇವೆ ಅನುಪಮ, ಅಮೂಲ್ಯ; ಈ ಸಾಧುಪ್ರಾಣಿಗಳು ಬುದ್ಧಿ ಇಲ್ಲದ ಕರ್ತೃಗಳಾದ ನಿಮಗೆ ಬಲಿಪಶುಗಳು."

ಡಾಕ್ಟರ್ ಹಸನ್ ವಿದ್ಯಾರ್ಥಿಗಳನ್ನು ನಿಂದಿಸುವುದರಲ್ಲಿ ಬಹಳ ಬುದ್ಧಿವಂತರು. ಅವರು ಪಾಠ ಕಲಿಸುವುದರಲ್ಲೂ ಬಹಳ ಆಸಕ್ತಿಯುಳ್ಳವರು. ಅವರ ಪ್ರಶ್ನೆಗಳಿಗೆ ಹೇಳುವ ಉತ್ತರಗಳಲ್ಲಿ ಒಂದು ಚಿಕ್ಕ ತಪ್ಪಿದ್ದರೂ ಇಂಪೋಸಿಷನ್ ಕೊಡುತ್ತಿದ್ದರು. ತಪ್ಪು ಹೇಳಿಬಿಟ್ಟರೆ ಹಿಂದಿರುವ ಬೆಂಚಿನ ಮೇಲೆ ಹತ್ತಿಸಿ ನಿಲ್ಲಿಸುತ್ತಾರೆ.

ಅವರು ಓದುತ್ತಿದ್ದ ಕಾಲದಲ್ಲಿ ಬಹಳ ಚುರುಕು ಬುದ್ಧಿಯುಳ್ಳವರಾಗಿದ್ದರು. ಗೋಲ್ಡ್ ಮೆಡಲ್‌ಗಳನ್ನು ಬಾಚಿಬಾಚಿ ಸೇರಿಸಿಟ್ಟಿದ್ದರು. ಫೈನಲ್ ಎಂ.ಬಿ.ಬಿ.ಎಸ್. ನಲ್ಲಿ ಉತ್ತಮ ಶ್ರೇಣಿಯಲ್ಲಿ ಪಾಸಾದ ನಂತರ ಅವರು ಪ್ರೈವೇಟ್ ಪ್ರಾಕ್ಟೀಸ್ ಆರಂಭಿಸಿ ತಮ್ಮ ಬಾಳನ್ನು ಪ್ರಾರಂಭಿಸಿದರು. ಆದರೆ ಪ್ರಾಕ್ಟೀಸಿನಲ್ಲಿ ಅವರು ಪರಾಜಯಗೊಂಡರು. ಡಾಕ್ಟರ್‌ಗೆ ತೀಕ್ಷ್ಣಬುದ್ಧಿಯೂ ಚುರುಕುತನವೂ ಇದ್ದರೂ ರೋಗಿಗಳಿಗೆ ಅವರನ್ನು ಸ್ವೀಕರಿಸಲು ಸಾಧ್ಯವಾಗಲಿಲ್ಲ. ಡಾಕ್ಟರ್ ಹಸನ್ ಉಡುಗೆಯಲ್ಲಿ ಒಬ್ಬ ಪ್ರಾಕೃತ ಮನುಷ್ಯನೂ, ಸ್ವಭಾವದಲ್ಲಿ ಒಬ್ಬ ಹಟವಾದಿಯೂ ಆಗಿದ್ದರು. ರೋಗಿಗಳನ್ನು ಅವರಿಂದ ದೂರ ಮಾಡಲು ಇದೊಂದು ವಿಷಯ ಧಾರಾಳವಾಗಿ ಸಾಕಾಗಿತ್ತು.

ಪ್ರಾಕ್ಟೀಸ್ ಪರಾಜಯಗೊಳ್ಳುತ್ತಿದೆಯೆಂದು ತಿಳಿದುಬಂದಾಗ ಹಸನ್ ಉನ್ನತ ವಿದ್ಯಾಭ್ಯಾಸಕ್ಕೋಸ್ಕರ ಮತ್ತೆ ಕಾಲೇಜನ್ನು ಪ್ರವೇಶಿಸಿದರು. ಶ್ರೇಷ್ಠ ವಿದ್ಯಾರ್ಥಿಯೆಂದು ಮತ್ತೆಯೂ ಹೆಸರು ಪಡೆದರು. ದಾಖಲೆಗಳನ್ನು ಮೀರಿದ ಮಾರ್ಕುಗಳೊಂದಿಗೆ ಅವರು ಎಲ್ಲಾ ಪರೀಕ್ಷೆಗಳಲ್ಲೂ ಪಾಸಾದರು.

ಡಾಕ್ಟರ್ ಹಸನ್ ಕಲಿಸುವ ವಿಷಯದಲ್ಲಿ ಒಬ್ಬ ಶ್ರೇಷ್ಠ ಪಂಡಿತರು. ಲ್ಯಾಬೋರೇಟರಿಗಳಲ್ಲೂ, ವಾಚನಾಲಯಗಳಲ್ಲೂ ಅವರು ತಮ್ಮ ಬಾಳನ್ನು ಸವೆಸಿದರು. ಮದುವೆ ಎಂಬುದನ್ನು ಅವರು ಮರೆತು ಹೋದರು. ಪುಸ್ತಕಗಳೇ ಅವರ ಕುಟುಂಬವಾಗಿತ್ತು. ನಿದ್ದೆ ಬರುವವರೆಗೂ ಅವರು ಓದುತ್ತಲೇ ಇರುವರು. ಓದಿದ ಪುಸ್ತಕವನ್ನು ಎದೆಯ ಮೇಲಿಟ್ಟುಕೊಂಡು ನಿದ್ರಿಸುವರು. ನಿದ್ದೆಯಿಂದ ಬೆಚ್ಚಿ ಎಚ್ಚೆತ್ತಾಗ ಮತ್ತೆ ಅದನ್ನು ತೆಗೆದುಕೊಂಡು ಎತ್ತಿಹಿಡಿದು ಓದುವರು. ಅವರು ಎಚ್ಚೆತ್ತಿರುವಾಗ ಸ್ವಲ್ಪವಾದರೂ ತಮ್ಮ ಕಣ್ಣುಗಳಿಗೆ ವಿಶ್ರಾಂತಿಕೊಡುತ್ತಿರಲಿಲ್ಲ.

ಡಾಕ್ಟರ್ ಹಸನ್‌ಗೆ ವಿದ್ಯಾರ್ಥಿಗಳನ್ನು ಪ್ರೀತಿಸಲು ತಿಳಿಯದೇ ತಿಳಿಯದು. ಪ್ರೀತಿಯನ್ನು ಪ್ರಕಟಿಸಲಿರುವ ಅಸಾಧ್ಯತೆಯೇ ಇದಕ್ಕೆ ಕಾರಣವೆಂದೇ ಅವರಿಗೆ ತಿಳಿಯದು. ಅವರು ಒಂದು ರೀತಿಯಲ್ಲಿ ಹಗೆ ತೀರಿಸುವಂತೆ ತಮ್ಮ ವಿದ್ಯಾರ್ಥಿಗಳೊಂದಿಗೆ ವರ್ತಿಸುವರು.

ವಿದ್ಯಾರ್ಥಿಗಳು ಕಷಾಯವನ್ನು ಕುಡಿಯುವಂತೆ ಮುಖ ಮಾಡಿಕೊಂಡು ಡಾಕ್ಟರ್ ಹಸನ್‌ನ ಕ್ಲಾಸಿನಲ್ಲಿ ಕುಳಿತಿರುತ್ತಿದ್ದರು. ಒಂದು ತಮಾಷೆಯೋ, ನಿಷ್ಕಳಂಕವಾದ ಒಂದು ನಗುವೋ ಅವರ ಕ್ಲಾಸ್‌ನಲ್ಲಿ ಇರುತ್ತಿರಲಿಲ್ಲ.

ಡಾಕ್ಟರ್ ಹಸನ್‌ಗೆ ವಸ್ತ್ರಗಳ ಮೇಲೆ ಭ್ರಮೆಯೋ, ಆಹಾರದ ಮೇಲೆ ಆಸೆಯೋ

ಇಲ್ಲವಾಗಿತ್ತು. ಹಸಿವಾದಾಗ ಏನಾದರೂ ತಿನ್ನುವುದೋ ಕುಡಿಯುವುದೋ ಮಾಡುತ್ತಿದ್ದರಷ್ಟೆ. ತೊಟ್ಟ ವಸ್ತ್ರಗಳಲ್ಲೇ ಮಲಗಿಬಿಡುತ್ತಿದ್ದರು. ಅದನ್ನು ಧರಿಸಿ ಕೊಂಡೇ ಮಾರನೆಯ ದಿನವೂ ಕಾಲೇಜಿಗೆ ಇರುವರು. ಕೆಲವೊಮ್ಮೆ ಒಂದೊಂದು ಕಾಲಿನಲ್ಲಿ ಒಂದೊಂದು ಸಾಕ್ಸ್ ಇರುತ್ತಿದ್ದುದೂ ಉಂಟು. ಯಾವಾಗ ಸ್ನಾನ ಮಾಡುತ್ತಿದ್ದರೋ ದೇವರೇ ಬಲ್ಲ.

ಲ್ಯಾಬೊರೇಟರಿಯಲ್ಲಿ ತಮ್ಮ ಪ್ರೀತಿಪಾತ್ರಗಳಾದ ಪರೀಕ್ಷಣ ಜಂತುಗಳಿಗೆ ಔಷಧಿಯನ್ನು ಚುಚ್ಚಿಯೂ, ಅವುಗಳ ತಲೆಯನ್ನು ನೇವರಿಸಿಯೂ ಮಾಡುತ್ತಿದ್ದ ಹಸನ್‌ಗೆ ಗಂಟೆಗಳು ಸರಿದದ್ದೇ ಗೊತ್ತಾಗುತ್ತಿರಲಿಲ್ಲ. ಯಾವಾಗಲಾದರೂ ಜಂತುಗಳನ್ನು ಡಿಸೆಕ್ಟ್ ಮಾಡಬೇಕಾಗಿ ಬಂದಾಗ ಏನತಹುದೋ ಒಂದು ನೋವು ಅವರನ್ನು ಆವರಿಸಿ ಪೀಡಿಸುತ್ತಿತ್ತು. ಬಹು ನಡುಕದಿಂದಲೂ ದಯೆಯಿಂದಲೂ ತಮ್ಮ ಅಪೂರ್ವ ಜಂತುಗಳಿಗೆ ಸೂಜಿಮದ್ದು ಚುಚ್ಚುತ್ತಿದ್ದರು.

ಡಾಕ್ಟರ್ ಬಹಳ ಹೊತ್ತು ಆ ಜಂತುಗಳ ಮಧ್ಯೆ ತಿರುಗಿ ನಡೆದರು. ಅವರು ಏನನ್ನೋ ಮರೆತಂತಿತ್ತು. "ಅದೇ, ಅದೇನೇ" ಯಾರೊಂದಿಗೂ ಅಲ್ಲವೆಂಬಂತೆ ಡಾಕ್ಟರ್ ಹಸನ್ ಹೇಳಿದರು. ಒಬ್ಬ ಪ್ರಜ್ಞಾಶಾಲಿಯಲ್ಲೆಂಬಂತೆ ಎಲ್ಲಾ ಅತಿಭ್ರಾಂತಿ ಗಳೂ ಅವರ ವರ್ತನೆಯಲ್ಲಿ ಪ್ರಕಟವಾಗುತ್ತಿದ್ದವು.

ಅವರು ಲ್ಯಾಬೋರೇಟರಿಗೆ ಒಂದು ನಾಯಿಯನ್ನು ಹಿಡಿದುಕೊಂಡು ಬಂದರು. ವಿದ್ಯಾರ್ಥಿಗಳು ನಿಶ್ಶಬ್ದರಾಗಿ ಅವರ ಹಿಂದೆ ಪ್ರವೇಶಿಸಿದರು.

ಅವರು ಟೇಬಲ್ ಮೇಲೆ ನಾಯಿಯನ್ನು ಮಲಗಿಸಿದರು. ಒಂದು ದೊಡ್ಡ ಸಿರಂಜ್‌ನಲ್ಲಿ ಅಮಲು ಬರುವ ಔಷಧಿಯನ್ನು ತುಂಬಿಸಿಕೊಂಡು ಅಟೆಂಡರ್ ಬಂದನು.

"ಇಗೋ ನಾನು ಈ ಮಾನ್ಯ ನಾಯಿಗೆ ಅಮಲೇರುವಂತೆ ಮಾಡುತ್ತೇನೆ." ಡಾಕ್ಟರ್ ಹಸನ್ ಹೇಳಿದರು. "ನಾಯಿಗಳಾದ ನೀವು ಈ ನಾಯಿಗಿಂತ ಎಷ್ಟೋ ಕೀಳು." ವಿದ್ಯಾರ್ಥಿಗಳನ್ನು ನೋಡುತ್ತ ಅವರು ಹೇಳಿದರು.

ಸೂಜಿಯನ್ನೇ ನಾಯಿಯ ದೇಹದಲ್ಲಿ ಚುಚ್ಚಿದಾಗ ಅದು ಬೊಗಳಿಯೂ, ಸ್ವಲ್ಪ ಮಟ್ಟಿಗೆ ಕೆಲವು ಪರಾಕ್ರಮಗಳನ್ನು ತೋರಿಸಲು ಯತ್ನಿಸಿತು. ಸಿರಿಂಜಿನ ಪಿಸ್ಟನ್ ಅರ್ಧ ಒಳಕ್ಕೆ ಹೋದಾಗ ನಾಯಿಯು ಶಾಂತವಾಯಿತು. ಪೂರ್ಣವಾಗಿ ಹೋದನಂತರ ಅದು ನಿತ್ಯಶಾಂತಿಯಲ್ಲಿ ಲೀನವಾಯಿತು. ನಾಯಿಯ ದೇಹದಲ್ಲಿ ಚಾಕು ಆಡಿತು. ರಕ್ತವೂ ನೀರೋ ಹೊರಕ್ಕೆ ಬಂತು. ಚಾಕುವೂ, ಕತ್ತರಿಯೂ, ಫೋರ್‌ಸಪ್ಸೂ ಒಂದಾದ ಮೇಲೊಂದರಂತೆ ಉಪಯೋಗಿಸಿದಾಗ ನಾಯಿಯ ಹೃದಯವು ಹೊರಕ್ಕೆ ಬಂದಿತು. ಅದರ ಮಧ್ಯೆ ನಾಯಿಯು ಒಮ್ಮೆ ಅಲುಗಾಡ ಲೆತ್ನಿಸಿತು. ಡಾಕ್ಟರ್ ತನಗೇ ತಿಳಿಯದಂತೆ 'ನೋ' ಎಂದು ಹೇಳಿಬಿಟ್ಟರು.

ನಾಯಿ ನಿಶ್ಚಲವಾಯಿತು.

ಔಷಧಿಯ ಅಮಲಿನಲ್ಲೂ ಆ ನಾಯಿ ಯಜಮಾನದ ಆಜ್ಞೆಯನ್ನು ಅನುಸರಿಸುತ್ತಿದೆ.

ಎಲೆಕ್ಟ್ರಿಕ್ ಉಪಕರಣಗಳೊಂದಿಗೆ ನಾಯಿಯ ಹೃದಯವನ್ನು ಬಂಧಿಸಿದ ನಂತರ

ಡಾಕ್ಟರ್ ಹಸನ್ ವ್ಯತ್ಯಸ್ತವಾದ ಔಷಧಿಗಳನ್ನು ನಾಯಿಗೆ ಚುಚ್ಚಲು ಪ್ರಾರಂಭಿಸಿದನು.

ವಿದ್ಯಾರ್ಥಿಗಳು ಅತೀವ ಶ್ರದ್ಧೆಯಿಂದ ಟೇಬಲ್‌ನ ಸುತ್ತಲೂ ನಿಂತರು. ದೇವದಾಸ್, ಲಕ್ಷ್ಮೀ ಪಕ್ಕದಲ್ಲೇ ನಿಂತಿದ್ದರು. ಎಲ್ಲರ ಕಣ್ಣುಗಳೂ ಗ್ರಾಫ್‌ನಲ್ಲೇ ಕೇಂದ್ರೀಕೃತವಾಗಿತ್ತು.

ಯಾವುದೋ ಬಾಟಲ್‌ನಲ್ಲಿರುವ ಔಷಧಿಯ ಬಗ್ಗೆ ಡಾಕ್ಟರ್ ಹಸನ್‌ಗೆ ಸಂಶಯ ಬಂದಿತು. ಅಮಲಿನಲ್ಲಿ ಮಲಗಿರುವ ಸಾಧುಮೃಗಕ್ಕೆ ಆ ಔಷಧಿ ಚುಚ್ಚಲು ಅವರು ಹಿಂದೆಗೆದರು. ಆ ಔಷಧಿಯ ಸೀಸೆಯಿಂದ ಲೇಬಲ್ ಕಿತ್ತುಹೋಗಿತ್ತು.

ಡಾಕ್ಟರ್ ಹಸನ್ ಹೆಚ್ಚು ಆಲೋಚಿಸಲಿಲ್ಲ. ಸಂಶಯ ತೋರಿದ ಆ ಔಷಧಿಯನ್ನು ತಮ್ಮ ಪ್ರೀತಿಪಾತ್ರವೆಸಿದ ಮೃಗಕ್ಕೆ ಚುಚ್ಚಲು ಅವರು ಹಿಂದೆಗೆದರು. ಆ ಔಷಧಿಯ ಫಲವೇನೆಂದು ತಿಳಿಯಲೋಸುಗ ತಮ್ಮ ಎಡಗೈ ಮೇಲಿನ ಧಮನಿಯೊಳಕ್ಕೆ ಸಿರಿಂಜನ್ನೇ ಚುಚ್ಚಿ ಔಷಧಿಯನ್ನೇ ಒಳಕ್ಕೆ ಬಿಟ್ಟರು.

ಕೆಲವೇ ಕ್ಷಣಗಳಲ್ಲಿ ಡಾಕ್ಟರ್ ಹಸನ್‌ರ ಕಣ್ಣುಗುಡ್ಡೆಗಳು ಮೆಲಕ್ಕೇರಿದವು. ಅವರ ಮುಖವು ಬಿಳಚಿಕೊಂಡಿತು. ಅವರ ಕೈಯಿಂದ ಸಿರಿಂಜ್ ಕೆಳಕ್ಕೆ ಬಿದ್ದು ಹೋಯಿತು.

ಡಾಕ್ಟರ್ ಹಸನ್ ಪ್ರಜ್ಞಾಶೂನ್ಯರಾಗಿ ನೆಲದ ಮೇಲೆ ಉರುಳಿದರು. ಒಟ್ಟಿಗೇ ಎಲ್ಲರೂ ಚೀರಿದ್ದರಿಂದ ಆ ಹಾಲ್ ಕೂಗಾಟದಲ್ಲಿ ಮೊಳಗಿತು. ಮೊರಕ್ಕೆ ಮೊದಲು ಕೇಳಿಸಿದ್ದು ಹುಡುಗಿಯರ ಶಬ್ದವಾಗಿತ್ತು.

ಡಾಕ್ಟರ್‌ಗಳೂ ಅಟೆಂಡರ್‌ಗಳೂ ಓಡಿ ಬಂದರು. ಒಂದು ಸ್ಟ್ರೆಚರ್‌ನಲ್ಲಿ ಡಾಕ್ಟರರನ್ನು ಮಲಗಿಸಿಕೊಂಡು ಅವರನ್ನು ಮೆಡಿಕಲ್ ವಾರ್ಡ್‌ಗೆ ಕರೆದುಕೊಂಡು ಹೋಗಲಾಯಿತು. ವಿದ್ಯಾರ್ಥಿಗಳ್ಯಾರಿಗೂ ಅಲ್ಲಿಗೇ ಪ್ರವೇಶಿಸಲು ಅನುಮತಿ ದೊರೆಯಲಿಲ್ಲ.

ದೇವದಾಸ್‌ನೂ ಲಕ್ಷ್ಮಿಯೂ ಕ್ಯಾಂಟೀನ್‌ಗೆ ನಡೆದರು.

ಒಬ್ಬ ಗಂಡಸಾದ ದೇವದಾಸನನ್ನು ಪಾರ್ಟ್‌ನರ್ ಆಗಿ ಸ್ವೀಕರಿಸಲು ಲಕ್ಷ್ಮಿಗೆ ಮೊದಲು ಕಷ್ಟವೆನಿಸಿತು. ಆದರೆ ಇಷ್ಟ, ಅನಿಷ್ಟಗಳ ಪ್ರಕಾರ ಮೆಡಿಕಲ್ ಕಾಲೇಜಿನಲ್ಲಿ ಪಾರ್ಟನರ್ ದೊರಕುತ್ತಾನೆಯೇ ? ಅಲ್ಲಿ ಎಲ್ಲವನ್ನೂ ನಿಯಂತ್ರಿಸುವುದು ಆಲ್ಫಬೆಟ್ಸ್ ಮಾತ್ರವಾಗಿತ್ತು. ಆದ್ದರಿಂದ ಇಷ್ಟವಾದವರು ದೂರವಾಗಿಯೂ, ಇಷ್ಟವಿಲ್ಲದವರು ಹತ್ತಿರವಾಗಿಯೂ ಇರಬೇಕಾಗುತ್ತೆ.

ಲಕ್ಷ್ಮಿಯು ಕಟ್ಟುನಿಟ್ಟಾಗಿ ಬೆಳೆದ ಒಬ್ಬ ಹುಡುಗಿಯಾಗಿದ್ದಳು. ಲಕ್ಷ್ಮಿಯ ತಂದೆ ಬುದ್ಧಿವಂತನು ಕಠಿಣ ಶ್ರಮ ಪಡುವವನು ಆಗಿದ್ದರೂ ಹಠಮಾರಿಯೂ ಆಗಿದ್ದನು. ಲಕ್ಷ್ಮಿಯು ತನ್ನ ತಂದೆಯನ್ನು ಪ್ರೀತಿಸುತ್ತಿರಲಿಲ್ಲ. ಬದಲಾಗಿ ಆತನನ್ನು ದ್ವೇಷಿಸುತ್ತಿದ್ದಳು. "ಟೈಂ ಈಸ್ ಮನಿ" ಎಂಬುದೇ ಆತನ ಅಭಿಪ್ರಾಯ.

ಹಠವಾದಿಯಾದ ಆತನ ಮನೆಯಲ್ಲಿ ಸೈನ್ಯದ ಶಿಸ್ತಿತ್ತು. ತನ್ನ ಮಕ್ಕಳಿಗೆ ಪಾಠಗಳನ್ನು ಆತನು ಬಲವಂತವಾಗಿ ಓದಿಸಿದ್ದನು. ತೋಟಕ್ಕೆ ಹೋಗಿ ಒಂದು ಹೂವನ್ನು ಕಿತ್ತು ವಾಸನೆ ನೋಡುವುದೋ ಒಂದು ಬೆಕ್ಕಿನ ತಲೆ ನೇವರಿಸುವುದೋ, ಸಂಧ್ಯಾಸಮಯದಲ್ಲಿ ಒಂದು ನಿಮಿಷ ಆಕಾಶವನ್ನು ನೋಡುವುದೋ, ಬೆಳದಿಂಗಳಿರುವ ರಾತ್ರಿಯಲ್ಲಿ ಒಮ್ಮೆ ಹೊರಕ್ಕಿಳಿದು ಹೋಗುವುದೋ - ಇವೆಲ್ಲಾ

ಲಕ್ಷ್ಮಿ ಮಾಡುವಂತಿರಲಿಲ್ಲ. ಇಂತಹ ಪಠ್ಯಪುಸ್ತಕಗಳೆಂಬ ಗೋಡೆಗಳ ಮಧ್ಯೆ ಲಕ್ಷ್ಮಿ ಆಜೀವಪರ್ಯಂತ ಶಿಕ್ಷೆ ವಿಧಿಸಲ್ಪಟ್ಟು ದಿವಸಗಳನ್ನು ಕಳೆಯುತ್ತಿದ್ದಳು.

ಕಾಲೇಜಿನಲ್ಲಿ ದೊರಕುವ ಅಪೂರ್ವವಾದ ಬಿಡುವಿನ ದಿನಗಳನ್ನೇ ಲಕ್ಷ್ಮಿಯು ಸಂಭ್ರಮದಿಂದ ಆಚರಿಸುತ್ತಿದ್ದಳು.

ಲಕ್ಷ್ಮಿಯಲ್ಲಿ ಬದಲಾವಣೆಗಳು ಕ್ರಮೇಣ ಕಂಡುಬರತೊಡಗಿದವು. ಪಠ್ಯಪುಸ್ತಕಗಳಲ್ಲಿಲ್ಲದ ವಿಷಯಗಳನ್ನು ಅವಳು ದೇವದಾಸ್‌ನೊಂದಿಗೆ ಮಾತನಾಡುವುದು ರೂಢಿಯಾಯಿತು. ಅವಳಿಗಿಷ್ಟವಾದ ವಿಷಯವನ್ನು ಕಂಡುಹಿಡಿಯುವುದು ಅವನಿಗೆ ಪ್ರಯಾಸವಾಗಿತ್ತು. ಹಾಸ್ಟಲಿನಲ್ಲಿನ ಊಟತಿಂಡಿಗಳಲ್ಲಿ ರುಚಿ ಇಲ್ಲದಿರುವುದು, ಸರಿಯಾಗಿ ಕಲಿಸದ ಅಧ್ಯಾಪಕರನ್ನು ಕುರಿತ ಟೀಕೆ, ಸೆಷನಲ್ ಮಾರ್ಕ್, ಲ್ಯಾಬೋರೇಟರಿಯಲ್ಲಿನ ಯಾತನೆಗಳು ಎಂಬಿವುಗಳ ಬಗ್ಗೆ ಅವಳು ಮೊದಲೆಲ್ಲಾ ಮಾತನಾಡುತ್ತಿದ್ದಳು.

ಲ್ಯಾಬೊರೇಟರಿಯಲ್ಲಿ ಇಬ್ಬರಿಗೂ ಸೇರಿದಂತೆ ಒಂದು ಮೈಕ್ರೋಸ್ಕೋಪ್ ಕೊಟ್ಟಿದ್ದರು. ಹಿಸ್ಟಾಲಜಿಯಲ್ಲಿ ಅತೀವ ಶ್ರದ್ಧೆಯಿಂದ ಸ್ಲೈಡುಗಳನ್ನು ನೋಡುತ್ತಿರು ವಾಗ ದೇವದಾಸ್‌ನ ಕೈಯೋ ಕಾಲೋ ಲಕ್ಷ್ಮಿಯ ದೇಹಕ್ಕೆ ಗೊತ್ತಿಲ್ಲದೆಯೇ ಒಮ್ಮೆ ತಗುಲಿದರೆ ಅವಳು ತುಡಿಯುವುದನ್ನು ನೋಡಬೇಕಾದದ್ದೆ. ದೇವದಾಸ್‌ಗೆ ತನ್ನ ಬಗ್ಗೆ ಒಂದು ಸದಭಿಪ್ರಾಯವಿಲ್ಲದಿರುವ ಕಾಲವಾಗಿತ್ತದು. ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಂಡು, ತನ್ನ ಮುಖಚರ್ಮವನ್ನು ನುಣುಪು ಮಾಡಲು ಅನೇಕಾನೇಕ ಔಷಧಿಗಳನ್ನು ಹಚ್ಚಿ ಮಾಡಿ, ಆ ಕಾಲದಲ್ಲಿ ಧಾರಾಳವಾಗಿ ಸಮಯವನ್ನು ಹಣವನ್ನು ದೇವದಾಸ್ ಕಳೆದುಕೊಂಡಿದ್ದನು.

ಆಗಿನ ಕಾಲದಲ್ಲಿ ಲಕ್ಷ್ಮಿಯನ್ನು ಮನಃಪೂರ್ವಕವಾಗಿ ಒಮ್ಮೆ ಮುಟ್ಟಬೇಕೆಂದು ದೇವದಾಸ್ ಆಸೆಪಟ್ಟಿದ್ದನು. ಆದರೆ ಅದಕ್ಕೆ ತಕ್ಕಂತಹ ಒಂದು ಸಂದರ್ಭ ಅವನಿಗೆ ಒಮ್ಮೆಯೂ ಸಿಕ್ಕಿರಲಿಲ್ಲ. ಅವಳ ದೇಹದಿಂದ ಬರುವ ಪರಿಮಳದ ಬಗ್ಗೆಯೋ, ಟೆಲಿಫೋನಿನಲ್ಲಿ ಕೇಳುವ ಅವಳ ಮಧುರಸ್ವರದ ಬಗ್ಗೆಯೋ ದೇವದಾಸ್ ಮಾತನಾಡಿರಲಿಲ್ಲ. ಇಂತಹ ಕೀಳುಮಟ್ಟದ ಮಾರ್ಗಗಳು ಒಬ್ಬ ಬಲವಂತನಾದ ಪುರುಷನಿಗೆ ತಕ್ಕದ್ದಲ್ಲವಲ್ಲಾ?

ಅಲ್ಲಿಯ ಕ್ಯಾಂಟೀನ್ ಮೆಡಿಕಲ್ ಕಾಲೇಜಿಗೆ ಮಾತ್ರವಾಗಿತ್ತು. ರೋಗಿಗಳಿಗೋ ಸಂದರ್ಶಕರಿಗೋ ಅಲ್ಲಿ ಪ್ರವೇಶವಿಲ್ಲ.

ಬಹುಮಟ್ಟಿಗೆ ಎಲ್ಲಾ ಮೇಜುಗಳಲ್ಲೂ ಜನರ ಗುಂಪಿತ್ತು. ಒಂದು ಕಪ್ ಟೀಯ ಮುಂದೆ ಕುಳಿತು ಸಂತೋಷವನ್ನೂ ದುಃಖವನ್ನೂ ಹಂಚಿಕೊಳ್ಳಲು ಬಂದವರೇ ಎಲ್ಲರೂ. ಬಹುಮಟ್ಟಿಗೆ ಮೇಜುಗಳಲ್ಲಿ ಇಬ್ಬಿಬ್ಬರು ಕುಳಿತಿದ್ದರು.

ಕೆಲವು ಮೇಜುಗಳಲ್ಲಿ ಟ್ಯೂಟರ್‌ಗಳೂ, ಸೀನಿಯರ್ ರೆಸಿಡೆಂಟ್‌ಗಳೂ ಕುಳಿತಿದ್ದರು. ಅವರ ಸಂಭಾಷಣೆಗಳು ಸೆಮಿನಾರ್, ಸಂಬಳದ ಪರಿಮಿತಿಗಳು, ಡಿಪಾರ್ಟ್‌ಮೆಂಟ್ ಹೆಡ್‌ನ ನಡೆವಳಿಕೆ ಇವುಗಳ ಬಗ್ಗೆ ಇರುತ್ತಿತ್ತು. ಅಷ್ಟೇ ಅಲ್ಲ, ಸಂಭಾಷಣೆಯು ಬಹುಮೆಲ್ಲನೆ ಇರುತ್ತಿತ್ತು.

ಲಕ್ಷ್ಮಿಯೂ ದೇವದಾಸ್‌ನೂ ಒಂದು ಮೂಲೆಯಲ್ಲಿ ಕುಳಿತರು. ಲಕ್ಷ್ಮಿ ಒಂದು ವೆಜಿಟೇರಿಯನ್ ಕಟ್‌ಲೆಟ್‌ಗೂ, ಲಸ್ಸಿಗೂ, ಆರ್ಡರ್ ಮಾಡಿದಳು. ದೇವದಾಸ್ ಫ್ರೆಷ್ ಲೈಮ್ ಜ್ಯೂಸಿಗೆ ಹೇಳಿದನು.

ದೇವದಾಸ್ ಹೇಳಿದನು:

"ಇಲ್ಲದಿದ್ದರೆ ನೀನು ದಪ್ಪಗಾಗುತ್ತೀಯಾ. ಕಟ್‌ಲೆಟ್ ತುಪ್ಪ ಬೆಣ್ಣೆ ನಿನ್ನ ಕೊಬ್ಬನ್ನು ಇನ್ನೂ ಹೆಚ್ಚಿಸುತ್ತೆ ಅಷ್ಟೆ. ಒಬ್ಬ ಪುರುಷನು ಮೇಯಿಸಿಕೊಂಡು ಬರಲು ಆಗದ ರೀತಿ ನೀನೊಂದು ಕೊಬ್ಬಿದ ಹಸುವಾಗಿಬಿಡುತ್ತಿ, ಅಷ್ಟೆ."

"ನೀವೊಬ್ಬರು ಊದುಕಡ್ಡಿ ಪೈಲ್ವಾನ್. ಊದುಕಡ್ಡಿ ಪೈಲ್ವಾನ್."

ಲಕ್ಷ್ಮಿ ಸ್ವಲ್ಪ ಹೊತ್ತು ಜೋರಾಗಿ ನಕ್ಕಳು. ಬಹು ಚಿಕ್ಕ ತಮಾಷೆಗಳನ್ನು ಹೇಳಿ ಜೋರಾಗಿ ನಗುವುದು ಲಕ್ಷ್ಮಿಯ ಅಭ್ಯಾಸ. ಎಲ್ಲರಿಂದಲೂ ಅವಳನ್ನು ದೇವದಾಸ್ ಬೇರೆಯಾಗಿ ಕಾಣಲು ಪ್ರೇರೇಪಿಸಿದ್ದು ಈ ನಗುವೇ. ಆದರೂ ಲಕ್ಷ್ಮಿ ನಗುವುದನ್ನು ನೋಡಲು ಚೆನ್ನ; ವಿಶೇಷವಾಗಿ ಅವಳು ಜೋರಾಗಿ ನಗುವಾಗ. ಆಗ ಅವಳು ಬಹು ಚೆನ್ನಾಗಿ ಅಲುಗಾಡುತ್ತಿದ್ದಳು. ಆಗ ಲಕ್ಷ್ಮಿ ಅಲುಗಾಡುವ ಒಂದು ಬೊಂಬೆ ಯಂತಿರುತ್ತಿದ್ದಳು.

ಆದರೆ ಅದರಲ್ಲೇನಾದರೂ ಅಸಂಬದ್ಧವಿದ್ದರೆ ಆ ಬೊಂಬೆಯ ಸೂತ್ರದ ದಾರಗಳು ದೇವದಾಸ್‌ನ ಕೈಯಲ್ಲಿರುತ್ತಿದ್ದವು. ಅದನ್ನೊಮ್ಮೆ ಎಳೆದರೆ ಒಡನೆ ಲಕ್ಷ್ಮಿ ನಿಶ್ಶಬ್ದಳಾಗುತ್ತಿದ್ದಳು.

ಕ್ಯಾಂಟೀನ್‌ನಲ್ಲಿನ ಅಂದಿನ ಮಾತಿನ ವಿಷಯವು ರೂಢಿಗೆ ವಿರುದ್ಧವಾಗಿ ಡಾಕ್ಟರ್ ಹಸನ್‌ರ ಬಗೆಗಾಗಿತ್ತು. ಡಾಕ್ಟರ್ ಹಸನ್‌ರ ಪಾಂಡಿತ್ಯ, ಅವರ ಸಂಗೀತ, ಸರಳತನ, ನಿಸ್ವಾರ್ಥತೆ ಅವುಗಳ ಜಾಡಿನಲ್ಲಿ ಮಾತುಗಳು ಸಾಗಿದವು.

ಸಂದೇಹಾಸ್ಪದವಾದ ಒಂದೂ ಔಷಧಿಯನ್ನೇ ಮೃಗಗಳಿಗೆ ಚುಚ್ಚುವ ಬದಲು ತಮ್ಮ ದೇಹಕ್ಕೆ ಚುಚ್ಚಿಕೊಂಡ ಆ ಮನುಷ್ಯನ ನಿಸ್ವಾರ್ಥತೆಯ ಮುಂದೆ ದೇವದಾಸ್ ಸ್ವಲ್ಪ ಹೊತ್ತು ಮೌನಿಯಾದನು.

"ಏನು ಆಲೋಚಿಸುತ್ತಿದ್ದೀರಿ? ನೀವು ಈಗ ಯಾವ ಲೋಕದಲ್ಲಿದ್ದೀರಿ?" ಲಕ್ಷ್ಮಿ ಕೇಳಿದಳು.

"ಲಕ್ಷ್ಮೀ ನಾನೀಗ ಯಾವುದೇ ಲೋಕದಲ್ಲೂ ಇಲ್ಲ. ಇಲ್ಲದಿದ್ದರೂ ನನಗೆ ಯಾವ ಲೋಕವೂ ಇಲ್ಲ. ನನ್ನದೇ ಆದ ಲೋಕವೊಂದು ಬರಲಿದೆಯಷ್ಟೆ." ದೇವದಾಸ್ ಹೇಳಿದನು.

"ನೋಡು" ಲಕ್ಷ್ಮಿ ಹೇಳಿದಳು "ತಮಾಷೆ ಮಾಡುವ ಸಮಯವಲ್ಲ ಇದು."

"ತಮಾಷೆಯೇ? ಇದು ತಮಾಷೆಯ ಮಾತುಗಳಲ್ಲ. ಗಹನವಾದ ವಿಷಯಗಳು ಹೆಂಗಸರಿಗೆ ಎಂದೂ ಅಡಿಗೆ ಮನೆಯಲ್ಲಿನ ತರಕಾರಿಗಳು, ತಿನ್ನುವುದು, ಮತ್ತೆ ತಯಾರಿಸುವುದು ಇದನ್ನು ಬಿಟ್ಟರೆ ಅವರಿಗೆ ಯೋಚಿಸಲು ಬೇರೆ ವಿಷಯಗಳೇ ಇಲ್ಲ. ನಿನ್ನ ಜೊತೆ ಸ್ನೇಹ ಮಾಡಿದ್ದೇ ತಪ್ಪಾಯಿತು."

"ನನಗೂ ಅಷ್ಟೇ" ಲಕ್ಷ್ಮಿ ಹೇಳಿದಳು. "ಬುದ್ಧಿವಂತರು ಮರಕುಟುಕಗಳಂತೆ. ಅದು ನನಗೆ ಈ ದಿನ ಸರಿಯಾಗಿ ಅರ್ಥವಾಯಿತು."

ಲಕ್ಷ್ಮಿಯ ಆ ಮಾತುಗಳನ್ನು ಕೇಳಿ ದೇವದಾಸ್ ಸಂತೋಷಪಟ್ಟನು. ತನ್ನ ಸಾಮಾನ್ಯ ಬುದ್ಧಿಯನ್ನು ದಾಟಿ ಅವಳು ಆಲೋಚಿಸಲಾರಂಭಿಸಿದ್ದಾಳೆ.

ಅವರು ಕಾರಿಡಾರ್ ಮೂಲಕ ನಡೆದು ಸೆಂಟ್ರಲ್ ಔಟ್‌ಡೋರ್ ಬಳಿಯ ವಿಶಾಲವಾದ ಜಾಗಕ್ಕೆ ಬಂದರು. ಸಾಯಂಕಾಲವಾದ್ದರಿಂದ ಸಂದರ್ಶಕರ ಗಜಿಬಿಜಿ ಜಾಸ್ತಿಯಾಗಿತ್ತು.

ರಿಸೆಪ್ಷನ್‌ನಲ್ಲಿ ಬಲ್ಬುಗಳು ಹತ್ತುವುದು ಆರುವುದು ಮಾಡುತ್ತಿದ್ದವು. ರಿಸೆಪ್ಷನ್‌ನಲ್ಲಿದ್ದ ಬಿಳಿ ಸುಂದರಿ ಕಪ್ಪಗಿನ ಟೆಲಿಫೋನ್ ರಿಸೀವರ್‌ನಲ್ಲಿ ಚುಂಬಿಸುತ್ತಿದ್ದಳು.

ಗೇಟು ದಾಟುವಾಗ ದೇವದಾಸ್ ಗೇಟ್ ಮ್ಯಾನ್ ಪ್ಯಾರೇಲಾಲ್‌ನನ್ನು ಕೇಳಿದನು:

"ಏನಾದರೂ ವಿಷಯ ಗೊತ್ತಾಯಿತೇ ?"

"ಯಾವ ವಿಷಯ ?" ಮರ್ಯಾದೆಯಿಂದ ಪ್ಯಾರೇಲಾಲ್ ಕೇಳಿದನು.

"ಡಾಕ್ಟರ್ ಹಸನ್‌ರವರದ್ದು."

"ಮಾಲಿಕ್, ಅಲ್ಲಿಗೆ ಯಾರನ್ನೂ ಬಿಡುತ್ತಿಲ್ಲ."

ಏನು ಮಾಡಬೇಕೆಂದು ನಿರ್ಧರಿಸಲಾಗದೆ ಜನಸಂದಣಿಯಿಂದ ತುಂಬಿದ ಫುಟ್‌ಪಾತ್‌ನ ಮೇಲೆ ಅವರಿಬ್ಬರೂ ಮುಂದೆ ನಡೆದರು.

# ಆರು

ಚಳಿಗಾಲದ ಆರಂಭದ ದಿನಗಳು. ಚಿಕ್ಕ ಹಗಲುಗಳ ಹುಟ್ಟನ್ನು ದಿಗಂತವು ವಹಿಸಿಕೊಂಡಿತ್ತು. ಉದ್ದಕ್ಕೆ ವಿಶಾಲವಾಗಿ ಇರುವ ಬಂಗಾರ ಬಣ್ಣದ ಗೋಧಿಗದ್ದೆಗಳ ವಕ್ಷಸ್ಥಳದ ಮೇಲೆ ಮಂಜು ಹರಡಿಕೊಂಡಿತ್ತು. ಗದ್ದೆಯ ಆಚೆ ದಡದಲ್ಲಿ ಆಕಾಶವೂ ಭೂಮಿಯೂ ದಿಗಂತದಲ್ಲಿ ಸೇರಿ ವಿಲೀನವಾಗಿತ್ತು.

ಡಾಕ್ಟರ್ ಡಿ. ಕುಮಾರ್ ತೆಳ್ಳನೆಯ ಕಂಬಳಿಯನ್ನು ಪಕ್ಕಕ್ಕೆ ಸರಿಸಿ ಎದ್ದರು. ಗಾಜಿನ ಕಿಟಕಿ ತೆರೆದಿಟ್ಟಾಗ ತಣ್ಣನೆಯ ಪಡುವಣ ಗಾಳಿಯೂ, ಮಂಜಿನ ತೇವವೂ ಭರ್‍ರೆಂದು ಒಳ ಪ್ರವೇಶಿಸಿತು.

ನೈಟ್‌ಗೌನ್ ಅನ್ನು ಬಲವಾಗಿ ಕಟ್ಟಿಕೊಂಡು ನಂತರ ಕಿಟಕಿಯಲ್ಲಿಮೊಳಕೈಯೂರಿ ತಣ್ಣನೆಯ ಕಂಬಿಗಳ ಮೇಲೆ ಹಣೆಯನ್ನು ಒತ್ತಿ ಹೊರಕ್ಕೆ ನೋಡಿದರು. ಗೋಣಿಚೀಲ ಹೊದಿಸಿದ ಕತ್ತೆಗಳು ಸಾಲುಸಾಲಾಗಿ ಕೆಲಸಕ್ಕೆ ಹೋಗುತ್ತಿದ್ದವು. ಅದರ ಹಿಂದೆ ಒಬ್ಬ ಮನುಷ್ಯನೂ ಹೋಗುತ್ತಿದ್ದನು. ಅವನು ಹೊದ್ದಿರುವುದು ಗೋಣಿ ಚೀಲವೇ ಆಗಿತ್ತು. ಚಳಿಯಿಂದ ಪಾರಾಗಲು ಮೃಗಗಳಿಗೂ ಒಡೆಯನಿಗೂ ಗೋಣಿಚೀಲವೇ ಆಧಾರವಾಗಿತ್ತು. ಸೆಣಬಿನ ನೂಲುಗಳು ಕೊಡುವ ಶಾಖವನ್ನು ವ್ಯತ್ಯಸ್ತವಾದ ಆ ಶರೀರಗಳು ಆನಂದದಿಂದ ಸ್ವೀಕರಿಸುತ್ತಿದ್ದ ನೋಟವನ್ನು ಅನಾಟಮಿ ಪ್ರೊಫೆಸರ್ ಬಹಳ ಹೊತ್ತು ನೋಡುತ್ತ ನಿಂತರು.

ಅಲ್ಲದಿದ್ದರೂ ಮನುಷ್ಯರಿಗೂ ಮೃಗಗಳಿಗೂ ವ್ಯತ್ಯಾಸವಾದರೂ ಏನು? ಇಪ್ಪತ್ತೈದು ವರ್ಷಗಳಿಂದ ಶರೀರಶಾಸ್ತ್ರವನ್ನು ಕಲಿಸುತ್ತಿದ್ದ ಡಾಕ್ಟರ್ ಕುಮಾರ್ ಯೋಚಿಸಿದರು. ಮನುಷ್ಯರ ಮಾಂಸಕ್ಕೂ ದನಕರುಗಳ ಮಾಂಸಕ್ಕೂ ಇರುವ ವ್ಯತ್ಯಾಸವೇನು? ಬಹುಶಃ ಅವುಗಳ ಫೈಬರ್‌ನ ರಚನೆಯು ಬೇರೆ ಬೇರೆ ಇರಬಹುದು. ಸ್ವಾದದಲ್ಲೂ ರುಚಿಯಲ್ಲೂ ಭೇದವಿರಬಹುದು. ಆದರೆ ಇಬ್ಬರಲ್ಲೂ ಇದ್ದೇ ಇರುವಂತಹ ದ್ರವ್ಯವೇನು? ಪ್ರೋಟೀನ್. ದೇಹವು ಉರಿಯುವಾಗ ಮನುಷ್ಯರ ಮಾಂಸವಾಗಲಿ ದನಕರುಗಳ ಮಾಂಸವಾಗಲಿ ಒಂದೇ ರೀತಿಯ ವಾಸನೆಯನ್ನು ಹೊರಡಿಸುತ್ತದೆ. ಚಿತೆಯಲ್ಲಿ ಇವೆಲ್ಲಾ ಒಂದೇ ತರಹ ಉರಿಯುತ್ತವೆ.

ಡಾಕ್ಟರ್ ಡಿ. ಕುಮಾರ್‌ಗೆ ಇವತ್ತು ಬಹಳ ಅವಸರದ ದಿವಸವು. ಎರಡು ಕ್ಲಾಸುಗಳಲ್ಲಿ ಪಾಠ ಮಾಡಬೇಕಾಗಿದೆ. ಮೊದಲನೆಯ ವರ್ಷದವರಿಗೆ ಬ್ರೈನ್‌ನ ಬಗ್ಗೆ, ಎರಡನೆಯ ವರ್ಷದವರಿಗೆ ಗರ್ಭಕೋಶದ ಬಗ್ಗೆ. ಹೀಗೆ ಪಾಠ ಮಾಡಬೇಕಾದ ದಿವಸಗಳಲ್ಲಿ ಡಾ. ಡಿ. ಕುಮಾರ್ ಬಹಳ ಅಸ್ವಸ್ಥರಾಗಿರುತ್ತಾರೆ. ಅವರು ಇಪ್ಪತ್ತೈದು ವರ್ಷಗಳಿಂದ ವಿದ್ಯಾರ್ಥಿಗಳಿಗೆ ಪಾಠ ಮಾಡುತ್ತಿದ್ದಾರೆ. ಆದರೂ ಪಾಠವನ್ನು ಅನಾಯಾಸವಾಗಿ ಅವರು ಮಾಡಲಾರರು. ಹೊಸ ಹೊಸ ವಿಷಯಗಳನ್ನು ಅವರು

ಕಂಡುಹಿಡಿಯುತ್ತಲೇ ಇರುತ್ತಾರೆ. ಇತರ ಸಂಶೋಧಕರು ಕಂಡುಹಿಡಿದ ವಿಷಯಗಳನ್ನು ಅವರು ಓದಿ ಅರ್ಥಮಾಡಿಕೊಳ್ಳುತ್ತಾರೆ.

ಅನಾಟಮಿಯ ಆಚಾರ್ಯರಾದ ಗ್ರೇ ಬರೆದ ಅಧಿಕೃತ ಗ್ರಂಥವನ್ನು ಮತ್ತೆಯೂ ತೆರೆದಿಟ್ಟುಕೊಂಡು ಅವರು ಅದರ ಮುಂದೆ ಕುಳಿತರು. ಕಳೆದ ಎಷ್ಟೋ ವರ್ಷ ಗಳಿಂದ, ಮೆಡಿಕಲ್ ಕಾಲೇಜನ್ನು ಪ್ರವೇಶಿಸಿದಂದಿನಿಂದ, ಈ ಪುಸ್ತಕವನ್ನು ಅವರು ತೆರೆದು ನೋಡದ ದಿನವಿಲ್ಲ. ಇದರಲ್ಲಿನ ಒಂದೊಂದು ಪೇಜೂ ಅವರಿಗೆ ಚಿರಪರಿಚಿತ. ಕಣ್ಣು ಮುಚ್ಚಿಕೊಂಡು ಆ ಪುಸ್ತಕದಲ್ಲಿನ ಯಾವುದೇ ಅಧ್ಯಾಯವನ್ನೂ ಅವರಿಗೆ ತೆರೆಯಲು ಸಾಧ್ಯ. ನಿಜ ಹೇಳುವುದಾದರೆ ಕಣ್ಣು ಮುಚ್ಚಿಕೊಂಡು ಅವರು ಈ ಗ್ರಂಥವನ್ನು ಸಂಪೂರ್ಣವಾಗಿ ಓದಬಲ್ಲರು.

ಸ್ವತಃ ಎಲ್ಲವನ್ನೂ ತಿಳಿದು ಏನು ಪ್ರಯೋಜನ ? ವಿದ್ಯಾರ್ಥಿಗಳಿಗೆ ಹೇಳಿಕೊಟ್ಟು ಅರ್ಥವಾಗುವಂತೆ ಮಾಡುವುದು ಒಂದು ಭಗೀರಥ ಪ್ರಯತ್ನವೇ ಆಗಿತ್ತವರಿಗೆ. ಐವತ್ತು ವಿದ್ಯಾರ್ಥಿಗಳು ಐವತ್ತು ವಿಧವಾದ ಮನಸ್ಸುಳ್ಳವರು. ಬಹುಮಟ್ಟಿಗೆ ಬುದ್ಧಿ ಕಡಿಮೆಯಾದ ಶಿಷ್ಯನಿಗೆ ಅರ್ಥವಾಗುವ ರೀತಿಯಲ್ಲಿ ಹೇಳಿಕೊಡುವುದೇ ಕಷ್ಟವಾದ ಕೆಲಸವು. ಅದಕ್ಕೋಸ್ಕರವೇ ಡಾಕ್ಟರ್ ಡಿ. ಕುಮಾರ್ ಇವತ್ತಿಗೂ, ಎಂದಿಗೂ ಕಷ್ಟಪಡುತ್ತಿರುವುದು.

ತಮ್ಮ ಶಿಷ್ಯರನ್ನು ಕಂಡರೆ ಅವರಿಗೆ ತಮ್ಮ ಸ್ವಂತ ಜೀವಕ್ಕಿಂತ ಹೆಚ್ಚು. ವಿದ್ಯಾರ್ಥಿಗಳು ಯಾವ ಕುಚೇಷ್ಟೆ ಮಾಡಿದರೂ, ಅವರು ಅದನ್ನೇ ಸಹಿಸುತ್ತಿದ್ದರು. ಕುಮಾರ್‌ರವರು ಮಹಾನ್ ಎನಿಸಿದ, ಒಬ್ಬ ಪಿತೃಸಮಾನರೆನಿಸಿದ ಡಾಕ್ಟರ್.

ಅವರ ಡಿಪಾರ್ಟ್‌ಮೆಂಟಿನಿಂದ ಶಿಷ್ಯರು ಪರೀಕ್ಷೆಯನ್ನು ಮುಗಿಸಿ ಹೊರಬರುವಾಗ ಅವರು ಡಾಕ್ಟರ್ ಕುಮಾರ್‌ರ ಮಿತ್ರರಾಗಿ ಬಿಡುತ್ತಿದ್ದರು. ಅವರಿಗಿಂತ ಹಿರಿಯರಾದವರು ಎಂಬಂತೆಯೇ ಡಾಕ್ಟರ್ ಅವರನ್ನು ಆದರಿಸುತ್ತಿದ್ದರು.

ವಿದ್ಯಾರ್ಥಿಗಳನ್ನು ಉತ್ತೀರ್ಣರಾಗುವಂತೆ ಮಾಡುವುದೂ ಅನುತ್ತೀರ್ಣರಾಗು ವಂತೆ ಮಾಡುವುದೂ ಇವೆರಡೂ ಡಾಕ್ಟರ್ ಕುಮಾರ್‌ರವರೇನೇ. ಕ್ಲಾಸ್‌ನಲ್ಲಿರುವ ಎಲ್ಲಾ ವಿದ್ಯಾರ್ಥಿಗಳೂ ಪರೀಕ್ಷೆಯಲ್ಲಿ ಪಾಸಾಗುವಂತೆ ಮಾಡಬೇಕೆಂದು ಅಭಿಪ್ರಾಯ ವುಳ್ಳವರಾಗಿದ್ದರು ಡಾಕ್ಟರ್ ಕುಮಾರ್. ಯಾರಾದರೂ ವಿದ್ಯಾರ್ಥಿಯು ಪರೀಕ್ಷೆಯಲ್ಲಿ ಫೇಲಾಗಬೇಕಾದರೆ ಆ ವಿದ್ಯಾರ್ಥಿಗೆ ಬುದ್ಧಿ ಇಲ್ಲದಿರುವುದರಿಂದ ಅಲ್ಲ. ಅವನಿಗೆ ಪಾಠ ಹೇಳುವ ಅಧ್ಯಾಪಕರಿಗೆ ಬುದ್ಧಿ ಕಡಿಮೆ ಇರುವುದರಿಂದ ಎಂದು ಡಾ. ಕುಮಾರ್ ನಂಬುತ್ತಾರೆ.

ಸಹಅಧ್ಯಾಪಕರೊಂದಿಗೆ ಆಗಾಗ್ಗೆ ಈ ವಿಷಯವನ್ನು ಅವರು ಒತ್ತಿ ಒತ್ತಿ ಹೇಳುವುದುಂಟು. ಫೈನಲ್ ಪರೀಕ್ಷೆಗೆ ಬರುವ ಒಬ್ಬೊಬ್ಬ ವಿದ್ಯಾರ್ಥಿಯನೂ ಪಾಸ್ ಆಗುವಂತೆ ಮಾಡಿ ತಮ್ಮ ಡಿಪಾರ್ಟ್‌ಮೆಂಟಿನಿಂದ ಹೊರ ಕಳುಹಿಸಲು ಅವರು ಬಹಳ ಪ್ರಯತ್ನಿಸುತ್ತಾರೆ. ಆದರೆ ಅವರು ಎಷ್ಟು ಪ್ರಯತ್ನಪಟ್ಟರೂ 'ಮಾಮ ನನ್ನನ್ನು ಹೊಡೆಯಬೇಡ, ನಾನು ಒಳ್ಳೆಯವನಾಗುವುದಿಲ್ಲ' ಎಂದು ಹೇಳುವ ಕೆಲ ಶಿಷ್ಯರು ಯಾವಾಗಲೂ ಇರುತ್ತಾರೆ. ಅವರು ಪರೀಕ್ಷೆಗಳಲ್ಲಿ ಫೇಲು ಆಗಲೆಂದೇ ಹುಟ್ಟಿದವರು.

"ಏನು ಮುಗಿಯಲಿಲ್ಲವೇ ?"

ಡಾಕ್ಟರ್ ಕುಮಾರ್‌ರ ಹೆಂಡತಿ ವಿಮಲಾದೇವಿ ಕಂಬಳಿ ಹೊದಿಕೆಯನ್ನು ತೆಗೆದು ಹಾಕಿ ಎದ್ದೇಳುತ್ತಾ ಕೇಳಿದಳು. "ನೆನ್ನೆ ರಾತ್ರಿಯಲ್ಲಿ ನಿದ್ದೆಕೆಟ್ಟು ಓದಿದ್ದು ಸಾಲದೆಂದು ಹೀಗೆ ಕುಳಿತಿದ್ದೀರೇನು ? ರಾತ್ರಿಯನ್ನು ಹಗಲನ್ನು ನೀವು ನಿಮ್ಮ ಸ್ವಂತ ಮಾಡಿಕೊಂಡಿರೇನು ?"

ವಿಮಲಾದೇವಿ ಅವರನ್ನು ಆಕ್ಷೇಪಿಸಲು ಆರಂಭಿಸಿದಳು. ಬೆಳಿಗ್ಗೆ ಏಳುವಾಗಲೇ ಜಗಳದೊಂದಿಗೆ ಆಕೆ ತಮ್ಮ ದಿನದ ಪ್ರಾರಂಭವನ್ನು ಮೊದಲು ಮಾಡಿದ್ದಳು. ಒಂದೋ ಗಂಡನೊಂದಿಗೆ, ಇಲ್ಲಾ ಪರಿಚಾರಕನೊಂದಿಗೆ ಯಾರೂ ಸಿಗಲಿಲ್ಲವೆಂದರೆ ತನಗೆ ತಾನೇ ಆಕೆ ಜಗಳವಾಡಿಕೊಳ್ಳುತ್ತಿದ್ದರು.

ವಿಮಲಾದೇವಿ ಗಂಡನಿಗಿಂತ ಎತ್ತರವಿರುವ ಸ್ತ್ರೀ. ಆಕೆಯ ದೇಹವು ಬೊಜ್ಜಿನಿಂದ ಕೂಡಿದ್ದಾಗಿತ್ತು. ಬ್ರೇಸಿಯರ್ ಬಿಚ್ಚಿದರೆ ಸ್ತನಗಳು ನಾಭಿಯವರೆಗೆ ಜೋತು ಬಿದ್ದಿರುತ್ತಿದ್ದವು. ನಿತಂಬವು ಆಕೆಯ ಹಿಂದೆ ನಡೆದಾಡುತ್ತಿರುತ್ತದೆ. ತೋಳುಗಳಿಗಾದರೂ ತೊಡೆಯ ಗಾತ್ರವಿರುತ್ತೆ.

ತಲೆಗೂದಲನ್ನೂ ಮುಖವನ್ನೂ ಹೊಳಪಿಸುತ್ತಾ ವಿಮಲಾದೇವಿ ಸ್ನಾನದ ಕೋಣೆಗೆ ಹೋದಳು. ಪದ್ಧತಿಯಂತೆ ಸೇವಕನು ಎರಡು ಕಪ್ ಕಾಫಿಯೊಂದಿಗೆ ಬಂದನು.

ಅವನು ಒಂದು ಕಪ್ಪನ್ನು ಕುಮಾರ್‌ರವರ ಮೇಜಿನ ಮೇಲೆ ಭವ್ಯತೆಯಿಂದ ತಂದಿಟ್ಟನು. ಅವರು ಅವನನ್ನು ನೋಡಿ ಕೃತಜ್ಞತೆಯಿಂದ ಮುಗುಳ್ನಕ್ಕರು. ಮತ್ತೊಂದು ಕಪ್ ಕಾಫಿಯೊಂದಿಗೆ ಅವನು ವಿಮಲಾದೇವಿಯ ಕೋಣೆಯ ಹೊರಗೆ ಆಕೆಯನ್ನು ಕಾದು ನಿಂತನು. ಆಕೆ ಸ್ನಾನದ ಕೋಣೆಯಿಂದ ಬಾಗಿಲನ್ನು ತೆರೆದುಕೊಂಡು ಹೊರಕ್ಕೆ ಬರುವ ವೇಳೆಗೆ ಸೇವಕನನ್ನು ಕಾಫಿಯೊಂದಿಗೆ ಹೊರಗೆ ನೋಡಬೇಕು. ಇಲ್ಲದಿದ್ದರೆ ವಿಮಲಾದೇವಿಗೆ ಹುಚ್ಚು ಹಿಡಿದಂತಾಗುತ್ತದೆ.

ವಿಮಲಾದೇವಿ ಬಾಗಿಲು ತೆರೆದು ಹೊರಕ್ಕೆ ಬಂದು ಕಾಫಿಯನ್ನು ತೆಗೆದುಕೊಂಡು ಕುಡಿಯಲಾರಂಭಿಸಿದಳು. ಪರಿಚಾರಕನು ಓಡಿಹೋಗಿ ಅಂದಿನ ದಿನಪತ್ರಿಕೆಯೊಂದಿಗೆ ಬಂದನು. ವಿಮಲಾದೇವಿ ಪತ್ರಿಕೆಯನ್ನು ತೆಗೆದುಕೊಂಡು ಕಾಫಿ ಕುಡಿದ ಕಪ್ಪನ್ನು ವಾಪಸ್ ಅವನ ಕೈಯಲ್ಲಿ ಕೊಟ್ಟು ರೂಮಿನ ಬಾಗಿಲು ಹಾಕಿಕೊಂಡಳು.

ಇನ್ನು ಆಕೆ ಪಟ್ಟಾಗಿ ಕುಳಿತುಬಿಡುವಳು. ಆಕೆ ಸಮಾಧಾನದಿಂದ ಕುಳಿತುಕೊಳ್ಳುವುದು ಈ ಹೊತ್ತಿನಲ್ಲಿ ಮಾತ್ರವೇ. ಆ ದೇವರಿಗೆ ಸಾವಿರ ನಮಸ್ಕಾರಗಳು.

ಕುಮಾರ್ ನೈಟ್‌ಗೌನ್ ಬದಲಾಯಿಸಿ ಜುಬ್ಬಾ ಪೈಜಾಮ ಧರಿಸಿದರು. ತೋಟದಲ್ಲಿ ಸ್ವಲ್ಪ ಹೊತ್ತು ಅಡ್ಡಾಡಿದರು. ಅಂದು ವಿಶೇಷವಾಗಿ ಧಾರಾಳ ಹೂಗಳು ಅರಳಿದ್ದುವು. ಗಿಡಗಳನ್ನು ಹೂಗಳನ್ನೂ ಮೃದುವಾಗಿ ಸವರುತ್ತಾ ಅವರು ಹೊರಕ್ಕಿಳಿದರು.

ಡಿ. ಕುಮಾರ್ ನಿತ್ಯವೂ ಬೆಳಿಗ್ಗೆ ದೇವಸ್ಥಾನಕ್ಕೆ ಹೋಗುವರು. ಅವರು ದೊಡ್ಡ ದೈವಭಕ್ತರು. ಯಾವುದಾದರೂ ಒಂದು ದಿನ ದೇವಸ್ಥಾನಕ್ಕೆ ಹೋಗಲು ಸಾಧ್ಯವಾಗದಿದ್ದರೆ ಆ ದಿವಸವೆಲ್ಲಾ ಅವರು ಅಸ್ವಸ್ಥರಂತಿರುತ್ತಿದ್ದರು. ಮುಟ್ಟಿದ್ದಕ್ಕೆ ಮೂಸಿದ್ದಕ್ಕೆಲ್ಲಾ ಕೋಪಿಸಿಕೊಳ್ಳುತ್ತಿದ್ದರು. ಅವತ್ತು ಡಿಪಾರ್ಟ್‌ಮೆಂಟ್‌ನಲ್ಲಿ ಒಂದು

ದೊಡ್ಡ ಗಲಾಟೆಯೇ ಆಗಿರುತ್ತಿತ್ತು. ವಿದ್ಯಾರ್ಥಿಗಳನ್ನು ಅಂದು ಬಯ್ಯುತ್ತಲೇ ಇರುತ್ತಿದ್ದರು.

ದೇವಸ್ಥಾನದಲ್ಲಿ ಅಂದು ದೊಡ್ಡ ಗಲಭೆ ಏನಿರಲಿಲ್ಲ. ಅದೊಂದು ದೇವಿಯ ದೇವಸ್ಥಾನವು. ದೇವಸ್ಥಾನದ ತೊಲೆಗಳ ಮೇಲೆ ಕೋತಿಗಳು ನೆಗೆದಾಡುತ್ತಿದ್ದವು. ಕುಮಾರ್‌ರನ್ನು ಕಂಡಾಗ ಅವು ಆಲದ ಮರದ ಬಿಳಲುಗಳನ್ನು ಹಿಡಿದು ಇಳಿದು ಕಟ್ಟೆಯ ಮೇಲಕ್ಕೆ ಇಳಿದುಬಂದವು. ಕೋತಿಗಳಿಗೆ ಕುಮಾರ್‌ರು ಚಿರಪರಿಚಿತರು. ನೆಲಗಡಲೆ ಪೊಟ್ಟಣವನ್ನು, ತೆಂಗಿನಕಾಯಿಯ ಚೂರನ್ನೂ ಬೆಲ್ಲವನ್ನು ಅವರು ಆಲದ ಮರದ ಕಟ್ಟೆಯ ಮೇಲೆ ಇಟ್ಟರು. ಕೈಯಲ್ಲಿ ಸಿಕ್ಕಿದವುಗಳೊಂದಿಗೆ ಆ ಕೋತಿಗಳು ಆಲದ ಮರದ ಮೇಲಕ್ಕೆ ಹಾರಿ ಹತ್ತಿಹೋದವು. ಸ್ವಲ್ಪಹೊತ್ತು ಅವರು ಕಪಿಗಳನ್ನು ನೋಡುತ್ತಾ ನಿಂತರು. ಅವುಗಳು ನೆಲಗಡಲೆ ಸಿಪ್ಪೆಗಳನ್ನು ಕುಮಾರ್‌ರ ಮೇಲೆ ಬೀಸಿ ಒಗೆದವು.

ದೇವಸ್ಥಾನದಲ್ಲಿನ ಘಂಟೆಗಳು ನಿಶ್ಶಬ್ದವಾಗಿ ನೇತಾಡುತ್ತಿದ್ದವು. ಕುಮಾರ್ ದೇವಸ್ಥಾನದ ಘಂಟೆಯನ್ನು ಮೃದುವಾಗಿ ಒಮ್ಮೆ ತಟ್ಟಿದರು. ತಕ್ಷಣ ನಿಶ್ಶಬ್ದತೆಯನ್ನು ಭೇದಿಸುತ್ತಾ ಘಂಟೆಯು ಮೊಳಗಿತು.

"ತಾಯೇ! ಭಗವತಿಯೇ! ಕಾಪಾಡು" ಕುಮಾರ್‌ರವರು ಪ್ರಾರ್ಥಿಸಿದರು.

ಪರಿಚಿತ ದಾರಿಗಳ ಮೂಲಕ ಹಿಂದಿರುಗುವಾಗ ಕುಮಾರ್ ಆಲೋಚಿಸಿದರು.

ವಿಮಲಾದೇವಿ ಅವರೊಂದಿಗೆ ಬಂದಿರಲಿಲ್ಲ. ಮೊದಲೆಲ್ಲಾ ದೇವಸ್ಥಾನಕ್ಕೆ ವಿಮಲಾದೇವಿಯೂ ಜೊತೆಯಲ್ಲಿ ಬರುತ್ತಿದ್ದಳು. ನಾಲ್ಕೈದು ವರ್ಷಗಳು ಅದು ಕ್ರಮ ತಪ್ಪದೆ ನಡೆಯಿತು. ಅನಂತರ ಆಕೆ ದೇವಸ್ಥಾನಕ್ಕೆ ಬರುವಾಗಲೆಲ್ಲಾ ಭಗವತಿಗೆ ತನ್ನ ಇಂಗಿತ ತಿಳಿಸಿ ಬೇಡುವಳು. ಬೇಡಿಕೆ ಕೋರಿಕೆಯಾಗಿ ಬದಲಾಯಿತು.

"ಭಗವತಿ, ನನ್ನ ಕೈಬಿಟ್ಟೆಯಾ?" ಎಂದು ಆಕೆ ಪ್ರತಿದಿನವೂ ಕೇಳುವುದು ರೂಢಿಯಾಗಿ ಹೋಯಿತು.

ಏನೇ ಆದರೂ ಭಗವತಿ ವಿಮಲಾದೇವಿಯನ್ನು ಕಟಾಕ್ಷಿಸಲಿಲ್ಲ. ಜಯ ತೋರಲಿಲ್ಲ.

ಬರಡಾದ ಗರ್ಭಕೋಶವನ್ನು ಹೊತ್ತು ವಿಮಲಾದೇವಿಯು ಈಗಲೂ ಓಡಾಡುತ್ತಿದ್ದಳು. ವರ್ಷಗಳಿಂದ ನಡೆಸಿಕೊಂಡು ಬಂದ ಪ್ರಾರ್ಥನೆಯು ಆಕೆಯ ಮಟ್ಟಿಗೆ ವ್ಯರ್ಥ ಕಾಲಕ್ಷೇಪವೆನಿಸಿಕೊಂಡಿತು. ಪ್ರಾರ್ಥನೆಯಲ್ಲೂ ದೇವರಲ್ಲೂ ಆಕೆಗಿದ್ದ ನಂಬಿಕೆಯು ಅಸ್ತಮಿಸಿಹೋಯಿತು.

ಡಾಕ್ಟರ್ ಕುಮಾರ್ ನೆನೆದರು.

ಗರ್ಭಕೋಶವು ಇಂದಿನ ಒಂದು ವಿಷಯವು. ಸ್ತ್ರೀಯ ಕೆಳಹೊಟ್ಟೆಯಲ್ಲಿ ಲಂಗರು ಹಾಕಿರುವ ಗರ್ಭಕೋಶವು ಕಿವಿಗೊಟ್ಟು ಕೇಳುವ ಸುಮಾರು ತಲೆಗಳು ಕುಮಾರ್‌ರ ಎದುರಿಗೆ ಸ್ಪಷ್ಟವಾಗಿ ಕಂಡುಬಂದವು.

ಗೊಂದಲ ಕಡಿಮೆಯಾದ ಫುಟ್‌ಪಾತ್‌ನ ಮೇಲೆ ಕುಮಾರ್ ನಡೆದರು. ಹೂವು ಪ್ರಸಾದದೊಂದಿಗೆ ಭಕ್ತರು ಮಧ್ಯೆ ಮಧ್ಯೆ ಪ್ರತ್ಯಕ್ಷರಾಗುತ್ತಿದ್ದರು.

ಕುಮಾರ್ ಗೇಟು ದಾಟುವಾಗ ವಿಮಲಾದೇವಿ ಗುಲಾಬಿ ಗಿಡಗಳನ್ನು

ಕತ್ತರಿಸುತ್ತಲೂ ಅವುಗಳನ್ನು ಸವರುತ್ತಲೂ ಶುಶ್ರೂಷೆ ಮಾಡುತ್ತಿದ್ದರು. ಈ ತೋಟವೂ ಇದರಲ್ಲಿನ ಹೂಗಳೂ ವಿಮಲಾದೇವಿಯವರ ಸಂತಾನಗಳು. ಕುಮಾರ್ ತಿಳಿಯದೆ ವಿಮಲಾದೇವಿಯ ಕೆಳಹೊಟ್ಟೆಯನ್ನು ನೋಡಿಬಿಟ್ಟರು. ಹೌದು ಅದೇ ಗರ್ಭಕೋಶವು.

ಹೊತ್ತು ಬಹಳವಾದಂತೆ ತೋರಿತು. ಡಾಕ್ಟರ್ ಕುಮಾರ್ ಅವಸರವಸರವಾಗಿ ಸಿದ್ಧವಾಗತೊಡಗಿದರು. ಎರಡು ಕ್ಲಾಸುಗಳಲ್ಲಿ ಪಾಠ ಮಾಡಬೇಕಾದ ದಿವಸವು. ಅವರು ಬಹಳ ಅಸ್ವಸ್ಥರಾಗಿದ್ದರು. ಭಗವತಿಗೂ ಸಹ ಆ ದಿನ ಅವರನ್ನು ಸ್ವಸ್ಥರನ್ನಾಗಿ ಮಾಡಲು ಸಾಧ್ಯವಾಗಿರಲಿಲ್ಲ.

ಟೈ ಕಟ್ಟಿದಾಗ ಅದರ ಉದ್ದವು ಜಾಸ್ತಿಯಾಗಿ ಹೋಯಿತು. ಕೋಟ್‌ನ ಬಟನ್ ತಲೆಕೆಳಗಾಗಿ ಹೋಯಿತು. ಷರಟಿನ ಗುಂಡಿಗಳು ಸರಿಯಾಗಿ ಹಾಕಿಕೊಳ್ಳಲಾಗಲಿಲ್ಲ.

ಸ್ವಲ್ಪ ನಿಂಬೆಯ ನೀರು ಕುಡಿದ ನಂತರ ಕುಮಾರ್ ಗ್ಯಾರೇಜ್‌ಗೆ ಹೊರಟರು. ಕಾರು ಒಂದು ನವವಧುವಿನಂತೆ ಅವರನ್ನು ಕಾದಿತ್ತು. ಡೋರ್ ತೆರೆದಾಗ ಗಂಧದ ಬತ್ತಿಯ ವಾಸನೆ. ದೇವಿಯ ಫೋಟೋವನ್ನು ಒಂದು ನಿಮಿಷ ನೋಡಿದರು. ದೇವಿ ನಗುತ್ತಿದ್ದಳು. ಕುಮಾರ್ ಕೂಡ ನಕ್ಕರು.

ದೇವಿಯನ್ನು ನೆನೆಸಿಕೊಳ್ಳುತ್ತಾ ಕುಮಾರ್ ಕಾರ್ ಡ್ರೈವ್ ಮಾಡತೊಡಗಿದರು.

ಕಾರ್‌ಪಾರ್ಕ್ ಮಾಡಿದ ನಂತರ ಅವರು ನೇರವಾಗಿ ಕ್ಲಾಸ್‌ರೂಮ್ ಸೇರಿದರು. ಅಲ್ಲಿಯವರೆಗೆ ಶಬ್ದಮಯವಾಗಿದ್ದ ಆ ಕ್ಲಾಸ್‌ರೂಮ್ ತಕ್ಷಣ ನಿಶ್ಯಬ್ದವಾಯಿತು. ರೂಢಿಯಂತೆ ಅವರ ಷೂಸ್‌ನ ಶಬ್ದವು ಕೋಣೆಯಲ್ಲಿ ಪ್ರತಿಧ್ವನಿಸಿತು.

"ಪ್ರಿಯ ಡಾಕ್ಟರ್‌ಗಳೇ, ಮನುಷ್ಯನ ಬಹು ಚೈತನ್ಯವುಳ್ಳ ಒಂದು ಪ್ರದೇಶವನ್ನು ಕುರಿತು ನಾನು ಇಂದು ಮಾತನಾಡುತ್ತಿದ್ದೇನೆ. ಮನಸ್ಸು, ಚಿಂತೆ ಎಂದೆಲ್ಲಾ ಹೇಳುವುದು ಏನು ? ಮತ್ತಾವುದೂ ಅಲ್ಲ, ಮನುಷ್ಯನ ಮೆದುಳು. ಇಗೋ, ಈ ಗಾಜಿನ ಜಾಡಿಯಲ್ಲಿ ವಿಶ್ರಮಿಸುತ್ತಿರುವ ಈ ಬ್ರೈನ್ ನಿರ್ಜೀವವಾದದ್ದೆಂದು ನೀವು ಭಾವಿಸುತ್ತೀರಾ ?"

ಬ್ರೈನ್ ಜೋಪಾನ ಮಾಡಿದ್ದ ಜಾಡಿಯ ಕಡೆ ಬೆರಳು ಮಾಡಿ ತೋರಿಸುತ್ತಾ ಡಾಕ್ಟರ್ ಕುಮಾರ್ ಮುಂದುವರೆಸಿದರು.

"ಇದು ಸತ್ತಿಲ್ಲ, ಸಾಯುವುದೂ ಇಲ್ಲ."

ವಿದ್ಯಾರ್ಥಿಗಳು ನಕ್ಕರು.

"ನಗಬೇಡಿ, ವಿಷಯಗಳನ್ನು ಎದುರಿಗೆ ಹೇಳುವಾಗ ನಗುವುದೆಂಬುದು ಸಾಮಾನ್ಯ ಮನುಷ್ಯರ ಕೆಲಸ. ಆದರೆ ನೀವೇನೂ ಸಾಮಾನ್ಯ ಮನುಷ್ಯರಲ್ಲ. ಸಾಮಾನ್ಯರಾದವರಲ್ಲಿ ಅಸಾಧಾರಣ ವ್ಯಕ್ತಿಗಳು. ನೀವೆಲ್ಲಾ ಡಾಕ್ಟರಾಗಲಿರುವವರು.

"ನಾನು ಹೇಳಿಕೊಡುತ್ತಿರುವ ವಿಷಯಗಳನ್ನು ನೀವು ಭವಿಷ್ಯದಲ್ಲಿ ನೆನೆದರೂ ನೆನೆಯದಿದ್ದರೂ ಸರಿ, ಒಂದು ವಿಷಯವನ್ನು ನಾನು ನಿಶ್ಚಯವಾಗಿ ಹೇಳುತ್ತೇನೆ. ಜೀವನವೆಂಬುದು ದ್ರವ್ಯವೂ ಅಳತೆಕಲ್ಲೂ ಇರುವ ಒಂದು ತಕ್ಕಡಿಯು. ಈ ತಕ್ಕಡಿಯ ಸೂಜಿಯೇ ಜೀವವು. ಒಂದು ಕಡೆಯಿಂದ ಒಂದನ್ನು ಬದಲಾಯಿಸಿದರೆ ತಕ್ಕಡಿಯು ತಲೆಕೆಳಗಾದಂತೆಯೇ ಅದೇ ಮರಣವು."

ಡಾಕ್ಟರ್ ಕುಮಾರ್ ಪಾಠವನ್ನು ಹೇಳಿಕೊಡುವಾಗ ಯಾವಾಗಲೂ ವಿಷಯ ಬಿಟ್ಟು ಮಾತನಾಡುತ್ತಾರೆ. ಜೀವನ, ಮರಣ, ಇವೆರಡೂ ಅವರ ಪ್ರಿಯವಾದ ವಿಷಯಗಳು.

ಕ್ಲಾಸ್ ಮುಗಿದಾಗ ವಿದ್ಯಾರ್ಥಿಗಳು ಡಿಸೆಕ್ಷನ್ ಹಾಲನ್ನು ಪ್ರವೇಶಿಸಿದರು. ಎಲ್ಲಾ ಟೇಬಲ್‌ಗಳ ಮೇಲೂ ಎರಡೆರಡು ತಲೆಗಳೊಂದಿಗೆ ವಿದ್ಯಾರ್ಥಿಗಳು ನಿಂತಿದ್ದರು.

ದೇವದಾಸ್‌ನೂ ಲಕ್ಷ್ಮಿಯೂ ತಮಗೆ ಸಿಕ್ಕಿದ ತಲೆಯನ್ನು ನೋಡುತ್ತಾ ನಿಂತಿದ್ದರು.

ಟ್ಯೂಟರ್‌ಗಳೂ ಲೆಕ್ಚರರ್‌ಗಳೂ ವಿದ್ಯಾರ್ಥಿಗಳ ಸಂದೇಹಗಳನ್ನು ಪರಿಹರಿಸಲೋಸುಗ ಟೇಬಲ್‌ಗಳ ಮಧ್ಯದಿಂದ ನಡೆದಾಡುತ್ತಿದ್ದರು. ಟ್ಯೂಟರ್‌ನ ಮೇಜಿನ ಮೇಲೆ ಬ್ರೈನ್‌ನ ಹಲವು ರೀತಿಯಲ್ಲಿರುವ ಭೇದಗಳನ್ನು ಸಾಲಾಗಿಟ್ಟಿದ್ದಾರೆ. ಟ್ಯೂಟರ್ ಬ್ರಹ್ಮಸ್ವರೂಪ ಅದರ ಮೇಲೆ ಕಣ್ಣುನೆಟ್ಟು ಕುಳಿತಿದ್ದಾನೆ.

ಆತನು ಎಲ್ಲರಿಗಾಗಿ ಒಂದು ಜನರಲ್ ಕ್ಲಾಸ್ ತೆಗೆದುಕೊಳ್ಳಲು ಆರಂಭಿಸಿದನು.

ತನ್ನ ಕಣ್ಣುಗುಡ್ಡೆಗಳನ್ನು ಅರಳಿಸಿ ಡಾಕ್ಟರ್ ಬ್ರಹ್ಮಸ್ವರೂಪ್ ಬ್ರೈನ್ ಅನ್ನು ಕುರಿತು ಹೇಳತೊಡಗಿದನು. ಆತನು ಒಂದೊಂದು ವಾಕ್ಯವನ್ನು ಪೂರ್ತಿ ಮಾಡುವ ಹೊತ್ತಿಗೆ ಒಂದು ಕಾಲುವೆಯಂತೆ ಬೆವರು ಹಣೆಯಲ್ಲಿ ಉದುರುತ್ತದೆ. ಕೈ ಬೆರಳುಗಳಿಂದ ಅವನು ಅದನ್ನು ಒರೆಸಿ ತೆಗೆದು ಚಿಟಿಕೆ ಹಾಕಿ ಬಿಸಾಡಿದನು. ಪಕ್ಕದಲ್ಲಿರುವ ವಿದ್ಯಾರ್ಥಿಗಳ ಮೇಲೆ ಆ ಬೆವರಹನಿಗಳು ಸಿಡಿದು ಬಿದ್ದವು. ನಿಮಿಷಗಳು ಕಳೆಯುವ ವೇಳೆಗೆ ಆತನು ಆಯಾಸಪಡತೊಡಗಿದನು. ಆತನ ವಸ್ತ್ರಗಳು ಬೆವರಿನಲ್ಲಿ ಮಿಂದು ಒದ್ದೆಯಾದವು. ಒಂದು ಓಟದ ಪಂದ್ಯದಲ್ಲೆಂಬಂತೆ ಆತನು ಕ್ಲಾಸಿನಲ್ಲಿ ವರ್ತಿಸುತ್ತಿದ್ದನು.

ಒಬ್ಬೊಬ್ಬ ಅಧ್ಯಾಪಕರೂ ಕ್ಲಾಸ್‌ನಲ್ಲಿ ಒಂದೊಂದು ರೀತಿಯಲ್ಲಿ ಪಾಠ ಹೇಳಿಕೊಡುತ್ತಾರೆ. ಕೆಲವರು ಮೆಲ್ಲಗೆ ಧ್ವನಿಯನ್ನಿಳಿಸಿ ಒಂದು ಮಂತ್ರ ಜಪಿಸುವಂತೆ ವಾಕ್ಯಗಳನ್ನುಚ್ಚರಿಸುತ್ತಾರೆ. ಕೆಲವರು ಯಾರಿಗೋಸ್ಕರವೋ ಹೇಳುವಂತೆ ಎಲ್ಲಾ ಧಡಧಡ ಹೇಳಿ ಮುಗಿಸುತ್ತಾರೆ. ಕೆಲವರು ಮುಂಚೆಯೇ ಸಿದ್ಧವಾಗಿ ಬರದೆ ಕ್ಲಾಸ್‌ನಲ್ಲಿ ಬಂದ ಮೇಲೆ ಆ ಕ್ಷಣದಲ್ಲಿ ತಮಗೆ ತೋಚಿದ್ದನ್ನು ಜೋರಾಗಿ ಹೇಳಿ ಮುಗಿಸುತ್ತಾರೆ. ಇನ್ನು ಕೆಲವರು ಕಷ್ಟಪಟ್ಟು ಓದಿ ಪಾಠಗಳಿಗೆ ಸಿದ್ಧರಾಗಿ ಬಂದು, ನಿಧಾನವಾಗಿ ಕ್ಲಾಸ್ ಅನ್ನು ಪ್ರವೇಶಿಸಿ ಪಾಠ ಹೇಳಿ, ಮಧ್ಯೆ ಮಧ್ಯೆ ಸ್ಟೇಜಿನಿಂದ ಇಳಿದು ಬಂದು ಸಂದೇಹಗಳನ್ನು ತೀರಿಸಿಕೊಟ್ಟು, ಹಾಗೇ ಅಧ್ಯಯನದ ಆನಂದವೆಂಬ ನದಿಯಲ್ಲಿ ಮಿಂದು ಸ್ನಾನ ಮುಗಿಸುತ್ತಾರೆ.

ಹಾಲ್‌ನಲ್ಲಿ ಇದ್ದಕ್ಕಿದ್ದಂತೆ ಸುತ್ತಿಗೆಯ ಹಾಗೂ ಉಳಿಯ ಶಬ್ದ ಕೇಳಿ ಬರತೊಡಗಿತು. ಅಟೆಂಡರ್‌ಗಳೂ, ಶವವನ್ನು ಜೋಪಾನವಾಗಿಡುವವರೂ ಬ್ರೈನ್ ಒಡೆಯಲು ವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತಿದ್ದರು.

ಬ್ರೈನ್ ಸೀಳುವುದರಲ್ಲಿ ಸೋನನು ಒಳ್ಳೆಯ ತಜ್ಞ. ಎಲ್ಲಾ ಮೇಜಿನವರಿಗೂ ಸೋನನ ಸೇವೆ ಅತ್ಯಗತ್ಯ. ನಾಲ್ಕು ಕಡೆಗಳಿಂದಲೂ ವಿದ್ಯಾರ್ಥಿಗಳು ಸೋನನನ್ನೂ ಎಡೆಬಿಡದೆ ಕರೆಯುತ್ತಿದ್ದರು.

ಸೋನನು ಒಂದು ಕತ್ತಿಯನ್ನೂ ಸುತ್ತಿಗೆಯನ್ನೂ ಕೈಯಲ್ಲಿ ಹಿಡಿದು ದೇವದಾಸ್‌ನ ಮೇಜಿನ ಬಳಿ ಬಂದನು. ಬ್ರೈನ್ ಮೇಜಿನ ಮೇಲಿಟ್ಟು ಒಮ್ಮೆ ಉರುಳಿಸಿದ ನಂತರ ಎರಡು ಕೈಗಳಿಂದ ಅದನ್ನೆತ್ತಿ ಅದರ ಭಾರವನ್ನೇ ನೋಡಿದನು. ಅನಂತರ ಕರೆಯಿಂದ ಒಂದು ಪ್ರತ್ಯೇಕವಾದ ಸ್ಥಳದಲ್ಲಿ ಕುಯ್ಯಲು ಪ್ರಾರಂಭಿಸಿದನು. ಮೂಳೆಯ ಹಳದಿ ಪುಡಿಯು ಸ್ಟೀಲ್‌ಟೇಬಲ್ ಮೇಲೆ ಚೆದುರಿ ಬಿತ್ತು. ಗರಗಸದಿಂದ ಮಾಡಿದ ಸಣ್ಣ ಸೀಳುಗಳಲ್ಲಿ ಉಳಿಯನ್ನಿಟ್ಟು ಜೋರಾಗಿ ಹೊಡೆಯಲು ಪ್ರಾರಂಭಿಸಿದನು. ಮೂರು ನಾಲ್ಕು ಏಟು ಹೊಡೆದಿರಬೇಕು. ಬ್ರೈನ್ ಸೀಳಿದಾಗ ಒಳಗೆ ಮೆದುಳು ಕಂಡುಬಂತು. ತೆಂಗಿನಕಾಯಿ ಒಡೆಯುವಂತೆ ಸೋನ ಬ್ರೈನ್‌ಗಳನ್ನು ಹೊಡೆದು ಸೀಳುತ್ತಿದ್ದನು. ಎರಡು ಭಾಗಗಳಾಗಿ ಮೂಳೆಯನ್ನು ಬೇರ್ಪಡಿಸಿದಾಗ, ಆಗ ಜನಿಸಿದ ಮಗುವಿನಂತೆ ಬ್ರೈನ್ ಮೇಜಿನ ಮೇಲೆ ಬಿತ್ತು. ಎರಡು ಮೂರು ಸಲ ಮೇಜಿನ ಮೇಲೆ ಉರುಳಿದ ನಂತರ ಅದು ನಿಶ್ಚಲವಾಯಿತು.

ಮನುಷ್ಯನ ಮೆದುಳನ್ನು ಸ್ಥಾಯಿಯಾದ ರೂಪದಲ್ಲಿ ಅವರು ಕಾಣುತ್ತಿದ್ದರು. ಲಕ್ಷ್ಮಿ ತನ್ನ ಮೃದುವಾದ ಬೆರಳುಗಳಿಂದ ಅದನ್ನು ಸ್ಪರ್ಶಿಸಿದಳು. ಸ್ವರ್ಣಲಿಪಿಯಲ್ಲಿ ಬರೆದಿಡಬೇಕಾದ ಒಂದು ನಿಮಿಷವಾಗಿತ್ತದು. ಅಮೋಘವಾದ ಒಂದು ಬಾಳನ್ನು ನಡೆಸಿ ಮೃತನಾದ ಆ ದಿವಂಗತನ ಮೆದುಳನ್ನು ಮೊತ್ತಮೊದಲಿಗೆ ಜೀವಂತ ವ್ಯಕ್ತಿಯೊಬ್ಬನು ಸ್ಪರ್ಶಿಸಿದ್ದನು. ಯಥಾರ್ಥದಲ್ಲಿ 'ವರ್ಜಿನ್ ಟಚ್'. ಅದು ಜೀವಿಸಿದ್ದಾಗಿನ ಒಂದು ಸಂದರ್ಭವಾಗಿದ್ದರೆ ನಿಶ್ಚಯವಾಗಿಯೂ ಅವನು ಗರ್ಜಿಸುತ್ತಿದ್ದನು.

ದಿವಂಗತನು ತನಗೆ ಬುದ್ಧಿ ಬಂದಾಗಿನಿಂದ ಆರಂಭಿಸಿ ಎಷ್ಟು ಒಳ್ಳೆಯ ಕೆಲಸಗಳನ್ನು, ಕೆಟ್ಟಕೆಲಸಗಳನ್ನು, ಯಾವ ಯಾವ ವಿಷಯಗಳನ್ನು, ಅಸಂಬದ್ಧಗಳನ್ನೂ ಈ ಮೆದುಳಿನಿಂದ ಆಲೋಚಿಸಿರಬಹುದು.

"ಆರ್ ಯು ಡ್ರೀಮಿಂಗ್?"

ದೇವದಾಸ್‌ನ ಭುಜತಟ್ಟುತ್ತಾ ಬೃಹಸ್ಪರೂಪ್ ಕೇಳಿದನು.

"ಇಲ್ಲದಿದ್ದರೂ ನೀನೊಬ್ಬ ಮೂರ್ಖ. ಎ ವೆರಿ ಮೀಡಿಯೋಕರ್ ಸ್ಟೂಡೆಂಟ್. ಹೀಗೆಯೇ ಸ್ವಪ್ನ ಕಾಣುತ್ತಿದ್ದರೆ ಪರೀಕ್ಷೆಗಳು ನಿನ್ನನ್ನು ಬಿಟ್ಟು ಮುಂದೆ ಹೋಗುತ್ತವೆ. ಈ ಹುಡುಗಿಯೂ ಹೋಗುತ್ತಾಳೆ." ಲಕ್ಷ್ಮಿಯ ಕಡೆ ಬೆರಳು ಮಾಡಿ ತೋರಿಸುತ್ತಾ ಬೃಹಸ್ಪರೂಪ್ ಹೇಳಿದನು.

ಬೃಹಸ್ಪರೂಪನ ಮಾತುಗಳಲ್ಲಿ ಒಂದು ದುಸ್ಸಹವಾದ ಸೂಚನೆಯು ಮಿಶ್ರವಾಗಿತ್ತು. ದೇವದಾಸ್ ಒಮ್ಮೆ ಕಳವಳಗೊಂಡನು. ಬಹಳ ಶ್ರದ್ಧೆಯಿಂದ ಕಲಿಯಬೇಕಾದ ಈ ಸಮಯದಲ್ಲಿ ತಾನು ಸ್ವಪ್ನ ಕಾಣುತ್ತಿದ್ದುದು ತನ್ನ ತಪ್ಪು. ಅಪರಾಧ ಮಾಡಿದವನಂತೆ, ಏನು ಮಾಡಬೇಕೆಂದು ತಿಳಿಯದೆ ದೇವದಾಸ್ ಬ್ರೈನ್ ಅನ್ನು ಒಮ್ಮೆ ಸ್ಪರ್ಶಿಸಿದನು. ಮೃದುವಾದ ಆ ಮೆದುಳಿನ ಮೇಲೆ ದೇವದಾಸ್‌ನ ಗಡುಸಾದ ಕೈ ಬೆರಳಿನ ಗುರುತು ದಾಖಲೆಯಾಯಿತು.

"ಡೋಂಟ್ ಸ್ಪಾಯಿಲ್ ಇಟ್" ದೇವದಾಸ್‌ನನ್ನು ನೋಡಿ ಬೃಹಸ್ಪರೂಪ್ ಹೇಳಿದನು. "ಇಟ್ ಈಸ್ ಎ ಬೆಟರ್ ಬ್ರೈನ್ ದಾನ್ ಯುವರ್ಸ್."

ಸರಿಯೋ, ದೇವದಾಸ್‌ನು ಚಿಂತಿಸಿರುವುದಕ್ಕಿಂತ ಎಷ್ಟೋ ಬಾರಿ ಈ ಮನುಷ್ಯನು ಚಿಂತಿಸಿರಬೇಕು. ಈ ಮೆದುಳಿನ ಯಜಮಾನನು ಯಾರಾಗಿದ್ದಿರಬಹುದು? ಕಲಾವಿದನೋ, ಕಾವಲುಗಾರನೋ, ಕೊಲೆಪಾತಕಿಯೋ, ಪುರೋಹಿತನೋ, ಹುಚ್ಚನೋ? ಯಾರೇ ಆದರೂ ತಾನು ಜೀವಿಸಿದ್ದಷ್ಟು ದಿವಸ ಈ ದಿವಂಗತನು ಚಿಂತಿಸಿಯೇ ಇರಬೇಕು. ಅಲ್ಲದಿದ್ದರೆ ಇಷ್ಟು ಹೆಚ್ಚು ಸುಕ್ಕುಗಳೂ, ಮಡಿಕೆಗಳೂ ಈ ಮೆದುಳಿನಲ್ಲಿ ಬಂದಿರುತ್ತದೆಯೇ?

ಲಕ್ಷ್ಮಿಯೂ ಅದಕ್ಕೆ ಒಪ್ಪಿಕೊಂಡಳು.

ಡಾಕ್ಟರ್ ಹಸನ್ ಮರಣ ಹೊಂದಿದರು.

ಆ ಕಾಲೇಜಿನ ಅಂತರಿಕ್ಷದಲ್ಲಿ ಒಂದು ಬಾಂಬ್ ಬಿದ್ದಂತಾಯಿತು. ಕಾಲೇಜಿಗೆ ರಜೆ ಘೋಷಿಸಲಾಯಿತು.

ಮೆಡಿಕಲ್ ಕಾಲೇಜಿಗೆ ಜನ ತಂಡೋಪತಂಡವಾಗಿ ಬರಲಾರಂಭಿಸಿದರು. ಜನ ಪ್ರವಾಹ ನಿಲ್ಲಲೇ ಇಲ್ಲ.

ಮೃತದೇಹವನ್ನೇ ಸಾರ್ವಜನಿಕರ ದರ್ಶನಕ್ಕೆಂದು ಆಡಿಟೋರಿಯಂನಲ್ಲಿ ತಂದಿಟ್ಟಿದ್ದರು.

ಪುಷ್ಪಚಕ್ರಗಳನ್ನು, ರೀಟ್‌ಗಳನ್ನೂ, ಮೃತದೇಹಕ್ಕೆ ಸಮರ್ಪಿಸಲು ಗೊಂದಲವೋ ಗೊಂದಲ.

ಆಡಿಟೋರಿಯಂನಲ್ಲಿ ಸಂತಾಪಸೂಚಕ ಸಮ್ಮೇಳನವು ನಡೆಯುತ್ತಿತ್ತು. ಆಡಿಟೋರಿಯಂ ನಿಶ್ಶಬ್ದವಾಯಿತು.

ರಿಟೈರ್ಡ್ ಬ್ರಿಗೇಡಿಯರ್ ಆದ ಪ್ರಿನ್ಸಿಪಾಲ್ ಮೈಕ್‌ನ ಮುಂದೆ ಬಂದು ನಿಂತರು. ಕಣ್ಣೀರಿನಲ್ಲಿ ಮಿಂದ ಮಾತುಗಳನ್ನಾಡಿದರು. ಅನಂತರ ಹಲವಾರು ಜನ ಭಾಷಣ ಮಾಡಿದರು. ಡಾಕ್ಟರ್ ಹಸನ್‌ರ ನಿಸ್ವಾರ್ಥ ಸೇವೆಯನ್ನು ಎಲ್ಲರೂ ಹೊಗಳಿದರು. ಅವರ ಅಸೀಮಪಾಂಡಿತ್ಯ, ಉದ್ಯೋಗಕ್ಕೆ ಅವರ ಆತ್ಮಾರ್ಥತೆ, ಸಹಜೀವಿಗಳೊಂದಿಗಿನ ದಯೆ ಎಲ್ಲಾ ಪರಾಮರ್ಶಿಸಲ್ಪಟ್ಟಿತು.

ಒಂದು ಪ್ರಾಣಿಗೆ ಚುಚ್ಚಿ ಪರೀಕ್ಷಿಸಬೇಕಾದ ಔಷಧಿಯನ್ನು ತಾವೇ ಚುಚ್ಚಿಕೊಂಡು ಪರೀಕ್ಷೆ ನಡೆಸಲು ಸಿದ್ಧರಾಗಿ ಮೃತ್ಯುವನ್ನು ಆಲಂಗಿಸಿದ ಆ ಮಹಾಧ್ಯಾಪಕರ ಮೃತದೇಹದ ಎದುರಿಗೆ ಎಲ್ಲರೂ ಎದ್ದು ನಿಂತು ಮೌನ ಪ್ರಾರ್ಥನೆ ಸಲ್ಲಿಸಿದರು.

ಡಾಕ್ಟರ್ ಹಸನ್‌ರ ಮೃತದೇಹವನ್ನು ಸಂಸ್ಕರಿಸಲು ಸಾಧ್ಯವಾಗಲಿಲ್ಲ. ಅವರು ತಮ್ಮ ಶಿಷ್ಯರು ಚೆನ್ನಾಗಿ ಅನಾಟಮಿ ಕಲಿಯಲೆಂದು ತಮ್ಮ ದೇಹವನ್ನು ಮೆಡಿಕಲ್ ಕಾಲೇಜಿಗೆ ದಾನ ಮಾಡಿದ್ದರು.

# ಏಳು

ಆ ರಾತ್ರಿ ಬಹಳ ಚಳಿಯಿತ್ತು. ಹೊರಗೆ ಜೋರಾಗಿ ಗಾಳಿ ಬೀಸುತ್ತಿತ್ತು. ಮುಚ್ಚಿದ ಕಿಟಕಿ ಬಾಗಿಲುಗಳ ಸಂದಿಯ ಮೂಲಕ ಗಡಗಡ ನಡುಗಿಸುವ ತಂಗಾಳಿಯು ಶರವೇಗದಲ್ಲಿ ಕೋಣೆಯೊಳಕ್ಕೆ ನುಗ್ಗುತ್ತಿತ್ತು. ಕೋಣೆಯ ಸ್ನೇಹಿತನು ರಜಾಯಿಯನ್ನು ಹೊದೆದುಕೊಂಡು ಆನಂದದಿಂದ ನಿದ್ದೆ ಮಾಡುತ್ತಿದ್ದನು. ಮೇಜಿನ ಪಕ್ಕದ ಇಕ್ಕಟಾದ ಸ್ಥಳದಿಂದ ಚಳಿಯು ದೇವದಾಸ್‌ನ ಕಾಲಿನ ಕೆಳಕ್ಕೆ ತೆವಳಿ ಬಂದು ಏರತೊಡಗಿತು.

ಹೊರಗಡೆ ದಟ್ಟವಾದ ಮೌನ. ಗಾಳಿ ಬೀಸುತ್ತಿರುವ ಕಿರ್ ಎಂಬ ಶಬ್ದವಲ್ಲದೆ ಬೇರೆ ಯಾರ ಶಬ್ದ, ಕದಲಿಕೆ ಯಾವುದೂ ಇಲ್ಲ. ವಿದ್ಯಾರ್ಥಿಗಳೆಲ್ಲಾ ಫಾನಲ್ ಷರ್ಟು ಹಾಕಿಕೊಂಡು ಕಂಬಳಿಯನ್ನು ಹೊದ್ದು ಕೊಠಡಿಯೊಳಗೆ ಇದ್ದರು. ಬಹಳ ಆವಶ್ಯವಿದ್ದರೂ ಹೊರಗೆ ಹೋಗಲು ಹಿಂಜರಿಯುವಂತೆ ತಂಗಾಳಿ ಬೀಸುತ್ತಿತ್ತು. ಪರೀಕ್ಷೆಯ ಸಮಯವಾದ್ದರಿಂದ ಎಲ್ಲಾ ರೂಮುಗಳಲ್ಲೂ ದೀಪಗಳು ಉರಿಯುತ್ತಿದ್ದವು.

"ಜಾಗತೇ ರಹೋ...."

ಕಟ್ಟಡದ ಬಾಲ್ಕನಿಯಲ್ಲಿ ಚೌಕೀದಾರ್ ಕೂಗಿ ಹೇಳುತ್ತಿದ್ದನು. ಅದನ್ನು ಕೇಳಿದಾಗ ವಾತಾವರಣವು ಸಜೀವವಾದಂತೆನ್ನಿಸಿತು.

ಕಾಲೇಜಿನಿಂದ ಕೋಣೆಗೆ ಬರುವಷ್ಟರ ವೇಳೆಗೆ ಗಂಟೆ ಎಂಟು ಕಳೆದಿತ್ತು. ಹೊತ್ತಾಗಿ ಬಂದಿದ್ದಕ್ಕೆ ದೇವದಾಸ್‌ಗೆ ದುಃಖವೇ ಆಗಿರಲಿಲ್ಲ. ಅತಿ ಪವಿತ್ರವಾದ ಒಂದು ಕೆಲಸ ಮುಗಿಸಿ ಬಂದಿದ್ದರಿಂದಲೇ ಹೊತ್ತಾಗಿ ಹೋಗಿತ್ತು. ಡಾಕ್ಟರ್ ಹಸನ್‌ರ ಉಳಿದ ಭೌತಿಕ ಅವಶೇಷಗಳನ್ನು ಪೋಣಿಸಿ ಸರಿ ಮಾಡುವ ಕೆಲಸದಲ್ಲಿ ಈ ದಿನ ದೇವದಾಸ್‌ನೂ ಅವನು ಸ್ನೇಹಿತರೂ ಅತಿ ಶ್ರದ್ಧೆಯಿಂದ ತೊಡಗಿದ್ದರು.

ಡಾಕ್ಟರ್ ಹಸನ್‌ರ ದೇಹವು ಮೊದಲನೆಯ ವರ್ಷದ ವಿದ್ಯಾರ್ಥಿಗಳಿಗೆ ಸಿಕ್ಕಿತ್ತು. ಡಿಸೆಕ್ಷನ್ ಮುಗಿಯುವ ಹೊತ್ತಿಗೆ ಮೂರು ತಿಂಗಳು ಕಳೆದಿದ್ದವು. ಡಾಕ್ಟರ್ ಹಸನ್‌ರ ಶರೀರವನ್ನು ಕುಯ್ದು, ಕತ್ತರಿಸಿ ತುಂಡು ಮಾಡಿ ಅವರು ತಮ್ಮ ಭವಿಷ್ಯ ಜೀವನದ ಮೊದಲ ಅಧ್ಯಾಯವನ್ನು ಗಳಿಸಿದ್ದರು. ಮೂಳೆಗಳನ್ನು ಭದ್ರವಾಗಿ ಜೋಪಾನವಾಗಿಡ ಬೇಕೆಂದು ಪ್ರೊಫೆಸರ್ ಕುಮಾರ್ ಮುಂಚೆಯೇ ಹೇಳಿ ಅವರಿಗೆ ಅದನ್ನೇ ವಹಿಸಿದ್ದರು.

ಸೀನಿಯರ್ ವಿದ್ಯಾರ್ಥಿಗಳಾದ ದೇವದಾಸ್‌ನೂ ಮತ್ತು ಅವನ ಜೊತೆಗಾರರೂ ಸೇರಿ ಡಾಕ್ಟರ್ ಹಸನ್‌ರ ಮೂಳೆಗಳನ್ನೆಲ್ಲಾ ಶೇಖರಿಸಿ ಕುದಿಸಿ ಶುಭ್ರ ಮಾಡಿ ಪಾಲಿಶ್ ಮಾಡಿ ಅದರ ಸ್ಥಾಯಿಯಾದ ರೂಪದಲ್ಲಿ ಪೋಣಿಸಲ್ಪಟ್ಟರು. ಒಂದು ತಿಂಗಳ ಕಠಿಣ ಪರಿಶ್ರಮದಿಂದ ಎಲ್ಲ ಸರಿಯಾಗಿತ್ತು. ಡಾಕ್ಟರ್ ಹಸನ್‌ರ ಅಸ್ಥಿಪಂಜರವು

ಮನೋಹರವಾದ ಒಂದು ಗಾಜುಗೂಡಿನಲ್ಲಿ ಪ್ರೊಫೆಸರ್ ಕುಮಾರ್‌ರವರ ಕೋಣೆಯಲ್ಲಿ ನೇತಾಡುತ್ತಿತ್ತು. ಅದರಲ್ಲಿ ಒಂದು ಪುಟ್ಟ ಬೆರಳಿನ ಮೂಳೆ ಸಹ ಮುಕ್ಕಾಗಿರಲಿಲ್ಲ.

ಗಾಡಿನ ಗೂಡಿಗೆ ಬೀಗಹಾಕಿ ಬೀಗದ ಕೈಯನ್ನು ತಮ್ಮ ಪಾಕೆಟ್‌ನಲ್ಲಿಟ್ಟುಕೊಂಡು ನಂತರ ಜೋಡಿಸಿದ ಕೈಗಳೊಂದಿಗೆ ಪ್ರೊಫೆಸರ್ ಕುಮಾರ್ ಅದರ ಮುಂದೆಯೇ ನಿಂತುಕೊಂಡು ಕಣ್ಣುಮುಚ್ಚಿದರು. ಯಾವುದೋ ವೇದದ ಮಂತ್ರವನ್ನು ಬಹಳ ಹೊತ್ತು ಉಚ್ಚರಿಸುತ್ತಿರುವಂತೆ ಅವರು ನಿಂತಿದ್ದರು. ಪ್ರಾರ್ಥನೆ ಮುಗಿದ ನಂತರ ಅವರ ಕಣ್ಣುಗಳಲ್ಲಿನ ಕೆಂಪಾದ ರಕ್ತನಾಳಗಳು ಸ್ಪಷ್ಟವಾಗಿ ಕಾಣುತ್ತಿದ್ದುವು. ಅವರು ಹೇಳಿದರು.

"ಮುದ್ದು ಮಕ್ಕಳೇ, ನೀವು ಇಂದು ಮಾಡಿದ್ದು ಒಂದು ಸತ್ಕರ್ಮವು. ಡಾಕ್ಟರ್ ಹಸನ್ ಇನ್ನು ಎಂದೆಂದಿಗೂ ನಮ್ಮೊಂದಿಗೇ ಇರುತ್ತಾರೆ. ಅವರ ಆತ್ಮವು ಸ್ವರ್ಗದಲ್ಲಿದ್ದು ನಮ್ಮ ಈ ಆಟ ತಮಾಷೆಗಳನ್ನು ನೋಡುತ್ತಿರಬಹುದು."

ದೇವದಾಸನೂ ಅವನ ಜೊತೆಗಾರರು ಹನಿಗೂಡಿದ ಕಣ್ಣುಗಳೊಂದಿಗೆ ಹೊರಕ್ಕಿಳಿದರು.

ದೇವದಾಸ್ ಅಸ್ವಸ್ಥನಾಗಿದ್ದನು. ಪರೀಕ್ಷೆಗೆ ಕೇವಲ ಬೆರಳೆಣಿಸುವಷ್ಟು ದಿನಗಳು ಮಿಕ್ಕಿದ್ದವಷ್ಟೆ. ಓದಿ ಮುಗಿಸಬೇಕಾದ ವಿಷಯಗಳು ಪರ್ವತದಂತೆ ಮುಂದೆ ಬಿದ್ದಿದ್ದವು. ಅದನ್ನು ಹತ್ತಿ ಇಳಿಯಬೇಕಾದರೆ ಅದರ ತಪ್ಪಲಿನಿಂದಲೇ ಪ್ರಾರಂಭಿಸ ಬೇಕು.

ಯಾವ ಶಕ್ತಿಯು ತನ್ನನ್ನು ಮೆಡಿಕಲ್ ಕಾಲೇಜಿಗೆ ಕರೆದುಕೊಂಡು ಬಂದು ಸೇರಿಸಿದ್ದೆಂದು ದೇವದಾಸ್ ಬಹಳ ಸಲ ಆಲೋಚಿಸಿದ್ದುಂಟು. ಏನೇ ಆದರೂ ಅದಕ್ಕೆ ತನ್ನೊಂದಿಗೆ ದಯೆಯೋ ಪ್ರೀತಿಯೋ ಇರುವ ಶಕ್ತಿಯಂತೆ ತೋರುವುದಿಲ್ಲ.

ದಿನವೂ ಬೆಳಿಗ್ಗೆ ಎಂಟು ಗಂಟೆಗೆ ಕ್ಲಾಸ್ ಪ್ರಾರಂಭವಾಗುತ್ತಿತ್ತು. ಅದು ಮಧ್ಯಾಹ್ನ ಒಂದು ಗಂಟೆಯವರೆಗೂ ನಡೆಯುತ್ತಿತ್ತು. ಯಾರಾದರೂ ಅಧ್ಯಾಪಕರು, ಯಾವತ್ತಾದರೂ ಬರದಿದ್ದರೆ ಅಂದು ಸಹ ಬಿಡುವಿರುತ್ತಿರಲಿಲ್ಲ. ಆ ಹೊತ್ತಿಗೆ ಬೇರೊಬ್ಬ ಅಧ್ಯಾಪಕರು ಒಂದು ಪಾಠ ತೆಗೆದುಕೊಂಡು ಬಿಡುತ್ತಿದ್ದರು. ವಿಶ್ರಾಂತಿಯೋ ಬಿಡುವೋ ಏನೆಂದು ಅಲ್ಲಿ ಗೊತ್ತಾಗುವುದಿಲ್ಲ. ಒಂದು ಗಂಟೆಗೆ ಕೆಲವೊಮ್ಮೆ ಕ್ಲಾಸ್ ಬಿಟ್ಟರು ಎಂದಂತಾಗುವುದಿಲ್ಲ. ಕೆಲ ಅಧ್ಯಾಪಕರು ಒಂದು ಗಂಟೆಯಾದರೂ ಇನ್ನು ಭದ್ರವಾಗಿ ನಿಂತು ಪಾಠ ಮಾಡುತ್ತಲೇ ಇರುತ್ತಾರೆ. ಮತ್ತೆಯೂ ಕ್ಲಾಸ್ ಮುಂದುವರೆಯುತ್ತದೆ. ಯಾವನಾದರೂ ಹೊತ್ತಾಯಿತು ಎಂದು ಹೇಳಿಬಿಟ್ಟನೋ ಮುಗಿಯಿತು. ಜೀವನಪರ್ಯಂತ ಅವನು ಆ ಕ್ಲಾಸಿನಲ್ಲೇ ಕುಳಿತಿರಬೇಕಾಗುತ್ತದೆ.

ಮಧ್ಯಾಹ್ನದ ಊಟ ಗಬಗಬ ಮಾಡಿ ಮತ್ತೆ ಕಾಲೇಜಿಗೆ ಬಂದರೆ ಬಹುಮಟ್ಟಿಗೆ ಎಲ್ಲಾ ದಿನವೂ ಲ್ಯಾಬೊರೇಟರಿಯ ಕೆಲಸವಿರುತ್ತಿತ್ತು. ಐದು ಗಂಟೆಯವರೆಗೆ ಇಕ್ಕಟ್ಟಾದ ಲ್ಯಾಬೊರೇಟರಿಯಲ್ಲಿ ಉಸಿರುಹಿಡಿದು ಕುಳಿತಿರಬೇಕು. ಕಣ್ಣು ಮನಸ್ಸುಗಳು ಓದಿ ಓದಿ ಚಿಂತಿಸಿ ಚಿಂತಿಸಿ ಕ್ಷಯಿಸಿ ಹೋಗುತ್ತವೆ. ಅಕಸ್ಮಾತ್ತಾಗಿ

ಒಂದು ತಪ್ಪೇನಾದರೂ ಆಗಿಬಿಟ್ಟರೆ ಬೈಗಳ ಸುರಿಮಳೆಯೇ ಆಗಿರುತ್ತೆ. ಮರಳಿ ಕೋಣೆಗೆ ಬರುವ ವೇಳೆಗೆ ಸಮಯವು ಸಂಜೆಯಾಗಿರುತ್ತೆ. ಪ್ರಾಕ್ಟಿಕಲ್ ರೆಕಾರ್ಡ್‌ಗಳನ್ನು ಬರೆದಿಡಬೇಕು. ಪುಸ್ತಕವನ್ನು ನೋಡುವ ವೇಳೆಗೆ ಕಣ್ಣುಗಳಲ್ಲಿ ನಿದ್ದೆ ಆವರಿಸಿಕೊಂಡುಬಿಡುತ್ತದೆ.

ದಿನವೂ ಪರೀಕ್ಷೆಗಳೂ ಇರುತ್ತಿದ್ದುವು. ಬಹುಮಟ್ಟಿಗೆ ಮೌಖಿಕ ಪರೀಕ್ಷೆಯೇ ಇರುತ್ತದೆ. ಮಧ್ಯೆ ಅನಿರೀಕ್ಷಿತವಾಗಿ ಬರಹದ ಪರೀಕ್ಷೆಯೂ ಇರುತ್ತದೆ. ಅಧ್ಯಾಪಕರು ಸರಿಯಾಗಿ ತಯಾರಾಗಿ ಬಾರದಿದ್ದಲ್ಲಿ ಅಂದು ಒಂದು ಪುಟ್ಟ ಪರೀಕ್ಷೆಯಾಗಿರುತ್ತಷ್ಟೆ.

ವ್ಯಾಕುಲತೆಯುಳ್ಳವರಿಗಾದರೋ ಪ್ರಭಾತದಿಂದ ಹಿಡಿದು ಪ್ರಭಾತದವರೆಗೂ ಕೆಲಸವೇ ಇರುತ್ತದೆ. ಒಂದು ಸಿನೆಮಾ ನೋಡಲೋ, ಒಂದು ಪುಸ್ತಕ ಓದಲೋ, ಏನನ್ನಾದರೋ ಕಿವಿಗೊಟ್ಟು ಕೇಳಲೋ ಅನುಕೂಲವಿರುವುದಿಲ್ಲ. ಜೀವನದ ವಸಂತ ಕಾಲವೆಲ್ಲಾ ಸ್ತಬ್ಧವಾಗಿ ನಿಂತ ಶಿಲೆಯಂತೆ ಮಾರ್ಪಟ್ಟಿತು.

ದೇವದಾಸ್ ಸ್ಟೌ ಆನ್ ಮಾಡಿ ಅದರ ಮೇಲೆ ಕೆಟಲ್ ಇಟ್ಟನು. ಒಂದು ಟೀ ಮಾಡಿ ಕುಡಿದರೆ ಚಳಿಯು ಬಿಡುತ್ತೆ. ನಿದ್ದೆಯು ದೂರವಾಗಿ ನಿಲ್ಲುತ್ತದೆ.

ಟೀ ಕುಡಿದ ನಂತರ ಕೋಣೆಯಲ್ಲಿ ಒಂದಿಷ್ಟು ಅಡ್ಡಾಡಿದನು. ಬಾಗಿಲು ತೆರೆದು ಹೊರಕ್ಕಿಳಿದು ವರಾಂಡದ ಕೊನೆಯಲ್ಲಿರುವ ಬಾತ್‌ರೂಮಿಗೆ ಹೋಗಿ ಬರುವ ಹೊತ್ತಿಗೆ ಅವನಿಗೆ ಮಂಜು ಕರಗಿದ ನೀರಿನಲ್ಲಿ ಈಜಾಡಿದಂತಾಯಿತು. ಅವನ ಅಂಗೈ ಮತ್ತು ಕಿವಿಗಳು ಮರಗಟ್ಟಿದುವು.

ಕೈಗಳನ್ನು ಉಜ್ಜಿ ಬಿಸಿ ಮಾಡಿಕೊಂಡು ಪುಸ್ತಕವನ್ನು ಸರಿಯಾಗಿಟ್ಟುಕೊಂಡು ಓದಲು ಪ್ರಾರಂಭಿಸಿದನು. ಹತ್ತು ನಿಮಿಷ ಸಹ ಆಗಿರಲಿಲ್ಲ. ಅವನ ಮುಖ ಪುಸ್ತಕ ಮೇಲೆ ಭಾರವಾಗಿ ಬಿದ್ದಿತು.

ಐದು ಗಂಟೆಗೆ ಅಲಾರಂ ಇಟ್ಟನಂತರ ದೇವದಾಸ್ ರಜಾಯಿಯೊಳಕ್ಕೆ ನುಗ್ಗಿ ಮಲಗಿದನು. ದೀಪವನ್ನು ಆರಿಸಲಿಲ್ಲ.

ದಿವಸಗಳು ಓಡಿ ಓಡಿ ಮರೆಯಾಗುತ್ತಿದ್ದುವು.

ಪರೀಕ್ಷೆ ಬಂದೇ ಬಿಟ್ಟಿತು.

ಐವತ್ತೈದು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತಿದ್ದರು. ಕಳೆದ ಬಾರಿ ಪರೀಕ್ಷೆಯಲ್ಲಿ ಶೇಕಡ ನಲವತ್ತುಜನ ಪಾಸಾಗಿದ್ದರು. ಈಸಲ ಅದಕ್ಕಿಂತಲೂ ಕಡಿಮೆಯಿರ ಬಹುದೆಂದು ಡಿಪಾರ್ಟ್‌ಮೆಂಟಿನಲ್ಲಿ ಮಾತನಾಡುತ್ತಿದ್ದರು.

ಅನಾಟಮಿಯ ಪ್ರಾಕ್ಟಿಕಲ್ ಪರೀಕ್ಷೆಯೂ ವೈವಾವೋಸಿ ಆರಂಭವಾಗಲಿತ್ತು. ಕೊನೆಯ ಘಳಿಗೆಯ ಸಿದ್ಧತೆಗೆಂದು ವಿದ್ಯಾರ್ಥಿಗಳು ಹಾಲ್‌ನ ಹೊರಗೆ ಉದ್ವೇಗದಿಂದ ಬೇಯುತ್ತಾ ನಿಂತಿದ್ದಾರೆ.

ಹೊತ್ತಾಯಿತೆಂದು ಗಂಟೆ ಹೊಡೆದಾಯಿತು.

ಹಸ್ತಕ್ಕೆ ಅರಿವನ್ನೂ ರಕ್ತವನ್ನೂ ಕೊಡುವ ನರಮಂಡಲದ ಕಕ್ಷದಲ್ಲಿರುವ ಉದ್ಭವ ಸ್ಥಾನವನ್ನು ಡಿಸೆಕ್ಟ್ ಮಾಡಲು ಪರೀಕ್ಷಕನು ದೇವದಾಸ್‌ನನ್ನು ನಿಯೋಜಿಸಿದನು.

ಎರಡು ಗಂಟೆಯ ಸಮಯವಿತ್ತು.

ಚಾಕುವನ್ನು ಕತ್ತರಿಗಳನ್ನು ಹೊರಕ್ಕೆ ತೆಗೆಯುವಾಗ ದೇವದಾಸ್‌ನ ಕೈಗಳು

ನಡುಗಿದವು. ಸ್ವಲ್ಪ ನಿಮಿಷಗಳ ನಂತರ ಅವನ ಹೃದಯ ಬಡಿತವು ಅಡಗಿತು. ಅದರೊಂದಿಗೇ ಅವನ ಬೆರಳುಗಳು ಅವನ ನಿಯಂತ್ರಣಕ್ಕೆ ಬಂದವು.

ಒಂದು ಗಂಟೆಯ ಕಾಲ ಕಳೆದ ನಂತರ ಬಹಳ ಅನಾಹುತಗಳೇನೂ ನಡೆಯದೆ ಕೆಲಸ ಸಾಧಿಸಲು ಸಾಧ್ಯವೆಂದು ದೇವದಾಸ್‌ಗೆ ಅರಿವಾಯಿತು. ಒಂದು ನರವೋ ನಾಡಿಯೋ ಕತ್ತರಿಸಿಹೋದರೆ ಸಾಕು ಒಂದು ವರ್ಷ ಹೋದಂತೆಯೇ.

ದೇವದಾಸ್ ತಲೆಯನ್ನೆತ್ತಿ ಲಕ್ಷ್ಮಿ ಎಲ್ಲಿದ್ದಾಳೆಂದು ಹುಡುಕಾಡಿದನು. ಅಗೋ ಏಳನೆಯ ಮೇಜಿನ ಬಳಿ ಲಕ್ಷ್ಮಿಯು ತಲೆಬುರುಡೆಯನ್ನು ಹಿಡಿದುಕೊಂಡು ದೇವದಾಸನನ್ನೇ ನೋಡುತ್ತಿದ್ದಾಳೆ.

ಅವರಿಬ್ಬರೂ ನಕ್ಕರು.

ಲಕ್ಷ್ಮಿಯು ವಿಜಯದ ಹಾದಿಯನ್ನು ಕಂಡು ಹಿಡಿದಿರಬೇಕು. ಅಲ್ಲದಿದ್ದರೆ ಅವಳೆಂದಿಗೂ ನಗುವುದಿಲ್ಲ.

ಕಿಂಗ್ ಜಾರ್ಜ್ ಮೆಡಿಕಲ್ ಕಾಲೇಜಿನ ಅನಾಟಮಿಯ ಮುಖ್ಯಸ್ಥರಾದ ಡಾ. ಚೌಧುರಿ ಎಕ್ಸಾಮಿನರ್ ಆಗಿದ್ದರು. ಅವರು ಬಹಳ ಒಳ್ಳೆಯ ಮನುಷ್ಯರಾಗಿದ್ದರು. ವಿದ್ಯಾರ್ಥಿಗಳನ್ನು ಪ್ರೀತಿಸುವ ಅಧ್ಯಾಪಕರಾಗಿದ್ದರು. ಅಷ್ಟೇ ಅಲ್ಲ, ಪ್ರೊಫೆಸರ್ ಕುಮಾರ್‌ರವರ ಶಿಷ್ಯರೂ ಆಗಿದ್ದರು.

ಬಹಳಷ್ಟು ವಿದ್ಯಾರ್ಥಿಗಳ ಡಿಸೆಕ್ಷನ್ ಮುಗಿದ ನಂತರ ಪ್ರೊಫೆಸರ್ ಚೌಧುರಿಯೂ, ಡಾ ಕುಮಾರ್‌ರೂ ಡಿಸೆಕ್ಷನ್ ಹಾಲ್‌ಗೆ ಬಂದರು. ಹಾಲ್‌ನಲ್ಲಿ ಪರಿಪೂರ್ಣವಾದ ಮೌನ ನೆಲೆಸಿತ್ತು.

ಚೌಧುರಿ ಆರಡಿ ಎತ್ತರ, ಅದಕ್ಕೆ ತಕ್ಕ ಶರೀರ ಇರುವ ಆಜಾನುಬಾಹುವಾಗಿದ್ದನು. ಕುಮಾರ್‌ದೊಂದಿಗೆ ನಡೆಯುವಾಗ ಆನೆಯೂ ಆನೆ ಮರಿಯೂ ನಡೆದು ಹೋಗುತ್ತಿರುವಂತೆ ತೋರುತ್ತಿತ್ತು. ಡಾ. ಕುಮಾರ್ ಚೌಧುರಿಯೊಂದಿಗೆ ಮಾತನಾಡುವಾಗ ತಲೆಯನ್ನು ಚೆನ್ನಾಗಿ ಎತ್ತಿ ಹಿಡಿದು ಮಾತನಾಡುತ್ತಿದ್ದರು.

ಮೊದಲನೆಯ ಟೇಬಲ್ ಬಳಿಯಿದ್ದ ವಿದ್ಯಾರ್ಥಿಯ ಬಳಿಗೆ ಅವರು ಮೊದಲು ಬಂದರು. ಚೌಧುರಿಯು ನಡುಗುತ್ತಾ ನಿಂತಿರುವ ವಿದ್ಯಾರ್ಥಿಯ ಭುಜದ ಮೇಲೆ ಕೈ ಇಟ್ಟು ಪ್ರಶ್ನೆಗಳನ್ನು ಕೇಳತೊಡಗಿದರು. ಅಬ್ಬಾ ಎಷ್ಟು ಒಳ್ಳೆಯ ಪರೀಕ್ಷಕರು ?

ನಾಲ್ಕನೆಯ ಟೇಬಲ್‌ನಲ್ಲಿ ಷಮೀಂ ಅಹಮ್ಮದ್ ನಿಂತಿದ್ದನು. ಷಮೀಂ ಅಹಮ್ಮದ್‌ಗೆ ತೊದಲು ಮಾತು ಇತ್ತು. ಚೌಧುರಿಯ ಪ್ರಶ್ನೆಗಳನ್ನು ಕೇಳಿದರೆ ಷಮೀಮನ ಗದ್ದದ ಮೂಳೆಗಳು ಒಂದಕ್ಕೊಂದು ಹೊಡೆದುಕೊಂಡವಲ್ಲದೆ ಮಾತುಗಳು ಹೊರಕ್ಕೆ ಬರಲೇ ಇಲ್ಲ. ಅಯ್ಯೋ ಪಾಪ! ಅವನಿಗೆ ಗಾಬರಿ ಹೆಚ್ಚಿದಾಗ ತೊದಲು ಮಾತು ಸಹ ಹೊರಕ್ಕೆ ಬರಲಿಲ್ಲ. ಇನ್ನೂ ಸ್ವಲ್ಪ ಹೊತ್ತು ಅಲ್ಲಿ ನಿಂತರೆ ಅವನ ಗದ್ದದ ಮೂಳೆಗಳು ಒಡೆದು ಹೋಗುವುದೆಂದು ಭಾವಿಸಿಯೋ ಏನೋ ಡಾ. ಚೌಧುರಿಯು ಮುಂದಿನ ಟೇಬಲ್‌ನತ್ತ ನಡೆದರು. ಅಲ್ಲಿ ಮದನ್ ಇದ್ದನು. ಎಂತಹ ವಿರೋಧಾಭಾಸವಪ್ಪಾ! ಷಮೀಮ್‌ಗಿಂತ ಮದನ್‌ಗೆ ಹೆಚ್ಚು ತೊದಲುತ್ತಿತ್ತು.

ಪ್ರೊಫೆಸರ್ ಚೌಧುರಿ ಏನೋ ಕೇಳಿದಾಗ ಮದನ್ ಮೊದಲಿಗಿಂತ ಹೆಚ್ಚಾಗಿ

ಬಿಕ್ಕಲು ಆರಂಭಿಸಿದನು.

"ಏ ಧರ್ಮೇಂದ್ರ" ಪ್ರೊಫೆಸರ್ ಚೌಧುರಿ ಡಿ. ಕುಮಾರ್‌ರನ್ನು ಹಾಗೇ ಕರೆಯುತ್ತಿದ್ದದ್ದು. ಡಿ. ಕುಮಾರ್‌ರವರ ಪೂರ್ಣ ಹೆಸರು ಧರ್ಮೇಂದ್ರ ಕುಮಾರ್ ಎಂದಾಗಿತ್ತು.

"ನೀವು ಇಲ್ಲಿ ಒಂದೇ ಜಾತಿಯ ಮೃಗಗಳನ್ನು ಸಾಕುತ್ತಿದ್ದಿರೇನು ?"

ಡಿ. ಕುಮಾರ್ ಓಡಿ ಬಂದವರೇ ನಕ್ಕರು. ಚೌಧುರಿ ಸಹ ನಕ್ಕರು. ಬಿಕ್ಕುತ್ತಿದ್ದವರೂ ನಕ್ಕರು. ಇಬ್ಬರು ಬಿಕ್ಕಳಿಕೆವುಳ್ಳವರೂ ಕಾಪಾಡಲ್ಪಟ್ಟಿದ್ದಾರೆ. ಡಾ. ಚೌಧುರಿಯು ಬಹು ದಯೆಯುಳ್ಳ ಮನುಷ್ಯರಾಗಿದ್ದರು.

ಪ್ರೊಫೆಸರ್ ಚೌಧುರಿ ಇದ್ದಕ್ಕಿದ್ದಂತೆ ದೇವದಾಸ್‌ನ ಬಳಿ ಬಂದರು. ಅವರು ಬಂದು ಕ್ರಮವಾಗಿ ಪರೀಕ್ಷೆ ಮಾಡುವುದಿಲ್ಲ. ತಮಗೆ ತೋಚಿದಂತೆ ಮಾಡುತ್ತಿದ್ದರು. ಒಂದು ಸಲ ಬಲಪಕ್ಕಕ್ಕೆ ಹೋಗುತ್ತಾರೆ. ಮತ್ತೆ ಹಿಂದಕ್ಕೆ ಹೋಗುತ್ತಾರೆ. ಪ್ರೊಫೆಸರ್ ಚೌಧುರಿ ಒಬ್ಬ ಕಲಾವಿದರೂ ಆಗಿದ್ದರು. ದೇವದಾಸ್‌ನನ್ನು ಎರಡು ಮೂರು ಪ್ರಶ್ನೆಗಳು ಕೇಳಿದರು. ದೇವದಾಸ್ ಮೂರ್ಖನಂತೆ ಉತ್ತರಿಸದಿದ್ದರೂ, ಅವನು ನೀಡಿದ ಉತ್ತರಗಳು ಅವರಿಗೆ ತೃಪ್ತಿಕರವಾಗಿರಲಿಲ್ಲ.

"ಬಾ"

ಪ್ರೊಫೆಸರ್ ಚೌಧುರಿ ದೇವದಾಸ್‌ನನ್ನು ಸ್ಪೆಸಿಮನ್ (ಮಾದರಿ) ಇಟ್ಟ ಕೋಣೆಗೆ ಕರೆದುಕೊಂಡು ಹೋದರು. ಅಲ್ಲಿ ಒಂದು ಸ್ಟೇಷನರಿ ಅಂಗಡಿಯಲ್ಲಿರುವಂತೆ ಅಷ್ಟು ಹೆಚ್ಚು ವಿವಿಧ ಬಗೆಗಳಿದ್ದುವು. ಅನೇಕ ಮೂಳೆಗಳು ಅಲ್ಲಿನ ಬಹು ಜಾಡಿಗಳಲ್ಲಿ. ದೇಹದ ಅವಯವಗಳೂ, ಡಿಸೆಕ್ಟ್ ಮಾಡಿದ ಸರ್ವವನ್ನೂ ಪ್ರದರ್ಶಿಸಿದ ಒಂದು ಸಂಪೂರ್ಣವಾಗಿದ್ದ ಹೆಣವೂ ಇದ್ದವು.

ಪ್ರೊಫೆಸರ್ ಚೌಧುರಿ ಒಂದು ಎಕ್ಸ್‌ರೇಯನ್ನು ದೇವದಾಸ್‌ಗೆ ತೋರಿಸಿದರು. ಎದೆಗೂಡಿನ ಒಂದು ಫೋಟೋ.

ದೇವದಾಸ್‌ಗೆ ಒಂದಾದರೂ ತೃಪ್ತಿಕರವಾದ ಉತ್ತರವನ್ನು ಕೊಡಲು ಸಾಧ್ಯವಾಗಲಿಲ್ಲ.

"ಏನು ಹೆಸರು ?" ಚೌಧುರಿ ಕೇಳಿದರು.

"ದೇವದಾಸ್" ಅವನು ಉತ್ತರ ಕೊಟ್ಟನು.

"ವೆರಿಗುಡ್ ಅಂಡ್ ಕರೆಕ್ಟ್ ಆನ್ಸರ್" ಪ್ರೊಫೆಸರ್ ಚೌಧುರಿ ನಗುತ್ತಾ ಹೇಳಿದರು. "ಒಂದು ಪ್ರಶ್ನೆಗಾದರೂ ಸರಿಯಾದ ಉತ್ತರ ಹೇಳಿದೆಯಲ್ಲಾ ?"

ಈ ಪರೀಕ್ಷೆಯಲ್ಲಿ ತಾನು ಖಂಡಿತ ಪಾಸ್ ಆಗುವುದಿಲ್ಲವೆಂದು ದೇವದಾಸ್‌ಗೆ ತಿಳಿದುಬಂತು.

"ವಾಟ್ ಈಸ್ ಯುವರ್ ರೋಲ್ ನಂಬರ್ ?" ಪ್ರೊಫೆಸರ್ ಚೌಧುರಿ ಕೇಳಿದರು.

"ಥರ್ಟೀನ್"

"ಥರ್ಟೀನ್ ?" ಚೌಧುರಿಯು ಚಕಿತರಾದವರಂತೆ ಒಂದು ನಿಮಿಷ ಯೋಚಿಸುತ್ತಿದ್ದು ಅನಂತರ ಹೇಳಿದರು.

"ಈಸ್ ಇಟ್ ಎ ಲಕ್ಕೀ ನಂಬರ್?"

ದೇವದಾಸ್‌ಗೆ ಎಲ್ಲಿಂದಲೋ ಒಂದು ಧೈರ್ಯ ದೊರಕಿತು.

"ಸಾರ್, ಆಫ್ ಕೋರ್ಸ್, ಇಟ್ ಈಸ್ ಎನ್ ಅನ್‌ಲಕ್ಕೀ ನಂಬರ್. ಬಟ್ ನೌ ಇಟ್ ಈಸ್ ಅಪ್ ಟು ಯು."

"ಹೌ ?" ಪ್ರೊಫೆಸರ್ ಚೌಧುರಿ ಕೇಳಿದರು.

"ಯು ಕೆನ್ ಮೇಕ್ ಇಟ್ ಲಕ್ಕಿ ಆರ್ ಅನ್‌ಲಕ್ಕಿ."

ಪ್ರೊಫೆಸರ್ ಚೌಧುರಿ ದೇವದಾಸ್‌ನ ಬೆನ್ನಿನ ಮೇಲೆ ತಟ್ಟುತ್ತಾ ನಕ್ಕು ಹೇಳಿದರು.

"ಯು ಕೆನ್ ಗೋ"

ಪರೀಕ್ಷೆಯ ಫಲಿತಾಂಶ ಬಂದಾಗ ಐವತ್ತೈದು ವಿದ್ಯಾರ್ಥಿಗಳಲ್ಲಿ ಹತ್ತೊಂಭತ್ತು ವಿದ್ಯಾರ್ಥಿಗಳು ಮಾತ್ರ ಪಾಸಾಗಿದ್ದರು. ಅವರಲ್ಲಿ ದೇವದಾಸ್ ಸಹ ಇದ್ದನು. ಲಕ್ಷ್ಮಿಯೂ ಇದ್ದಳು.

ಅತ್ಯಂತ ಪ್ರಿಯರೆನಿಸಿದ್ದ ಡಾಕ್ಟರ್ ಕುಮಾರ್‌ರನ್ನು ಬಿಟ್ಟು ಅವರು ಹೋಗಬೇಕಾಗಿತ್ತು. ಅನಾಟಮಿ ಮತ್ತು ಫಿಸಿಯಾಲಜಿಯೊಂದಿಗಿನ ಯುದ್ಧವು ಮುಗಿಯಿತು. ನಾಳೆಯಿಂದ ಕ್ಲಿನಿಕಲ್ ಕ್ಲಾಸುಗಳು ಆರಂಭವಾಗುತ್ತವೆ. ಸ್ಟೆತೋಸ್ಕೋಪ್‌ನ ಮರ್ಮರ ಶಬ್ದವನ್ನೇ ಅವರು ಕೇಳಲಿದ್ದಾರೆ. ರೋಗಿಗಳೂ, ನರ್ಸ್‌ಗಳೂ, ದೀನರೋದನಗಳೂ ಇರುವ ಒಂದು ಲೋಕವನ್ನು ಅವರು ಕಾದಿದ್ದಾರೆ.

ಪರೀಕ್ಷೆ ಪಾಸಾದರೆ ಪ್ರೊಫೆಸರ್‌ರೊಂದಿಗೂ, ಅಧ್ಯಾಪಕರೊಂದಿಗೂ ವಿದಾಯ ಹೇಳಿ ಅವರ ಆಶೀರ್ವಾದ ಪಡೆಯುವುದು ಒಂದು ರೂಢಿಯು. ಹಾಗೆ ದೇವದಾಸ್‌ನೂ ಲಕ್ಷ್ಮಿಯೂ ಡಾಕ್ಟರ್ ಕುಮಾರ್‌ರನ್ನು ಕಾಣಲು ಹೋದರು.

ಮೆರೂನ್ ಬಣ್ಣದಲ್ಲಿರುವ ಒಂದು ಉಲ್ಲನ್ ಸೂಟ್ ಧರಿಸಿ ಡಾಕ್ಟರ್ ಕುಮಾರ್ ಕುಳಿತಿದ್ದರು. ರೂಂ ಹೀಟರ್ ಉರಿಯುತ್ತಿತ್ತು. ದೇವದಾಸ್‌ನನ್ನು ಲಕ್ಷ್ಮಿಯನ್ನೂ ನೋಡಿದರು. ಒಂದು ನಿಮಿಷ ಅವರು ತಲೆ ಎತ್ತಿ ನೋಡಿದ ನಂತರ ಮತ್ತೆಯೂ ಪುಸ್ತಕದಲ್ಲಿ ಕಣ್ಣು ನೆಟ್ಟರು.

ದೇವದಾಸ್ ಪ್ರೀತಿಯಿಂದಲೂ ಗೌರವದಿಂದಲೂ ಪ್ರೊಫೆಸರ್ ಕುಮಾರ್‌ರನ್ನು ನೋಡುತ್ತಲಿದ್ದನು. ಇನ್ನು ಎಂದಿಗೂ ಅವರನ್ನು ಕಾಣಲಾಗುವುದಿಲ್ಲ. ಅವರು ಬಹುವಾಗಿ ಕ್ಷೀಣಿಸಿರುವಂತೆ ತೋರುತ್ತಿದೆ. ಕಣ್ಣಿನ ಕೆಳಗೆ ಬಾತಿದೆ. ಹಿಂದಿನ ದಿನ ರಾತ್ರಿ ನಿದ್ದೆಯಿಲ್ಲದೆ ಓದಿರಬೇಕು. ನರೆತ ತೆಳುವಾದ ತಲೆಗೂದಲನ್ನು ಬ್ರಿಲ್‌ಕ್ರೀಂ ಹಚ್ಚಿ ನುಣ್ಣಗೆ ಬಾಚಿದ್ದರು. ಮಧ್ಯೆ ಮಧ್ಯೆ ಕಪ್ಪಗಿನ ಕೂದಲೆಳೆಗಳು ಪ್ರಕಾಶಮಾನವಾಗಿ ಹೊಳೆಯುತ್ತಿದ್ದುವು.

ಪ್ರೊಫೆಸರ್ ಕುಮಾರ್ ತಲೆಯೆತ್ತದೆ ರೋಲಿಂಗ್ ಚೇರ್‌ನಲ್ಲಿ ಒಮ್ಮೆ ತಿರುಗಿ ಅವರನ್ನು ನೆಟ್ಟ ದೃಷ್ಟಿಯಿಂದ ನೋಡಿದರು. ಪ್ರೊಫೆಸರ್‌ರ ಮುಖದಲ್ಲಿ ಏನೋ ಒಂದು ತೇಜಸ್ಸು ಆಟವಾಡುತ್ತಿತ್ತು. ತಮ್ಮ ವಿದ್ಯಾರ್ಥಿಗಳನ್ನು ತಂದೆಯಂತೆ ಪ್ರೀತಿಸುವ ಅಧ್ಯಾಪಕರಲ್ಲವೇ ಅವರು ?

ಕುಮಾರ್ ಕೇಳಿದರು

"ಹುಂ, ಏನು ಡಾಕ್ಟರ್ಸ್ ?"

"ನಾವು ಪಾಸಾದೆವು ಸಾರ್."

ದೇವದಾಸ್‌ಗೂ ಲಕ್ಷ್ಮಿಯೂ ಒಟ್ಟಿಗೆ ಹೇಳಿದರು. ಆ ಮಾತುಗಳು ಸಂಗೀತ ಹಾಡಿದಂತೆ ಇದ್ದವು. ಲಕ್ಷ್ಮಿಯನ್ನು ನೋಡಿ ಅವರು ಹೇಳಿದರು.

"ನೀನು ಪಾಸಾದದ್ದು ನನಗರ್ಥವಾಯಿತು. ವಾಟ್ ಎಬೌಟ್ ದಿ ಅದರ್ ಡಾಕ್ಟರ್ ?"

"ನಾನೂ ಪಾಸಾದೆ ಸರ್."

ದೇವದಾಸ್‌ನ ಉತ್ತರ ತಕ್ಷಣ ಬಂದಿತು. ನಿರೀಕ್ಷಿಸದ ವಿಜಯವು ಅವನನ್ನು ಉನ್ಮತ್ತನನ್ನಾಗಿ ಮಾಡಿತ್ತು.

ಕುಮಾರ್ ಹೇಳಿದರು.

"ವಂಡರ್‌ಫುಲ್ ಡಾಕ್ಟರ್. ನೀವು ಪಾಸಾಗುವಿರೆಂದು ನಾನು ಅಂದುಕೊಂಡೇ ಇರಲಿಲ್ಲ. ನನಗೆ ಅದನ್ನು ಈಗಲೂ ನಂಬಲು ಸಾಧ್ಯವಾಗುತ್ತಿಲ್ಲ." ಹಾಗಿದ್ದೂ ಕುಮಾರ್ ನಿಸ್ಸಂದೇಹದಿಂದೆಂಬಂತೆ ಮಾತನಾಡಿದರು.

ಆಗ ಯಾರೋ ಕರೆದಂತೆ ಅವರಿಗೆ ಕೇಳಿಸಿತು.

"ಹೇ! ಧರ್ಮೇಂದ್ರ..."

ಇವರಿಬ್ಬರೂ ಕುಮಾರ್‌ರ ಮುಂದೆ ಭಕ್ತಿಯಿಂದ ಪೂಜ್ಯಭಾವದಿಂದ ಹೃತ್ಪೂರ್ವಕ ಪ್ರೀತಿಯಿಂದ ಕೈಜೋಡಿಸಿ ನಮಸ್ಕರಿಸುತ್ತಾ ನಿಂತರು.

ಪ್ರೊಫೆಸರ್ ಕುಮಾರ್‌ರ ತುಟಿಗಳು ಮೆಲ್ಲನೆ ಚಲಿಸತೊಡಗಿದವು. ಅವರು ಕೋಣೆಯಲ್ಲಿನ ಬಲಭಾಗದ ಮೂಲೆಯಲ್ಲಿಟ್ಟಿದ್ದ ಗಾಜಿನ ಗೂಡಿನತ್ತ ನೋಡಿದರು. ಅಲ್ಲಿ ಮತ್ತೊಬ್ಬ ಮಹಾನ್ ವ್ಯಕ್ತಿ ಭೌತಿಕಾವಶೇಷಗಳೊಡನೆ ನೇತಾಡುತ್ತಾ ಇದ್ದಾರೆ.

"ನಮಸ್ಕರಿಸಬೇಕಾದ್ದು ನನಗಲ್ಲ. ಆಗೋ ಅಲ್ಲಿ ಹೋಗಿ. ಆ ಅಸ್ತಿಪಂಜರದ ಎದುರಿಗೆ ನಮಸ್ಕರಿಸಿ. ಜೀವನಪೂರ್ತಿ ತಮ್ಮ ವಿದ್ಯಾರ್ಥಿಗಳಿಗಾಗಿ ಲ್ಯಾಬೊರೇಟರಿಯಲ್ಲಿ ತಮ್ಮನ್ನು ತಾವೇ ಅರ್ಪಿಸಿಕೊಂಡ ಮಹಾನುಭಾವರಿಗೆ ನಮಸ್ಕರಿಸಿ. ಅವರ ಮುಂದೆ ನಾನು ಯಾವ ಸೀಮೆಯವನು ?"

ದೇವದಾಸನೂ ಲಕ್ಷ್ಮಿಯೂ ಗಾಜಿನ ಬೀರುವಿನ ಎದುರಿಗೆ ಕೈ ಮುಗಿದು ನಿಂತರು. ಅವರ ಹಿಂದೆ ಒಂದು ಕಾಲ ಹೆಜ್ಜೆ ಸಪ್ಪಳ ಕೇಳಿ ಬಂತು. ಹೌದು ಪ್ರೊಫೆಸರ್ ಕುಮಾರ್‌ರ ಹೆಜ್ಜೆ ಸಪ್ಪಳವಾಗಿತ್ತದು. ಅವರೂ ನಮಸ್ಕರಿಸುತ್ತಿದ್ದರು. ಅದೊಂದು ಸಾಮೂಹಿಕ ಪ್ರಾರ್ಥನೆಯಂತೆ ಇತ್ತು.

ದೇವದಾಸ್‌ನ ಕಣ್ಣುಗಳಲ್ಲಿ ಕಂಬನಿಯೊಸರುತ್ತಿತ್ತು.

ಅಸ್ಥಿಪಂಜರವು ಅಲ್ಲಾಡುವಂತೆ ತೋರಿತು. ಅದಕ್ಕೆ ಮಾಂಸವೂ, ರಕ್ತವೂ, ನೀರೂ, ನಾಡಿಗಳೂ, ನರಗಳೂ ಒಂದು ಸೇರುತ್ತಿರುವಂತಿತ್ತು. ಡಾಕ್ಟರ್ ಹಸನ್‌ರ ಕಣ್ಣುಗಳು ಅಲ್ಲಾಡುವಂತಿದ್ದವು. ಪರಿಹಾಸಪೂರ್ಣವಾದ ನಗುತುಟಿಗಳಲ್ಲಿ ಸ್ಪಷ್ಟವಾಗುತ್ತಿತ್ತು. ತಮಾಷೆ ಮಾಡುವ ಅವರ ಧ್ವನಿ ಕೇಳಿಬಂತು.

"ಕಿಸ್ ಜಂಗಲ್ ಸೆ ಆ ರಹೇ ಹೋ ಭಾಯಿ ತುಮ್?"

("ನೀನು ಯಾವ ಕಾಡಿನಿಂದ ಬರುತ್ತಿದ್ದೀಯೆ?")

ಡಾಕ್ಟರ್ ಹಸನ್‌ರ ಧ್ವನಿ ಕೋಣೆಯಲ್ಲೆಲ್ಲಾ ಮೊಳಗಿತು. ಆದರ ತರಂಗಗಳಲ್ಲಿ ದೇವದಾಸ್ ತೇಲಿ ಹೋದನು.

# ಎಂಟು

ಮೂರು ಕಡೆಗಳಲ್ಲೂ ಗಾಜು ಮಾತ್ರವಿರುವ ಡ್ಯೂಟಿ ರೂಮ್‌ನಲ್ಲಿ ನರ್ಸ್‌ಗಳೂ, ಹೌಸ್ ಸರ್ಜನ್‌ಗಳೂ ಅವಸರವಸರವಾಗಿ ಕೆಲಸ ಮಾಡುತ್ತಿದ್ದರು. ಮೇಟ್ರನ್ ಹೆಲೆನ್ ಸಿಂಗ್ ಆಕೆಯ ಅಸಿಸ್ಟೆಂಟ್ ವಾರ್ಡ್‌ನಲ್ಲಿ ರೌಂಡ್ ಹೋಗುತ್ತಿದ್ದರು. ಮೇಟ್ರನ್ ಹೆಲೆನ್ಸ್ ಸಿಂಗ್ ಒಳ್ಳೆಯ ರೂಪವತಿಯೂ, ಲವಲವಿಕೆಯುಳ್ಳ ಸ್ತ್ರೀಯೂ ಆಗಿದ್ದಳು. ಆಕೆಯ ವಯಸ್ಸು ಮುವ್ವತ್ತರ ಅಂಚಿನಲ್ಲಿತ್ತು. ಬಹು ಅಂದವಾಗಿದ್ದ ಆಕೆಯ ಕಣ್ಣುಗಳಲ್ಲಿ ಆಸ್ಪತ್ರೆಯೆಲ್ಲಾ ಪ್ರತಿಬಿಂಬಿಸುತ್ತಿತ್ತು. ತೆಳುವಾದ ಲಿಪ್‌ಸ್ಟಿಕ್ ಆಕೆಯ ತುಟಿಗಳಲ್ಲಿ ಒಂದು ಮಂದಹಾಸದಂತೆ ಅಡಗಿತ್ತು. ಆಕೆಯು ನಡೆದುಹೋಗುವಾಗ ದಾರಿಯಲ್ಲೆಲ್ಲಾ ಮಲ್ಲಿಗೆ ಹೂವಿನ ಸುವಾಸನೆ ಹರಡುತ್ತಿತ್ತು.

ನೆಲದ ಮೇಲೆ ಬಿದ್ದಿದ್ದ ಒಂದು ಚೂರು ಕಾಗದವನ್ನು ಕಂಡಿದ್ದರಿಂದ ಮೇಟ್ರನ್ ಹೆಲೆನ್ ಸಿಂಗ್ ಸಿಸ್ಟರ್ ಮೇರಿಯನ್ನು ಬಯ್ಯುತ್ತಿದ್ದರು. ಆಕೆಯು ಬಯ್ಯುತ್ತಿದ್ದುದು ಒಳ್ಳೆಯ ಶುದ್ಧವಾದ ಇಂಗ್ಲೀಷ್‌ನಲ್ಲಿ. ಆ ಸಿಸ್ಟರ್‌ಗೆ ಅದು ಪೂರ್ತಿ ಅರ್ಥವಾಯಿತೋ ಇಲ್ಲವೋ ? ಬಹು ಲಜ್ಜೆಯಿಂದ ಮೇರಿ ತನ್ನ ಡ್ಯೂಟಿ ರೂಮನ್ನು ಪ್ರವೇಶಿಸಿದಳು.

ಬಿಳಿಯ ಏಪ್ರನ್ ಧರಿಸಿದ್ದ ಏಳೆಂಟು ಜನ ಮೆಡಿಕಲ್ ವಿದ್ಯಾರ್ಥಿಗಳು ವಾರ್ಡನ್ನು ಪ್ರವೇಶಿಸಿದರು. ಅವರಲ್ಲಿ ದೇವದಾಸ್, ಲಕ್ಷ್ಮಿ ಇಬ್ಬರೂ ಇದ್ದರು. ಆರನೆಯ ನಂಬರ್ ಮಂಚದತ್ತ ಅವರು ಹೋದರು. ಆ ಮಂಚದಲ್ಲಿ ಮಲಗಿರುವ ರೋಗಿಯನ್ನು ಅವರು ಪರೀಕ್ಷಿಸಬೇಕಿತ್ತು.

ಅದು ಅವರ ಮೊದಲನೆಯ ಕ್ಲಿನಿಕಲ್ ಕ್ಲಾಸ್ ಆಗಿತ್ತು. ಎಲ್ಲರೂ ಸ್ಟೆತೋಸ್ಕೋಪ್ ಅನ್ನು ಭದ್ರವಾಗಿಟ್ಟುಕೊಂಡು ನಡೆಯುತ್ತಿದ್ದರು. ಕೆಲವರು ಏಪ್ರನ್‌ನ ಜೇಬಿನಲ್ಲೇ ಅದನ್ನು ಇಟ್ಟುಕೊಂಡಿದ್ದರು. ದೇವದಾಸ್ ಅದನ್ನು ಅಂದವಾಗಿ ಕತ್ತಿಗೆ ನೇತುಹಾಕಿಕೊಂಡಿದ್ದನು. ಲಕ್ಷ್ಮಿ ಕೈಯಲ್ಲಿ ಭದ್ರವಾಗಿ ಹಿಡಿದು ಗಂಭೀರವಾಗಿ ಎರಡು ಪಕ್ಕಗಳನ್ನೂ ನೋಡುತ್ತಾ ನಡೆಯುತ್ತಿದ್ದಳು.

ರೋಗಿಯು ಮುಸುಕು ಹಾಕಿಕೊಂಡು ಮಲಗಿದ್ದನು. ಎರಡು ಕಂಬಳಿಗಳನ್ನು ಹೊದ್ದಿದ್ದನು. ಕ್ಷೀಣವಾದ ಆ ಶರೀರಕ್ಕೆ ಚಳಿ ತಡೆಯಲು ಆಗುತ್ತಿರಲಿಲ್ಲ. ಅವನು ಮಲಗಿದ್ದ ರೀತಿ ಮಂಚದೊಂದಿಗೆ ಸ್ಥಿರವಾಗಿ ಅಂಟಿಕೊಂಡಿರುವಂತಿತ್ತು. ಆ ಹೊದಿಕೆಯ ಒಳಗೆ ಯಾವ ಚಲನೆಯೂ ಕಾಣುತ್ತಿರಲಿಲ್ಲ. ಶ್ವಾಸೋಚ್ಛ್ವಾಸಗಳು ನಡೆಯುತ್ತಿವೆಯೋ ಎಂಬುದು ಸಹ ಸಂಶಯವಾಗಿತ್ತು.

ದೇವದಾಸ್, ಮುಸುಕು ಹೊದ್ದಿದ್ದ ಕಂಬಳಿಯನ್ನು ತಲೆಯ ಮೇಲಿಂದ ಕೆಳಕ್ಕೆ ಸರಿಸಿದನು. ಚಿಕ್ಕ, ಗುಂಡಗಿನ ತಲೆಯಲ್ಲಿ ಎದ್ದುನಿಂತಿರುವ ಸಣ್ಣಪುಟ್ಟ ತಲೆಗೂದಲುಗಳು. ಅವು ಪೂರ್ಣವಾಗಿ ನೆರೆತಿದ್ದವು. ಮುಚ್ಚಿದ್ದ ಕಣ್ಣಿನ ರೆಪ್ಪೆಗಳೂ,

ಊದಿಕೊಂಡು ಕೆಂಪಾಗಿ ದಪ್ಪಗಾಗಿದ್ದ ಕಣ್ಣಿನ ಕೆಳಭಾಗಗಳು, ಹಾಗೆ ಊದಿಕೊಂಡು ಕೆಂಪಾಗಿ ದಪ್ಪಗಿರುವ ಕಣ್ಣಿನ ಕೆಳಭಾಗಗಳಲ್ಲಿ ಮೇಲುಗಡೆ ಉರಿಯುತ್ತಿದ್ದ ಎಲೆಕ್ಟ್ರಿಕ್ ಬಲ್ಬ್‌ನ ಬಿಳಚಿಕೊಂಡ ಮುಖ, ಹಳದಿ ಬಣ್ಣ, ಪಿತ್ತದ ಚಿಹ್ನೆಗಳು. ರಕ್ತವಿಲ್ಲದ ದಪ್ಪಗಿನ ತುಟಿಗಳು. ಅವುಗಳ ಮಧ್ಯದಿಂದ ಎಂಜಲಿನೊಂದಿಗೆ ಎದ್ದಿದ್ದ ಗುಳ್ಳೆಗಳು. ಮಧ್ಯೆ ಮಧ್ಯೆ ಒಡೆದಿದ್ದವು.

ರೋಗಿಯು ಬಹಳ ಕಷ್ಟಪಟ್ಟು ಕಣ್ಣು ತೆರೆದನು. ಏನು ಬೇಕೆಂಬ ಅರ್ಥದಲ್ಲಿ ಅವರನ್ನು ನೋಡಿದನು. ಕಣ್ಣುಗಳು ನಿರ್ಜೀವವಾಗಿದರೂ, ನನಗೆ ತೊಂದರೆ ಕೊಡಬೇಡಿ ಎಂಬ ಒಂದು ಬೇಡಿಕೆ ಅಲ್ಲಿ ಕಾಣುತ್ತಿತ್ತು.

ಒಂದು ಸ್ಟೀಲ್ ಟ್ರೇನೊಂದಿಗೆ ಸಿಸ್ಟರ್ ಮೇರಿ ರೋಗಿಯ ಬಳಿಗೆ ಬಂದಳು. ಅವಳು ಬಾಟಲ್‌ನಿಂದ ಔಷಧಿಯನ್ನು ಸಿರಿಂಜಿಗೆ ತುಂಬಿಸಿದ ನಂತರ ಕಂಬಳಿಯೊಳಗಿನಿಂದ ರೋಗಿಯ ಹಗುರವಾದ ಕೈಯನ್ನು ಹೊರ ತೆಗೆದಳು. ತೋಳಿನಲ್ಲಿದ್ದ ಸ್ವಲ್ಪವೇ ಮಾಂಸಖಂಡಗಳಲ್ಲಿ ನರವನ್ನು ಹುಡುಕಿ ಚುಚ್ಚಿದಾಗ ಬಿಳಿಚಿದ್ದ ಅವನ ಮುಖದಲ್ಲಿ ನೋವಿನ ಗೆರೆಗಳು ಮೆಲ್ಲಮೆಲ್ಲನೆ ಕಾಣಿಸಿಕೊಂಡವು. ಮೇರಿ ಸೂಚಿ ಚುಚ್ಚಿದ ಸ್ಥಳದಲ್ಲಿ ಸ್ವಲ್ಪ ಹೊತ್ತು ತಡವಿದಳು. ಕೆಲ ಕ್ಷಣಗಳ ಕಾಲದ ಆ ವಾತ್ಸಲ್ಯದಿಂದಾಗಿರಬೇಕು ಅವನ ಮುಖದಲ್ಲಿನ ಸುಕ್ಕುಗಟ್ಟಿದ ಸ್ನಾಯುಗಳಲ್ಲಿ ಸಮಾಧಾನದ ನೆರಳಾಡಿತು.

ರೋಗಿಯ ಬಳಿ ಯಾರೂ ಕಾಣಿಸಲಿಲ್ಲ. ಯಾವುದೋ ಗ್ರಾಮದಿಂದ ಬಂದ ಬಡಪಾಯಿಯಾಗಿರಬೇಕು. ದೇವರ ಕರೆಗಾಗಿ ಕಾದು ಕಾದು ಅವನು ಮಂಚದಲ್ಲಿ ಮಲಗಿದ್ದನೇನೋ ?

ಕೈಯಲ್ಲಿ ನೀಲಿ ಬಣ್ಣದ ಒಂದು ಬ್ರೀಫ್‌ಕೇಸ್ ಹಿಡಿದು ಮಂದಮಾರುತದಂತೆ ಡಾಕ್ಟರ್ ಕ್ವಾಜ ವಾರ್ಡನ್ನು ಪ್ರವೇಶಿಸಿದರು. ಒಂಭತ್ತನೆಯ ವಾರ್ಡ್ ನಿಶ್ಶಬ್ದ ವಾಯಿತು.

ರೆಸಿಡೆಂಟೂ ಹೌಸ್ ಸರ್ಜನ್‌ರೂ ಓಡೋಡಿ ಬಂದರು. ಸಿಸ್ಟರ್, ಸ್ಟಾಫ್ ನರ್ಸ್‌ಗಳೂ ಅವರ ಹಿಂದೆ ಬಂದರು. ಎದ್ದು ಕುಳಿತುಕೊಳ್ಳಲು ಸಾಧ್ಯವಾಗದ ರೋಗಿಗಳು ತಮ್ಮ ಹಾಸಿಗೆಯಲ್ಲಿ ಮಲಗಿದ್ದೇ ಕೈಗಳನ್ನು ಜೋಡಿಸಿ ನಮಸ್ಕರಿಸುತ್ತಾ ಡಾಕ್ಟರ್ ಕ್ವಾಜರನ್ನು ಸ್ವಾಗತಿಸಿದರು. ಚಲಿಸಲು ಸಹ ಶಕ್ತಿ ಇಲ್ಲದವರು ಮಂದಹಾಸದೊಂದಿಗೆ ಅವರನ್ನು ಸ್ವಾಗತಿಸಿದರು.

ಸಿಸ್ಟರ್, ಡಾಕ್ಟರ್‌ರ ಕೈಯಿಂದ ಸೂಟ್‌ಕೇಸನ್ನು ತೆಗೆದುಕೊಂಡು ಅವರ ಹಿಂದೆ ನಿಂತಳು.

"ವಾರ್ಡಿನಲ್ಲಿ ಸಮಸ್ಯೆಗಳೇನೂ ಇಲ್ಲ ತಾನೇ ?"

"ಇಲ್ಲ ಸಾರ್" ರೆಸಿಡೆಂಟ್ ಹೇಳಿದನು.

ಸಿಸ್ಟರನ್ನು ನರ್ಸ್ ಅನ್ನು ನೋಡುತ್ತಾ ಕೇಳಿದರು.

"ಎಲ್ಲರೂ ಸೌಖ್ಯವಾಗಿದ್ದಾರಲ್ಲಾ ?"

"ತಮ್ಮ ದಯೆ ಸಾರ್" ಅವರಿಬ್ಬರೂ ಉತ್ತರವಿತ್ತರು. ಡಾಕ್ಟರ್ ಕ್ವಾಜ ದೇವದೂತರಂತ ಮನುಷ್ಯರು. ನಡೆದು ಹೋಗುವಾಗ ಒಂದು ಇರುವೆಗೂ ಸಹ

ನೋವಾಗದಂತೆ ಹುಷಾರಾಗಿ ನಡೆಯುವರು.

ಡಾಕ್ಟರ್ ಕ್ವಾಜ ಒಂದು ರಾಜಮನೆತನದಲ್ಲಿ ಜನಿಸಿದ್ದರು. ಅವರು ವಿದ್ಯಾರ್ಥಿಯಾಗಿದ್ದ ಕಾಲದಲ್ಲೆಲ್ಲಾ ಚಿನ್ನದ ಮೆಡಲುಗಳನ್ನು ಎರಡು ಕೈಗಳಲ್ಲೂ ಬಾಚಿ ತೆಗೆದುಕೊಂಡಿದ್ದರು. ಅವರು ಆಡಂಬರದಲ್ಲಿ ಸ್ವಲ್ಪವೂ ಆಸಕ್ತಿಯನ್ನು ತೋರಿಸುತ್ತಿರಲಿಲ್ಲ. ಅವರ ಅಚ್ಚುಮೆಚ್ಚಿನ ಸ್ನೇಹಿತರೆಂದರೆ ಕವಿ ಸಮ್ಮೇಳನಗಳು, ಪುಸ್ತಕಗಳೂ ಆಗಿದ್ದವು. ಶಾಂತವಾದ ಸ್ವಭಾವ. ಬಿಳುಪು ಸೇರಿದ್ದ ಕೆಂಪು ಬಣ್ಣ. ವಿಶಾಲವಾದ ಎದೆ. ಕುತೂಹಲದಿಂದ ಏನನ್ನೋ ನೋಡುವ ಕತ್ತು. ಡಾಕ್ಟರ್ ಕ್ವಾಜ ನಗುವಾಗ ಲೋಕವೇ ನಗುತ್ತಿತ್ತು. ಗೇಟ್‌ನಲ್ಲಿ ಕಾವಲಿದ್ದ ಪ್ಯಾರೇಲಾಲ್‌ಗೂ ಸಹ ಅವರು ಕ್ಲಾಸ್ ತೆಗೆದುಕೊಳ್ಳುತ್ತಿರುವಾಗ ಅದನ್ನು ಕೇಳಲು ಸಾಧ್ಯವಿತ್ತು.

"ಹೊಸ ಬ್ಯಾಚ್ ಅಲ್ಲವೇ ?" ಹೊಸದಾಗಿ ಬಂದ ವಿದ್ಯಾರ್ಥಿಗಳನ್ನು ನೋಡಿ ಡಾಕ್ಟರ್ ಕ್ವಾಜ ಕೇಳಿದರು.

"ಹೌದು ಸರ್" ವಿದ್ಯಾರ್ಥಿಗಳು ಕೇಳಿದರು.

"ವೆಲ್ ಕಮ್ ಅಂಡ್ ಆಲ್ ದಿ ಬೆಸ್ಟ್"

"ಥ್ಯಾಂಕ್ ಯು ಸರ್"

ಒಂದು ಕೋರಸ್ ಮೊಳಗಿತು.

ಡಾಕ್ಟರ್ ಕ್ವಾಜ ಎಲ್ಲರ ಸ್ಟೆತೋಸ್ಕೋಪ್‌ಗಳನ್ನು ಭಕ್ತಿ, ಆದರಗಳಿಂದ ತೆಗೆದುಕೊಂಡು ಏನನ್ನೋ ಪ್ರಾರ್ಥಿಸಿದ ನಂತರ ಅವುಗಳನ್ನು ಅವರವರಿಗೆ ಹಿಂದಿರುಗಿಸಿದರು. ಅದು ಡಾಕ್ಟರ್ ಕ್ವಾಜರ ಪದ್ಧತಿಯಾಗಿತ್ತು. ಶಿಷ್ಯರುಗಳ ಸ್ಟೆತೋಸ್ಕೋಪ್‌ಗಳನ್ನು ಮುಟ್ಟಿ ಅದರಲ್ಲಿ ಅವರು ತಮ್ಮ ಗುರುಪ್ರೀತಿಯನ್ನು ಆವಾಹಿಸುವರು.

ಎಂಟು ಜನ ವಿದ್ಯಾರ್ಥಿಗಳು ಮಂಚದ ಸುತ್ತಲೂ ನಿಂತರು. ಡಾಕ್ಟರ್ ಕ್ವಾಜ ಒಂದು ಸ್ಟೂಲಿನ ಮೇಲೆ ಕುಳಿತರು. ಅವರು ರೋಗಿಯ ದೇಹದ ಮೇಲಿಂದ ಕಂಬಳಿಯನ್ನು ಸರಿಸಿದರು. ಅವನ ತಲೆಯ ಸಣ್ಣಪುಟ್ಟ ಕೂದಲುಗಳನ್ನು ತಡವಿದರು.

"ಬಾಬಾ ಆರೋಗ್ಯವಾಗಿದ್ದೀರಾ ?" ಡಾ. ಕ್ವಾಜ ಕೇಳಿದರು.

ವೃದ್ಧನ ಕಣ್ಣುಗಳು ಚಲಿಸಿದವು.

ದೇವದಾಸ್ ಆರಾಧನಾಭಾವದಿಂದ ಆ ರೋಗಿಯನ್ನು ನೋಡಿದನು. ಆ ರೋಗಿಯೇ ಇವನ ಭಾವಿ ಜೀವನದ ಮೊದಲ ಅಕ್ಷರ.

ದೇವದಾಸ್‌ನನ್ನು ನೋಡಿ ಡಾಕ್ಟರ್ ಕ್ವಾಜ ಕೇಳಿದರು:

"ಎಸ್, ಕಮಾನ್"

ದೇವದಾಸ್ ಜೀವನದಲ್ಲಿ ಮೊತ್ತ ಮೊದಲ ಬಾರಿ ಸ್ಟೆತೋಸ್ಕೋಪ್ ಅನ್ನು ತನ್ನ ಕಿವಿಯಲ್ಲಿ ಸಿಗಿಸಿಕೊಂಡನು. ಡಯಾಫ್ರಂ ಅನ್ನು ರೋಗಿಯ ಎದೆಯ ಮೇಲಿಟ್ಟನು. ಹೃದಯದ ಸ್ಪಂದನಗಳು ಅಗೋ ಮೊಳಗುತ್ತಿದೆ. ದಿವ್ಯವಾದ ಯಾವುದೋ ಲೋಕದಿಂದ ಕೇಳುತ್ತಿರುವ ಮಿಡಿತವು.

"ಕೇಳಿದೆಯಾ" ಡಾಕ್ಟರ್ ಕ್ವಾಜ ಕೇಳಿದರು.

"ಕೇಳಿದೆ " ದೇವದಾಸ್ ಹೇಳಿದನು.

"ಏನು ಕೇಳಿದೆ."

"ಹೃದಯದ ಮಿಡಿಯುವಿಕೆಯ ಶಬ್ದ."

"ಅಲ್ಲ" ಡಾಕ್ಟರ್ ಕ್ವಾಜ ಹೇಳಿದರು. "ಹಾಗೆ ಕೇಳಿದ್ದು ಹೃದಯದ ಬಡಿತವಲ್ಲ. ಲಬ್-ಡಬ್, ಲಬ್-ಡಬ್.... ಅದೇ ಅದು.... ಅದು ಹೃದಯದ ಸಂಗೀತ."

ಡಾಕ್ಟರ್ ಕ್ವಾಜ ಒಬ್ಬ ನಟನ ಚಾತುರ್ಯದಿಂದ ಹೇಳಿಕೊಡುತ್ತಿದ್ದರು. ಅವರು ಒಂದು ವಿಷಯ ಹೇಳಿಕೊಟ್ಟರೆ, ಅದನ್ನು ವಿದ್ಯಾರ್ಥಿಗಳಿಗೆ ಮರೆಯಲು ಎಂದಿಗೂ ಸಾಧ್ಯವಾಗುತ್ತಿರಲಿಲ್ಲ. ಹೇಳಿಕೊಡುವಾಗ ಅವರು ಹಾಡುತ್ತಾರೆ, ನರ್ತಿಸುತ್ತಾರೆ, ಅಭಿನಯಿಸುತ್ತಾರೆ. ಡಾಕ್ಟರ್ ಕ್ವಾಜರನ್ನು ಅಧ್ಯಯನಕ್ಕೆಂದೇ ನಿಯಮಿಸಲಾಗಿತ್ತು.

ಹಣದಲ್ಲಾಗಲಿ, ಪದವಿಯಲ್ಲಾಗಲಿ ಡಾಕ್ಟರ್ ಕ್ವಾಜರಿಗೆ ಎಳ್ಳಷ್ಟೂ ಆಸಕ್ತಿಯಿರಲಿಲ್ಲ. ಇದುವರೆವಿಗೂ ಅವರು ಪ್ರೈವೇಟ್ ಪ್ರಾಕ್ಟೀಸ್ ಪ್ರಾರಂಭಿಸಿರಲಿಲ್ಲ. ಬಹುಕಾಲ ಇಂಗ್ಲೆಂಡಿನಲ್ಲೇ ಇದ್ದರು. ಅವರು ಭಾರತಕ್ಕೆ ಹಿಂದಿರುಗಿ ಬಂದಾಗ ಅವರ ಸೂಟ್‌ಕೇಸಿನಲ್ಲಿ ಎರಡು ಜೊತೆ ಹಳೆಯ ವಸ್ತ್ರಗಳು ತಂದಿದ್ದರು ಅಷ್ಟೆ. ಅವರು ಬೇರೇನನ್ನೂ ತೆಗೆದುಕೊಂಡು ಬರಲಿಲ್ಲ. ತೆಗೆದುಕೊಂಡು ಬರಲು ಅವರ ಬಳಿ ಏನೂ ಇರಲಿಲ್ಲ.

ಕ್ಲಿನಿಕಲ್ ಮೆಥಡ್‌ನಲ್ಲಿನ ಪ್ರಥಮ ಪಾಠಗಳನ್ನು ಅವರು ಹೇಳಿಕೊಡಲು ಪ್ರಾರಂಭಿಸಿದರು. ಅವರ ಒಂದೊಂದು ಮಾತುಗಳು ವಿದ್ಯಾರ್ಥಿಗಳ ಮನಸ್ಸನ್ನು ಹೊಗುತ್ತಿದ್ದವು.

"ಅರ್ಥವಾಗದಿದ್ದರೆ ಕೇಳಬೇಕು " ಡಾಕ್ಟರ್ ಕ್ವಾಜ ಹೇಳಿದರು. "ಅರ್ಥವಾಗದ ವಿಷಯಗಳನ್ನು ಹತ್ತು ಸಲ ಹೇಳಿಕೊಡುತ್ತೇನೆ. ನೂರು ಸಲ ಹೇಳಿಕೊಡುತ್ತೇನೆ. ಬೇಕಾದರೆ ಒಂದು ದಿನವೆಲ್ಲಾ ಹೇಳಿಕೊಡುತ್ತೇನೆ."

ಪಾಠ ಮಾಡುವಾಗ ಅವರು ಆ ವಿಷಯದಲ್ಲಿ ತಾವೇ ತನ್ಮಯರಾಗಿ ಬಿಡುತ್ತಿದ್ದರು. ಕಣ್ಣುಗಳನ್ನು ಮುಚ್ಚಿಯೂ ಅರಳಿಸಿಯೂ ಮಾಡುವರು. ತುಟಿಗಳನ್ನು ಚೂಪು ಮಾಡುವರು. ಕೆನ್ನೆಗಳಲ್ಲಿ ಒಂದು ಸಾವಿರ ಸುಕ್ಕುಗಳು ಮಿನುಗಿ ಮಾಯವಾಗುತ್ತಿದ್ದುವು. ಅವರು ಅಧ್ಯಯನದ ಲಹರಿಯಲ್ಲಿ ಲಯಿಸಿ ಹೋಗುತ್ತಿದ್ದರು.

ವಾರ್ಡ್‌ನಲ್ಲಿ ಮಲಗಿರುವ ರೋಗಿಗಳನ್ನು ಪರೀಕ್ಷಿಸುವ ಸಮಯವಾಗಿತ್ತು. ಡಾಕ್ಟರ್ ಕ್ವಾಜ ವಾಚನ್ನು ನೋಡಿ ಕೂಗಿ ಹೇಳಿದರು.

"ಸಿಸ್ಟರ್ ರೌಂಡ್ಸ್"

ಡಾಕ್ಟರ್ ಕ್ವಾಜ ಮುಂದೆ, ಅವರ ಹಿಂದೆ ಸೀನಿಯರ್ ರೆಸಿಡೆಂಟ್, ಹೌಸ್ ಸರ್ಜನರು, ವಿದ್ಯಾರ್ಥಿಗಳು, ಸಿಸ್ಟರ್, ನರ್ಸ್ ಆಯಾ, ಇವರುಗಳ ಒಂದು ಚಿಕ್ಕ ಗುಂಪು ಮುಂದಕ್ಕೆ ಚಲಿಸಿತು.

ಡಾಕ್ಟರ್ ಕ್ವಾಜರನ್ನು ನೋಡುತ್ತಿದ್ದಂತೆಯೇ ರೋಗಿಗೆ ತನ್ನ ರೋಗವು ಅರ್ಧ ವಾಸಿಯಾಗಿಬಿಡುತ್ತಿತ್ತು.

"ಬಾಬಾ, ಹೇಗಿದ್ದೀರಿ ?" ಡಾಕ್ಟರ್ ಕೇಳಿದರು.

ಉಬ್ಬಿದ ಹೊಟ್ಟೆಯ ರೋಗಿಯು ಎದ್ದು ಕುಳಿತುಕೊಳ್ಳಲು ಪ್ರಯತ್ನಿಸಿದನು. ಸಾಧ್ಯವಾಗದಿದ್ದರೂ ಎದ್ದೇಳಲು ನೋಡುತ್ತಿರುವುದನ್ನು ಕಂಡಾಗ ಡಾಕ್ಟರ್ ಕ್ವಾಜ

ಅವನನ್ನು ತಡೆದರು. ಕೈಗಳನ್ನು ಜೋಡಿಸಿ ನಮಸ್ಕರಿಸುತ್ತಾ ರೋಗಿಯು ಮಂಚದಲ್ಲಿ ಮಲಗಿದನು.

ರೋಗಿಯ ಹೊಟ್ಟೆಯಲ್ಲಿ ನೀರು ತುಂಬಿಕೊಂಡಿತ್ತು. ಅದನ್ನು ಚುಚ್ಚಿ ಹೀರಿ ತೆಗೆಯಲು ಉಪಕರಣಗಳೊಂದಿಗೆ ಸಿಸ್ಟರ್, ನರ್ಸ್‌ಗಳು ಸಹಾಯ ಮಾಡಲು ಸಿದ್ಧರಾಗಿ ನಿಂತಿದ್ದರು. ಡಾಕ್ಟರ್ ಕ್ವಾಜ ರೋಗಿಯ ಹೊಟ್ಟೆಯನ್ನೊಮ್ಮೆ ತಡವಿದರು. ಅವರ ಕೈಗಳು ಅಲೆಗಳಂತೆ ಹೊಟ್ಟೆಯ ಮೇಲೆ ಏರಿಳಿದವು.

"ನೋಡಿ ವಿದ್ಯಾರ್ಥಿಗಳೇ.... ಈ ಅಂಗೈ ಮತ್ತು ಬೆರಳುಗಳೇ ಒಬ್ಬ ಫಿಸಿಷಿಯನ್‌ನ ಪ್ರಧಾನ ಆಯುಧಗಳು. ದೇಹದೊಳಗಿರುವುದನ್ನು ಕಂಡು ಹಿಡಿಯಲು ಇದೇ ಧಾರಾಳವಾಗಿ ಸಾಕು. ಆದರೆ ಮನಸ್ಸನ್ನು ಕೇಂದ್ರೀಕರಿಸಬೇಕು. ಸ್ವಲ್ಪಬುದ್ಧಿಯನ್ನು ಉಪಯೋಗಿಸಬೇಕು. ಜ್ಞಾನ ಸಾಮಾನ್ಯವಾಗಿದ್ದರೂ ಪರವಾಗಿಲ್ಲ. ಎಲ್ಲದಕ್ಕಿಂತ ಹೆಚ್ಚಾಗಿ ರೋಗಿಯನ್ನು ಕಂಡರೆ ದಯೆ ತೋರಿಸಬೇಕು."

ನೀರನ್ನು ಹೀರಿ ತೆಗೆಯುವ ಉಪಕರಣವನ್ನು ರೋಗಿಯ ಹೊಟ್ಟೆಗೆ ಚುಚ್ಚಿ ಏರಿಸಿದರು.

ಸಾಧಾರಣವಾಗಿ ಪ್ರೊಫೆಸರ್‌ಗಳು ಇಂತಹ ಚಿಕ್ಕ ಕೆಲಸಗಳನ್ನು ಮಾಡುವುದಿಲ್ಲ. ಆದರೆ ಡಾಕ್ಟರ್ ಕ್ವಾಜಗೆ ಪ್ರತಿಯೊಂದು ಕೆಲಸವನ್ನು ತಾವೇ ಮಾಡಬೇಕು. ಮಾತ್ರೆಯನ್ನು ಹೇಗೆ ನುಂಗಬೇಕು ಎನ್ನುವುದನ್ನು ಸಹ ಅವರೇ ತೋರಿಸಿ ಕೊಡುತ್ತಾರೆ. ನಿಂಬೆಯ ರಸ ಕೋಳಿ ಮೊಟ್ಟೆಯಲ್ಲಿನ ಹಳದಿಯ ಸಾರ ಸಕ್ಕರೆ ಇವೆಲ್ಲಾ ಸೇರಿಸಿ ಕುಡಿಯಬೇಕೆಂದು ಅವರು ಒಬ್ಬ ರೋಗಿಗೆ ಉಪದೇಶ ಮಾಡಿದರು. ಇದ್ದಕ್ಕಿದ್ದಂತೆ ಏನೋ ನೆನೆಸಿಕೊಂಡು "ಸರಿ, ಸರಿ, ನಾನು ತೋರಿಸಿಕೊಡುತ್ತೇನೆ" ಎಂದು ಹೇಳಿ ಅವರು ಒಂದು ಗಾಜಿನ ಲೋಟವನ್ನು ತೊಳೆದು ಶುಭ್ರಮಾಡಿ ನಿಂಬೆಹಣ್ಣು ಹಿಂಡಿ, ಕೋಳಿ ಮೊಟ್ಟೆಯೊಳಗಿನ ಹಳದಿ ಸಾರವನ್ನು ಸಕ್ಕರೆಯನ್ನು ಅದಕ್ಕೆ ಸೇರಿಸಿ ಒಂದು ಸ್ಪೂನ್ ಗ್ಲಾಸಿನಲ್ಲಿ ಹಾಕಿ ಚೆನ್ನಾಗಿ ಕಲಕಿದ ನಂತರ ರೋಗಿಗೆ ಕುಡಿಸಿದ್ದು ಆಸ್ಪತ್ರೆಯಲ್ಲಿ ಕಥೆಯಾಗಿ ಹರಡಿತ್ತು.

ಕೆಲವು ವ್ಯಕ್ತಿಗಳು ಹಾಗೇನೇ. ತಾವು ಹೇಳಿದಂತೆ ಅಥವಾ ಮಾಡಿದಂತೆ ಕೆಲಸಗಳನ್ನು ಇತರರು ಮಾಡಲಾರರೆಂದು ಅವರು ನಂಬುತ್ತಾರೆ. ಎಲ್ಲಾ ಕೆಲಸಗಳನ್ನೂ ತಾವೇ ಮಾಡಿ ಮುಗಿಸಿದರೇನೇ ಅವರಿಗೆ ಸಂತೃಪ್ತಿಯಾಗುವುದು.

ರಬ್ಬರ್ ಟ್ಯೂಬ್‌ನಲ್ಲಿನ ಹಳದೀ ನೀರು ಹೊರಕ್ಕೆ ಬರತೊಡಗಿತು. ಶುಭ್ರವಾದ ಒಂದು ಸೀಸೆಯಲ್ಲಿ ಅದನ್ನು ತುಂಬಲಾಯಿತು. ಡಾಕ್ಟರ್ ಕ್ವಾಜ ರೋಗಿಯ ಹೊಟ್ಟೆಯ ಮೇಲೆ ಒಬ್ಬ ಸೂಲಗಿತ್ತಿಯಂತೆ ಕೈ ಇಟ್ಟುಕೊಂಡಿದ್ದರು.

ಬಾಟಲ್ ಅರ್ಧ ತುಂಬಿದಾಗ ಡಾಕ್ಟರ್ ಕ್ವಾಜ ಸೂಜಿಯನ್ನು ಎಳೆದು ತೆಗೆದರು. ಬಾಟಲ್ ಎತ್ತಿಹಿಡಿದು ಸೂಕ್ಷ್ಮವಾಗಿ ಅದನ್ನು ನೋಡಿದರು. ತಿಳಿಯ ಹಳದಿಬಣ್ಣದಲ್ಲಿರುವ ಮನೋಹರವಾದ ಸ್ವಚ್ಛವಾದ ನೀರು. ಅದರಲ್ಲಿ ಒಂಚೂರು ಧೂಳು ಸಹ ಇರಲಿಲ್ಲ. ಇಷ್ಟು ಸುಂದರವಾದ ಒಂದು ಬಣ್ಣವನ್ನು ದೇವದಾಸ್ ಇದುವರೆಗೆ ನೋಡಿರಲಿಲ್ಲ. ಒಬ್ಬ ಚಿತ್ರಕಾರನಿಗೂ ಸೃಷ್ಟಿ ಮಾಡಲು ಸಾಧ್ಯವಾಗದ ಒಂದು ಬಣ್ಣವಾಗಿತ್ತದು.

ಹೌಸ್ ಸರ್ಜನ್ ಆ ಬಾಟಲನ್ನು ಪ್ಯಾಥಾಲಜಿ ಡಿಪಾರ್ಟ್‌ಮೆಂಟ್‌ಗೆ ಒಯ್ದನು. ಅಲ್ಲಿ ಮೈಕ್ರೊಸ್ಕೋಪೂ ಒಂದು ಬಾಟಲೂ ಕಾದಿತ್ತು. ಭೂತಕನ್ನಡಿಯೂ, ಒಬ್ಬ ಶಾಸ್ತ್ರಜ್ಞನೂ, ಸೇರಿ ಕೆಲಸ ಮಾಡಿ ಹಳದಿ ನೀರಲ್ಲಿರುವ ಒಳ ಘಟಕಗಳನ್ನೆಲ್ಲಾ ಒಡನೆ ಹೊರಕ್ಕೆ ತರುತ್ತಾರೆ.

"ಬಾಬಾ, ಏನೂ ಹೆದರಬೇಡಿ, ಗೊತ್ತಾಯಿತೇ, ನಾಲ್ಕೈದು ದಿವಸಗಳೊಳಗೆ ನೀವು ಗುಣಪಡೆಯುತ್ತೀರಿ." ಡಾಕ್ಟರ್ ಕ್ವಾಜ ಹೇಳಿದರು.

"ಸಿಸ್ಟರ್, ಈತನ ಬಂಧುಗಳೆಲ್ಲಿ ?"

"ಇವರ ಜೊತೆಯಲ್ಲಿ ಯಾರೂ ಇಲ್ಲ ಸಾರ್" ಸಿಸ್ಟರ್ ಮೇರಿ ಹೇಳಿದಳು.

"ಏನು ? ಯಾರೂ ಇಲ್ಲವೇ ?" ಆಶ್ಚರ್ಯಪೂರಿತ ಕಣ್ಣುಗಳೊಂದಿಗೆ ಡಾಕ್ಟರ್ ಕ್ವಾಜ ಕೇಳಿದರು.

"ಅಡ್ಮಿಟ್ ಆದ ದಿನವೇ ಕರೆದುಕೊಂಡು ಬಂದ ಮನುಷ್ಯ ಇಲ್ಲಿಂದ ಹೊರಟುಹೋದನು. ಈ ರೋಗಿಗೆ ಯಾರೂ ಇಲ್ಲ ಸಾರ್ ಪಾಪ" ಮೇರಿ ಹೇಳಿದಳು.

"ಸರಿ" ಡಾಕ್ಟರ್ ಕ್ವಾಜ ಎಲ್ಲರನ್ನು ನೋಡುತ್ತಾ ಮುಂದುವರೆಸಿದನು. "ಈ ರೋಗಿಯು ಇನ್ನು ನಮ್ಮ ಸ್ವಂತದವನು. ಯಾರೂ ಇಲ್ಲದವನಿಗೇ ದೇವರೇ ಗತಿ ಎಂದು ನಾವು ನಂಬುತ್ತೇವಲ್ಲವೆ, ನಾವು ಒಬ್ಬೊಬ್ಬರೂ ದೇವರಂತೆ ಇವನನ್ನು ನೋಡಬೇಕು."

"ಸರಿ ಸಾರ್" ಮೇರಿ ಹೇಳಿದಳು.

"ಹೌಸ್ ಸರ್ಜನ್" ಡಾಕ್ಟರ್ ಕ್ವಾಜ ಕೂಗಿದರು.

ಹೌಸ್ ಸರ್ಜನ್ ಮುಂದೆ ಬಂದನು.

"ಈತನ ಎಲ್ಲ ವಿಷಯಗಳನ್ನು ನಾನು ನಿಮಗೆ ವಹಿಸುತ್ತೇನೆ. ಡಯಟ್ ಚಾರ್ಟೆಲ್ಲಿ ?"

ಸಿಸ್ಟರ್ ಡಯಟ್ ಚಾರ್ಟ್ ಕೊಟ್ಟಳು. ಡಯಟ್ ಚಾರ್ಟ್ ನೋಡಿದ ನಂತರ ಡಾಕ್ಟರ್ ಕ್ವಾಜ ಹೇಳಿದರು:

"ಹಣ್ಣಿನ ರಸವನ್ನು ಡಯಟ್‌ನಲ್ಲಿ ಸೇರಿಸಿ ಪ್ರೊಟೀನ್ ಡಯಟ್ ಹೆಚ್ಚಾಗಿ ಕೊಡಿ."

"ಸರ್, ಸೆಕ್ಷನ್ ಆಪರೇಟಸ್ ಕೆಟ್ಟು ಹೋಗಿದೆ" ವಾರ್ಡ್‌ನ ವಿಷಯವೊಂದನ್ನು ಸಿಸ್ಟರ್ ಮೇರಿ ಎತ್ತಿ ಹೇಳಿದಳು.

"ಹೊಸದು ತೆಗೆದುಕೊಂಡು ಬರಬೇಕು" ತಕ್ಷಣ ಡಾಕ್ಟರ್ ಕ್ವಾಜ ಹೇಳಿದರು.

"ಸ್ಟೋರ್‌ನಲ್ಲಿಲ್ಲ ಸಾರ್" ಮೇರಿ ಹೇಳಿದಳು.

"ಸ್ಟೋರ್‌ನಲ್ಲಿ ಇಲ್ಲವೇ ?" ಡಾಕ್ಟರ್ ಕ್ವಾಜರ ಕಣ್ಣುಗಳಲ್ಲಿ ಕೆಂಡದ ಕಿಡಿಗಳು ಹಾರಿದಂತಾಯಿತು.

"ಇಲ್ಲದಿದ್ದರೆ ಡೆಲ್ಲಿಗೋ ಕಲ್ಕತ್ತಕ್ಕೋ ಎಲ್ಲಿಗಾದರೂ ಹೋಗಿ ಕೊಂಡುಕೊಂಡು ಬನ್ನಿ ಅಂತ ಆ ಸೈನಿಕನಿಗೆ ಹೇಳು!"

ಕ್ವಾಜರಿಗೆ ಹಿಡಿಸದ ವ್ಯಕ್ತಿ ಆ ಸೂಪರಿಂಟೆಂಡೆಂಟ್. ಅವರೂ ಪ್ರಿನ್ಸಿಪಾಲೂ ಒಬ್ಬರೇನೇ. ರಿಟೈರ್ಡ್ ಬ್ರಿಗೇಡಿಯರಾದ ಅವರಿಗೆ ಎಲ್ಲವೂ ಸೈನ್ಯದ ಶಿಸ್ತಿನಂತೆ.

ನಿಯಮದಲ್ಲೂ ಲೆಕ್ಕಾಚಾರದ ಸಿಕ್ಕಾದ ಸಮಸ್ಯೆಯಲ್ಲೂ ಸಿಕ್ಕಿಕೊಂಡಾಗ ಅವರು ಎಲ್ಲವನ್ನು ಒಂದು ನಿಲುವಿಗೆ ತರುತ್ತಿದ್ದರು. ಆದರೆ ಡಾಕ್ಟರ್ ಕ್ವಾಜರಿಗೆ ಇದರಲ್ಲಿ ಯಾವ ನಂಬಿಕೆಯೂ ಇರಲಿಲ್ಲ. ಅವರ ನಂಬಿಕೆಯಿದ್ದದ್ದು ರೋಗಿಯ ಸುಖ ಸೌಕರ್ಯಗಳಲ್ಲಿ ಮಾತ್ರ.

ಡಾಕ್ಟರ್ ಕ್ವಾಜ ಯಾವಾಗಲೂ ಹೇಳುತ್ತಲಿದ್ದರು.

"ರೋಗವಿದ್ದಾಗೆಲ್ಲಾ ರೋಗಿಯು ಸಂತೋಷದಿಂದಿರಬೇಕು. ರೋಗವು ಗುಣವಾದರೆ ಆರೋಗ್ಯವಂತನಾಗಿರಬೇಕು. ದೇವರು ಆಲೋಚಿಸಿದರೂ ನಡೆಯಲಸಾಧ್ಯವಾದ ಈ ವಿಷಯವು ವೈದ್ಯನು ಆಲೋಚಿಸಿದರೆ ನಡೆಯುತ್ತೆ."

ಡಾಕ್ಟರ್ ಕ್ವಾಜ ನಾಲ್ಕೈದು ನಿಮಿಷಗಳ ಕಾಲ ನಿಶ್ಶಬ್ದನಾಗಿದ್ದರು. ಅವರು ಕೋಪವು ಇಳಿಯುತ್ತಲಿತ್ತು.

ಡಾಕ್ಟರ್ ಕ್ವಾಜ ಹೇಳಿದರು.

"ನಾಳೆ ನಾನು ಬರುವ ಹೊತ್ತಿಗೆ ಹೊಸ ಸೆಕ್ಷನ್ ಆಪರೇಟಸ್ ಈ ವಾರ್ಡ್‌ನಲ್ಲಿರುವುದನ್ನು ನಾನು ನೋಡಬೇಕು. ಇಲ್ಲದಿದ್ದರೆ ನಾನು ಎಲ್ಲರನ್ನೂ ಹೊರಗೆ ಹಾಕುತ್ತೇನೆ. ನನ್ನಿಂದಾಗಿ ನನ್ನ ರೋಗಿಯು ಕಷ್ಟಪಡಬಾರದು. ಅದು ನನ್ನ ನಿಯಮ. ಆ ನಿಯಮದಂತೆಯೇ ಇತರರಿಂದಾಗಲಿ ಈ ರೋಗಿಯು ಕಷ್ಟಪಡ ಬಾರದು.

ವಾರ್ಡ್ ನಿಶ್ಶಬ್ದವಾಯಿತು.

"ಅರ್ಥವಾಯಿತೇ ?" ಡಾಕ್ಟರ್ ಕ್ವಾಜ ಕೇಳಿದರು.

"ಆಯಿತು ಸರ್" ಹೌಸ್ ಸರ್ಜನ್, ಸಿಸ್ಟರ್, ರೆಸಿಡೆಂಟ್, ಟ್ಯೂಟರ್ ವಿದ್ಯಾರ್ಥಿಗಳು ಎಲ್ಲರೂ ಒಕ್ಕೊರಲಿನಿಂದ ಹೇಳಿದರು.

"ಸರಿ ಬನ್ನಿ"

ಡಾಕ್ಟರ್ ಕ್ವಾಜ ಪಕ್ಕದ ಮಂಚದ ಬಳಿಗೆ ಸರಿದರು.

"ಬಾಬಾ, ಹೇಗಿದ್ದೀರಿ" ಡಾಕ್ಟರ್ ಕ್ವಾಜ ಕೇಳಿದರು.

ಆ ರೋಗಿಯು ಕಪ್ಪಗೆ ಕುಳ್ಳಗಿದ್ದನು. ಒಮ್ಮೆ ನೋಡಿದರೆ ಅವನು ರೋಗವಿಲ್ಲದ ಮನುಷ್ಯನೆಂದು ತೋರುತ್ತದೆ. ಆದರೆ ಅವನನ್ನು ಸೂಕ್ಷ್ಮವಾಗಿ ನೋಡಿದರೆ ಅವನ ಒಂದೊಂದು ಅವಯವವೂ ರೋಗದಿಂದ ಕ್ಷಯಿಸುತ್ತಿರುವುದು ಕಾಣಿಸುತ್ತೆ. ಅವನ ಕಣ್ಣುಗಳು ಗುಳಿಬಿದ್ದಿದ್ದವು. ಅದರಲ್ಲಿ ಏನಾದರೂ ಭಾವನೆಗಳನ್ನು ಸ್ಪಷ್ಟವಾಗಿ ಕಂಡು ವರ್ಷಗಳೇ ಆಯಿತೆಂದೆನ್ನಿಸುವಂತಿತ್ತು. ಹಣೆಯ ತುಂಬಾ ಸುಕ್ಕುಗಳು. ಅವು ಕಷ್ಟಪಟ್ಟಿದ್ದರ ಲಕ್ಷಣಗಳಾಗಿದ್ದವು. ಕೆನ್ನೆಯಲ್ಲಿನ ಸ್ನಾಯುಗಳಿಗೆ ಆಕರ್ಷಣೆ ಇರಲಿಲ್ಲ. ಜೀವನದುದ್ದಕ್ಕೂ ಆ ಮನುಷ್ಯನನ್ನು ಯಾರೂ ಪ್ರೀತಿಸಿರಲಿಲ್ಲ. ಕತ್ತು ಬೋಳಾಗಿತ್ತು. ಅಲ್ಲಿ ಇದುವರೆಗೂ ಒಬ್ಬ ಸ್ತ್ರೀಯ ಕೈ ಬಿದ್ದ ಗುರುತಿರಲಿಲ್ಲ. ಎದೆಯ ಮೇಲೆ ಕೂದಲುಗಳಿಲ್ಲ. ಸ್ವಲ್ಪವಾದರೂ ಶಕ್ತಿಯಾಗಲಿ ಆಕರ್ಷಣೆಯಾಗಲಿ ಇಲ್ಲದ ಒಬ್ಬ ವ್ಯಕ್ತಿಯಾಗಿದ್ದವನು. ಗಣಪತಿಯಂತೆ ಡೊಳ್ಳುಹೊಟ್ಟೆ, ಬಿರಿದಿರುವ ಕಾಲುಗಳು. ಅವನಲ್ಲಿ ಸ್ಥಿರವಾಗಿದ್ದ ಸೋಮಾರಿತನದ ಲಕ್ಷಣಗಳನ್ನು ತೂಕ ಮಾಡಿ ಹೇಳಬಹುದು.

"ಬಾಬಾ, ಹೇಗಿದ್ದೀರಿ ?" ಸ್ನಾಯುಗಳಿದ್ದ ಭುಜವನ್ನು ತಟ್ಟುತ್ತಾ ಡಾಕ್ಟರ್ ಕ್ವಾಜ ಕೇಳಿದರು.

"ಗುಣವೇ ಇಲ್ಲ ಡಾಕ್ಟರ್" ರೋಗಿ ಹೇಳಿದನು. "ನಿನ್ನೆ ಬೆಳಿಗ್ಗೆ ಎರಡು ಕೋಳಿ ಮೊಟ್ಟೆ ತಿಂದು ಒಂದು ಗ್ಲಾಸ್ ಹಾಲು ಕುಡಿದೆ. ಮಧ್ಯಾಹ್ನವಾಗುವವರೆಗೂ ಹೊಟ್ಟೆ ಊದೇ ಇತ್ತು. ಹಸಿವಿರಲಿಲ್ಲ. ಮಧ್ಯಾಹ್ನ ಮೊಸರನ್ನ, ಟೊಮ್ಯಾಟೋ, ಆಪಲ್ ತಿಂದೆ. ಮತ್ತೆಯೂ ಹೊಟ್ಟೆ ಊದಿತು. ರಾತ್ರಿ ಖಿಚಡಿ ತಿಂದೆ. ಹಾಗಿದ್ದೂ ಹಸಿವಿಲ್ಲ. ದಾಹವಿಲ್ಲ. ಮೈಯೆಲ್ಲಾ ನವೆಯು. ಹೆಗಲಿನ ಎಲುಬಿನಲ್ಲಿ ಬಾವು. ನಾಡಿಗಳಲ್ಲಿ ವೇದನೆ. ತುಟಿಗಳು ಒಣಗಿ ಹೋಗಿವೆ. ನಾಲಗೆ ಒಣಗಿ ಹೋಗುತ್ತೆ. ಗಂಟಲಲ್ಲಿ ಹೊಗೆಯಾಡುತ್ತಿರುತ್ತೆ. ಎದೆಯಲ್ಲಿ ಉರಿಯೇಳುತ್ತೆ. ಗಂಟಲಲ್ಲಿ ಹುಳು ಹತ್ತಿ ಬಂದು ನಿಂತಿರುತ್ತೆ. ಕಿವಿಯಲ್ಲಿ ಸೈರನ್ ಕೂಗಿದಂತಾಗುತ್ತೆ. ತಲೆ ಸುತ್ತುತ್ತೆ. ಹೊಟ್ಟೆ ತಾಳ ಹಾಕುತ್ತೆ. ಮಲದ್ವಾರವು ಉರಿಯುತ್ತದೆ. ಮನಸ್ಸು ಒದ್ದಾಡುತ್ತೆ. ಮಲಗಿರುವಾಗ ಕುಳಿತುಕೊಳ್ಳಬೇಕೆಂದು ಅನಿಸುತ್ತೆ. ಕುಳಿತುಕೊಂಡಾಗ ಮಲಗಬೇಕೆಂದೆನ್ನಿಸುತ್ತೆ. ಕುಳಿತು, ಮಲಗಿಕೊಂಡಾಗ ನಡೆಯಬೇಕೆಂದೆನ್ನಿಸುತ್ತೆ. ನಡೆಯುವಾಗ ಏನೂ ಮಾಡಬೇಡವೆಂದೆನ್ನಿಸುತ್ತೆ. ಕಣ್ಣು ತೆರೆದಾಗ ಕತ್ತಲೆ. ಕಣ್ಣು ಮುಚ್ಚಿದಾಗ ಬೆಳಕು. ಮೆದುಳಿನಲ್ಲಿ ಸೈತಾನ್‌ಗಳು ಹತ್ತಿ ಕುಳಿತಿದ್ದಾರೆ. ದೇವರನ್ನೂ ನೆನೆಯಲು ಸಾಧ್ಯವಾಗುತ್ತಿಲ್ಲ. ನೆನೆಯುವ ಸಮಯದಲ್ಲಿ ಸೈತಾನನು ಕುನ್ತಿರಿಕ್ಕಂ*ನ್ನು ಹೊಗೆಯಾಡಿಸುತ್ತಾ ಬರುತ್ತಾನೆ. ಆದರೆ ನನ್ನ ಕೈಯಲ್ಲಿ ಬೈಬಲ್ ಇದೆ. ಅದು ತೆರೆದರೆ ಸಾಕು, ಸೈತಾನ್ ಮಾಯವಾಗುತ್ತಾನೆ. ಅದನ್ನು ಓದಿದರೆ ಏಸುಕ್ರಿಸ್ತನು ಪ್ರತ್ಯಕ್ಷನಾಗುತ್ತಾನೆ. ನೆನ್ನೆ ರಾತ್ರಿ ನನಗೆ ಏಸುವಿನ ದರ್ಶನವಾಯಿತು. ಇಗೋ, ನನ್ನ ಬಲಭಾಗದ ತಲೆಯ ಮೇಲೆ ಒಂದು ಪ್ರಭಾವಲಯದ ಮಧ್ಯೆ ಏಸುವು ಮುಗುಳ್ನಗುತ್ತಾ ನಿಂತಿದ್ದನು. ಹಾಗೆ ನಿಂತಿದ್ದನ್ನು ಕಂಡು ನಾನು ರೋಮಾಂಚನಗೊಂಡೆ. ತಪ್ಪುಗಳನ್ನು ಒಪ್ಪಿ ಹೇಳಲು ನಾನು ಬಾಯಿ ತೆರೆಯುವ ವೇಳೆಗೆ ಏಸು ಮಾಯವಾದನು. ಆದ್ದರಿಂದ ಚರ್ಚಿನಿಂದ ಪಾದರಿಯನ್ನು ಕರೆಸಬೇಕು. ನಾನು ನನ್ನ ತಪ್ಪುಗಳನ್ನು ಒಪ್ಪಿಕೊಳ್ಳಬೇಕು. ನಾನು ಸಾಯುವವನಿದ್ದೇನೆ. ಇದೇ ನನ್ನ ಅಂತ್ಯವಾಗಿರಬಹುದು.

ಡಾಕ್ಟರ್ ಕ್ವಾಜ ವಾಚನ್ನು ನೋಡಿಕೊಂಡನು.

"ಸರಿ, ಸರಿ" ಡಾಕ್ಟರ್ ಕ್ವಾಜ ರೋಗಿಯನ್ನು ಮುಟ್ಟಿ ಹೇಳಿದರು. "ನಾನು ಸಾಯಂಕಾಲ ಬರುತ್ತೇನೆ. ಮಿಕ್ಕದ್ದು ನಾವು ಆಗ ಮಾತನಾಡೋಣ."

"ಉಪಕಾರವಾಯಿತು ಡಾಕ್ಟರ್."

ಕೈಗಳನ್ನು ಜೋಡಿಸಿ ನಮಸ್ಕರಿಸಿ ಆ ರೋಗಿಯು ತನ್ನ ಕೃತಜ್ಞತೆಗಳನ್ನು ಸಲ್ಲಿಸಿದನು.

"ಫಾದರ್‌ನ ವಿಷಯವನ್ನು ಮರೆಯಬೇಡಿ."

ನಡೆದು ದೂರವಾಗುತ್ತಿರುವ ಡಾಕ್ಟರ್ ಕ್ವಾಜರನ್ನು ಅವರ ಗುಂಪನ್ನು ನೋಡುತ್ತಾ

---

*ಕುನ್ತಿರಿಕ್ಕಂ: ಸುಗಂಧದ್ರವ್ಯ

ರೋಗಿ ಕೂಗಿ ಹೇಳಿದನು.

ಅನಂತರ ಬೈಬಲ್ ಮುಚ್ಚಿ ಎದೆಯ ಮೇಲಿಟ್ಟುಕೊಂಡು ಆ ರೋಗಿ ಮಲಗಿದನು.

"ಸಾರ್, ಸೈಕಿಯಾಟ್ರಿಸ್ಟ್‌ಗೆ ರೆಫರ್ ಮಾಡಬೇಕೇ" ಟ್ಯೂಟರ್ ಡಾಕ್ಟರ್ ಕ್ವಾಜರನ್ನು ಕೇಳಿದನು.

"ಬೇಡ, ಬೇಡ" ಡಾಕ್ಟರ್ ಕ್ವಾಜ ಹೇಳಿದರು. "ಹೀಗೆ ಅಸಂಬದ್ಧವಾಗಿ ಮಾತನಾಡುವ ಎಲ್ಲಾ ರೋಗಿಗಳಿಗೂ ಅಸ್ವಸ್ಥತೆ ಇದೆಯೆಂದು ತಿಳಿಯಬೇಡಿ. ಹೀಗೆ ಮಾತನಾಡುವುದು ಅವನ ರೋಗದ ಒಂದು ಭಾಗವಷ್ಟೆ. ಅವನು ಅರೆ ಹುಚ್ಚನೇನೂ ಅಲ್ಲ."

ಡಾಕ್ಟರ್ ಕ್ವಾಜ ಮತ್ತೆ ತಕ್ಷಣ ಹೇಳಿದರು.

"ಅರೆ ಹುಚ್ಚು ಇದ್ದರೂ ಸಹ ಸೈಕಿಯಾಟ್ರಿಗೆ ಕಳುಹಿಸಬೇಡಿ. ಅಲ್ಲಿಗೆ ಹೋದರೆ ಅವನು ಪೂರ್ಣ ಹುಚ್ಚನಾಗಿ ಬಿಡುತ್ತಾನೆ."

# ಒಂಭತ್ತು

ಸೈಕಲ್ ಸ್ಟ್ಯಾಂಡ್ ಆಸ್ಪತ್ರೆಯ ಕಟ್ಟಡದ ಹಿಂಭಾಗದಲ್ಲಿ ಇತ್ತು. ಸರಿಯಾಗಿ ಹೇಳಬೇಕೆಂದರೆ ಆಸ್ಪತ್ರೆಯ ಕಟ್ಟಡಗಳು ಸೈಕಲ್‌ಸ್ಟ್ಯಾಂಡ್‌ನಲ್ಲಿ ಕೊನೆಗೊಳ್ಳುತ್ತಿದ್ದುವು. ಅದರ ಹತ್ತಿರದಲ್ಲೇ ರೇಡಿಯಾಲಜಿ ವಿಭಾಗವಿದ್ದದ್ದು. ಅಲ್ಲೇಯೇ ಕ್ಯಾನ್ಸರ್ ರೋಗಿಗಳಿದ್ದುದು. ಅನಂತರ ಕಾರ್ಡಿಯಾಲಜಿ ವಿಭಾಗವಿತ್ತು. ಅಲ್ಲ ಹೃದ್ರೋಗಿಗಳಿದ್ದರು. ಆಮೇಲೆ ನ್ಯೂರೋಲಜಿ, ಪೀಡಿಯಾಟ್ರಿಕ್ಸ್ ಮುಂತಾದ ಬಹಳಷ್ಟು ಕಟ್ಟಡಗಳನ್ನು ದಾಟಿ ಹೋದರೆ ಸೈಕಲ್‌ಸ್ಟ್ಯಾಂಡನ್ನು ತಲುಪಲು ಸಾಧ್ಯವಾಗುತ್ತಿತ್ತು. ಮನುಷ್ಯರ ಮುಖಗಳಿರುವಂತೆ ರೋಗಕ್ಕೂ ವಿಭಿನ್ನ ಮುಖಗಳಿವೆ. ತಜ್ಞರು ಅವುಗಳಿಗೆ ಒಂದೊಂದು ಹೆಸರು ಕೊಟ್ಟು ಒಬ್ಬೊಬ್ಬ ರೋಗಿಯನ್ನು ಒಂದೊಂದು ರೋಗಕ್ಕಾಗಿ ರಿಕ್ರೂಟ್ ಮಾಡುತ್ತಾರೆ .(ಸೈನ್ಯದಲ್ಲಿ ಮಾಡುವಂತೆ)

ಪ್ಯಾರೇಲಾಲ್‌ಗೆ ಇವೆಲ್ಲಾ ಬಹಳ ಆನಂದವನ್ನು ನೀಡುತ್ತಿದ್ದವು. ಆದರೆ ಡ್ಯೂಟಿ ಮುಗಿದರೆ ಈ ಕಟ್ಟಡಗಳನ್ನೆಲ್ಲಾ ದಾಟಿ ಸೈಕಲ್ ಸ್ಟ್ಯಾಂಡ್‌ಗೆ ಹೋಗಲು ಅವನು ಬಹುದೂರ ನಡೆಯಬೇಕಿತ್ತು. ವಾಸ್ತವವಾಗಿ ಚಿಕಿತ್ಸೆ ನಡೆಸಲು ಇಷ್ಟು ದೊಡ್ಡ ಕಟ್ಟಡಗಳ ಆವಶ್ಯಕತೆಯಿದೆಯೇ ? ಸಾಯುತ್ತಿರುವ ದೇಹವನ್ನು ಹೀಗೆ ಸೀಮಾರೇಖೆಗಳನ್ನು ಬರೆದು ಬೇರ್ಪಡಿಸಬೇಕಾದ ಆವಶ್ಯಕತೆ ಏನಾದರೂ ಇದೆಯೇ ? ಇಲ್ಲಿ ಚಿರಸ್ಥಾಯಿಯಾದ ಸತ್ಯವನ್ನು ಯಾರೂ ಲೆಕ್ಕಕ್ಕೆ ತೆಗೆದು ಕೊಳ್ಳುವುದಿಲ್ಲ. ಮರಣವೇ ಪರಿಶುದ್ಧವು ಎಂಬುದೇ ಆ ಸತ್ಯವಾಗಿತ್ತು.

ಖಾಕಿ ಯೂನಿಫಾರಂನಲ್ಲೇ ಇದ್ದ ಪ್ಯಾರೇಲಾಲ್‌ನ ದೇಹವು ಊದಿಕೊಂಡಿತ್ತು. ಬೆವರು ಅವನು ಹಾಕಿದ್ದ ಒಳವಸ್ತ್ರಗಳನ್ನು ಅನೇಕ ಬಾರಿ ತೋಯಿಸಿ, ಹಾಕಿಕೊಂಡಿದ್ದ ಖಾಕಿವಸ್ತ್ರಗಳನ್ನು ತೋಯಿಸುತ್ತಿತ್ತು.

ಅವನು ದೊಡ್ಡ ಕಾರಿಡಾರ್ ಮೂಲಕ ನಡೆದನು. ಕಾರಿಡಾರ್ ಬಹಳ ಕಡಿಮೆ ಎಂದರೂ ಅರ್ಧ ಕಿಲೋ ಮೀಟರ್‌ನಷ್ಟು ಉದ್ದವಿತ್ತು. ಯಾವುದೋ ಅಮೆರಿಕನ್ ಇಂಜನಿಯರ್ ಅದನ್ನು ಕಟ್ಟಿದ್ದನಂತೆ. ಆದರೆ ಎಷ್ಟು ನಡೆಯಬೇಕು ? ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಹೋಗುವಷ್ಟರಲ್ಲಿ ಕಾಲುಗಳು ಬಿದ್ದು ಹೋಗುತ್ತಿದ್ದುವು.

ಕಾರಿಡಾರ್ ರೂಢಿಯಂತೆ ಗಜಿಬಿಜಿಯಾಗಿತ್ತು. ಡಾಕ್ಟರ್‌ಗಳು, ವಿದ್ಯಾರ್ಥಿಗಳು ನರ್ಸ್‌ಗಳು, ರೋಗಿಗಳನ್ನು ಮಲಗಿಸಿದ ಸ್ಟ್ರೆಚರ್ ಅನ್ನು ತಳ್ಳಿಕೊಂಡು ಹೋಗುವವರು, ರೋಗಿಯನ್ನು ಕಾಣಲು ಹೋಗುವವರು, ರಕ್ತದಾನಿಗಳು, ರಕ್ತ ಪರೀಕ್ಷೆಗಾಗಿ ಬರುವವರು, ಎಲ್ಲರೂ ತರಾತುರಿಯಲ್ಲೇ ನಡೆಯುವರು.

ವಿದ್ಯಾರ್ಥಿಗಳು ಮಾತ್ರ ಹಾಗಿರಲಿಲ್ಲ.

ಪ್ಯಾರೇಲಾಲ್‌ಗೆದುರಾಗಿ ಅನೇಕ ಡಾಕ್ಟರ್‌ಗಳು, ಆಫೀಸಿನಲ್ಲಿನ ಸೀನಿಯರ್ ಕ್ಲರ್ಕ್‌ಗಳು ನಡೆದು ಬರುತ್ತಿದ್ದರು. ಅವರೆಲ್ಲರಿಗೂ ಪ್ಯಾರೇಲಾಲ್ ಸಲಾಂ ಹಾಕಿದನು. ಕೆಲವರು ಅವನನ್ನು ನೋಡಿದರು. ಕೆಲವರು ಅವನನ್ನು ನೋಡದೆಯೇ ಹೋದರು. ದೊಡ್ಡದೊಡ್ಡ ಮನುಷ್ಯರಿಗೆ ಅವರನ್ನು ಗೌರವಿಸಿದ್ದನ್ನು ನೋಡಲು ಕಣ್ಣುಗಳಿರಲಿಲ್ಲ. ಆದರೆ ಅಕಸ್ಮಾತ್ ಅವರನ್ನು ವಿರೋಧಿಸಿ ಏನಾದರೂ ಒಂದಕ್ಷರ ಹೇಳಿದರೆ ಸಾಕು, ಅವರ ಮೈಮೇಲಿನ ಒಂದೊಂದು ಕೂದಲು ನಿಮಿರಿ ನಿಲ್ಲುತ್ತಿದ್ದವು.

ಪ್ಯಾರೇಲಾಲ್ ಸೈಕಲ್ ಸ್ಟ್ಯಾಂಡಿಗೆ ಬಂದನು. ನೂರಾರು ಸೈಕಲ್‌ಗಳು ಅಲ್ಲಿದ್ದವು. ಅವೆಲ್ಲಾ ಒಂದು ಪೆರೇಡಿನಲ್ಲಿ ಎಂಬಂತೆ ಸಾಲಾಗಿ ನಿಂತಿದ್ದವು.

ಸೈಕಲ್‌ಗಳನ್ನು ಜೋಪಾನವಾಗಿ ನೋಡಿಕೊಳ್ಳುವ ಮೂರು ನಾಲ್ಕು ಜನರು ಸೋಮಾರಿಗಳಂತೆ ಮುಂದಿನ ಲೈನಲ್ಲಿ ಕುಳಿತಿದ್ದರು. ಅವರೆಲ್ಲರಿಗೂ ಒಂದು ನಿರ್ಗತಿಕರ ಮಂದಿರವನ್ನು ಜೋಪಾನವಾಗಿ ನೋಡಿಕೊಳ್ಳುತ್ತಿರುವ ಭಾವವಿತ್ತು. ಒಂದರಲ್ಲೂ ಅವರಿಗೆ ಆಸಕ್ತಿ ಇರಲಿಲ್ಲ. ಒಂದೊಂದು ಸೈಕಲ್ ಒಳಬರುವಾಗಲೂ ಅವರು ಕಂಬಿಯಲ್ಲಿ ಪೋಣಿಸಿಟ್ಟಿದ್ದ ಟೋಕನ್‌ಗಳಲ್ಲೊಂದನ್ನು ತೆಗೆದುಕೊಡುವರು. ಇನ್ನೊಂದನ್ನು ಸೈಕಲ್‌ನ ಹ್ಯಾಂಡಲ್‌ನಲ್ಲಿ ನೇತುಹಾಕುವರು. ಸೈಕಲ್‌ನ ಒಡೆಯನ ಮುಖವನ್ನು ಅವರು ನೋಡುವುದೂ ಸಹ ಇಲ್ಲ. ಕೆಲಸ ಮಾಡುವಾಗ ನಾವು ಯಾರ ಮುಖವನ್ನೂ ನೋಡಬೇಕಾದ್ದಿಲ್ಲವಲ್ಲ. ಕೆಲಸದ ವಿಷಯದಲ್ಲಿ ನಾವು ಮನುಷ್ಯರೂ ಯಂತ್ರಗಳೂ ಒಂದೇ ತರಹ.

ಪ್ಯಾರೇಲಾಲ್ ಸೈಕಲ್ ಸ್ಟ್ಯಾಂಡ್‌ನ ಒಳಕ್ಕೆ ಬಂದು ತನ್ನ ನಂಬರ್ ಕಂಡುಹಿಡಿದನು. ಸೈಕಲ್ ಹಿಡಿದುಕೊಂಡು ಒಬ್ಬ ಸರ್ಕಸ್‌ನವನಂತೆ ಕಸರತ್ತು ಮಾಡುತ್ತಾ ಹೊರಕ್ಕೆ ಬಂದನು.

ಪ್ಯಾರೇಲಾಲ್‌ಗೆ ಬಹಳ ನಾಚಿಕೆ. ಹತ್ತು ಹನ್ನೆರಡು ವರ್ಷಗಳು ಹಳೆಯದಾದ ಈ ಸೈಕಲನ್ನು ಬದಲಾಯಿಸಿ ಒಂದು ಹೊಸದನ್ನು ಕೊಂಡುಕೊಳ್ಳಬೇಕೆಂದು ಅವನು ಯೋಚನೆ ಮಾಡಲು ಆರಂಭಿಸಿ ಆರು ವರ್ಷಗಳಾಗಿದ್ದವು. ಆಸ್ಪತ್ರೆಯಲ್ಲಿ ಕೆಲಸ ಸಿಕ್ಕಿದ ದಿನ ತನಗೆ ಮೊದಲ ತಿಂಗಳ ಸಂಬಳ ಸಿಕ್ಕಿದರೆ ಅಂದೇ ಹೊಸ ಸೈಕಲ್ ಕೊಂಡುಕೊಳ್ಳಬೇಕೆಂದು ಅವನು ಅಂದುಕೊಂಡಿದ್ದನು. ಆದರೆ ಆ ತಿಂಗಳೇ ಅವನ ಹೆಂಡತಿಗೆ ಗರ್ಭಪಾತವಾಗಿತ್ತು.

ಅವನ ಸೈಕಲ್‌ಗೆ ಪೆಡಲೇ ಇರಲಿಲ್ಲ. ಅವನು ಪೆಡಲ್‌ನ ಕಂಬಿಯ ಮೇಲೆ ಕಾಲಿಟ್ಟು, ಹರಿದು ಹಾಳಾಗಿರುವ ಸೀಟಿನ ಮೇಲೆ ಹತ್ತಿ ಕುಳಿತನು.

ಸಾಯಂಕಾಲವಾಗಿತ್ತು. ಆಸ್ಪತ್ರೆಯ ಉದ್ದನೆಯ ವಿಶಾಲವಾದ ನೆರಳು ಮನೋಹರವಾದ ಹುಲ್ಲುಗಾವಲುಗಳನ್ನು ಹೂದೋಟಗಳನ್ನೂ ದಾಟಿ ಹರಡಲು ಪ್ರಾರಂಭಿಸಿತ್ತು.

ತಂಪಾದ ನೆರಳಿನ ಹಾದಿಯಲ್ಲಿ ತನ್ನ ಉದ್ದನೆಯ ಕಾಲುಗಳಿಂದ ಅವನು ಸೈಕಲ್ ತುಳಿದನು.

ಆಸ್ಪತ್ರೆ, ಹುಲ್ಲುಗಾವಲು, ಹೂತೋಟಗಳು ಇವೆಲ್ಲವನ್ನು ಅವನು ಸುತ್ತುಹಾಕಿ

ನರ್ಸ್‌ಗಳ ಹಾಸ್ಟಲಿನ ಕಡೆ ಸೈಕಲ್ ತುಳಿದನು.

ಆ ಹಾಸ್ಟಲನ್ನು ಪ್ರವೇಶಿಸದೆ ಅವನು ಒಂದು ದಿನವಾದರೂ ತನ್ನ ಗ್ರಾಮಕ್ಕೆ ಹೋಗುತ್ತಿರಲಿಲ್ಲ. ಒಬ್ಬ ಮನುಷ್ಯನು ಒಂದೊಂದು ಸ್ಥಳದೊಂದಿಗೆ ತನಗೇ ತಿಳಿಯದಂತೆ ತಾನೇ ಬಂಧಿತನಾಗುತ್ತಾನೆ. ಸೈನ್ಯದಿಂದ ನಿವೃತ್ತಿ ಹೊಂದಿದ ನಂತರ ಊರಿನಲ್ಲಿ ಒಂದು ಹೊಸ ಕೆಲಸ ಸಿಕ್ಕಾಗ ಪ್ಯಾರೇಲಾಲ್ ಬಂಧಿತನಾದದ್ದು ಈ ನರ್ಸ್‌ಗಳ ಹಾಸ್ಟೆಲ್‌ನೊಂದಿಗೆ.

ನರ್ಸುಗಳ ಹಾಸ್ಟೆಲ್ ದೊಡ್ಡ ಒಂದು ಗೋಡೆಯಿಂದ ಸುರಕ್ಷಿತವಾಗಿತ್ತು. ಗೋಡೆಯ ಮೇಲುಗಡೆ ವಿಸ್ತಾರವಾದ ಜಾಗದಲ್ಲಿ ಅನೇಕ ಸಾವಿರ ಗಾಜಿನ ಚೂರುಗಳನ್ನು ಸಿಮೆಂಟ್ ಹಾಕಿ ದೃಢವಾಗಿ ಶಾಶ್ವತವಾಗಿ ನಿಲ್ಲಿಸಿದ್ದರು. ಅಲ್ಲಿ ಪಕ್ಷಿಗಳು ಬಂದು ಕುಳಿತುಕೊಳ್ಳುವುದೋ ಹಿಕ್ಕೆ ಹಾಕುವುದೋ ಪದ್ಧತಿ ಇಲ್ಲ. ಅವುಗಳಿಗೆ ಗಾಜಿನ ಚೂರುಗಳನ್ನು ಕಂಡರೆ ಭಯ. ಆದರೆ ಮನುಷ್ಯರು ಅನೇಕ ರಾತ್ರಿಗಳು ಅದನ್ನು ದಾಟಿ ಅಲ್ಲಿಗೆ ಬಂದಿರುವುದುಂಟು. ಹುಡುಗಿಯರನ್ನು ಹುಡುಕಿಕೊಂಡು.

ಪ್ಯಾರೇಲಾಲ್ ತನ್ನ ಸೈಕಲನ್ನು ನರ್ಸುಗಳ ಹಾಸ್ಟೆಲ್ ಗೇಟಿನ ಮುಂದೆ ಗೋಡೆಗೆ ಒರಗಿಸಿಟ್ಟನು. ಅನಂತರ ಚಕ್ರಗಳನ್ನು ಸರಪಳಿಯಿಂದ ಬಂಧಿಸಿದನು. ಎಲ್ಲಾ ಸರಪಳಿಗಳೂ ಬಂಧನದ ಚಿಹ್ನೆಗಳು. ಒಂದೊಂದು ವೇಳೆ ಅದು ಸುರಕ್ಷಿತವಾದದ್ದೂ ಆಗಿರುತ್ತಿತ್ತು.

ನಲವತ್ತಾರು ಜೋಡಿ ಕೋಣೆಗಳಿರುವ ಹಾಸ್ಟೆಲ್‌ನ ಕಾಂಪೌಂಡ್ ಅನ್ನು ಅವನು ಪ್ರವೇಶಿಸಿದನು.

ನಾಲ್ಕೂವರೆ ಗಂಟೆ ಆಗಿದ್ದುದರಿಂದ ಸಂದರ್ಶನ ಕೊಠಡಿಯಲ್ಲಿ ಒಳ್ಳೆಯ ಗೊಂದಲವಿತ್ತು. ಅಲಂಕಾರ ಮಾಡಿಕೊಂಡು ಬಂದ ಯುವಕರು ತಮ್ಮ ಜೊತೆಗಾತಿಯರೊಂದಿಗೆ ಹರಟೆ ಹೊಡೆಯಲು ಆರಂಭಿಸಿದ್ದರು. ಕೆಲವರು ಜೋಡಿಗಳಾಗಿ ಹೊರಕ್ಕೆ ಹೊರಡಲು ಪ್ರಾರಂಭಿಸಿದ್ದರು.

ಹಾಸ್ಟೆಲ್‌ನ ಗೋಡೆಯ ಆಚೆ ಬಹಳ ಸ್ಕೂಟರ್‌ಗಳು, ಸೈಕಲ್‌ಗಳು ನಿಂತಿದ್ದವು. ಎಲ್ಲವೂ ಸಂದರ್ಶಕರದ್ದೇ ಆಗಿತ್ತು. ಹುಡುಗಿಯರನ್ನು ಹುಡುಕಿ ಪರಿಚಯ ಮಾಡಿಕೊಳ್ಳಲು, ಅವರನ್ನು ತಮ್ಮ ವಶಮಾಡಿಕೊಳ್ಳಲು ಪ್ರೀತಿಸಲು ಅವರಿಂದ ಪ್ರಯೋಜನ ಪಡೆಯಲು ಬಂದವರಾಗಿದ್ದರು. ಅವರು ಹಲವಾರು ಬಗೆಯ ಜನರಾಗಿದ್ದರು. ಇವರ ಕಾಮಚೇಷ್ಟೆಗಳಿಗೆ ಯಾವುದೊಂದು ಎಲ್ಲೆಯೂ ಇಲ್ಲವೆಂದು ಪ್ಯಾರೇಲಾಲ್‌ಗೆ ಅವರನ್ನು ಕಂಡಾಗಲೇ ಅರ್ಥವಾಗಿತ್ತು.

ಪ್ಯಾರೇಲಾಲ್ ನರ್ಸ್‌ಗಳ ಹಾಸ್ಟೆಲಿನಲ್ಲಿ ಮೊಟ್ಟಮೊದಲು ಕಾವಲುಗಾರನಾಗಿ ಉದ್ಯೋಗ ಪ್ರಾರಂಭಿಸಿದನು. ನಾಲ್ಕೈದು ವರ್ಷಗಳು ತನ್ನದೇ ಕಣ್ಣುಗಳಿಂದ ಎಷ್ಟೆಷ್ಟೋ ಘಟನೆಗಳನ್ನು ಕಂಡಿದ್ದನು. ಅನಂತರ ಅವನಿಗೆ ಅಲ್ಲಿಂದ ವರ್ಗವಾಯಿತು. ಆದರೆ ವರ್ಗವಾದದ್ದು ಇನ್ನೊಂದು ಗೇಟಿನ ಕಾವಲಿಗೆ. ನಾವು ಯಾವಾಗಲೂ ಕಾವಲಿರುತ್ತೇವಷ್ಟೆ. ನಾವು ಸ್ತ್ರೀತ್ವದ ಸೌಂದರ್ಯದ ಚರಿತ್ರೆಯ ಕಾವಲಾಗಿರುತ್ತೇವೆ. ಮರಣವೊಂದನ್ನು ಬಿಟ್ಟು ಇವೆಲ್ಲವನ್ನೂ ನಾವು ಕಾವಲಿರುತ್ತೇವೆ.

ಪ್ಯಾರೇಲಾಲ್ ಮೇಟ್ರನ್‌ನ ಕೋಣೆಯ ಮುಂದಿದ್ದ ಕೆಂಪು ಮೊಲಗಳ ಚಿತ್ರವಿದ್ದ ಕರ್ಟನ್‌ನ ಮುಂದೆ ಒಂದು ನಿಮಿಷ ನಿಂತನು. ಕೋಣೆಯು ತೆರೆದೇ ಇತ್ತು. ಒಳಗೆ ಯಾವುದೇ ಬಗೆಯ ಚಲನವಿಲ್ಲವೆಂದು ದೃಢವಾದಾಗ ಕಾಲಿಂಗ್ ಬೆಲ್ಲನ್ನು ಒತ್ತಿದನು.

"ಯಾರು ?" ಮಾಮೂಲಿನ ಧ್ವನಿ.

"ನಾನು ಮೇಮ್ ಸಾಬ್, ಪ್ಯಾರೇಲಾಲ್."

"ಒಳಕ್ಕೆ ಬಾ."

ಪ್ಯಾರೇಲಾಲ್ ಒಳಕ್ಕೆ ಹೋದನು.

ಮೇಟ್ರನ್ ಹೆಲೆನ್ ಸಿಂಗ್ ತಾನು ಇಷ್ಟಪಟ್ಟಿದ್ದ ಪ್ರೇಮಿಯನ್ನು ನೋಡುತ್ತಾ ಅವನಲ್ಲೇ ಕಣ್ಣನ್ನು ನೆಟ್ಟಿದ್ದಳು. ಅದು ಬೇರೆ ಯಾರೂ ಇಲ್ಲ. ಹಳೆಯ ಸ್ಟಾಂಪ್‌ಗಳ ಒಂದು ಸಂಗ್ರಹವಾಗಿತ್ತು. ಮೇಟ್ರನ್ ಹೆಲೆನ್‌ಸಿಂಗ್‌ನ ಇದುವರೆಗಿನ ಒಟ್ಟು ಸಂಪಾದನೆಯೆಂದರೆ ಆ ಸ್ಟಾಂಪ್ ಆಲ್ಬಂಗಳೂ ಆ ಕೋಣೆಯೊಳಗಿರುವ ಕೌತುಕ ವಸ್ತುಗಳೂ ಮಾತ್ರವಾಗಿದ್ದವು. ಆಕೆಗಿದ್ದ ಈ ಉದ್ಯೋಗವೊಂದನ್ನು ಬಿಟ್ಟರೆ ಈ ಲೋಕದಲ್ಲಿ ಬೇರೆ ಸ್ವಂತವಾಗಿದ್ದದ್ದು ಏನೂ ಇರಲಿಲ್ಲ.

ಪ್ಯಾರೇಲಾಲ್ ಸ್ವಲ್ಪ ಹೊತ್ತು ನಿಂತನು. ಮೇಟ್ರನ್ ಒಂದೊಂದು ಸ್ಟಾಂಪ್‌ನಲ್ಲೂ ಅದರಲ್ಲಿನ ಅಕ್ಷರಗಳಲ್ಲೂ ಅದು ಹಳೆಯದಾಗಿರುವ ಬಗ್ಗೆಯೂ ಉತ್ಸಾಹವನ್ನು ತೋರಿಸುತ್ತಿದ್ದರು. ಇನ್ನು ಆಕೆ ಅದರಿಂದ ಎಚ್ಚರವಾಗಬೇಕಾದರೆ ಸ್ವಲ್ಪ ಹೊತ್ತು ಹೋಗಬೇಕು.

ಹೊಲೆಯುವ ಮೆಷಿನ್‌ನಲ್ಲಿ ಯಾವುದೋ ಒಂದು ಹೊಸ ಬಟ್ಟೆಯನ್ನು ಅದರ ಮೇಲೆ ಹೊಲೆಯಲೆಂದು ಟ್ರೇಸ್ ಮಾಡಿದ್ದ ಹೂಗಳೊಂದಿಗೆ ಹೊಲೆಯಲು ಇಟ್ಟಿದ್ದರು. ಬಹಳ ಹೊತ್ತು ಕುಳಿತು ಹೊಲೆದು ಸುಸ್ತಾಗಿದ್ದರಿಂದ ಆಕೆ ಆಲ್ಬಮ್ ತೆರೆದಿಟ್ಟುಕೊಂಡು ಕುಳಿತಿರಬೇಕು. ಎಲ್ಲವೂ ರೂಢಿಯಂತೆ - ಸ್ವಲ್ಪವಾದರೂ ಧೂಳಿಲ್ಲದ ಬೀಟೆ ಕುರ್ಚಿಗಳೂ, ಕುಷನ್‌ಗಳೂ, ಕಾರ್ಪೆಟ್ಟೂ ಇದ್ದವು. ಕೋಣೆಯಲ್ಲಿ ಒಂದೇ ಒಂದು ಫೋಟೋ ಇತ್ತು. ಕೊಳಲು ಬಾರಿಸುತ್ತಿದ್ದ ಕೃಷ್ಣನ ಚಿತ್ರವಾಗಿತ್ತದು. ಹಿಂದೂ ದೇವರುಗಳಲ್ಲಿ ಆಕೆಗೆ ಕೃಷ್ಣನನ್ನು ಕಂಡರೆ ಬಲು ಇಷ್ಟವಿತ್ತು. ಇಷ್ಟೊಂದು ಗೋಪಿಕಾ ಸ್ತ್ರೀಯರನ್ನು ಅವನು ವಶಪಡಿಸಿಕೊಳ್ಳಲಿಲ್ಲವೇ ? ಆಪತ್ತನ್ನುಂಟು ಮಾಡುವ ಒಬ್ಬ ದೇವರೆಂದರೆ ಅದು ಕೃಷ್ಣನೇ. ಆಕೆ ಮೂಗಿನ ಮೇಲೆ ಬೆರಳಿಟ್ಟುಕೊಂಡು ಪ್ಯಾರೇಲಾಲನೊಂದಿಗೆ ಹಲವಾರು ಬಾರಿ ಹೀಗೆ ಹೇಳಿರುವುದುಂಟು.

"ನನಗೆ ಸಂಗೀತ ಕಂಡರೆ ಇಷ್ಟವೇನಿಲ್ಲ. ಆದರೆ ಕೊಳಲಿನ ನಾದ ಮಾತ್ರ ನನಗೆ ಬಹಳ ಇಷ್ಟ. ಬಹುಶಃ ಕೃಷ್ಣನೊಂದಿಗಿನ ಆದರದಿಂದ ಇರಬೇಕು" ಒಮ್ಮೆ ಹೆಲೆನ್ ಸಿಂಗ್ ಹೇಳಿದ್ದಳು.

"ಆದರೆ ಈ ಹಿಂದೂಗಳಿಗೇಕೆ ಇಷ್ಟು ದೇವರುಗಳು! ಕೃಷ್ಣನು ಮಾತ್ರ ಸಾಲದೇ ?"

ಅನಂತರ ಆಕೆ ಜೋರಾಗಿ ನಕ್ಕಿದ್ದು. ಅತಿ ಜೋರಾಗಿ ನಕ್ಕಿದ್ದು. ನಕ್ಕು ನಕ್ಕು ಆಕೆಗೆ ಉಸಿರು ಕಟ್ಟಿಕೊಂಡಿತ್ತು. ಸ್ವಲ್ಪ ಹೊತ್ತಿನವರೆಗೂ ಆಕೆಗೆ ಮಾತನಾಡಲೇ

ಆಗಿರಲಿಲ್ಲ.

ಕೊಂಚ ಹೊತ್ತು ನಿಟ್ಟುಸಿರೆಳೆಯುತ್ತಿದ್ದಳು.

ತಕ್ಷಣ ಪ್ರಜ್ಞೆ ಬಂದವರಂತೆ ಚಕಿತರಾಗೆದ್ದು ಕುಣಿಯತೊಡಗಿದ್ದನು.

"ಪ್ಯಾರೇಲಾಲ್, ನೀನೇನು ಹಾಗೆ ಮಿಕಮಿಕ ನೋಡುತ್ತಿರುವೆ ? ನಾನು ಸ್ನಾನ ಮಾಡಲು ನೀರು ಕಾಯಿಸಿದೆಯಾ ?" ಎಂದಿದ್ದರಾಕೆ.

ಆದರೆ ಇಂದು ಆಕೆಯ ನೋಟವು ಆಲ್ಬಂನಲ್ಲೇ ನೆಟ್ಟಿತ್ತು. ಸ್ಟಾಂಪ್ ಆಲ್ಬಂ ತೆರೆದಿಟ್ಟುಕೊಂಡು ಕುಳಿತರೆ ಕೃಷ್ಣನನ್ನಾಗಲಿ, ಲೋಕದ ಯಾವುದೇ ವಿಷಯಗಳ ಬಗ್ಗೆ ಆಗಲಿ ಮೇಟ್ರನ್ ಚಿಂತಿಸುತ್ತಿರಲಿಲ್ಲ.

ಮೊಣಕೈಗಳೆರಡನ್ನೂ ಮೇಜಿನ ಮೇಲೂರಿ ಅಂಗೈಗಳಲ್ಲಿ ತಮ್ಮ ಮುಖವನ್ನಿಟ್ಟು ಮೇಟ್ರನ್ ಮೇಜಿನ ಮೇಲೆ ತೆರೆದಿಟ್ಟ ಆಲ್ಬಮ್‌ನಲ್ಲೇ ನೋಡುತ್ತಾ ನಿಂತಿದ್ದರು.

ಆಲಿವ್ ಎಣ್ಣೆಯನ್ನು ಹಚ್ಚಿದ ಮಿನುಗುತ್ತಿರುವ ಅವರ ಮೊಣಕೈಗಳನ್ನೂ ಫ್ಯಾನ್‌ನ ಗಾಳಿಗೆ ಹಾರಾಡುತ್ತಿರುವ ಷಾಂಪೂ ಹಚ್ಚಿದ ಅವರ ತಲೆಗೂದಲನ್ನೂ, ಪ್ಯಾರೇಲಾಲ್, ಒಂದಾದ ಮೇಲೊಂದರಂತೆ ನೋಡಿದನು. ಆಶ್ಚರ್ಯವೆಂದು ಹೇಳಬೇಕು. ಆ ಕೆಂಪು ತಲೆಕೂದಲುಗಳ ನಡುವೆ ಬಿಳಿರೇಖೆಗಳೂ ಇದ್ದವು.

ದೇವರೇ ಪ್ಯಾರೇಲಾಲ್ ತನಗೇ ತಿಳಿಯದಂತೆ ನಿಟ್ಟುಸಿರುಬಿಟ್ಟನು. ಹೆಲೆನ್ ಸಿಂಗ್‌ಳ ತಲೆಗೂದಲುಗಳು ನೆರೆಯಲು ಪ್ರಾರಂಭಿಸಿಬಿಟ್ಟಿತೇ ? ತನ್ನ ಜೀವನದ ಕಾಲವನ್ನೆಲ್ಲಾ-ಹಣವನ್ನೂ ಸಂಪತ್ತನ್ನೂ ತನ್ನ ಆರೋಗ್ಯಕ್ಕೋಸ್ಕರ ಮೀಸಲಾಗಿಟ್ಟ ಹೆಲೆನ್ ಸಿಂಗ್‌ಗೂ ಮುದಿತನ ಬರಲಾರಂಭಿಸಿತೇ ?

"ಹಾಂ, ನನಗೆ ಪತ್ರಗಳೊಂದೂ ಇಲ್ಲವೇನು ?"

"ಇಲ್ಲ."

ಮೇಟ್ರನ್ ಯಾವತ್ತಿಗೂ ಸಾಯಂಕಾಲ ಟಪಾಲ್‌ನ ಬಗ್ಗೆ ಪ್ಯಾರೇಲಾಲ್‌ನನ್ನು ವಿಚಾರಿಸುತ್ತಿದ್ದರು. ಕಳೆದ ಮೂರು ವರ್ಷಗಳಿಂದ ಆಕೆ ಯಾರದೋ ಪತ್ರವನ್ನು ನಿರೀಕ್ಷಿಸುತ್ತಿದ್ದರು. ಪ್ರತಿದಿನ, ಭಾನುವಾರ ಸಹ, ಆಕೆ ತಮ್ಮ ಟಪಾಲಿನ ಬಗ್ಗೆ ಅವನನ್ನೇ ವಿಚಾರಿಸುವರು. ಆದರೆ ಒಮ್ಮೆಯಾದರೂ ಆಕೆಗೆ ಹೆಲೆನ್ ಸಿಂಗ್ ಎಂಬ ಹೆಸರಿನಲ್ಲಿ ಒಂದು ಪತ್ರವೂ ಬರುತ್ತಿರಲಿಲ್ಲ. ಮೇಟ್ರನ್‌ನ ಹೆಸರಿನಲ್ಲಿ ಬಂದ ಯಾವುದೇ ಪತ್ರಗಳನ್ನು ಆಫೀಸಿಗೆ ತಲುಪಿಸಬೇಕೆಂಬ ನಿಯಮವಿತ್ತು.

ಆಕೆಯ ನೋಟವು ಆಲ್‌ಬಮ್‌ನಲ್ಲೇ ನೆಟ್ಟಿತ್ತು. ಇಂದು ಯಾವುದೋ ಒಂದು ಹೊಸಸ್ಟಾಂಪ್ ಸಿಕ್ಕಿರಬೇಕು. ವಾರ್ಧಕ್ಯದಲ್ಲೂ ಮನುಷ್ಯರು ಆಟದ ಸಾಮಾನುಗಳನ್ನು ಇಷ್ಟಪಡುತ್ತಾರೆ.

ತಕ್ಷಣವೇ ಆಕೆ ಮುಖವನ್ನೆತ್ತಿದ್ದರು. ಆಲ್‌ಬಮ್ ಮುಚ್ಚಿದರು. ಆಕೆಯ ಕಣ್ಣಿನ ಕೆಳಗೆ ತೋರುತ್ತಿದ್ದ ಕಪ್ಪುಬಣ್ಣ ಗಾಢವಾಗುತ್ತಿವೆಯೆಂದು ಪ್ಯಾರೇಲಾಲ್‌ಗೆ ಅನ್ನಿಸಿತು.

"ನೀನೇಕೆ ಹಾಗೆ ಗಾಬರಿಯಿಂದ ನನ್ನನ್ನು ನೋಡುತ್ತಿದ್ದೀ ?"

"ಜೀ, ಮೇಮ್‌ಸಾಬ್, ಏನನ್ನೋ ನೆನೆಸಿಕೊಂಡೆ."

ಆಕೆ ಬೆರಳನ್ನು ಅವನತ್ತ ತೋರಿಸುತ್ತಾ ಅಪ್ಪಣೆ ಮಾಡುವ ಸ್ವರದಲ್ಲಿ ಹೇಳಿದರು: "ಪ್ಯಾರೇಲಾಲ್, ನಾನು ಎಷ್ಟೋ ಸಲ ನಿನಗೆ ಹೇಳಲಿಲ್ಲವೇ ? ಯಾವುದನ್ನೂ

ಜ್ಞಾಪಕ ಮಾಡಿಕೊಳ್ಳಕೂಡದೆಂದು. ಮನುಷ್ಯನು ಹೀಗೆ ಹಿಂದಿನದನ್ನು ಜ್ಞಾಪಕ ಮಾಡಿಕೊಳ್ಳುವುದು, ಚಿಂತಿಸುವುದು ಮಾಡಿದಾಗಲೇ ಅವನ ಪರಾಜಯವು ಸಿದ್ಧ." ಮತ್ತೆ ಆಕೆ ಮುಂದುವರೆಸಿದಳು "ನಾನೀಗ ಸ್ನಾನ ಮಾಡುವುದಿಲ್ಲ. ಆದರೂ ಬಿಸಿ ನೀರು ಬೇಕು. ಕಾಲನ್ನೂ ಮುಖವನ್ನೂ ತೊಳೆದುಕೊಳ್ಳಬೇಕು."

ಪ್ಯಾರೇಲಾಲ್ ಭವ್ಯತೆಯಿಂದ ನಡೆದು ಬಾತ್‌ರೂಮಿಗೆ ಹೋದನು. ದೊಡ್ಡ ಬಕೆಟ್‌ನಲ್ಲಿನ ನೀರಿನಲ್ಲಿ ಇಮ್ಮರ್‌ಷನ್ ಕಾಯಿಲ್ ಮುಳುಗಿಸಿ ಸ್ವಿಚ್ ಹಾಕಿದನು. ಲೈಟ್ ಮಂಕಾಯಿತು. ಇಮ್ಮರ್‌ಷನ್ ಕಾಯಿಲ್‌ನ ಬಿಳಿ ಹಿಡಿಯಲ್ಲಿ ಬೆವರಿನ ಹನಿಗಳು ಸಣ್ಣಸಣ್ಣ ಕಣಗಳಾಗಿ ಕಾಣಿಸತೊಡಗಿದವು. ನೀರಿನಲ್ಲಿದ್ದೂ ಬೆವರುತ್ತಿರುವ ಇಮ್ಮರ್‌ಷನ್ ಕಾಯಿಲ್. ಒಂದೊಂದಕ್ಕೂ ಒಂದೊಂದು ಸ್ವಭಾವವಿದೆ. ನರಕದಲ್ಲಾದರೂ, ಸ್ವರ್ಗದಲ್ಲಾದರೂ ಅದು ಬೆವರುತ್ತೆ.

"ಪ್ಯಾರೇಲಾಲ್"

ಪ್ಯಾರೇಲಾಲ್ ಸರ್ರನೆ ಕೋಣೆಗೆ ಹೋದನು. ನೈಟ್ ಗೌನ್‌ನಲ್ಲಿ ಆಕೆಯ ಶರೀರವು ಒಂದು ತಾವರೆದಂಟಿನಂತೆ ಅಲ್ಲಾಡುತ್ತಿತ್ತು.

ಇಂದು ಶನಿವಾರ, ನನಗೆ ಕ್ವಾರ್ಟರ್ ರಮ್ ತೆಗೆದುಕೊಂಡು ಬರಬೇಕು. ಹಾಗೆ ಒಂದು ಟಿನ್ ಸಾಸೇಜೂ ಬೇಕು.

"ಮೇಮ್ ಸಾಬ್, ನಾನು ಅದನ್ನು ತೆಗೆದುಕೊಂಡು ಬಂದಿದ್ದೇನೆ."

ಪ್ಯಾರೇಲಾಲ್ ಹೊರಕ್ಕೆ ಹೋಗಿ ತನ್ನ ಸೈಕಲ್‌ನ ಹಿಡಿಗೆ ತೂಗು ಹಾಕಿದ್ದ ಚೀಲದಿಂದ ಸಾಸೇಜ್‌ನ ಟಿನ್ನನ್ನು ರಮ್ಮಿನ 180 ಮಿ.ಲೀ. ಬಾಟಲ್ ಅನ್ನೂ ಹೊರಕ್ಕೆ ತೆಗೆದನು.

ಮೆಟ್ರನ್ ಬಾಗಿಲ ಕಡೆಗೇ ನೋಡುತ್ತಿದ್ದರು.

"ಆಶ್ಚರ್ಯವಾಗುತ್ತಿದೆ. ಪ್ಯಾರೇಲಾಲ್, ನಿನ್ನನ್ನು ಒಪ್ಪಿಕೊಳ್ಳಲೇಬೇಕು. ನನ್ನ ಇಂದಿನ ಇಷ್ಟವೇನೆಂದು ನಿನಗೆ ಹೇಗೆ ತಿಳಿಯಿತು ?"

"ಮೇಮ್‌ಸಾಬ್, ನಾನು ಈ ರೂಮಿನಲ್ಲಿ ಕಳೆದ ಆರು ವರ್ಷಗಳಿಂದ ಇಲ್ಲವೇ ?"

ಹೆಲೆನ್ ಸಿಂಗ್‌ಳ ಮುಖ ತಕ್ಷಣ ಕಪ್ಪಿಟ್ಟಿತು. ಆಕೆಯ ಮೊಳಕೈನ ಮೇಲಿದ್ದ ಕೆಂಪಗಿದ್ದ ಕೂದಲುಗಳು ತಕ್ಷಣ ಎದ್ದು ನಿಂತವು.

"ಪ್ಯಾರೇಲಾಲ್, ಹುಚ್ಚುಹುಚ್ಚಾಗಿ ಮಾತನಾಡಬೇಡ. ಯಾವುದೇ ಒಬ್ಬ ಮನುಷ್ಯನಿಗೂ ತನ್ನ ಜೀವನದುದ್ದಕ್ಕೂ ಕಷ್ಟಪಟ್ಟರೂ ಮತ್ತೊಬ್ಬ ಮನುಷ್ಯನ ಇಷ್ಟಾನಿಷ್ಟಗಳನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲ. ತಿಳಿಯಿತೇ ? ಹದಿನಾರು ವರ್ಷಗಳು ನಾನು ಕಳೆದೂ.... ಹಾ.... ನನಗೇ ಹೇಳಿಕೊಡಲು ಬರಬೇಡ." ಆಕೆ ದೀರ್ಘವಾಗಿ ನಿಟ್ಟುಸಿರೆಳೆದುಕೊಂಡರು. ಅನಂತರ ಹೇಳಿದರು: "ನೀನು ಹೋಗಿ ಈರುಳ್ಳಿಯನ್ನೂ ಟೊಮೊಟೋವನ್ನೂ ಕತ್ತರಿಸಿಡು."

ಪ್ಯಾರೇಲಾಲ್ ಅಡಿಗೆಕೋಣೆಯ ಕಡೆ ಹೋದನು. ಮೇಟ್ರನ್‌ನ ಕೋಣೆಯು ನಾಲ್ಕು ಭಾಗಗಳಾಗಿಯೇ ಇತ್ತು. ಅತಿಥಿ ಕೋಣೆ. ಮಲಗುವ ಕೋಣೆ, ಅಡಿಗೆ ಕೋಣೆ, ಸ್ನಾನದ ಕೋಣೆ ಮತ್ತು ಕಕ್ಕಸ್. ಆಕೆಗೆ ಸ್ವಂತವಾಗಿ ಒಂದು ಕ್ವಾರ್ಟರ್ಸ್

ಇತ್ತು. ಮೂರು ಮಲಗುವ ಕೋಣೆಗಳು, ಅತಿಥಿ ಕೋಣೆ, ಡೈನಿಂಗ್ ರೂಮ್ ಎಲ್ಲಾ ಇರುವ ಒಂದು ದೊಡ್ಡ ಕ್ವಾರ್ಟರ್ಸ್. ಆದರೆ, ಆಕೆ ಅಲ್ಲಿ ವಾಸವಾಗಿರಲು ಇಷ್ಟಪಡಲಿಲ್ಲ. ಸೂಪರಿಂಟೆಂಡೆಂಟ್‌ಗೆ ಆಕೆ ಹೇಳಿದರು:

"ಒಂದು ಕೋಣೆಯಲ್ಲಿ ಒಬ್ಬ ಮನುಷ್ಯ ಹೇಗೆ ಏಕಾಕಿ ವಾಸವಾಗಿರುತ್ತಾನೆ! ನಾನು ಏಕಾಕಿಯಾದರೂ ಸಹ ನನಗೆ ಸಂಘಜೀವಿಯಾಗಿಯೇ ಜೀವಿಸಬೇಕು."

ಪ್ಯಾರೇಲಾಲ್ ಈರುಳ್ಳಿಯನ್ನೂ ಟೊಮೊಟೋವನ್ನೂ ಹಚ್ಚಿಟ್ಟನು. ಪ್ಯಾರೇಲಾಲ್‌ನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಅವನು ಪಂಪ್ ಸ್ಟೌ ಹೊತ್ತಿಸಿ ಪಂಪ್ ಮಾಡಿದನು. ನೀಲಿಯ ಬಣ್ಣದಲ್ಲಿ ಸುಂಯ್ ಎಂದು ನಾಲಿಗೆ ಚಾಚಿ ಮೇಲಕ್ಕೆದ್ದ ಬೆಂಕಿಯ ಮೇಲೆ ಸ್ಟೀಲ್ ಪಾತ್ರೆಯನ್ನಿಟ್ಟು ವನಸ್ಪತಿಯನ್ನು ಸುರಿದನು. ಅದರಲ್ಲಿನ ನೀರು ಚೊಂಯ್ ಎಂದು ಮುಗಿಯುವ ಹೊತ್ತಿಗೆ ಮೇಟ್ರನ್ ಎದ್ದು ಬಂದರು.

ಟೊಮ್ಯೋಟೋ ಜ್ಯೂಸ್‌ನಲ್ಲಿ ಸಾಸೇಜ್ ಮಾಡುವ ಕಲೆಯನ್ನು ಪ್ಯಾರೇಲಾಲ್ ನೋಡುತ್ತಾ ನಿಂತನು. ಮುಚ್ಚಿಟ್ಟ ಮುಚ್ಚಳ ತೆರೆದಾಗ ಪರಿಚಿತವಾದ ವಾಸನೆಯು ಕೋಣೆಯಲ್ಲೆಲ್ಲಾ ಭದ್ರವಾಗಿ ಹರಡಿಕೊಂಡಿತು. ಪ್ಯಾರೇಲಾಲ್‌ಗೆ ಬಾಯಲ್ಲಿ ನೀರೂರಿತು.

ಮೇಟ್ರನ್ ಬಾಟಲ್ ತೆರೆದು ಸ್ವಲ್ಪ ರಮ್ ಅವನ ಗ್ಲಾಸ್‌ನಲ್ಲಿ ಸುರಿದರು. ಒಂದು ಪೆಗ್, ಪ್ಯಾರೇಲಾಲ್‌ಗೆ ಅಷ್ಟೇ ಬೇಕಾದದ್ದು. ಸೈನ್ಯದಲ್ಲಿದ್ದಾಗ ಅವನು ಧಾರಾಳವಾಗಿ ಕುಡಿದಿದ್ದಾನೆ. ನಾಲ್ಕೂ ಐದೂ ಪೆಗ್‌ಗಳು. ಸೋಡವಿಲ್ಲದೆ ಆನ್ ದಿ ರಾಕ್. ಇಂದಿಗೂ ಅವನು ನೀರಾಗಿಯೇ ಕುಡಿಯುತ್ತಿದ್ದನು. ಆದರೆ ಆಳತೆಯಲ್ಲಿ ಮಾತ್ರ ವ್ಯತ್ಯಾಸವಿತ್ತು. ಜೀವನದ ಸ್ಥಾಯಿಯಾದ ಸ್ವಭಾವಗಳಿಗೆ ಒಂದು ಬದಲಾವಣೆಯೂ ಉಂಟಾಗುವುದಿಲ್ಲ. ವ್ಯತ್ಯಾಸಗಳು ಬರುತ್ತವೆ ಎಂದು ಮಾತ್ರ ಹೇಳಬಹುದು.

ಸಾಸೇಜ್‌ನ ಪ್ಲೇಟಿನಲ್ಲಿದ್ದುದನ್ನು ಸಂಪೂರ್ಣವಾಗಿ ಶುಭ್ರ ಮಾಡಿದಂತೆ ಮುಗಿಸಿದನಂತರ ಪ್ಯಾರೇಲಾಲ್ ಎದ್ದನು.

ಮೇಟ್ರನ್ ರೂಮ್‌ನಲ್ಲಿ ಅಡ್ಡಾಡುತ್ತಿದ್ದರು. ಏನನ್ನೋ ಗಾಢವಾಗಿ ನೆನೆಸಿಕೊಳ್ಳುತ್ತಲಿದ್ದರು. ಡೆಹರಾನ್‌ನಲ್ಲೋ, ಲಕ್ನೋವಿನಲ್ಲೋ ತಮ್ಮನ್ನು ಕೈಬಿಟ್ಟ ಪ್ರೇಮಿಯೊಂದಿಗೆ ನಡೆಸಿದ್ದ ಆ ಬಾಳನ್ನು ಕುರಿತು ಯೋಚಿಸುತ್ತಿದ್ದರೋ ಏನೋ. ಪ್ಯಾರೇಲಾಲ್‌ಗೆ ಅದು ಗೊತ್ತಾಗಲಿಲ್ಲ. ಕೆಲ ಮನುಷ್ಯರು ರಹಸ್ಯಗಳನ್ನು ಒಂದು ನಿಧಿಯಂತೆ ಜೋಪಾನ ಮಾಡುತ್ತಾರೆ. ಮನಸ್ಸಿನಲ್ಲಿಲ್ಲ, ಆತ್ಮದಲ್ಲಿ.

"ಪ್ಯಾರೇಲಾಲ್, ನೀನಿನ್ನು ಹೋಗಬಹುದು. ಪಾತ್ರೆಗಳನ್ನು ನಾಳೆ ತೊಳೆಯೋಣ."

ತಿಂದ ಪಾತ್ರೆಗಳನ್ನು ತಿಂದು ಮುಗಿಸಿದ ಒಡನೆಯೇ ತೊಳೆದಿಡಲು ಆಕೆ ಒಪ್ಪುವುದಿಲ್ಲ. ಪಾತ್ರೆಯನ್ನು ತೊಳೆಯುವುದು ಪಾಚಕದಲ್ಲಿನ ಹೀನವಾದ ಒಂದು ಘಟಕವೆಂದು ಆಕೆ ನಂಬುತ್ತಾರೆ.

ಪ್ಯಾರೇಲಾಲ್ ಮೆಟ್ಟಲುಗಳನ್ನಿಳಿದನು. ಮೇಟ್ರನ್ ಹೆಲೆನ್ ಸಿಂಗ್ ಬಾಗಿಲುಗಳನ್ನು ಧಡಾರ್ ಎಂದು ಮುಚ್ಚಿ ಬೋಲ್ಟ್ ಹಾಕಿಕೊಂಡಳು. ತನ್ನ ಹಿಂದೆ ಧಡಾರೆಂದು ಮುಚ್ಚಿಕೊಳ್ಳುವ ಬಾಗಿಲುಗಳು ಪ್ಯಾರೇಲಾಲ್‌ನನ್ನು ಯಾವಾಗಲೂ ಉಸಿರು ಕಟ್ಟಿಕೊಂಡಂತೆ ಕಷ್ಟಪಡಿಸುತ್ತಿದ್ದವು.

ಧಡಾರೆಂದು ಬಾಗಿಲುಗಳನ್ನು ಮುಚ್ಚುವ ಶಬ್ದವನ್ನೇ ಪ್ಯಾರೇಲಾಲ್ ಕೆಲಸವನ್ನಾರಂಭಿಸಿದ ದಿನದಿಂದಲೇ ಕೇಳಲು ಪ್ರಾರಂಭಿಸಿದ್ದನು. ಹೀನವಾದ ಉದ್ಯೋಗದ ಹಿಂದೆ ಯಾವಾಗಲೂ ಹಿರಿಯ ಉದ್ಯೋಗಿಗಳ ಬಾಗಿಲುಗಳು ಧಡಾರೆಂದು ಮುಚ್ಚಲ್ಪಡುತ್ತಿದ್ದವು. ಅವನು ಸೈನ್ಯದಲ್ಲಿದ್ದಾಗ ಎಷ್ಟೋ ವರ್ಷಗಳು ಈ ಶಬ್ದವನ್ನೇ ಕೇಳಿದ್ದನು. ಆಫೀಸರ್‌ನ ಷೂಗಳನ್ನು ಪಾಲಿಷ್ ಮಾಡಿ ಕೊಡುವಾಗಲೂ, ಅವರ ಒಳವಸ್ತ್ರಗಳನ್ನು ಒಗೆದು ಕೊಡುವಾಗಲೂ ಉಂಟಾದ ಮನೋವಿಕಾರವು ಉದ್ಯೋಗವೆಂಬ ಅಭಿಮಾನವಾಗಿತ್ತು. ಆದರೆ ಎಲ್ಲಾ ಕೆಲಸಗಳೂ ಮುಗಿದಾದ ಮೇಲೆ ನೀನು ಹೋಗಬಹುದು ಎಂಬ ಆಜ್ಞೆಯ ನಂತರ ಕೇಳುವಂತಹ ಶಬ್ದವು ಧಡಾರ್ ಎಂದು ಮುಚ್ಚಲ್ಪಡುತ್ತಿದ್ದ ಬಾಗಿಲಿನದಾಗಿತ್ತು. ಆಗೆಲ್ಲಾ ಪ್ಯಾರೇಲಾಲ್ ನಿಶ್ಶಕ್ತನಾಗುತ್ತಿದ್ದನು.

ಅವನು ಎಷ್ಟೋ ವರ್ಷಗಳು ಇದನ್ನೇ ಕೇಳಿದ್ದನು. ಆದರೆ ಕಿವಿಗಳಿಗೆ ಜಡ್ಡು ಹಿಡಿದಿರಲಿಲ್ಲ. ಅವುಗಳಿಗೆ ಬಹುವಾದ ಸಹನಶಕ್ತಿ ಇತ್ತು. ಮನಸ್ಸಿಗಿಂತ ತನ್ನ ಪಂಚೇಂದ್ರಿಯಗಳಲ್ಲಿ ಬಹುವಾದ ಶಕ್ತಿಯುತವಾದಂತಹುದೆಂದರೆ ಕೇಳುವಿಕೆ ಯಾಗಿತ್ತು.

ಅವನ ಸೈಕಲ್‌ಗೆ ಬೆಲ್ಲೋ ದೀಪವೋ ಇಲ್ಲವಾಗಿತ್ತು. ನಡುಗುವ ಕಾಲಿನ ಪಾದಗಳು, ಪೆಡಲ್‌ನಲ್ಲಿ ಜಡ್ಡು ಹಿಡಿದ ಕಾಲಿನ ಪಾದಗಳು ಚಲಿಸಿದುವು. ಆಸ್ಪತ್ರೆಯ ದೊಡ್ಡ ದೊಡ್ಡ ಕಟ್ಟಡಗಳೆಲ್ಲವನ್ನೂ ದೊಡ್ಡದೂ ಚಿಕ್ಕದೂ ಆದ ಕ್ವಾರ್ಟರ್ಸ್‌ಗಳನ್ನೂ ದಾಟಿ ಅವನು ಪಟ್ಟಣಕ್ಕೆ ಹೋಗುವ ರಸ್ತೆಗಿಳಿದನು.

ಸಮಯವು ಸುಮಾರು ಏಳು ಗಂಟೆಯಾಗಿತ್ತು. ಚಳಿಗಾಲವಾದ್ದರಿಂದ ಸಣ್ಣಗಿನ ಹಿಮದ ಗಾಳಿ ಒಂದು ಪ್ರಸಾದವೆಂಬಂತೆ ಬರುತ್ತಿತ್ತು. ಎಲೆಕ್ಟ್ರಿಕ್ ದೀಪಗಳು ಪ್ರಕಾಶಮಾನವಾಗಿ ಹತ್ತಿಕೊಂಡಿದ್ದವು. ಕಾರುಗಳೂ ರಿಕ್ಷಾಗಳು ಬಿಡುವಿಲ್ಲದೆ ಚಲಿಸುತ್ತಿದ್ದವು.

ಪ್ಯಾರೇಲಾಲ್ ತನ್ನ ಗ್ರಾಮಕ್ಕೆ ಹೋಗಿ ಸೇರಲು ಪಟ್ಟಣವನ್ನೇ ದಾಟಬೇಕಿತ್ತು. ಪಟ್ಟಣದಿಂದ ವಿಸ್ತಾರವಾಗಿ ಅಗಲಿಹೋಗುವ ಎರಡು ಕಿಲೋಮೀಟರ್ ಕಪ್ಪು ಊರಿನ ರಸ್ತೆಯನ್ನು ದಾಟಿ ಅವನು ತನ್ನ ಗ್ರಾಮವನ್ನು ಪ್ರವೇಶಿಸಬೇಕಿತ್ತು.

ಪಟ್ಟಣದ ಶಬ್ದವು ದೂರದಿಂದ ಕಿವಿಗಳಲ್ಲಿ ಮೊಳಗಿತು. ಪಟ್ಟಣವು ಒಂದು ದೊಡ್ಡ ಜೇನು ಗೂಡೆಂಬಂತೆ ಪ್ಯಾರೇಲಾಲ್‌ಗೆ ತೋರಿತು. ನಿತ್ಯವೂ ಆ ಸಾಯಂಕಾಲ ಆ ದಾರಿ ಮೂಲಕವೇ ಹೋಗುತ್ತಿದ್ದನು. ಕೈಗಾರಿಕೆ, ವ್ಯಾಪಾರ, ಚೌಕಾಶಿ ನಡೆಯುತ್ತಿರುವ ಸ್ಥಳಗಳ ಮಧ್ಯದಿಂದ ಹಾದುಹೋಗುವ ಈ ಹ್ರಸ್ವವಾದ ಪ್ರಯಾಣವು ಅವನನ್ನು ಆಕರ್ಷಿಸುತ್ತಿರಲಿಲ್ಲ.

ಪ್ಯಾರೇಲಾಲ್ ರೂಢಿಯಂತೆ ಪಟ್ಟಣಕ್ಕೆ ಬಂದನು. ಇನ್ನು ಸೈಕಲ್ ತುಳಿದು ಕೊಂಡು ಹೋಗಬೇಕಾದರೆ ಒಬ್ಬ ಸರ್ಕಸ್‌ನವನಂತೆ ಬ್ಯಾಲೆನ್ಸ್ ಮಾಡುತ್ತಾ ಹೋಗ ಬೇಕು. ಪ್ಯಾರೇಲಾಲ್ ಕಣ್ಣುಗಳನ್ನು ಮತ್ತೆಯೂ ಸ್ಪಷ್ಟವಾಗಿ ಅರಳಿಸಿ ನೋಡಿದನು. ಪಟ್ಟಣವೆಲ್ಲಾ ಹತ್ತಿ ಉರಿಯುತ್ತಿರುವಂತೆ ತೋರಿತು. ಎಲ್ಲೆಲ್ಲೂ ನಿಯಾನ್ ದೀಪಗಳ ಸಂತೆ. ಜನಗಳು ಅಲ್ಲಿ ಇಲ್ಲಿ ಹರಿದಾಡಿ ಸೇರಿಕೊಳ್ಳುತ್ತಿದ್ದರು. ನಿತ್ಯವೂ ಇಲ್ಲಿಗೆ

ಬರುವವರುಂಟು. ಅವರಿಗೆ ಏನಾದರೂ ಕೊಂಡುಕೊಳ್ಳಲೂ ಮೊದಲು ಏನೂ ಇರುತ್ತಿರಲಿಲ್ಲ. ಒಂದು ಟೀ ಸಹ ಕುಡಿಯದೆ ಅವರು ಉತ್ತರಕ್ಕೂ ದಕ್ಷಿಣಕ್ಕೂ ನಡೆಯುವರು. ಪಟ್ಟಣವನ್ನೂ, ಪಟ್ಟಣದಲ್ಲಿನ ದೃಶ್ಯಗಳನ್ನೂ ಮಾತ್ರ ಇವರು ನೋಡುವುದಷ್ಟೆ. ತಕ್ಷಣ ವೃದ್ಧೆಯೊಬ್ಬಳು ಪ್ಯಾರೇಲಾಲ್‌ನ ಸೈಕಲ್‌ನ ಎದುರಿಗೆ ಎಲ್ಲಿಂದಲೋ ಸರ್ರನೆ ಓಡಿಬಂದಳು. ತಗುಲಿಯೂ ತಗುಲದಂತೆ ಆಗ ಪ್ಯಾರೇಲಾಲ್ ತನ್ನ ಕಾಲನ್ನು ನೆಲದ ಮೇಲಿಟ್ಟು ಸೈಕಲನ್ನು ನಿಲ್ಲಿಸಿದನು. ಅನಂತರ ಒಂದು ನಿಟ್ಟುಸಿರಿನಿಂದ ಗೂನಾಗಿ ನಡೆಯುತ್ತಾ ಒಂದು ಕೃತಕ ನಗುವಿನೊಂದಿಗೆ ಪಕ್ಕಕ್ಕೆ ಓಡಿ ಮರೆಯಾದ ಆ ವೃದ್ಧೆಯನ್ನು ನೋಡಿ ತನಗೇನೋ ಮಾತನಾಡಲು ಸಾಧ್ಯವಾಗದೆ ಮತ್ತೆಯೂ ಪ್ಯಾರೇಲಾಲ್ ಸೈಕಲ್ ತುಳಿಯತೊಡಗಿದನು.

ಜನರ ಗುಂಪನ್ನು ಬೇಧಿಸಿಕೊಂಡು ಅವನು ಪಟ್ಟಣವನ್ನು ದಾಟಿದನು. ಇನ್ನು ಕೋಪದಿಂದ ಉರಿಯುತ್ತಿರುವ ಎಲೆಕ್ಟ್ರಿಕ್ ದೀಪದ ಕಂಭಗಳು ಮಾತ್ರವಿದ್ದವು. ಇನ್ನೂ ಒಂಟಿಯಾಗಿ ಅರ್ಧಗಂಟೆ ಪ್ರಯಾಣ ಮಾಡಬೇಕು. ಖಾಲಿಯಾದ ಹಾಲಿನ ಡಬ್ಬಗಳನ್ನು ಸೈಕಲ್‌ನ ಎರಡು ಭಾಗಗಳಲ್ಲೂ ನೇತು ಹಾಕಿಕೊಂಡು ಹಾಲಿನವರು ಮಧ್ಯೆ ಮಧ್ಯೆ ಪ್ಯಾರೇಲಾಲ್‌ನನ್ನು ದಾಟಿ ಮುಂದಕ್ಕೆ ಹಾದು ಹೋಗುತ್ತಿದ್ದರು. ದಾರಿ ದೀಪಗಳು ಪ್ರಕಾಶವು ಕಡಿಮೆಯಾಗತೊಡಗಿತು. ಮಂದ ಬೆಳಕಿನಲ್ಲಿ ರಸ್ತೆಯು ಮಾತ್ರ ಅವಕ್ತವಾಗಿ ಕಾಣುತ್ತಿತ್ತು. ರಸ್ತೆಯು ನಿರ್ಜನವಾಗಿತ್ತು. ತಕ್ಷಣ ಒಬ್ಬ ಹುಚ್ಚನು ಏನೇನೋ ಅರ್ಥವಿಲ್ಲದೆ ತನ್ನಲ್ಲಿ ತಾನೇ ಮಾತನಾಡಿಕೊಳ್ಳುತ್ತಾ ಒಂದು ಮರದ ಹಿಂದಿನಿಂದ ಪ್ರತ್ಯಕ್ಷನಾದನು. ಆದರೆ ಅವನು ನುಡಿಯುವ ಬಯ್ಗುಳನ್ನು ಪ್ಯಾರೇಲಾಲ್ ಪೂರ್ಣವಾಗಿ ಕೇಳಿದನು. ಆ ಹುಚ್ಚನು ಪಟ್ಟಣವನ್ನೇ ಗುರಿಯಾಗಿಟ್ಟುಕೊಂಡು ನಡೆಯುತ್ತಿದ್ದನು. ಜಗುಲಿಗಳಲ್ಲಿ ಶಾಂತರಾಗಿ ನಿದ್ರಿಸುತ್ತಿರುವವರ ನಿದ್ದೆಯನ್ನು ಅವನು ಭಂಗಪಡಿಸುತ್ತಿದ್ದನು.

ಕಪ್ಪಗಿನ ರೋಡಿನಿಂದ ಕೆಂಪಗಿನ ರೋಡಿಗೆ ದಾರಿ ತೋರಿಸುವಂತೆ ನಕ್ಷತ್ರಗಳು ಮಾತ್ರ ಕಾಣಿಸುತ್ತಿದ್ದವು. ರಾಜರಸ್ತೆಯಲ್ಲಿನ ಎಲೆಕ್ಟ್ರಿಕ್ ದೀಪಗಳ ಪ್ರಕಾಶಕ್ಕಿಂತ ಪ್ಯಾರೇಲಾಲ್‌ಗೆ ಗ್ರಾಮ ರಸ್ತೆಯಲ್ಲಿನ ನಕ್ಷತ್ರ ಪ್ರಕಾಶವೇ ಹೆಚ್ಚು ಇಷ್ಟವಿತ್ತು. ಪ್ರಕೃತಿ ಮಾತ್ರವೇ, ಮನುಷ್ಯನನ್ನು ಕಾಪಾಡುವುದು. ಮಧ್ಯೆ ಮಧ್ಯೆ ಕೋಪಿಸಿಕೊಳ್ಳುತ್ತಾದರೂ ಮಳೆಯನ್ನು ಬಿಸಿಲನ್ನು, ಶೈತ್ಯವನ್ನು, ಉಷ್ಣವನ್ನೂ ಸ್ವಲ್ಪವೂ ಲೋಪ ಮಾಡದೆ ಪ್ರಕೃತಿಯು ನೀಡುತ್ತದೆ.

ಪ್ಯಾರೇಲಾಲ್ ಗ್ರಾಮದ ಕಡೆ ಹೋಗುತ್ತಿರುವಾಗ ಶೀತದ ಗಾಳಿಗೆ ಸ್ವಲ್ಪ ಶಕ್ತಿ ಹೆಚ್ಚಿತು. ಈ ಸಲ ಒಂದು ಉಲ್ಲನ್ ಕೋಟನ್ನು ಹೊಲಿಸಬೇಕು. ನಾಲ್ಕು ವರ್ಷಗಳಷ್ಟು ಹಳೆಯದಾದ ಕೋಟು ಹರಿಯಲು ಆರಂಭಿಸಿತ್ತು.

ಇದ್ದಕ್ಕಿದ್ದಂತೆ ಗ್ರಾಮದಲ್ಲಿನ ಮಂಕಾದ ಬೆಳಕು ಪ್ರತ್ಯಕ್ಷವಾಯಿತು. ಅದರೊಂದಿಗೆ ಎಮ್ಮೆ ಸಗಣಿಯ ವಾಸನೆಯೂ ಬರಲಾರಂಭಿಸಿತು. ಪಟ್ಟಣದ ಎಲ್ಲೆಯಿಂದ ತನ್ನ ಗ್ರಾಮವನ್ನು ನೋಡಿದಾಗ ಅದು ಉರಿದು ಆರಿಹೋಗುತ್ತಿದ್ದ ಅನೇಕ ಚಿತ್ರಗಳುಳ್ಳ ಒಂದು ಸ್ಮಶಾನದಂತೆ ತೋರಿತು. ಪಟ್ಟಣದಂತೆ ತನ್ನ ಗ್ರಾಮಕ್ಕೆ ಬೆಡಗು ಇಲ್ಲ. ಆದರೆ ಹೃದಯವಿದೆ. ಜೀವನವನ್ನು ಅದರ ಯಥಾರ್ಥ ರೂಪದಲ್ಲಿ ಅಲ್ಲಿಯವರು

ಕಾಣುತ್ತಾರೆ. ಅದರಂತೆಯೇ ಅನುಭವಿಸುತ್ತಾರೆ. ಅವರು ಹಾಲನ್ನು ಹಾಲಿನಂತೆಯೂ, ಮೊಸರನ್ನು ಮೊಸರಿನಂತೆಯೂ ಸೇವಿಸುತ್ತಾರೆ. ತಮಗೆ ತೋಚಿದ ವಿಷಯವನ್ನು ಎದುರೆದುರಿಗೇ ಹೇಳುತ್ತಾರೆ. ತಾನು ಸೈನ್ಯದಲ್ಲಿದ್ದು ಕೇಳಿದ್ದ ಹಿಪ್ಪೋಕ್ರೆಸಿ ಎಂಬ ಮಾತು ಅವರಿಗೆ ತಿಳಿಯದು.

ಒಟ್ಟಿನಲ್ಲಿ ಆರೇಳು ಅಂಗಡಿಗಳು ಆ ಗ್ರಾಮದಲ್ಲಿ ಇದ್ದವು. ಅಲ್ಲಿ ಇತ್ತೀಚೆಗೆ ಗಜಿಬಿಜಿ ಹೆಚ್ಚಿದೆ. ಹಗಲೆಲ್ಲಾ ಅಂಗಡಿಯವರು ನಿದ್ದೆ ಮಾಡುತ್ತಿದ್ದರು. ಸಂಜೆಯಾಗುವ ಹೊತ್ತಿಗೆ ಅವರು ಚಟುವಟಿಕೆಯಿಂದ ಕೆಲಸ ಮಾಡಲಾರಂಭಿಸುತ್ತಾರೆ. ಗದ್ದೆಗಳಿಂದಲೂ ಗುಡ್ಡಗಳಿಂದಲೂ ಕೂಲಿಗಾರರು ಕೆಲಸದ ಸಮಯದಲ್ಲಿ ಉಟ್ಟ ಮುಂಡಿನೊಂದಿಗೇ ಅಂಗಡಿಗಳಿಗೆ ಬಂದು ಗೋಧಿಹಿಟ್ಟು ಈರುಳ್ಳಿ, ಸೀಮೆಎಣ್ಣೆಗೆ ಅವಸರಪಡಿಸುತ್ತಾರೆ.

ಪ್ಯಾರೇಲಾಲ್‌ನನ್ನು ಯಾರ್ಯಾರೋ ಕುಶಲಪ್ರಶ್ನೆ ಮಾಡಿದರು.

"ಯಾವಾಗ ಬಂದೆ ?"

ಹೆಚ್ಚುಜನರು ಅದೇಪ್ರಶ್ನೆಯನ್ನು ಕೇಳುತ್ತಿದ್ದರು. ಅವರು ಹಿಂದಿರುವಿಕೆಯ ಪ್ರಯಾಣದ ಬಗ್ಗೆ ಎಲ್ಲರಿಗೂ ಅರಿವಿತ್ತು.

ಧ್ಯಾನ್‌ಚಂದ್‌ನ ಹಾಲಿನ ಅಂಗಡಿಯ ಎಡಭಾಗದಲ್ಲಿನ ಇಕ್ಕಟ್ಟಾದ ದಾರಿಯು ಮೂಲಕವಾಗಿ ಅವನು ಸೈಕಲ್ ಓಡಿಸಿದನು. ನಲ್ಲಿಯ ಬಳಿ ಹೆಂಗಸರ ನೂಕು ನುಗ್ಗಲಿತ್ತು. ಅವರ ಮಾತುಗಳಿಗೆ ತಾಮ್ರದ ಪಾತ್ರೆಗಳನ್ನು ನೆಲದ ಮೇಲೆ ಹಾಕಿ ಉಜ್ಜುವುದಕ್ಕಿಂತ ಹೆಚ್ಚು ತೀಕ್ಷ್ಣತೆಯಿತ್ತು. ಎಲ್ಲರೂ ನೀರಿಗೆ ಆತುಪಡುತ್ತಿದ್ದರು. ಹಗಲೆಲ್ಲಾ ಅವರಿವರ ಮೇಲೆ ಚಾಡಿ ಹೇಳಿಕೊಂಡು ಹರಟೆ ಕೊಚ್ಚುತ್ತಿದ್ದ ಅವರು ಸಾಯಂಕಾಲ ಸುಸ್ತಾಗಿ ಬರುವ ತಮ್ಮ ಗಂಡಂದಿರನ್ನು ನೆನೆದು ಅವಸರಪಡುತ್ತಾ ಗಲಾಟೆಗೆ ತೊಡಗುತ್ತಿದ್ದರು.

ಮಂಕಾದ ಬೆಳಕಿನ ಹಿನ್ನೆಲೆಯಲ್ಲಿ ಕತ್ತಲೆಯಾಗಿದ್ದ ನೆರಳುಗಳನ್ನು ಹರಡಿದ್ದ ಗುಡಿಸಲುಗಳ ಎದುರಿಗೆ ತನ್ನ ಸೈಕಲನ್ನು ತಳ್ಳಿಕೊಂಡು ಪ್ಯಾರೇಲಾಲ್ ತನ್ನ ಗುಡಿಸಲಿಗೆ ಹೋದನು.

ಹಿರಿಯ ಮಗನು ರೂಢಿಯಂತೆ ಸೀಮೆಎಣ್ಣೆ ದೀಪದ ವಾಸನೆಯಲ್ಲಿ ಕುಳಿತುಕೊಂಡು ಪಠ್ಯಪುಸ್ತಕವನ್ನು ಓದುತ್ತಿದ್ದನು. ಅವನು ಅಂದು ಗಾಂಧೀಜಿಯ ಮಹಾತ್ಮ್ಯೆಗಳನ್ನು ಹೊಗಳುತ್ತಾ ಇದ್ದನು.

ಗೋಡೆಯ ಮೇಲಿದ್ದ ಒಂದು ಹಕ್ಕಿಯು ಅದನ್ನು ಕೇಳುತ್ತಲಿತ್ತು. ಯಾವುದೋ ಒಂದು ಸಣ್ಣ ಕೀಟವನ್ನು ನೋಡಿ ಬಾಲವನ್ನಾಡಿಸುತ್ತಾ ಅದು ನಿಂತಿತ್ತು. ಹೆಂಡತಿ ಎಂದಿನಂತೆ ಅಡಿಗೆ ಕೋಣೆಯಲ್ಲಿರಲಿಲ್ಲ. ಅವಳು ಗುಡಿಸಲಿನ ಹೊರಗೆ ಜಗುಲಿಯ ಮೇಲಿದ್ದು ಕಿರಿಯ ಮಗುವಿಗೆ ಚೆನ್ನಾಗಿ ಹೊದಿಸಿ ತನ್ನ ಮಡಿಲಿನಲ್ಲಿ ಕುಳ್ಳಿರಿಸಿಕೊಂಡಿದ್ದಳು.

"ಏನಾಯಿತು ?" ಪ್ಯಾರೇಲಾಲ್ ಕೇಳಿದನು.

"ಜ್ವರ. ಬೆಂಕಿಯಂತೆ ಸುಡುತ್ತಿರುವ ಜ್ವರ."

ಪ್ಯಾರೇಲಾಲ್ ಮಗುವಿನ ಮೇಲಿದ್ದ ಬಟ್ಟೆಯನ್ನು ಸರಿಸಿ ಮಗುವಿನ

ಹೊಟ್ಟೆಯನ್ನು ಮುಟ್ಟಿ ನೋಡಿದನು. ಬೆಂಕಿಯಂತೆ ಅದು ಸುಡುತ್ತಿತ್ತು. ಹೆಂಡತಿಯ ಮುಖವು ಬಾಡಿ ಸೀದಂತಿತ್ತು.

ಪ್ಯಾರೇಲಾಲ್ ಗುಡಿಸಲಿನ ಒಳಕ್ಕೆ ಹೋದನು. ಆ ಪುಟ್ಟ ಮನೆಯಲ್ಲಿ ಎರಡು ಕೋಣೆಗಳೇ ಇದ್ದವು. ಒಂದು ಮಲಗುವ ಕೋಣೆ, ಮತ್ತೊಂದು ಅಡಿಗೆ ಕೋಣೆ. ಹುರಿ ಬಿಗಿದಿದ್ದ ಮಂಚದ ಕೆಳಗಿದ್ದ ತನ್ನ ಬಳಿಯಲ್ಲಿರುವ ಏಕೈಕ ಕಬ್ಬಿಣದ ಪೆಟ್ಟಿಗೆಯನ್ನು ಎಳೆದು ಹೊರಕ್ಕಿಟ್ಟನು. ಪೆಟ್ಟಿಗೆಯಲ್ಲಿದ್ದ ಜೀರ್ಣವಾದ ವಸ್ತ್ರಗಳ ಭಾರದಿಂದ ಅಮುಕಲ್ಪಟ್ಟ ಎರಡು ಆಸ್ಪಿರಿನ್ ಮಾತ್ರೆಗಳನ್ನು ಹೊರಕ್ಕೆ ತೆಗೆದನು. ಅವು ಮುನ್ನೂರು ಮಿಲಿಗ್ರಾಂನ ಎರಡು ಮಾತ್ರೆಗಳಾಗಿದ್ದವು.

ಹೊರಕ್ಕೆ ಬಂದು ತಾನೊಬ್ಬ ಡಾಕ್ಟರ್‌ನೆಂಬ ಭಾವದಲ್ಲಿ ಪ್ಯಾರೇಲಾಲ್ ತನ್ನ ಹೆಂಡತಿಯೊಂದಿಗೆ ಹೇಳಿದನು.

"ಒಂದು ಈಗ ಕೊಡು, ಇನ್ನೊಂದು ನಾಳೆ ಬೆಳಿಗ್ಗೆ ಕೊಡು."

ಆಗ ಅವನಿಗೆ ಆಸ್ಪತ್ರೆಯಲ್ಲಿ ತುಂಬಾ ಔಷಧಿಗಳನ್ನು ಜೋಪಾನವಾಗಿಟ್ಟಂತಹ ಮೂರು ಅಂತಸ್ತಿನ ಕಟ್ಟಡದ ನೆನಪಾಯಿತು. ಅವನು ನೋವಿನಿಂದ ಮುಖ ಹಿಂಡಿ ನಿಟ್ಟುಸಿರೆಳೆದನು.

ಅಡಿಗೆ ಕೋಣೆಯಲ್ಲಿ ಮಬ್ಬಾದ ಪ್ರಕಾಶವಲ್ಲದೆ ಒಲೆಯಲ್ಲಿ ಹೊಗೆ ಏನೂ ಆಡುತ್ತಿರಲಿಲ್ಲ. ಸಣ್ಣ ಸಣ್ಣ ಸೌದೆ ತುಂಡುಗಳನ್ನು ಅದರ ಮೇಲೆ ಕಲ್ಲಿದ್ದಲಿನ ಚೂರುಗಳನ್ನು ಇಟ್ಟು ಅದಕ್ಕೆ ಅವನು ಬೆಂಕಿ ಹಚ್ಚಿದನು. ಬೆಂಕಿ ತಾಗಿ ಹೊತ್ತಿಕೊಂಡ ಮೇಲೆ ಒಲೆಯ ಮೇಲೆ ಮಣ್ಣಿನ ಕಾವಲಿಯನ್ನು ಹಾಕಿದನು. ಅನಂತರ ಕಲೆಸಿಟ್ಟಿದ್ದ ಹಿಟ್ಟನ್ನು ತೆಗೆದುಕೊಂಡು ಒಂದು ಲಟ್ಟಣಿಕೆಯಿಂದ ಲಟ್ಟಿಸತೊಡಗಿದನು.

# ಹತ್ತು

ಭಾನುವಾರವಾದ್ದರಿಂದ ಹೆಲೆನ್ ಸಿಂಗ್ ನಿದ್ದೆಯಿಂದ ಎದ್ದಾಗ ಬಹಳ ಹೊತ್ತಾಗಿತ್ತು. ಆಲಸ್ಯದಿಂದ ಅಂಗಾತವಾಗಿ ಮಲಗಿರಬೇಕೆಂದು ಆಕೆಗೆ ಅನಿಸುತ್ತಿತ್ತಲ್ಲದೆ ಎದ್ದೇಳಲು ಮನಸ್ಸೇ ಇರಲಿಲ್ಲ.

ಹೆಲೆನ್ ಸಿಂಗ್ ಆಲೋಚಿಸತೊಡಗಿದಳು. ಈ ಭಾನುವಾರದ ಅವಧಿ ಬಹಳ ಕಡಿಮೆ. ಇಷ್ಟು ಗಂಟೆಗಳ ಕಾಲ ಎಲ್ಲಿ ಹೋಗುತ್ತೋ ಏನೋ, ಒಂದು ಗುಡುಗಿನ ಹೊಡೆತದಂತೆ ಭಾನುವಾರವು ಮಿಂಚಿ ಮರೆಯಾಗಿ ಬಿಡುತ್ತದೆ.

ಹೆಲೆನ್ ಸಿಂಗ್ ಸುಣ್ಣ ಬಳಿದು ಬಹುದಿನಗಳಾಗಿದ್ದ ಗೋಡೆಯ ಕಡೆಗೂ, ಮೇಲ್ಛಾವಣಿಯ ಕಡೆಗೂ ಕಣ್ಣುಗಳನ್ನು ನೆಟ್ಟು ನೋಡುತ್ತಾ ಮಲಗಿದರು. ಮೇಲ್ಛಾವಣಿಯಲ್ಲಿ ರೂಪವಿಲ್ಲದ ಚಿತ್ರಗಳು ಸ್ಪಷ್ಟವಾಗಿ ಕಾಣುತ್ತಿದ್ದುವು. ಪಕ್ಷಿಗಳು, ಮೃಗಗಳು, ಮನುಷ್ಯರು, ಸೈತಾನರೂ, ದೇವರುಗಳು, ಮನಸ್ಸಿನಲ್ಲಿ ಯೋಚಿಸುವ ಯಾವುದೇ ಒಂದನ್ನು ಆಕೆಗೆ ಅಲ್ಲಿ ಸೃಷ್ಟಿಸಿ ನೋಡಲು ಸಾಧ್ಯವು. ಟೆರೇಸ್‌ನಲ್ಲಿ ನೀರು ನಿಂತಿದ್ದರಿಂದ, ಗೋಡೆಯ ಮೇಲೆ ಉಂಟಾಗಿದ್ದ ಕಪ್ಪಗಿನ ರೂಪಗಳತ್ತ ಆಕೆ ಕಣ್ಣುಗಳನ್ನೋಡಿಸಿದರು. ಒಂದು ಆನೆಯೆಂದು ಮೊದಲು ಅಂದುಕೊಂಡು ಅದನ್ನು ಸ್ವಲ್ಪ ಹೊತ್ತು ನೋಡುತ್ತಿರಬೇಕಾದರೆ ಅದು ಆನೆಯಲ್ಲವಾಗಿತ್ತು. ಅದು ನದಿಯಿಂದ ಕೊಡದಲ್ಲಿ ನೀರನ್ನು ಎತ್ತಿಕೊಂಡು ಬರುವ ಒಬ್ಬ ಸ್ತ್ರೀಯು ಹಾಗಿರಬೇಕೆಂದೆನ್ನಿಸಿತು. ಒಂದು ರೂಪವೇ ಹೀಗೆ ತೋರಿದರೆ ಏನಾಗಿರುತ್ತದೆ ಸ್ಥಿತಿ ? ಆಕೆಗೆ ಭಯವಾಯಿತು. ಮನಸ್ಸು ಇತ್ತೀಚೆಗೆ ಮೂರು ಕಾಲಮಾನಗಳನ್ನೂ ದಾಟಿ ಪ್ರಯಾಣ ಮಾಡುತ್ತಿದೆ. ನಾಲ್ಕನೆಯ ಮಾನವು ಭ್ರಾಂತೆಂದು ಅನಿಸಿದಾಗ ಮೇಟ್ರನ್ ಹೆಲೆನ್ ಸಿಂಗ್ ನಡುಗಿದರು.

ಬಾಗಿಲನ್ನು ಯಾರೋ ತಟ್ಟಿದರು. ಇಷ್ಟು ಬೆಳಿಗ್ಗೆ ಯಾರು ಬಂದಿರಬಹುದು ? ಆಕೆ ಎದ್ದು ನೈಟ್‌ಗೌನ್‌ನ ಸುಕ್ಕುಗಳನ್ನು ಸರಿ ಮಾಡಿಕೊಂಡು ತಲೆಗೂದಲುಗಳನ್ನು ಮುಖವನ್ನು ಎರಡು ಕೈಗಳಿಂದಲೂ ಒರೆಸಿಕೊಂಡು ಬಾಗಿಲ ಕಡೆ ನಡೆದರಾಕೆ. ಬಹುಶಃ ಮೇರಿ ಇರಬೇಕು. ಈ ಭಾನುವಾರ ಅವಳಿಗೂ ರಜೆ ಇರಬೇಕಲ್ಲವೇ ?

ಬಾಗಿಲು ತೆರೆದಾಗ ಆ ಊಹೆ ಸುಳ್ಳಾಯಿತು. ಎತ್ತರಕ್ಕೆ ಸೆಟೆದು ನಿಂತಿರುವ ಒಬ್ಬ ಪುರುಷನನ್ನು ಕಂಡರಾಕೆ. ವಿಶಾಲವಾದ ವಕ್ಷಸ್ಥಳ, ದೊಡ್ಡ ದೊಡ್ಡ ಚೌಕುಳಿಗಳಿರುವ ಬುಷ್ ಷರ್ಟ್. ಆತನ ಮುಂದೆ ಆತನ ಭುಜದವರೆಗಿದ್ದ ಒಬ್ಬ ಸ್ತ್ರೀ ಇದ್ದಳು. ಗಾಢ ಕೆಂಪು ಬಣ್ಣದ ಸೀರೆ ಮೊದಲು ಆಕೆಗೆ ಕಾಣಿಸಿತು. ಅನಂತರ ಅವಳ ಮುಖವನ್ನು ಕಂಡರು. ಅವಳು ಮಿಸೆಸ್ ತಿವಾರಿ.

ಹೆಲೆನ್ ಸಿಂಗ್ ಕೃತ್ರಿಮ ನಗು ನಕ್ಕರು.

"ಏನು ಹೀಗೆ ನಿದ್ದೆ ಮಾಡುತ್ತಿದ್ದೀರಿ ?" ಮಿಸೆಸ್ ತಿವಾರಿ ಕೇಳಿದಳು. ಮೇಟ್ರನ್ ಅಲ್ಲಿಯವರೆಗೂ ನೋಡದಿದ್ದ ತನ್ನ ವಾಚನ್ನೇ ನೋಡಿಕೊಂಡರು. ಹತ್ತೂವರೆ ಗಂಟೆಯಾಗಿತ್ತು. ಹೆಲೆನ್ ಸಿಂಗ್‌ಗೆ ತಕ್ಷಣ ಏನೋ ಜ್ಞಾಪಕ ಬಂತು. ಸರ್ರನೆ ನಡೆದು ಮೇಜಿನ ಮೇಲೆ ಖಾಲಿಯಾಗಿ ಬಿದ್ದಿದ್ದ ರಮ್ ಬಾಟಲ್ ಅನ್ನು ತೆಗೆದುಕೊಂಡು ಸ್ನಾನದ ಕೋಣೆಗೆ ಓಡಿದರು. ಓಡುವಾಗ ಜೋರಾಗಿ ಕೂಗಿ ಹೇಳಿದರು.

"ನೀವು ಕುಳಿತುಕೊಂಡಿರಿ. ನಾನಿಗೋ ಬಂದುಬಿಟ್ಟೆ."

ಮೇಟ್ರನ್ ಸ್ನಾನ ಮಾಡುತ್ತಿದ್ದಾಗೆಲ್ಲಾ ಮಿಸೆಸ್ ತಿವಾರಿಯೊಂದಿಗೆ ಕಂಡ ಪುರುಷನನ್ನೇ ನೆನೆಯುತ್ತಿದ್ದರು. ಒಂದೇ ಒಂದು ನಿಮಿಷ ತಾವು ಕಂಡಿದ್ದ ಮುಖಕ್ಕೆ ಇಷ್ಟರ ಮಟ್ಟಿಗಿನ ಶಕ್ತಿ ಇದೆಯೇ ? ತರಾತುರಿಯಲ್ಲಿ ಮಿಂದು ಬಟ್ಟೆ ಬದಲಾಯಿಸಿ ಹೆಲೆನ್ ಸಿಂಗ್ ಹೊರಕ್ಕೆ ಬಂದರು.

ಮಿಸೆಸ್ ತಿವಾರಿಯೂ ಆ ಪುರುಷನೂ ಹೊತ್ತು ಕಳೆಯಲೋಸುಗ ಒಂದೊಂದು ಮಾಸಪತ್ರಿಕೆಯನ್ನು ಕೈಯಲ್ಲಿ ತೆಗೆದುಕೊಂಡು ಪೇಜುಗಳನ್ನು ತಿರುವಿ ಹಾಕುತ್ತಿದ್ದರು.

"ಸ್ವಲ್ಪ ಹೊತ್ತಾಯಿತೆಂದು ಕಾಣುತ್ತೆ" ಕ್ಷಮಾಪಣೆಯೆಂಬಂತೆ ಹೆಲೆನ್ ಸಿಂಗ್ ಕೇಳಿದರು.

"ನಮಗೆ ಇವತ್ತು ಕೆಲಸವೇನಿರಲಿಲ್ಲ. ಅಯ್ಯೋ ನಾನು ಮರೆತೇಬಿಟ್ಟೆ. ಇವರನ್ನು ನಿಮಗೆ ಪರಿಚಯ ಮಾಡಿಕೊಡಲೇ ಇಲ್ಲ. ಇವರು ನನ್ನ ಪತಿ ತಿವಾರಿ."

ಮಿಸೆಸ್ ತಿವಾರಿ ಮಾತುಕತೆಯಾಡಿದ್ದು ಬಹಳ ಸ್ವಾತಂತ್ರ್ಯದಿಂದಾಗಿತ್ತು.ತನ್ನ ಗಂಡನೊಂದಿಗೆ ವರ್ತಿಸಿದ್ದೂ ಮಾತನಾಡಿದ್ದೂ ಒಬ್ಬ ಸ್ನೇಹಿತನೊಂದಿಗೆಂಬಂತಿತ್ತು.

ತಿವಾರಿ ಎತ್ತರಕ್ಕೆ ದೃಢವಾಗಿದ್ದ ವ್ಯಕ್ತಿ. ತಲೆ ತುಂಬ ಕೂದಲು, ವಿಶಾಲವಾದ ಭುಜಗಳು ಆತನ ಶಕ್ತಿಯನ್ನು, ವ್ಯಕ್ತಿತ್ವವನ್ನು ಹೆಚ್ಚಿಸಿದ್ದವು. ಬಲದ ಕೈಗೆ ಒಪ್ಪುವ ಒಂದು ದೊಡ್ಡ ವಾಚನ್ನು ಕಟ್ಟಿದ್ದನಾತ. ವಾಚಿನ ಸುತ್ತಲೂ ರೋಮಗಳು ಕಾವಲುಗಾರರಂತೆ ಎದ್ದು ನಿಂತಿದ್ದವು. ಆತನೊಮ್ಮೆ ಕೆಮ್ಮಿದನು. ಮೇಟ್ರನ್‌ಗೆ ಆ ಕ್ಷಣ ಕೋಣೆ ಎಲ್ಲಾ ನಡುಗಿದಂತೆ ಭಾಸವಾಯಿತು.

ಒಬ್ಬ ಪರಪುರುಷನನ್ನು ಸ್ವಲ್ಪ ಹೊತ್ತು ನೋಡಿದ ಅಪರಾಧೀ ಮನೋಭಾವವು ತಕ್ಷಣ ಆಕೆಗೆ ಅನುಭವವಾಯಿತು. ಆಕೆ ನೋಟ ಬದಲಾಯಿಸಿದರು.

"ಕುಡಿಯಲು ಏನು ಕೊಡಲಿ ?"

"ನನಗೆ ನಿಂಬೆಪಾನಕಸಾಕು" ಮಿಸೆಸ್ ತಿವಾರಿ ತನಗೆ ಬೇಕಾದ್ದನ್ನು ತಟ್ಟೆಂದು ಹೇಳುವ ಸ್ವಭಾವ ಹೊಂದಿದ್ದಳು. ಅದು ಇಲ್ಲವೋ ಇದೆಯೋ ಎಂದು ಯೋಚಿಸು ತ್ತಿರಲಿಲ್ಲ.

"ನಿಮಗೆ" ತಿವಾರಿಯನ್ನು ಹೆಲೆನ್ ಸಿಂಗ್ ಕೇಳಿದರು. ಅದಾಗಿತ್ತು ಆಕೆಯ ಮೊದಲ ಸಂಭಾಷಣೆ. ಒಂದು ಪರಿಚಯದ ಪ್ರಾರಂಭವೂ ಆದಾಗಿತ್ತು. ಆತನು ತನ್ನ ಕೆಳಗಿನ ತುಟಿಯನ್ನು ಸ್ವಲ್ಪ ಹಿಂದಕ್ಕೆ ಸೆಳೆದುಕೊಂಡು ನಕ್ಕನು. ನಗುವಾಗ ಎರಡು ತುಟಿಗಳೂ ಒಂದೇ ತರಹ ಆಗುವುದಿಲ್ಲ. ಚಿಕ್ಕಂದಿನಲ್ಲಿ ಆತನಿಗೆ ಏನಾದರೂ ರೋಗ ಬಂದಿದ್ದಿರಬೇಕು. ಆದರೂ ಆ ವಕ್ರತೆಗೆ ಏನೋ ಒಂದು ಆಕರ್ಷಣೆ ಇರುವಂತೆ

ಹೆಲೆನ್ ಸಿಂಗ್‌ಗೆ ಅನ್ನಿಸಿತು. ವಾಸ್ತವದಲ್ಲಿ ನಗಬೇಕಾದ್ದು ಒಂದು ಭಾಗದಿಂದ ಮಾತ್ರ. ಎರಡು ಭಾಗಗಳಿಂದ ದುಃಖಿಸಬೇಕು.

ಆತ ಹೇಳಿದನು:

"ನನಗೊಂದು ಲೋಟ ನೀರು ಸಾಕು."

ಮಿಸೆಸ್ ತಿವಾರಿ ಹೇಳಿದಳು: "ಇಂತಹ ಅತಿಥಿ ದೊರಕುವುದು ನಿಮಗೆ ಲಾಭವೇ. ಎಲ್ಲಿ ಹೋದರೂ ಸರಿ ಇವರು ನೀರು ಮಾತ್ರವೇ ಕುಡಿಯುವುದು."

"ಅದು ಬಹಳ ಒಳ್ಳೆಯ ಸ್ವಭಾವ" ಮೇಟ್ರನ್ ಹೇಳಿದರು. "ಯಾರಿಗೂ ಯಾವ ಕಷ್ಟವೂ ತೋಚುವುದಿಲ್ಲ. ನೀರು ತುಂಬಿಸಿದ ಪಾತ್ರೆಯೊಳಗೆ ಒಂದು ಲೋಟ ಅದ್ದಬೇಕು ಅಥವಾ ನೀರು ತುಂಬಿಸಿದ ಪಾತ್ರೆಯಿಂದ ನೀರನ್ನು ಲೋಟಕ್ಕೆ ಬಗ್ಗಿಸಬೇಕು."

ಹೆಲೆನ್ ಸಿಂಗ್‌ಗೆ ಒಟ್ಟಿನಲ್ಲಿ ಹಾಯೆನಿಸಿತು. ಆಕೆಯ ಮೈಯ ರೋಮಗಳು ಎದ್ದು ನಿಂತು.

ತಿವಾರಿಯ ಕಡೆ ನೋಡದೆ ಆತನ ಹೆಂಡತಿಯ ಸೀರೆಯನ್ನೇ ನೋಡುತ್ತಾ ಆಕೆ ಕೇಳಿದರು. "ನಿಮ್ಮ ಯಜಮಾನರಿಗೇನು ಕೆಲಸ ?"

"ಲೆಕ್ಚರರ್" ಅಭಿಮಾನದಿಂದ ಅವಳು ಹೇಳಿದಳು. ಲೋಕದಲ್ಲಿ ಬಹು ದೊಡ್ಡ ಕೆಲಸವೆಂದರೆ ಅದೇ ಎಂಬ ಭಾವನೆಯಲ್ಲಾಗಿತ್ತು ಅವಳ ಆ ಮಾತು.

"ಅಲ್ಲ" ಆಗ ತಿವಾರಿ ತಿದ್ದಿದನು. "ನಾನೊಬ್ಬ ರಿಂಗ್ ಮಾಸ್ಟರ್."

ಹೆಲೆನ್ ಸಿಂಗ್ ಅಚ್ಚರಿಯಿಂದ ನೋಡುತ್ತಿರಬೇಕಾದರೆ ಆತನು ಮುಂದು ವರೆಸಿದನು.

"ನೂರು ನೂರೈವತ್ತು ಮೃಗಗಳಿರುವ ಕೋಣೆಗಳಲ್ಲಿ ನಾನು ಕೆಲಸ ಮಾಡುತ್ತೇನೆ."

"ಅಷ್ಟೇ ತಾನೇ, ಅದಕ್ಕೇನಂತೆ ?" ಹೆಲೆನ್ ಸಿಂಗ್ ತಿದ್ದಿದರು. "ವಿದ್ಯಾರ್ಥಿಗಳೂ ಕೋತಿಗಳೂ ಒಂದೇ ಅಲ್ಲವೇ ?"

ಆಕೆ ಜೋರಾಗಿ ನಕ್ಕರು.

ಕನ್ನಯ್ಯಲಾಲ್ ಒಂದು ಲೋಟ ನೀರನ್ನೂ, ಒಂದು ಲೋಟ ನಿಂಬೇಕಾಯಿ ಪಾನಕವನ್ನೂ ತಂದನು.

ತಿವಾರಿ ಎರಡು ಕೈಗಳಲ್ಲೂ ಲೋಟವನ್ನು ಹಿಡಿದು ತನ್ನ ಮುಖದ ಬಳಿಗೆ ತಂದನು ಮುತ್ತು ಕೊಡುವಂತೆ. ಅನಂತರ ವಿಸ್ಕಿ ಕುಡಿಯುವಂತೆ ಆತನು ಗುಟುಗುಟುಕಾಗಿ ನೀರು ಕುಡಿದನು.

ತಿವಾರಿ ನೀರು ಕುಡಿದು ಲೋಟವನ್ನು ಟೀಪಾಯಿಯ ಮೇಲಿಟ್ಟು ತನ್ನ ಪ್ಯಾಂಟ್ ಜೇಬಿನಿಂದ ಸಿಗರೇಟ್ ಪ್ಯಾಕೇಟ್ ಅನ್ನು ಹೊರ ತೆಗೆದನು.

"ಶುರು ಮಾಡಿದಿರಿ, ಹಾಳಾದ್ದು" ಮಿಸೆಸ್ ತಿವಾರಿ ಹೇಳಿದಳು.

"ಏನು ?" ಹೆಲೆನ್ ಸಿಂಗ್ ಕೇಳಿದರು.

"ಇವರಿಗೆ ಇದೊಂದು ಶಾಪ."

ಹೆಲೆನ್ ಸಿಂಗ್ ಜೋರಾಗಿ ನಕ್ಕರು. ಅನಂತರ ಹೇಳಿದರು "ನನಗೊಂದು

ವಿಷಯ ಹೇಳಲಿದೆ. ಪುರುಷರನ್ನು ನಾನು ದ್ವೇಷಿಸುತ್ತೇನೆ. ಆದರೆ ಧಾರಾಳವಾಗಿ ಸಿಗರೇಟ್ ಸೇದುವವರನ್ನು ಕಂಡರೆ ನನಗಿಷ್ಟ."

ತಕ್ಷಣ ಹೆಲೆನ್‌ಸಿಂಗ್‌ನ ಮುಖ ಕಪ್ಪಿಟ್ಟಿತು. ತಾವು ಅಸಂಬದ್ಧವಾಗಿ ಏನೋ ಒದರಿದೆನೆಂಬ ಅರಿವು ಆಕೆಯನ್ನು ಅಸ್ವಸ್ಥವಾಗಿಸಿತು.

ಹೆಲೆನ್ ಸಿಂಗ್‌ನ ಪ್ರಸ್ತಾವನೆಯು ಮಿಸೆಸ್ ತಿವಾರಿಗೆ ಸ್ವಲ್ಪವೂ ಹಿಡಿಸಲಿಲ್ಲ. ಅವಳು ಬಹಳ ಹೊತ್ತು ತನ್ನ ತೋರು ಬೆರಳಿನಿಂದ ಮುಂದಿರುವ ಟೀಪಾಯಿಯ ಮೇಲೆ ಯಾವುದೋ ಚಿತ್ರಗಳನ್ನು ಬಿಡಿಸುತ್ತಿದ್ದಳು.

"ಅಂದಹಾಗೆ ನಾನು ಮರೆತೆ." ಹೆಲೆನ್ ಸಿಂಗ್ ಸಂಭಾಷಣೆಯನ್ನು ಬೇರೊಂದು ದಾರಿಗೆ ತಿರುಗಿಸಲೆತ್ನಿಸುತ್ತಾ ಹೇಳಿದರು. "ನಿಮ್ಮ ರೋಗಿಗೆ ಈಗ ಹೇಗಿದೆ ?"

ಮಿಸೆಸ್ ತಿವಾರಿಯ ತಾಯಿಯು ಪ್ರೈವೇಟ್ ವಾರ್ಡಿನಲ್ಲಿ ಮಲಗಿದ್ದರು. ಪ್ರೊಲಾಪ್ಸ್ ಯುಟೆರಸ್. ಆಕೆಯ ನಾಲ್ಕು ಮಕ್ಕಳನ್ನು ಹೊತ್ತು ಹೆತ್ತ ಗರ್ಭಕೋಶವು ಇನ್ನೂ ಅಲ್ಲೇ ಇರುವುದಿಲ್ಲವೆಂಬ ಮಟ್ಟದಲ್ಲಿ ಹೊರಕ್ಕೆ ಬರುವ ದಾರಿಯನ್ನು - ಮಕ್ಕಳು ಹೊರಬಂದ ಅದೇ ದಾರಿಯನ್ನು ನೋಡುತ್ತಿತ್ತು.

"ಸೌಖ್ಯವಾಗಿದ್ದಾರೆ. ಆದರೆ ಗರ್ಭಕೋಶವನ್ನು ಹಾಗೆ ತೆಗೆದು ಹಾಕಬೇಕಾಗ ಬಹುದೆಂದು ಡಾಕ್ಟರ್ ಹೇಳಿದರು."

"ಕಷ್ಟ ಪಾಪ" ತನಗೇ ಗೊತ್ತಿಲ್ಲದೆ ಹೆಲೆನ್ ಸಿಂಗ್ ಹೇಳಿಬಿಟ್ಟರು. "ಆದರೇನಂತೆ ಅದೊಂದು ಸಾಧಾರಣ ಆಪರೇಷನ್ ಅಲ್ಲವೇ ?" ಸಮಾಧಾನಪಡಿಸಲೆಂಬಂತೆ ಹೆಲೆನ್ ಸಿಂಗ್ ಹೇಳಿದರು.

"ಕಷ್ಟವೇಕೆ ?" ತಿವಾರಿ ತಕ್ಷಣ ಮಾತಾಡಿದನು. ವೃದ್ಧೆಯೊಬ್ಬಳಿಗೆ ಒಂದು ಗರ್ಭಕೋಶವು ನಷ್ಟವಾದರೆ ಏನಾಯಿತೀಗ ? ಇಂತಹ ಸ್ತ್ರೀಯರು ಯಾವ ಅವಯುವವನ್ನು ಕತ್ತರಿಸಿ ಹಾಕಿದರೂ ಜೀವಿಸುತ್ತಾರೆ. ಅವರ ನಾಲಗೆಯನ್ನು ಕತ್ತರಿಸುವವರೆಗೂ ಪರವಾಗಿಲ್ಲ."

ಮಿಸೆಸ್ ತಿವಾರಿಯ ಮುಖವು ತಕ್ಷಣ ಕಪ್ಪಿಟ್ಟಿತು. ಅನಂತರ ಕೆಂಪಾಯಿತು. ಆದರೆ ಅವಳು ಏನೆಲ್ಲ ಒಳಗೇ ಅಡಗಿಸಿ ಹಿಡಿದಿದ್ದಳು. ಅನಂತರ ಹೇಳಿದಳು.

"ಬನ್ನಿ, ನಾವು ಹೋಗೋಣ."

"ಊಟ ಮಾಡಿ ಹೋಗುವವರಂತೆ ಆಗದೇ ?" ಔಪಚಾರಿಕವಾಗಿ ಹೆಲೆನ್ ಸಿಂಗ್ ಆಹ್ವಾನಿಸಿದರು.

"ಬೇಡ, ಇನ್ನ್ಯಾವಾಗಲಾದರೂ ಒಂದು ಸಲ ಬರುತ್ತೇವೆ."

ತಿವಾರಿ ಹೇಳಿದನು: "ನಿಜ ಹೇಳಿದರೆ ಕೆಲ ಮನುಷ್ಯರಿಗೆ ಕೋಪ ಬರುತ್ತೆ. ನನ್ನ ಅಭಿಪ್ರಾಯದಲ್ಲಿ ಗರ್ಭಕೋಶವನ್ನು ತೆಗೆದು ಹಾಕುವ ಕನ್ಯೆಯರಿಗೆ ಪದ್ಮಶ್ರೀ ಕೊಡಬೇಕು ಇಲ್ಲಿ ಈ ಭಾರತದಲ್ಲಿ."

ತಿವಾರಿಯು ಇನ್ನೂ ಏನನ್ನೋ ಹೇಳಲು ಉದ್ಯುಕ್ತನಾದನು. ಆ ವೇಳೆಗೆ ಮಿಸೆಸ್ ತಿವಾರಿ ಎದ್ದಳು. ಅನಂತರ ತಿವಾರಿಯೂ ಎದ್ದನು. ಹೊಸ್ತಿಲವರೆಗೆ ಹೆಲೆನ್ ಸಿಂಗ್ ಅವರನ್ನು ಹಿಂಬಾಲಿಸಿದರು. ಅನಂತರ ಆಕೆ ಕೈ ಬೀಸಿದರು. ಆದರೆ ಆಕೆ ಕರ್ಟನ್‌ನ ಹಿಂಬದಿಯಿಂದ ನಡೆದು ಮರೆಯಾಗುತ್ತಿದ್ದ ತಿವಾರಿಯವರ ವಿಶಾಲವಾದ

ಭುಜಗಳನ್ನೂ, ತಲೆಯ ಹಿಂಭಾಗವನ್ನು ನೋಡುತ್ತಾ ನಿಂತರು. ಇವರ ಕಣ್ಣೋಟದಿಂದ ಅವರು ಮರೆಯಾದಾಗ ಹೆಲೆನ್ ಸಿಂಗ್ ಒಂದು ನಿಟ್ಟುಸಿರಿನೊಂದಿಗೆ ಹಿಂದಿರುಗಿ ನಡೆದುಹೋದರು.

ಹೆಲೆನ್ ಸಿಂಗ್ ಮಂಚದ ಮೇಲೆ ಬಂದುಬಿದ್ದರು. ಆಕೆಯ ಮನಸ್ಸಿನಲ್ಲಿ ಏನೇನೋ ತೋಚತೊಡಗಿತು. ಆಕೆ ತಿವಾರಿಯನ್ನು ಅದೇ ಮೊದಲ ಬಾರಿಗೆ ಕಂಡಿದ್ದರು. ಆತನಿಗೆ ಡಾಕ್ಟರ್ ದಾಸ್‌ರ ಅದೇ ಮುಖಛಾಯೆಯಿದೆ. ಅದೇ ಅಂಗಸೌಷ್ಟವ. ಅವಳ ಮಕ್ಕಳಂತೆ ಸ್ವಭಾವವೂ ಹಾಗೇ ಇತ್ತು. ಹಾಗೆಯೇ, ತಮಗೆ ತೋಚಿದ್ದನ್ನು ಸಮಯ ಸಂದರ್ಭಗಳನ್ನು ಗಮನಿಸದೆ ಮುಚ್ಚುಮರೆಯಿಲ್ಲದೆ ಕರಾರುವಾಕ್ಕಾಗಿ ಮಾತಾಡಿಬಿಡುವ ಅಂತಹವರನ್ನು ಕಂಡರೆ ಹೆಲೆನ್‌ಗೆ ಗೌರವ ಮೂಡಿ ಬರುತ್ತಿತ್ತು. ಮನಸ್ಸಿಗೆ ತೋಚಿದ್ದನ್ನು ಹೇಳಲೇಬೇಕು. ಹಾಗೆ ಹೇಳಿದರೆ ಇನ್ನೊಬ್ಬರಿಗೆ ನೋವಾಗುತ್ತದೆಂಬ ವಿಷಯವನ್ನು ಏನೇನೂ ಯೋಚಿಸಬೇಕಿಲ್ಲ.

ಮೇಜಿನ ಡ್ರಾಯರ್ ತೆಗೆದು ಆಕೆ ಆಲ್‌ಬಮ್ ಅನ್ನೂ ಹೊರಕ್ಕೆ ತೆಗೆದರು. ಮನಸ್ಸಿಗೆ ಅಸ್ವಸ್ಥತೆ ತೋರಿ ಬಂದಾಗ ಅದು ಆಕೆಗೆ ಶಾಂತಿಯನ್ನು ನೀಡುತ್ತಿತ್ತು. ಅದು ಆಕೆಯ ಇಪ್ಪತ್ತಕ್ಕಿಂತ ಹೆಚ್ಚು ವರ್ಷಗಳ ಸಂಪಾದನೆಯಾಗಿತ್ತು. ಹದಿನಾರು ಸಾವಿರಕ್ಕಿಂತ ಹೆಚ್ಚು ಬರುವ ಈ ಟಪಾಲ್ ಸ್ಟಾಂಪುಗಳು, ಅದರಂತೆಯೇ ಆಕೆಯ ಜೊತೆಗಾರನೂ.

ಸಾವಿರಾದ ಒಂಭೈನೂರ ಇಪ್ಪತ್ತರ ಇಸವಿಯಿಂದ ಇತ್ತೀಚೆಗಿನ ಸ್ಟಾಂಪುಗಳಿರುವ ಆಲ್‌ಬಮ್ ಅನ್ನು ಹೆಲೆನ್ ತೆರೆದಿಟ್ಟು ನೋಡುತ್ತಿದ್ದರು. ಒಂದೊಂದು ಸ್ಟಾಂಪನ್ನೂ ಐದು ಹತ್ತು ನಿಮಿಷ ನೋಡುತ್ತಾ ಕುಳಿತಿರುತ್ತಿದ್ದರು. ಅದರ ಒಟ್ಟಿನಲ್ಲಿನ ಬಣ್ಣ ಮತ್ತೆ ಮತ್ತೆ ಅದರಲ್ಲಿನ ಪ್ರತ್ಯೇಕ ಪ್ರತ್ಯೇಕವಾಗಿರುವ ವರ್ಣಗಳು ಪ್ರಕೃತಿಯೋ? ಜೀವಿಗಳೋ? ಪ್ರಕೃತಿಯಾದಲ್ಲಿ ನೀರೋ ದಡವೋ? ಜೀವಿಯಾದಲ್ಲಿ ಮನುಷ್ಯನೋ ಮೃಗವೋ, ಪಕ್ಷಿಯೋ? ಅವುಗಳ ಮೇಲೆ ಸೀಲ್ ಹಾಕಿದ್ದ ವರ್ಷವೇ ಅವುಗಳ ಪ್ರತ್ಯೇಕತೆಯಾಗಿತ್ತು. ಅದರ ಮೊನಚಾದ ಅಂಚಿನಲ್ಲಿ ಯಾವುದಾದರೂ ನಷ್ಟವಾಗಿದೆಯೇ? ಆಗಿದ್ದಲ್ಲಿ ಎಷ್ಟು? ಸೀಲ್ ಹಾಕಲ್ಪಟ್ಟಿದೆಯೇ? ಹಾಕಲ್ಪಟ್ಟಿದ್ದಲ್ಲಿ ಅದರ ಮುದ್ರೆಯು ಎಷ್ಟರ ಮಟ್ಟಿಗೆ ಬಿದ್ದಿದೆ? ಅದರಲ್ಲಿರುವ ಅಕ್ಷರಗಳು ಯಾವುವು? ಸಮಯವೇನು? ಪೋಸ್ಟ್ ಆಫೀಸ್ ಯಾವುದು? ಸೀಲ್ ಹೊಡೆದದ್ದು ಯಾರಾಗಿರಬಹುದು? ಆಗ ಸ್ಟಾಂಪ್‌ಗೆ ನೋವಾಗಿರಬಹುದೇ?

ಒಂದೊಂದು ಸ್ಟಾಂಪನ್ನೂ ನೋಡಿದಾಗ ಆಕೆ ಆಲೋಚಿಸುತ್ತಿದ್ದರು. ಬೆಲೆ ಕಟ್ಟಲು ಸಾಧ್ಯವಿಲ್ಲದ ಒಂದೇ ಒಂದು ಸಂಪಾದನೆಯು ಇದು ಮಾತ್ರವೆಂದು ಆಕೆ ನಂಬುತ್ತಾರೆ. ತಮ್ಮ ಸ್ವಂತ ಚಾರಿತ್ರ್ಯಕ್ಕಿಂತಲೂ ಹಿರಿದಾಗಿ ಇದನ್ನು ಹೆಲೆನ್ ಸಿಂಗ್ ಜೋಪಾನವಾಗಿ ಕಾಪಾಡುತ್ತಿದ್ದರು.

ಕೆಳಗೆ ಲಾನ್‌ನಲ್ಲಿ ಜೋರಾದ ಗಲಾಟೆಯು ಪ್ರಾರಂಭವಾಯಿತು. ಭಾನುವಾರವಾದ್ದರಿಂದ ನರ್ಸಿಂಗ್ ವಿದ್ಯಾರ್ಥಿಗಳಿಗೆ ರಜೆಯಾಗಿತ್ತು. ಹಾಗಾಗಿ ಬಹಳಷ್ಟು ಜನರನ್ನು ಕಾಣಬಹುದಾಗಿತ್ತು. ಇತರ ಹಾಸ್ಟೆಲ್‌ಗಳಿಂದಲೂ ಅವರು ಇಲ್ಲಿಗೆ ಹಾರಿ ಬಂದಿದ್ದರು. ಈ ಹಾಸ್ಟೆಲ್‌ನಲ್ಲಿ ಮಾತ್ರವೇ ಇಷ್ಟು ದೊಡ್ಡ ಲಾನ್

ಇದ್ದಿದ್ದು. ಆದರಿಂದಲೇ ಅನೇಕ ಯುವಕರು ಇಲ್ಲಿಗೇ ಸಂದರ್ಶಕರಾಗಿ ಬಂದಿರುತ್ತಿದ್ದರು. ಹಾಸ್ಟೆಲ್ ಆಫ್ ಬ್ಯೂಟಿ ಕ್ವೀನ್ಸ್ ಎಂದು ಆ ಯುವಕರು ಇದಕ್ಕೆ ಹೆಸರು ಕೊಟ್ಟಿದ್ದರು. ಈ ವಾರ್ಧಕ್ಯದಲ್ಲೂ ನಾನು ರಾಣಿಯೇ - ಹೆಲೆನ್ ಸಿಂಗ್‌ಗೆ ಎಲ್ಲಿಂದಲೋ ಒಂದು ಬಗೆಯ ಅಭಿಮಾನವು ಹಾರಿ ಬಂದಂತೆ ತೋರಿತು.

ಮೇಟ್ರನ್ ಹೆಲೆನ್ ಸಿಂಗ್ ಟೆರೇಸಿಗೆ ಹೋದರು. ಸಮಯವು ಹನ್ನೆರಡಾಗಲಿತ್ತು. ಡಿಸೆಂಬರ್‌ನಲ್ಲಿನ ಸೂರ್ಯನು ದಯಾಳುವಂತೆ ವರ್ತಿಸುತ್ತಿದ್ದನು. ಚುಚ್ಚುವುದಕ್ಕೆ ಬದಲಾಗಿ ತಲೆ ಸವರುತ್ತಿದ್ದನು.

ಲಾನ್‌ನಲ್ಲಿ ಹುಡುಗಿಯರು ಮಾತ್ರವಿರುವ ಒಂದೇ ಒಂದು ಗುಂಪನ್ನು ನೋಡಲು ಸಾಧ್ಯವಿರಲಿಲ್ಲ. ಎಲ್ಲಾ ಗುಂಪಿನಲ್ಲೂ ಗಂಡಸರೂ ಇದ್ದರು. ಕೊಳಕು ಗಂಡಸರು. ಗೊತ್ತಿಲ್ಲದಂತೆ ಅವರು ಒಳಕ್ಕೆ ಪ್ರವೇಶಿಸಿಬಿಡುತ್ತಿದ್ದರು. ಹೆಲೆನ್ ಸಿಂಗ್‌ಗೆ ಗಂಡಸರ ಮಧ್ಯೆ ಹೋಗಿ ಕುಳಿತುಕೊಳ್ಳುವುದು ಏನೇನೂ ಇಷ್ಟವಿರಲಿಲ್ಲ. ಅವರ ಬೆವರಿನ ವಾಸನೆಯನ್ನು ಹುಡುಗಿಯರು ಆಘ್ರಾಣಿಸಲೆಂದೇ ಗಂಡಸರು ಯಾವಾಗಲೂ ನಡೆದಾಡುವುದು.

ಹೆಲೆನ್ ಸಿಂಗ್‌ನ ನಾಸಿಕಾರಂಧ್ರಗಳಿಗೆ ಹಳೆಯ ಒಂದು ವಾಸನೆಯು ಹಾರಿ ಬಂದಿತು.

ಅದು ಡಾಕ್ಟರ್ ದಾಸ್‌ರ ವಾಸನೆಯಾಗಿತ್ತು. ಆತನ ಸರ್ವಸ್ವವೂ ಹೆಲೆನ್ ಸಿಂಗ್‌ಗೆ ಇಷ್ಟವಾಗಿತ್ತು. ಆತನ ವ್ಯಕ್ತಿತ್ವವೂ ಸೌಂದರ್ಯವೂ, ಪದವಿಯೂ ಆಕೆಯನ್ನು ಆತನೊಂದಿಗೆ ಬಂಧಿಸಿತ್ತು. ಆದರೆ ಆಕೆಯನ್ನು ಆತನಿಂದ ದೂರಮಾಡಿದ್ದು ಆತನ ಬೆವರಿನ ವಾಸನೆಯಾಗಿತ್ತು. ಇಪ್ಪತ್ತಕ್ಕಿಂತ ಹೆಚ್ಚು ವರ್ಷಗಳು ಕಳೆದೂ ಆ ವಾಸನೆಯು ಇಂದೂ ಆಕೆಯ ಮೂಗಿನ ತುದಿಯಲ್ಲಿತ್ತು.

ಒಂದು ಸೀನು ಬಂದು, ಆಕೆಯು ಸೀನಿದರು, ನೀರಿಗಿಂತ ಘನವಾದ ಎಂಥದೋ ನಾಲ್ಕು ಭಾಗದಲ್ಲೂ ಹನಿಹನಿಯಾಗಿ ಬಿದ್ದಿತು. ಸೀರೆಯ ಸೆರಗಿನಿಂದ ಆಕೆ ಒರೆಸಿಕೊಂಡರು. ಇದನ್ನೆಲ್ಲಾ ಯಾರಾದರೂ ನೋಡಿದರೇ ? ಎಂದಾಕೆ ತಕ್ಷಣ ಸುತ್ತಮುತ್ತ ನೋಡಿದರು.

ಆಕೆಯ ಕಣ್ಣುಗಳಲ್ಲಿ ನೀರು ತುಂಬಿತು. ಏತಕ್ಕೆ ಎಂದು ಆಕೆಗೇ ತಿಳಿಯಲಿಲ್ಲ. ಅಕಾರಣವಾದ ಒಂದು ದುಃಖವು ಇತ್ತೀಚೆಗೆ ಆಕೆಯನ್ನು ಬಹಳವಾಗಿ ಕಾಡುತ್ತಿತ್ತು. ಆಕೆ ಸೀರೆ ಸೆರಗಿನಿಂದಲೇ ಕಣ್ಣು ಒರೆಸಿಕೊಂಡರು. ವಸ್ತ್ರಗಳು ಕೇವಲ ನಾಚಿಕೆಯನ್ನು ಮರೆಸಲು ಮಾತ್ರ ಇರುವುದಿಲ್ಲ. ಅದಕ್ಕೆ ಇನ್ನೂ ಅನೇಕ ಉಪಯೋಗಗಳಿವೆ. ಸಿಸ್ಟರ್ ಚಾಕೋವನ್ನೂ ಹಿಂದೆ ಒಂದು ದಿನ ನಾಗರಹಾವು ಕಡಿದಾಗ ಆಕೆ ತನ್ನ ಸೀರೆಯನ್ನು ಹರಿದು ಹಾವು ಕಚ್ಚಿ ಗಾಯವಾಗಿದ್ದ ಸ್ಥಳದ ಮೇಲ್ಭಾಗದಲ್ಲಿ ಕಟ್ಟಿದ್ದರು. ಆದರೂ ಸಿಸ್ಟರ್ ಸತ್ತುಹೋಗಿದ್ದರು. ಸೀರೆಯ ಸೆರಗನ್ನೂ ಮೀರಿ ವಿಷವು ಆ ಸ್ತ್ರೀಯ ನೆತ್ತಿಗೇರಿದ್ದೇ ಕಾರಣವಾಗಿತ್ತು ಅದಕ್ಕೆ.

ಲಾನ್‌ನಿಂದ ದೊಡ್ಡ ಶಬ್ದವೊಂದು ಕೇಳಿಬಂದಿತು. ಆಕಡೆ ನೋಡಿದಾಗ ಒಬ್ಬಳು ಹುಡುಗಿ ಬಿದ್ದ ಸ್ಥಳದಿಂದ ತತ್ತರಿಸಿ ಬೀಳುತ್ತಾ ಏಳುತ್ತಲಿದ್ದಳು. ಸುತ್ತಲೂ ಇರುವ ಎಲ್ಲಾ ಮುಖಗಳೂ ಅವಳಲ್ಲಿ ಕೇಂದ್ರಿತವಾಗಿದ್ದವು. ಹುಡುಗಿಯರಿಗೆ ಗಲಾಟೆ

ಮಾಡಲಾಗಲಿ, ನಗಲಾಗಲಿ ಒಂದು ಕಾರಣವೂ ಬೇಡ. ಹಾಗೆಯೇ ಅಳುವುದಕ್ಕೂ ಬೇಡ.

ಆಕೆಗೆ ಆಗ ಹೆಂಗಸರನ್ನು ನೆನೆದು ಬಹಳ ನಾಚಿಕೆಯನ್ನಿಸಿತು. ಗಂಡಸರನ್ನು ನೆನೆದಾಗ ದ್ವೇಷವೂ ತೋರಿತು. ಅವರ ಬೆವರಿನ ಬಗ್ಗೆ ಅಸಹ್ಯವೂ ಆಯಿತು.

ಸ್ವಲ್ಪವೂ ಹಸಿವು ಅನ್ನಿಸಲಿಲ್ಲ. ಟೊಮ್ಯಾಟೋ ಜ್ಯೂಸ್‌ನಲ್ಲಿ ಬೇಯಿಸಿದ ಸಾಸೇಜೂ ಬ್ರೆಡ್ಡೂ ಮರದ ಚೂರಿನಂತೆ ಹಾಗೇ ಬಿದ್ದಿದ್ದವು. ಆಕೆ ಅದನ್ನು ಮುಟ್ಟಲಿಲ್ಲ. ತಣ್ಣನೆಯ ಮೊಸರಿನಲ್ಲಿ ಬೆಲ್ಲವನ್ನು ಸೇರಿಸಿ ಆಕೆ ಅದನ್ನು ಸೇವಿಸಿದರು. ಬಾಯಲ್ಲಿ ನೀರನ್ನಿಟ್ಟುಕೊಂಡು ನುಂಗದೇ ಮೊಸರಿನ ರುಚಿಯೊಂದಿಗೆ ಮಂಚದಲ್ಲಿ ಆಕೆ ಮಲಗಿದರು.

ಸ್ಟಾಂಪಿಗೆ ಅತಿ ಪ್ರಾಮುಖ್ಯ ಕೊಡುವ ವೀಕ್ಲಿ ಒಂದನ್ನು ತೆಗೆದುಕೊಂಡು ಬಿಡಿಸಿ ಹಿಡಿದು ಸ್ಟಾಂಪ್‌ನ ಕಾಲಮ್ ಅನ್ನೂ ಜೋರಾಗಿ ಓದಲು ಪ್ರಾರಂಭಿಸಿದರು. ಆಕೆಯ ಮೈ ಇದ್ದಕ್ಕಿದ್ದಂತೆ ಬೆವರಿತು. ಅರ್ಧ ಲಕ್ಷ ರೂಪಾಯಿ ಬರುವ ಒಂದು ಕಲರ್ ಸ್ಟಾಂಪ್ ಅನ್ನು ಕುರಿತು ಬರೆದಿದ್ದ ಚರಿತ್ರೆಯು. ಅದರಲ್ಲಿ ಹೀಗೆ ಬರೆಯಲ್ಪಟ್ಟಿತ್ತು. ಯಾವುದೋ ಒಂದು ಕಸದ ತೊಟ್ಟಿಯಿಂದ ಸಿಕ್ಕಿದ್ದಂತೆ ಆ ಸ್ಟಾಂಪ್. ಕಸದ ತೊಟ್ಟಿಯ ಮಹಾತ್ಮ್ಯೆಯನ್ನು ಹೆಲೆನ್ ಸಿಂಗ್ ಪ್ರಥಮ ಬಾರಿಗೆ ಕಂಡು ತಿಳಿದ ದಿವಸವಾಗಿತ್ತದು.

ಸಾಯಂಕಾಲ ಮೇರಿ ಒಂದು ಬಾಗಿಲನ್ನು ತಟ್ಟಿದಾಗಲೇ ಆಕೆ ನಿದ್ದೆಯಿಂದೆಚತ್ತದ್ದು. ಅರ್ಧ ಲಕ್ಷದ ಬಗೆಗಿನ ವಾರ್ತೆಯು ಒಡೆದು ಹೋದ ಎದೆಯಲ್ಲಿ ಅಂಟಿಕೊಂಡಂತೆ ಸೇರಿಕೊಂಡಿತ್ತು.

ಮುಖವನ್ನು ತೊಳೆದು ಬಂದನಂತರ ಆಕೆ ಹೇಳಿದರು:

"ಮೇರಿ ಕೇಳಿದೆಯಾ ? ಹಳೆಯ ಒಂದು ಪೋಸ್ಟಲ್ ಸ್ಟಾಂಪ್‌ಗೆ ಅರ್ಧಲಕ್ಷ ರೂಪಾಯಿ ಬೆಲೆ ಕೊಟ್ಟರಂತೆ." ಆಕೆ ಮೇರಿಗೆ ನಿರ್ದೇಶನವನ್ನು ಕೊಡುತ್ತಾ ಹೇಳಿದರು. "ಮೇರಿ ನಾನು ಒಂದು ವಿಷಯ ಹೇಳುತ್ತೇನೆ ಕೇಳು. ಲೋಕದಲ್ಲಿ ಸಮಸ್ತವಸ್ತುಗಳಿಗೂ ಬೆಲೆ ಕಟ್ಟಬಹುದು. ಮನುಷ್ಯರಿಗೂ ಸಹ ಕಟ್ಟಬಹುದು. ಆದರೆ ಪೋಸ್ಟಲ್ ಸ್ಟಾಂಪಿಗೆ ಬೆಲೆ ಕಟ್ಟಲು ದೇವರಿಗೂ ಸಹ ಸಾಧ್ಯವಿಲ್ಲ."

"ಸರಿಯೇ" ಮೇರಿ ಉತ್ತರವಿತ್ತಳು.

ಮೇಟ್ರನ್ ಸ್ವಲ್ಪ ಹೊತ್ತು ಮೇರಿಯನ್ನ ನೋಡಿದರು. ಅವರ ನೋಟ ಕುರುಬನು ಆಡಿನ ಮರಿಯನ್ನು ನೋಡಿದಂತೆ ಇತ್ತು.

"ಸರಿಯಂತೆ ! ಹೇಗೆ ?" ಆಕೆ ಮೇರಿಯ ಕಡೆ ಬೆರಳು ತೋರಿದರು.

"ಪೇಪರ್ ಓದುವುದಿಲ್ಲವೇ ? ಈಗ ದೇಶವನ್ನು ಆಳುವ ಹಳೆಯ ವಿಪ್ಲವ ನಾಯಕನ ತಲೆಗೆ ಅಂದಿನ ರಾಜನು ಬೆಲೆ ಕಟ್ಟಿದ್ದು ಕೇವಲ ಹದಿನಾರು ಸಾವಿರದಂತೆ. ಗೊತ್ತೇ ಮಗು ?"

ಮೇರಿ ಮುಗುಳ್ನಕ್ಕು ತಲೆ ಬಗ್ಗಿಸಿದಳು.

ಗಲಾಟೆಯಾಗುತ್ತಿರುವ ಲಾನ್‌ನನ್ನೇ ನೋಡುತ್ತಾ ಹೆಲೆನ್ ಸಿಂಗ್ ಕೇಳಿದರು.

"ಅಲ್ಲಿ ಏನು ನಡೆಯುತ್ತಿದೆ ?"

"ವಿಸಿಟರ್ಸ್ ಇದ್ದಾರೆ" ಮೇರಿ ಹೇಳಿದಳು.

"ಅದು ನನಗೆ ಮುಂಚೆಯೇ ಗೊತ್ತು" ಹೆಲೆನ್ ಸಿಂಗ್ ಹೇಳಿದರು "ಆದರೆ ಈ ಗಲಾಟೆ ಯಾಕೆ ಎಂದು ಹೇಳಿದೆ."

ಮೇರಿಯ ಭುಜದ ಮೇಲೆ ತಟ್ಟುತ್ತಾ ಆಕೆ ಮತ್ತೆ ಹೇಳಿದರು. "ನೋಡು ಮೇರಿ, ನೀನು ಈ ಗುಂಪಿಗೆ ಸೇರಬೇಡ. ನೀನಾದರೂ ಗಂಡಸರೆನಿಸಿದ ಈ ಆಕ್ಟೋಪಸ್‌ಗಳಿಂದ ತಪ್ಪಿಸಿಕೊಳ್ಳಬೇಕು."

ಮೇರಿ ಏನನ್ನೂ ಹೇಳದೆ ನೆಲ ನೋಡುತ್ತಾ ನಿಂತಳು.

"ನಿನಗೆ ಯಾರಾದರೂ ಜೊತೆಗಾರರು ಸಿಕ್ಕಿದರೇನು ?" ತಮಾಷೆ ಮಾಡುವಂತೆ ಹೆಲೆನ್ ಸಿಂಗ್ ಕೇಳಿದರು.

ಮೇರಿಯ ಬೆನ್ನನ್ನು ತಡವುತ್ತಾ ಹೆಲೆನ್ ಸಿಂಗ್ ಹೇಳಿದರು "ನನಗೆ ಖಂಡಿತ ಗೊತ್ತು. ನೀನ್ಯಾವತ್ತೂ ಈ ಬಲೆಯಲ್ಲಿ ಸಿಕ್ಕಿ ಬೀಳುವುದಿಲ್ಲ."

ಹೆಲೆನ್ ಸಿಂಗ್ ಟೆರೇಸ್‌ನ ಕೊನೆಗೆ ನಡೆದರು. ಬಹು ಸಣ್ಣ ದನಿಯಲ್ಲಿ. ಒಂದು ರಹಸ್ಯವೆಂಬಂತೆ ಆಕೆ ಹೇಳಿದರು.

"ಆ ಗುಂಪಿನಲ್ಲಿ ಡಾಕ್ಟರುಗಳೂ ಕಾಣಿಸುತ್ತಿದ್ದಾರೆ ಅಲ್ಲವೇ ?"

"ಅವರೂ ಇದ್ದಾರೆ" ಮೇರಿ ಹೇಳಿದಳು. "ಇಬ್ಬರು ಮೂವರು ಹೌಸ್ ಸರ್ಜನರು, ಒಬ್ಬ ಟ್ಯೂಟರ್."

ಮೇಟ್ರನ್ ಹೆಲೆನ್ ಸಿಂಗ್ ಸ್ವಲ್ಪ ಹೊತ್ತು ಏನನ್ನೋ ಯೋಚಿಸಿದರು.

"ಕೊಳಕು ಜನ" ಹೆಲೆನ್ ಸಿಂಗ್‌ರ ಮುಖ ಕೆಂಪೇರಿತು. ಕೆಂಪೇರಿ ಉಬ್ಬಲಾರಂಭಿಸಿತು. "ಮೃಗಗಳು ! ನರ್ಸುಗಳನ್ನು ಆಘ್ರಾಣಿಸಿ ನಡೆಯುವ ಸೋಂಬೇರಿಗಳು."

ಹೆಲೆನ್ ಸಿಂಗ್ ಇದ್ದಕ್ಕಿದ್ದಂತೆ ಬೆವರತೊಡಗಿದರು. ಒಬ್ಬ ಅರೆಹುಚ್ಚರಂತೆ ಆಕೆ ಏನೇನಲ್ಲವನ್ನೋ ಗೊಣಗುತ್ತಲೂ ಅರ್ಥವಿಲ್ಲದ ಮಾತುಗಳನ್ನಾಡುತ್ತಲೂ ಇದ್ದರು.

ಆಕೆ ಮೇರಿಯೊಂದಿಗೆ ಕೇಳಿದರು:

"ನೀನು ಸ್ಟೆತೋಸ್ಕೋಪ್ ನೋಡಿದ್ದೀಯಾ ? ಅದನ್ನು ನಂಬಬೇಡ. ಡಾಕ್ಟರರು ಕತ್ತಿಗೆ ಸುತ್ತಿ ನಡೆಯುವ ಆ ವಸ್ತು ಏನೆಂದು ನಿನಗೆ ಗೊತ್ತೇ ? ಹಾವದು. ಅದು ಮೋಸ ಮಾಡುತ್ತೆ."

"ಮೇರಿ ?" ಆಜ್ಞೆಯಂತೆ ನಿರ್ದೇಶನವನ್ನು ನೀಡುತ್ತಾ ಹೆಲೆನ್ ಸಿಂಗ್ ಹೇಳಿದರು. "ಒಬ್ಬ ಪೊಲೀಸಿನವನ ಹಿಂದೆ ನೀನು ಹೋದರೂ ಪರವಾಗಿಲ್ಲ. ಒಬ್ಬ ಡಾಕ್ಟರೊಂದಿಗೆ ಮಾತ್ರ ನೀನು ಹೋಗಬೇಡ."

"ಅಯ್ಯೋ...!" ಮೇರಿ ಗಾಬರಿಗೊಂಡು ಹೇಳಿದಳು. "ಅದಕ್ಕೆ ನಾನೀಗೇನು ಮಾಡಿದ್ದೇನೆ ಮೇಡಮ್ ?"

ಹೆಲೆನ್ ಸಿಂಗ್ ನೀಳವಾಗಿ ಬಿಸುಸುಯ್ದು ಹೇಳಿದರು.

"ಸಾರಿ, ಮೇರಿ, ಐ ಆಮ್ ವೆರಿ ಸಾರಿ. ನಾನು ಏನೇನೋ ಜ್ಞಾಪಕ ಮಾಡಿಕೊಳ್ಳುತ್ತಿದ್ದೆ." ಟೆರೆಸ್‌ನ ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೆ ಆಕೆ ನಡೆದಾಡಲು ಆರಂಭಿಸಿದರು.

# ಹನ್ನೊಂದು

ಮೇರಿ ವಾರ್ಡ್‌ಗೆ ಬಂದಾಗ ಸ್ವಲ್ಪ ತಡವಾಗಿತ್ತು. ಸುತ್ತಲೂ ನೋಡಿದಳು. ಸದ್ಯ ಅದೃಷ್ಟ ಚೆನ್ನಾಗಿತ್ತು. ಸೀನಿಯರ್ ಸಿಸ್ಟರ್ ಇನ್ನೂ ಬಂದಿರಲಿಲ್ಲ. ಬಯ್ಸಿಕೊಳ್ಳುವುದು ತಪ್ಪಿತು. ಮೇರಿ ಅಸಿಸ್ಟೆಂಟ್ ಮೇಟ್ರನ್‌ನ ಕೊಠಡಿಗೆ ಸರಸರನೆ ನಡೆದಳು. ರುಜು ಹಾಕಬೇಕಾದ ರಿಜಿಸ್ಟರ್ ಅಲ್ಲಿತ್ತು. ಅದರಲ್ಲಿ ತನ್ನ ಸಹಿಯು ಕಾಣಿಸದಿದ್ದರೆ ಆ ದಿವಸ ತಾನು ವಾರ್ಡ್‌ನಲ್ಲಿ ಕೆಲಸ ಮಾಡಿದ್ದಕ್ಕೆ ಯಾವ ಸಾಕ್ಷಿಯೂ ಇಲ್ಲ. ಕೆಲಸ ಮಾಡಿದರೂ ಮಾಡದಿದ್ದರೂ ಸರಿ ರುಜು ಹಾಕುವುದು ಮುಖ್ಯವು. ಎಲ್ಲಾ ತಿಂಗಳುಗಳ ಕೊನೆಯ ತಾರೀಖುಗಳಲ್ಲಿ ಈ ರುಜುಗಳನ್ನು ಲೆಕ್ಕ ಮಾಡಲು ಹಾಜರಿ ರಿಜಿಸ್ಟರ್ ಸಂಬಳ ಕೊಡುವ ಉದ್ಯೋಗಿಯ ಆಫೀಸಿಗೆ ಹೋಗುತ್ತದೆ.

ಕಾರಿಡಾರ್ ಮೂಲಕ ಅವಳು ಅವಸರವಸರವಾಗಿ ನಡೆದಳು. ಅವಳಿಗೆದುರಾಗಿ ಮನುಷ್ಯರೂ ಸ್ಟ್ರೆಚರುಗಳೂ ಚಲಿಸುತ್ತಿದ್ದವು. ಹೊತ್ತಾಗಿ ಹೋದುದರ ವ್ಯಾಕುಲತೆಯು ಅವಳ ಮನಸ್ಸಿನಲ್ಲಿ ನೀರಿನ ಸುಳಿಯಂತೆ ಚಲಿಸಿ ಕದಡಿಕೊಳ್ಳುತ್ತಿತ್ತು.

ಅಸಿಸ್ಟೆಂಟ್ ಮೇಟ್ರನ್ ಕೋಣೆಯಲ್ಲಿದ್ದರು. ಮೇರಿ ಹಾಫ್ ಡೋರ್ ತೆರೆದು ಒಳಕ್ಕೆ ಪ್ರವೇಶಿಸಿದಳು. ಅಸಿಸ್ಟೆಂಟ್ ಮೇಟ್ರನ್ ಕೆಲವು ನಿಮಿಷಗಳು ಅವಳನ್ನೇ ನೋಡಿದರು. ಆ ನೋಟ ಕ್ರೂರವಾಗಿತ್ತು. ಅಷ್ಟು ಹೊತ್ತೂ ಹಾಫ್ ಡೋರ್ ಅತ್ತಿತ್ತ ಆಡುತ್ತಾ ಶಬ್ದ ಮಾಡುತ್ತಿತ್ತು. ಅದು ಶಬ್ದ ಮಾಡುವುದನ್ನು ನಿಲ್ಲಿಸಿದಾಗ ಅಸಿಸ್ಟೆಂಟ್ ಮೇಟ್ರನ್ ಮಿಸೆಸ್ ಜೋಸೆಫ್ ಕೇಳಿದರು.

"ಟೈಂ ಎಷ್ಟಾಗಿದೆ ?"

ಮೇರಿಯ ಬಳಿ ವಾಚ್ ಇರಲಿಲ್ಲ. ಅವಳು ಗೋಡೆಯನ್ನು ನೋಡಿದಳು. ಅನಂತರ ಹೇಳಿದಳು.

"ಎಂಟೂ ಹದಿನೈದು"

"ಇಷ್ಟು ಸರಿಯಾಗಿ ಟೈಂ ಹೇಳಲು ನಾಚಿಕೆಯಾಗೋಲ್ಲವೇ ? ಆದರೆ ನನಗೆ ಒಂದು ಸಮಾಧಾನವೇನಪ್ಪಾ ಎಂದರೆ ಟೈಮನ್ನಾದರೂ ನೀನು ಸರಿಯಾಗಿ ಹೇಳುತ್ತೀಯಲ್ಲ ?"

ಮೇರಿ ಶೂನ್ಯವಾದ ಒಂದು ಭಾವನೆಯನ್ನು ತನ್ನ ಮುಖದಲ್ಲಿ ಸೃಷ್ಟಿಸಿ ಮಿಸೆಸ್ ಜೋಸೆಫ್ ಅನ್ನು ನೋಡಿದಳು.

ಆಕೆ ಒಬ್ಬ ಕುಳ್ಳನೆಯ ಸ್ತ್ರೀಯಾಗಿದ್ದಳು. ಆಕೆ ಕುರ್ಚಿಯಲ್ಲಿ ಕುಳಿತಿದ್ದರೆ ಕುರ್ಚಿಯೇ ದೊಡ್ಡದಾಗಿ ಕಾಣುತ್ತಿತ್ತು. ಕಣ್ಣುಗಳು ಬಲು ಚಿಕ್ಕವಾಗಿದ್ದುವು. ಬತ್ತಿ ಹೋಗಿದ್ದ ಕೆನ್ನೆಗಳು. ಆಕೆಯ ಬಣ್ಣ ಬಿಳಿಚಿದ್ದ ಬಿಳುಪಾಗಿತ್ತು. ಅವಳಲ್ಲಿ ಚೈತನ್ಯವಿದ್ದ ಒಂದೇ ಒಂದು ವಸ್ತುವೆಂದರೆ ಆಕೆಯ ಯೂನಿಫಾರಂ ಮಾತ್ರವಾಗಿತ್ತು. ಅದು

ಟೆರಿಕಾಟನ್ ಆಗಿತ್ತು.

ಆಕೆಯ ಸಂಭಾಷಣೆ ಕೇಳಿದರೆ ಪ್ರಪಂಚದಲ್ಲಿರುವ ಸಮಸ್ತ ಜಂತುಗಳನ್ನು ಆಕೆ ದ್ವೇಷಿಸುತ್ತಾರೆಂದೆನ್ನಿಸುತ್ತಿತ್ತು. ನಾಲ್ಕೂವರೆ ಅಡಿ ಎತ್ತರವಿರುವ, ಕಡಿಮೆ ತೂಕವಿರುವ ಮಿಸೆಸ್ ಜೋಸೆಫ್ ಆಕೆಯ ಕೈಕೆಳಗೆ ಕೆಲಸ ಮಾಡುವವರನ್ನೆಲ್ಲಾ ಭಯಪಡಿಸುತ್ತಾರೆ. ತೂಕವಿರುವವರನ್ನು, ಹಗುರವಾಗಿರುವವರನ್ನು ಆಕೆ ಭಯಪಡಿಸುತ್ತಿದ್ದರು.

ಐದು ನಿಮಿಷದವರೆಗೆ ಆಕೆ ಏನೂ ಮಾತನಾಡಲಿಲ್ಲ. ಮೇಜಿನ ಮೇಲಿದ್ದ ಫೈಲುಗಳನ್ನೂ ಪೇಪರ್‌ಗಳನ್ನು ತಿರುವಿ ಹಾಕಿ ಪಕ್ಕಕ್ಕೆ ಇಡತೊಡಗಿದರು. ಪೆನ್ನನ್ನು ತೆಗೆದುಕೊಂಡು ಜೀರಿಗೆ ಕಾಳಿನಂತಹ ಅಕ್ಷರಗಳಲ್ಲಿ ಎಲ್ಲೆಲ್ಲೋ ರುಜು ಮಾಡಿದರು.

ಆಗ ನೀಲಿ ಷರ್ಟನ್ನು ಹಾಕಿದ ಒಬ್ಬ ಪ್ಯೂನ್ ಒಳಕ್ಕೆ ಬಂದನು. ಮಿಸೆಸ್ ಜೋಸೆಫ್‌ರ ಕೋಣೆಯ ಬಳಿ ಇದ್ದ ಒಂದು ಸ್ಟೂಲ್ ಅವನ ಜನ್ಮಭೂಮಿ. ಅಲ್ಲಿಂದ ಅವನು ಚಲಿಸಬೇಕಾದರೆ ಆಕೆಯೊಂದಿಗೆ ಏನಾದರೂ ಹೇಳಬೇಕಷ್ಟೆ. ಅವನು ಒಂದು ಸೂತ್ರದ ಗೊಂಬೆಯಂತೆಯೇ ತಿಳಿಯಬಹುದಿತ್ತು. ಆ ಬೊಂಬೆಯ ಸೂತ್ರ ಮಿಸೆಸ್ ಜೋಸೆಫ್‌ರ ಕೈಗಳಲ್ಲೇ ಇರುತ್ತಷ್ಟೆ.

ಮೇರಿ ದಿವಸವೂ ಅವನನ್ನು ನೋಡುತ್ತಿರುತ್ತಾಳೆ. ಆದರೆ ಇಂದಿನವರೆಗೆ ಅವಳು ಅವನ ಮುಖದಲ್ಲಿ ಯಾವುದೋ ಒಂದು ಭಾವವನ್ನೇ ಸ್ಪಷ್ಟವಾಗಿ ಕಂಡಿರಲಿಲ್ಲ. ಅವನು ಚೇಪಿಸುವ ಒಬ್ಬನಲ್ಲ. ಬದನೇಕಾಯಿಯಂತಿರುವ ಒಂದು ವಸ್ತುವಷ್ಟೆ.

"ಹುಂ ರುಜು ಹಾಕು" ಮಿಸೆಸ್ ಜೋಸೆಫ್ ರಿಜಿಸ್ಟರನ್ನು ಅಮೇಧ್ಯವನ್ನು ಮುಟ್ಟುವಂತೆ ಮುಟ್ಟಿ ಹೇಳಿದರು.

ವಿ.ವಿ. ಮೇರಿಯ ಹೆಸರಿಗೆದುರಾಗಿ ಅವಳು ಸಹಿ ಹಾಕಿದಳು. ಒಂದು ದಿವಸಕ್ಕೆ ಜೀವ ಬಂತು. ಸಂಬಳದಲ್ಲಿ ಮುವ್ವತ್ತೆಂಟು ರೂಪಾಯಿ ಹೆಚ್ಚಿತು. ತಡವಾಗಿ ಹೋಗುವ ದಿವಸಗಳಲ್ಲಿ ರುಜು ಹಾಕಿದ ಸ್ಥಳದಲ್ಲಿ ಮಿಸೆಸ್ ಜೋಸೆಫ್ 'ಎ' ಎಂದು ಬರೆಯುವುದು ರೂಢಿ. ಅಂದೂ ಮುವ್ವತ್ತೆಂಟು ರೂಪಾಯಿಯ ಒಂದು ಲೆಕ್ಕ ಬರುತ್ತೆ. ಆದರೆ ಅದು ಮೈನಸ್ ಆಗಿರುತ್ತೆ.

ಮೇರಿ ಮತ್ತೆಯೂ ಕಾರಿಡಾರ್ ಅನ್ನು ಪ್ರವೇಶಿಸಿದಳು. ಹಗಲು ಪೂರ್ತಿ ಕಾರಿಡಾರ್ ಒಂದು ರೋಡ್‌ನಂತಿರುತ್ತಿತ್ತು. ಆ ಸಮಯದಲ್ಲಿ ಅಲ್ಲಿಗೆ ಪ್ರವೇಶಿಸಿದರೆ ಅದರ ಉದ್ದವನ್ನು ಯಾರಿಗೂ ಅಳೆಯಲು ಸಾಧ್ಯವಿಲ್ಲ. ರೋಗಿಗಳನ್ನು ಸಂದರ್ಶಿಸಲಿರುವ ಸಾಯಂಕಾಲದ ಸಮಯ ಕಳೆದು ಸೂರ್ಯನು ಅಸ್ತಮಿಸುವ ವೇಳೆಗೆ ಕಾರಿಡಾರ್ ಶೂನ್ಯವಾಗಿರುತ್ತೆ. ಆಗಲೇ ಅದನ್ನು ನೋಡಬೇಕಾದದ್ದು ಈಗ ಕಾರಿಡಾರ್ ಜನನಿಬಿಡವಾಗಿತ್ತು. ಇದು ಆಸ್ಪತ್ರೆಯ ಕಟ್ಟಡದ ಅಕ್ಷರೇಖೆಯು ಎಲ್ಲಾ ಕಟ್ಟಡಗಳ ಹೃದಯವನ್ನು ಭೇದಿಸಿಕೊಂಡು ಹೋಗುವ ಒಂದು ಕಾರಿಡಾರ್. ಸಕಲವನ್ನೂ ಪರಸ್ಪರ ಬಂಧಿಸುವ ಒಂದು ಪಟ್ಟಿ.

ಮೇರಿಗೆ ಎದುರಾಗಿ ಅನೇಕರು ನಡೆದುಬಂದು ಮರೆಯಾಗುತ್ತಿದ್ದರು. ಡಾಕ್ಟರ್‌ಗಳು, ಯೂನಿಫಾರಂ ಧರಿಸಿದ್ದ ಕೆಳದರ್ಜೆಯ ನೌಕರರು, ಏಪ್ರನ್ ಧರಿಸಿದ ಮೆಡಿಕಲ್ ವಿದ್ಯಾರ್ಥಿಗಳು, ಗಂಡಸರು, ಹೆಂಗಸರು, ಸ್ಟ್ರೆಚರನ್ನುರುಳಿಸಿಕೊಂಡು

ಹೋಗುವವರು, ಅದರಲ್ಲಿ ಮಲಗಿರುವ ಜೀವವಿಲ್ಲದ ರೋಗಿಗಳು.

ಹಾಗೆ ಹೋದ ಎಲ್ಲಾ ಜನರ ಗುಂಪು, ಸೇರಿಕೊಳ್ಳದ ಕೊಂಡಿಗಳ ಒಂದು ಸರಪಣಿಯಂತೆ ಅವಳನ್ನು ಹಿಂಬಾಲಿಸುತ್ತಿದ್ದರು.

ಕೊನೆಗೆ ವಾರ್ಡ್‌ಗೆ ಬಂದಳು. ವಾರ್ಡ್‌ಗಳು ಮೂರು ಅಂತಸ್ತಾಗಿ ನೆಲೆಗೊಂಡಿದ್ದವು. ಮೇರಿ ಕೆಳಗಿನ ಅಂತಸ್ತಿನಿಂದ ಮೇಲಕ್ಕೆ ಹತ್ತಿದಳು. ಅವಳ ವಾರ್ಡ್ ಎರಡನೆಯ ಅಂತಸ್ತಿನಲ್ಲಾಗಿತ್ತು.

ಅಲ್ಲಿ ಮುವ್ವತ್ತಾರು ರೋಗಿಗಳು ಮಲಗಿದ್ದರು. ಅವರಿಗೆ ಚಿಕಿತ್ಸೆ ಮಾಡಲೂ, ಶುಶ್ರೂಷೆ ನಡೆಸಲೂ ಬೇಕಾದಷ್ಟು ಜನರಿದ್ದರು.

ಮೇರಿ ವಾರ್ಡ್‌ಗೆ ಬಂದಾಗ ಹಾಕಿಕೊಂಡಿದ್ದ ಯೂನಿಫಾರಂ ಅನ್ನು ಮತ್ತೊಮ್ಮೆ ಕೆಳಕ್ಕೆ ಎಳೆದು ಸರಿ ಮಾಡಿಕೊಂಡಿದ್ದಳು. ಸಿಸ್ಟರ್ ಡ್ಯೂಟಿ ರೂಮ್‌ನಲ್ಲಿದ್ದು ಏನನ್ನೋ ಬರೆಯುತ್ತಿದ್ದಳು. ಸದ್ಯ ಅದೃಷ್ಟ ಚೆನ್ನಾಗಿತ್ತು.

ಮೇರಿಯನ್ನು ಕಂಡಾಗ ಮಲಗಿದ್ದ ರೋಗಿಗಳು ಒಬ್ಬೊಬ್ಬರಾಗಿ ತಲೆ ಎತ್ತಿದರು. ಎಷ್ಟೋ ಜನಕ್ಕೆ ಮೇರಿಯನ್ನು ಕಂಡರೆ ಇಷ್ಟವಿತ್ತು. ಪರಸ್ಪರ ನೋಡುವಾಗ ಇಬ್ಬರೂ ನಿಷ್ಕಳಂಕ ಮನೋಭಾವದಿಂದ ನಗುತ್ತಿದ್ದರು. ಕೆಲವರನ್ನು ಬಿಟ್ಟರೆ ಎಲ್ಲರೂ ಹೀಗೆಯೇ. ಆ ಕೆಲವರು ರೋಗದ ಕಾಠಿಣ್ಯದಲ್ಲಿ ಮುಳುಗಿದ್ದವರು.

ಒಂದು ವಾರ್ಡಿನಲ್ಲಿ ಒಂದು ಡ್ಯೂಟಿ ರೂಮ್. ಎರಡು ವರ್ಕಿಂಗ್ ರೂಮ್‌ಗಳಿವೆ. ವರ್ಕಿಂಗ್ ರೂಮ್‌ಗಳು ಗಾಜಿನಿಂದ ಮಾಡಲ್ಪಟ್ಟಿದ್ದವು. ಆ ರೂಮ್‌ನಲ್ಲಿದ್ದರೆ ರೋಗಿಗಳನ್ನು ಅನಾಯಾಸವಾಗಿ ಕಾಣಬಹುದು. ಹಾಗೆಯೇ ರೋಗಿಗಳಿಗೆ ರೂಮಿನಲ್ಲಿರುವವರನ್ನು ನೋಡಬಹುದು. ಕಟ್ಟಡದ ಪ್ಲಾನ್ ತಯಾರು ಮಾಡಿದ ಅಮೆರಿಕನ್ ಬುದ್ಧಿವಂತನಾಗಿದ್ದಿರಬೇಕು.

ಮೇರಿ ಇಂಜೆಕ್ಷನ್ ವೈಯಲ್*ಗಳಿಗೆ ಡಿಸ್ಟಿಲ್ಡ್ ವಾಟರ್ ಸಿರಿಂಜ್‌ನಿಂದ ಚುಚ್ಚಿ ಏರಿಸಿದಳು. ಎಲ್ಲಾ ವೈಯಲ್‌ಗಳಿಗೂ ಎರಡು ಮಿಲಿಯಷ್ಟು ತೀಕ್ಷ್ಣತೆಯು ನಾಶವಾಗದ ಪುಡಿ ಔಷಧಿಗಳು ಆ ನೀರಿನಲ್ಲಿ ಹೊರ ಹೊಮ್ಮತೊಡಗಿದವು. ನೀರಿನಲ್ಲಿ ಹೊರ ಹೊಮ್ಮದ ಕೆಲ ಸೀಸೆಗಳನ್ನು ಅಲ್ಲಾಡಿಸಬೇಕಾಗಿ ಬಂತು.

ವಾರ್ಡ್‌ನಲ್ಲೆಲ್ಲಾ ಫಿನಾಯಿಲ್‌ನ ಸ್ಪಿರಿಟ್‌ನ ವಾಸನೆಯು ವ್ಯಾಪಿಸಿತು. ಕೆಲ ನಿಮಿಷಗಳು ಮಾತ್ರವೇ ಅದು ಹಾಗೆ ಸೇರಿಕೊಳ್ಳಲು ಸಾಧ್ಯವಾಗುವುದು. ನಾಸಿಕಾ ರಂಧ್ರಗಳಲ್ಲಿನ ಇಂದ್ರಿಯಗಳಿಗೆ ಅದನ್ನೇ ಆಘ್ರಾಣಿಸಿ ಆಘ್ರಾಣಿಸಿ ಸಾಕಾಗಿ ಹೋಗಿದೆ. ರೋಗಿಗಳನ್ನು ಕಾಣಲು ಬರುವ ಕೆಲ ಹಳ್ಳಿಗರು ಸ್ವಲ್ಪ ಹೊತ್ತು ಅದರ ವಾಸನೆ ನೋಡುತ್ತಾ ನಿಲ್ಲುವುದನ್ನು ಮೇರಿಯು ನಿಂತು ನೋಡುವುದುಂಟು. ಆ ಹಳ್ಳಿಗರಿಗೆ ಅದು ಏನೋ ಒಂದು ಹೊಸತಾದ ವಾಸನೆ.

ಪೋಪ್ಟೆಟ್‌ಲಾಲ್ ಫಿನಾಯಿಲ್‌ನಲ್ಲಿ ಅದ್ದಿದ ಗೋಣಿಯ ಬಟ್ಟೆಯನ್ನು ತೆಗೆದುಕೊಂಡು ಮೊಸಾಯಿಕ್ ಹಾಕಿರುವ ನೆಲವನ್ನು ಒರೆಸುತ್ತಿದ್ದನು. ಎಂಟು ಗಂಟೆಯಿಂದ ನಾಲ್ಕು ಗಂಟೆಯವರೆಗೆ ಅವನು ಹಾಗೆ ಒರೆಸುತ್ತಲೇ ಇರುತ್ತಾನೆ.

---

* ವೈಯಲ್: ದ್ರವ ಔಷಧದ ಸಣ್ಣ ಸೀಸೆ

ಅವನ ಕೆಲಸವು ಅಷ್ಟೇ. ನೆಲದಲ್ಲಿರುವ ರೋಗಾಣುಗಳನ್ನು ಫಿನಾಯಿಲ್ ವಾಸನೆ ತೋರಿಸಿ ಉಸಿರುಕಟ್ಟಿಸಿ ಭಯಪಡಿಸುವುದು ಅಥವಾ ಕೊಲ್ಲುವುದು.

ಪ್ರೋಪ್ಪೆಟ್ ಹುಟ್ಟಿದ್ದೇ ಒಂದು ಗೋಣಿ ಬಟ್ಟೆಯೊಂದಿಗಿರಬೇಕು. ಅವನನ್ನು ಎಲ್ಲರೂ ಕಂಡಿರುವುದೇ ಹಾಗೆ. ಅವನು ವಾರ್ಡಿನೊಳಗೆ ಪ್ರವೇಶಿಸುವುದೇ ಈ ಗೋಣಿ ಬಟ್ಟೆಯ ತುಂಡಿನೊಂದಿಗೆ. ಎಡೆಬಿಡದೆ ವಿಶ್ರಾಂತಿ ಇಲ್ಲದೆ ವಾರ್ಡುಗಳನ್ನೆಲ್ಲಾ ಅವನು ಒದ್ದೆ ಮಾಡಿ ಒರೆಸುತ್ತಾ ಅಂಬೆಗಾಲಿಡುತ್ತಾ ನಡೆಯುವವನು. ನಾಲ್ಕು ಗಂಟೆಯಾಗುವ ವೇಳೆಗೆ ಅವನು ಮಾಯವಾಗಿ ಬಿಡುತ್ತಿದ್ದನು.

ಸಾರ್ಕೋಯಿಡೋಸಿಸ್ ಎಂಬ ರೋಗವು ಬಾಧಿಸಿದ್ದ ಮುದುಕನೊಬ್ಬನು ರೂಢಿಯಂತೆ ಬೈಬಲ್ ತೆರೆದಿಟ್ಟು ಓದಲು ಪ್ರಾರಂಭಿಸಿದನು. ಅವನು ನಾಲ್ಕು ತಿಂಗಳಿಂದ ಮಲಗಿದ್ದನು. ಅಂದಿನಿಂದ ಈ ಓದೂ ಪ್ರಾರಂಭವಾಗಿತ್ತು. ತಾನು ಸಾಯಲಾಗಿದ್ದೇನೆಂದೂ ತನ್ನ ಪಾಪಗಳನ್ನು ತೊಳೆಯಲು ಇದು ಮಾತ್ರವೇ ಮಾರ್ಗವೆಂದೂ ಅವನು ನಂಬಿದ್ದನು.

ಅಲ್ಲಿ ರೋಗಿಗಳೆಲ್ಲರೂ ಒಂದೊಂದು ನಂಬರ್‌ನಿಂದ ಕರೆಯಲ್ಪಡುತ್ತಿದ್ದರು. ಹದಿಮೂರಕ್ಕೆ ಇಂಜೆಕ್ಷನ್ ಕೊಟ್ಟಾಯಿತೇ, ಒಂಭತ್ತಕ್ಕೆ ಫೀಡಿಂಗ್ ಮಾಡಿಯಾಯಿತೇ, ಹದಿನೇಳನೇ ಎಕ್ಸ್‌ರೇಗೆ ಏತಕ್ಕೆ ಕರೆದೊಯ್ಯಲಿಲ್ಲ. ಮುಂತಾದ ಪ್ರಶ್ನೆಗಳು ವಾರ್ಡ್‌ನಲ್ಲಿ ಆಗಾಗ ಕೇಳಿಬರುತ್ತಿದ್ದವು.

ಕೆಲಸದವರಿಗೆ ಮಾತ್ರವಲ್ಲ, ಅಲ್ಲಿ ರೋಗಿಗಳಿಗೂ ಯೂನಿಫಾರಂ ಇದೆ. ಕ್ರೈಸ್ತರ ಶುದ್ಧಿ ಸಂಸ್ಕಾರದಂತೆ ಒಬ್ಬ ರೋಗಿ ಬಂದೊಡನೆ ಅವನು ಹಾಕಿಕೊಂಡಿದ್ದ ಬಟ್ಟೆಗಳನ್ನು ಬಿಚ್ಚಿಸಿ ಈ ಯೂನಿಫಾರಂ ಬಿಳಿಯಲ್ಲಿ ಹಸಿರು ಗೆರೆ ಇರುವ ಅಥವಾ ಹಸಿರಿನಲ್ಲಿ ಬಿಳಿ ಗೆರೆಯಿರುವ ಷರ್ಟನ್ನು ಪೈಜಾಮವನ್ನು ಧರಿಸುವಂತೆ ಮಾಡಿಬಿಡುತ್ತಿದ್ದರು.

ಮೇರಿ ಔಷಧಿ ತುಂಬಿದ ಸಿರಿಂಜ್‌ನೊಂದಿಗೆ ನಡೆದಳು. ಅವಳ ಹಿಂದೆ ಟ್ರೇ ಟೇಬಲ್ ಅನ್ನು ತಳ್ಳಿಕೊಂಡು ಅಯಾ ಹೊರಟಳು. ಟ್ರೇನ ತುಂಬ ಕದಡಿ ತಿಳಿಯಾಗಿರುವ ಇಂಜೆಕ್ಷನ್‌ನ ಸೀಸೆಗಳು.

ಸಾರ್ ಕೋಯಿ ಡೋಸಿಸ್ ರೋಗ ಬಂದವನು ಒಂದನೆಯ ನಂಬರ್ ಬೆಡ್‌ನಲ್ಲಿ ಮಲಗಿದ್ದನು. ಅವನು ಆಗ ಬೇಯಿಸಿದ್ದ ಒಂದು ಕೋಳಿ ಮೊಟ್ಟೆಯ ಮೇಲ್ಪದರವನ್ನು ಬಿಡಿಸಿ ತೆಗೆದು ತಿನ್ನುತ್ತಿದ್ದನು. ಸಂದರ್ಶನ ಸಮಯವಾದ್ದರಿಂದ ಅವನ ಪಕ್ಕದಲ್ಲಿ ಯಾರೋ ಒಬ್ಬ ದೂರದ ಬಂಧು ಮುಗುಳು ನಗುತ್ತಾ ನಿಂತಿದ್ದನು. ರೋಗಿಯ ಶ್ರದ್ಧೆಯು ಪೂರ್ಣವಾಗಿ ಮೊಟ್ಟೆಯ ಮೇಲೆ ಇತ್ತು. ಹಾಗೆ ಪದರ ಬಿಡಿಸಿ ತೆಗೆಯುತ್ತಿರುವಾಗ ಅದರ ಜೊತೆಯೇ ಗೊತ್ತಾಗದೇನೇ ಕಿತ್ತುಕೊಂಡು ಬರುವ ಎಳನೀರಿನಲ್ಲಿನ ತಿರುಳಿನಂತಿರುವ ಮೊಟ್ಟೆಯ ಬಿಳಿಭಾಗವನ್ನು ಅವನು ಹೆಬ್ಬೆರಳಿನಿಂದ ಕೆರೆದು ತೆಗೆದು ಸೂಕ್ಷ್ಮವಾಗಿ ಬಾಯೊಳಕ್ಕೆ ಆಗಾಗ ತುರುಕುತ್ತಿದ್ದನು. ಮೇರಿ ಮಾತನಾಡದೆ ನಿಂತಳು. ಮೊಟ್ಟೆಯ ಮೇಲ್ಪದರವನ್ನು ಬಿಡಿಸಿ ತಿಂದಾಯಿತು. ಅವನು ಕಣ್ಣಿನ್ನೆತ್ತದೇನೇ ಅಚ್ಚ ಬಿಳುಪಾಗಿದ್ದ ಮೊಟ್ಟೆಯನ್ನೊಮ್ಮೆ ಕಚ್ಚಿದನು.

ಅನಂತರ ಜೋರಾಗಿ ಒಂದೇ ಸಲಕ್ಕೆ ಕಚ್ಚಿದಾಗ ಅರ್ಧ ಮೊಟ್ಟೆಯೇ ಅವನ ಬಾಯಿಯೊಳಕ್ಕೆ ಹೋಯಿತು. ಮಿಕ್ಕ ಅರ್ಧ ಅವನ ಕೈಯಲ್ಲಾಯಿತು. ಹಳದಿಯ ಕೆಲ ಚೂರುಗಳು ಹಾಸಿಗೆಯ ಹೊದಿಕೆಯ ಮೇಲೆ ಬಿದ್ದವು. ಅವನು ಅವುಗಳನ್ನು ಕಚ್ಚಿ ತೆಗೆದುಹಾಕಿ ತನ್ನ ಕಣ್ಣುಗಳನ್ನು ಮುಂದಕ್ಕೆ ಚಲಿಸಿದನು. ಬಹಳವಾದ ಪುಟ್ಟಪುಟ್ಟ ರಕ್ತನಾಳಗಳುಳ್ಳ ಕಣ್ಣುಗಳು.

ಹಾಗೆ ಮೇರಿಯನ್ನು ಕಂಡಾಗ ಅಪರಾಧ ಪ್ರಜ್ಞೆಯಿಂದೆಂಬಂತೆ, ಹಾವು ಕಪ್ಪೆಯನ್ನು ನುಂಗುವಂತೆ, ಬಾಯಲ್ಲಿದ್ದ ಮೊಟ್ಟೆಯನ್ನು ಒಂದೇ ಸಲಕ್ಕೆ ಬಾಯಿಯ ಒಳಕ್ಕೆ ತುರುಕಿಕೊಂಡನು. ಅನಂತರ ಕೈನಲ್ಲಿ ಇನ್ನು ಒಂದು ಚೂರು ಇರುವುದನ್ನು ಗಮನಿಸದೆ ಅವನು ಎಡದ ಕೈಯನ್ನು ಇಂಜೆಕ್ಷನ್‌ಗೋಸ್ಕರ ನೀಡಿದನು.

ಸಿರಿಂಜ್‌ನಲ್ಲಿದ್ದ ಔಷಧಿ ಪೂರಾ ತೋಳಿಗೇರಿದಾಗ ಅವನ ಮುಖವು ಸುಕ್ಕುಗಟ್ಟಿತು. ನೂರು ಸುಕ್ಕುಗಳು.

"ಮಗಳೇ, ಪಾದ್ರಿಗಳು ಇವತ್ತು ಬರುತ್ತಾರೆಯೇ ?" ಮುದುಕನು ರೂಢಿಯಂತೆ ಕೇಳಿದನು.

"ಆಳನ್ನು ಕಳಿಸಿದ್ದೇನೆ" ಮೇರಿ ಹೇಳಿದಳು.

"ಒಳ್ಳೆಯದಾಯಿತು. ಇವತ್ತಾದರೂ ನಾನು ತಪ್ಪೊಪ್ಪಿಗೆ ನೀಡಬಹುದಲ್ಲ ?" ಅವನು ಕರಿಯ ದಾರದಲ್ಲಿ ಕಟ್ಟಿ ಕತ್ತಿಗೆ ಹಾಕಿಕೊಂಡಿದ್ದ ಶಿಲುಬೆಯನ್ನು ಬನಿಯನ್ ಒಳಗಿಂದ ಹೊರಕ್ಕೆ ತೆಗೆದು ಅದಕ್ಕೊಮ್ಮೆ ಮುತ್ತಿಟ್ಟನು. ಅನಂತರ ಅದನ್ನು ಬಟ್ಟೆಯ ಬಂಧನವಿಲ್ಲದಂತೆ ಬನಿಯನ್ ಒಳಕ್ಕೆ ತನ್ನ ಮೈಗೆ ತಗಲುವಂತೆ ಹಾಕಿಕೊಂಡನು.

ಮೇರಿಯ ಹಿಂದೆಯೇ ನರ್ಸ್ ಲಾಲ್ ಕೂಡ ಚಲಿಸತೊಡಗಿದಳು. ವಾರ್ಡ್‌ನಲ್ಲಿ ಎಲ್ಲರೂ ಚಲಿಸುತ್ತಲೇ ಇರುತ್ತಾರೆ. ಅಲ್ಲಿ ಯಾರೂ ಕೆಲಸ ಮಾಡುವುದಿಲ್ಲ. ಎಲ್ಲಾ ಯಾಂತ್ರಿಕವಾದ ಚಲನೆಗಳು. ಲಾಲ್‌ಳ ಕೈಯಲ್ಲಿ ಥರ್ಮಾಮೀಟರ್ ಇತ್ತು. ಒಬ್ಬೊಬ್ಬ ರೋಗಿಯ ಟೆಂಪರೇಚರ್ ಅನ್ನು ಅಳೆಯುವುದು ಅವಳ ಕೆಲಸ. ಪಲ್ಸ್ ನೋಡುವುದೂ ಸಹ ಅವಳ ಕೆಲಸವೇ. ಪರಿಚಿತರಾದ ರೋಗಿಗಳು ಲಾಲ್ ಬರುವಾಗಲೇನೇ ಬಾಯಿ ತೆರೆದಿರುವರು. ಅನಂತರ ಕೈ ನೀಡುವರು. ಸಾರ್ ಕೋಯಿಡೋಸಿಸ್ ರೋಗದಿಂದ ನರಳುತ್ತಿದ್ದ ಮುದುಕನೂ ಸಹ ಬಾಯಿ ತೆರೆದನು. ಅವಳು ಅವನ ನಾಲಗೆಯ ಕೆಳಗೆ ಥರ್ಮಾಮೀಟರ್ ಇಟ್ಟಳು. ಮುದುಕನ ಮುಖ ಕೋಪದಿಂದ ದುಮುಗುಟ್ಟತೊಡಗಿತು. ಥರ್ಮಾಮೀಟರ್ ತೆಗೆದ ಒಡನೆ ಅವನೆಂದನು:

"ನಾನು ಏನು ಬೇಕಾದರೂ ಸಹಿಸುತ್ತೇನೆ. ಆದರೆ ಹೀಗೆ ಬಾಯಲ್ಲಿ ಥರ್ಮಾಮೀಟರ್ ಇಟ್ಟು ಬಾಯನ್ನು ಮುಚ್ಚಿದಾಗಿನ ಈ ಮೌನವನ್ನು ಮಾತ್ರ ಸಹಿಸಲಾಗುವುದಿಲ್ಲ. ಅದೂ ದಿನ ದಿನವೂ...."

ಲಾಲ್ ಮುಗುಳ್ನಕ್ಕಳು. ಯಾರಾದರೂ ಏನು ಕೇಳಹೋದರೂ ಅವಳು ಅದನ್ನು ಒಂದು ಮುಗುಳ್ನಗೆಯಿಂದ ತಡೆದು ನಿಲ್ಲಿಸುತ್ತಿದಳು. ಅನಂತರ ಥರ್ಮಾಮೀಟರ್ ಜೋರಾಗಿ ಕೊಡವಿ ಮರ್ಕ್ಯುರಿಯನ್ನು ಕೆಳಕ್ಕಿಳಿಸಿದಳು. ಲಾಲ್ ಥರ್ಮಾಮೀಟರ್ ಹೀಗೆ ಜೋರಾಗಿ ಕೊಡವುದನ್ನು ನೋಡುವಾಗ ಮೇರಿ ಗಾಬರಿಗೊಳ್ಳುತ್ತಿದ್ದಳು.

ಯಾವತ್ತಾದರೊಂದು ದಿನ ಲಾಲ್‌ನ ಕೈನಿಂದ ಅದು ಹಾರಿ ಕೆಳಕ್ಕೆ ಬಿದ್ದು ಒಡೆದರೆ.

ಪ್ರೋಫೆಟ್ ಗೋಣಿ ತುಂಡಿನೊಂದಿಗೂ ಫಿನಾಯಿಲ್‌ನ ವಾಸನೆಯೊಂದಿಗೂ ಮೇಲುಗಡೆಯ ಅಂತಸ್ತಿಗೆ ಹತ್ತಿಹೋದನು. ವಾರ್ಡನ್ನು ಶುಭ್ರಗೊಳಿಸಲಾಗಿತ್ತು. ಪ್ರೋಫೆಟನೂ ರೋಗಾಣುಗಳೂ ವಾರ್ಡ್‌ನಿಂದ ಅದೃಶ್ಯವಾದವು.

ಎಲ್ಲ ಆರು ವಾರ್ಡುಗಳನ್ನೂ ಸುತ್ತು ಹಾಕಿದನಂತರ ಮೇರಿ ಗಾಜಿನ ಕೊಠಡಿಯೊಳಕ್ಕೆ ಬಂದಳು. ಇನ್ನು ರೌಂಡಿನ ಸಮಯವಾಯಿತು. ಆರು ವಾರ್ಡ್‌ಗಳಲ್ಲಿ ಮೂರು ಯೂನಿಟ್‌ಗಳು ವರ್ಕ್ ಮಾಡುತ್ತಿವೆ.

ಸಿಸ್ಟರ್ ಜಾನ್ ಸ್ಟೋರ್ ರೂಮಿನಲ್ಲಿ ಇಲಿಗಳು ಕಡಿದು ತಿಂದು ಹಾಕಿದ್ದ ಕಂಬಳಿ, ಹೊದಿಕೆಗಳ ಲೆಕ್ಕ ತೆಗೆದುಕೊಳ್ಳುತ್ತಿದ್ದಳು. ಆಕೆಯ ಮುಖವು ಕೆಂಪಗೆ ಉಬ್ಬಿಕೊಂಡಿತ್ತು. ಅದರ ಲೆಕ್ಕ ತೆಗೆದುಕೊಂಡು ಮೇಟ್ರನ್‌ಗೆ ವಹಿಸಿಬಿಟ್ಟರೆ ಆಕೆಯ ಜವಾಬ್ದಾರಿ ಅಲ್ಲಿಗೆ ಕಳೆಯುತ್ತಿತ್ತು. ಆದರೆ ಆಕೆಯ ಮುಖವನ್ನು ಕಂಡರೆ ವಾರ್ಡ್‌ನೊಳಗೆ ಒಂದು ಕೊಲೆಯೇ ನಡೆದಿದೆ ಎಂದೆನ್ನಿಸುತ್ತಿತ್ತು. ಕೆಲಸಕ್ಕೆ ಬಾರದ ವಿಷಯಗಳನ್ನೆಲ್ಲಾ ಆಕೆ ಬಹಳ ಗಂಭೀರವಾಗಿ ತೆಗೆದುಕೊಳ್ಳುವಳು. ಸ್ವಲ್ಪ ಹೊತ್ತು ಕಳೆದಾಗ ಇಲಿಗಳು ಕಚ್ಚಿ ತೂತು ಮಾಡಿದ್ದ ಕಂಬಳಿಗಳ ಕಟ್ಟನ್ನು ಭುಜದ ಮೇಲೆ ಹೊತ್ತು ನಡೆಯುವ ಚಪ್ರಾಸಿಯ ಮುಂದೆ ಆಕೆ ಮೇಟ್ರನ್‌ನ ಕೋಣೆಯನ್ನು ಲಕ್ಷ್ಯವಿಟ್ಟು ನಡೆದಳು. ಆಕೆಯ ನಡಿಗೆಯನ್ನು ನೋಡಿದರೆ ಯಾವುದೋ ಧೀರಕೃತ್ಯವನ್ನು ಮಾಡಿದಂತೆ ತೋರುತ್ತಿತ್ತು.

ರೌಂಡಿನ ಸಮಯವಾಗುವಾಗ ಹೌಸ್ ಸರ್ಜನ್‌ಗಳು ಭಯದಿಂದ ಓಡುತ್ತಲಿದ್ದರು. ಯೂನಿಟ್‌ನ ಮುಖ್ಯಸ್ಥನು ಬರುವ ಹೊತ್ತಿಗೆ ಎಲ್ಲಾ ಕೆಲಸಗಳೂ ಮುಗಿಸಿಬಿಟ್ಟಿರಬೇಕು. ಏನು ತಪ್ಪಾಗಿದ್ದರೂ ಕೊನೆಯಲ್ಲಿ ಬಯ್ಗಳು ಕೇಳಬೇಕಾದದ್ದು ಹೌಸ್ ಸರ್ಜನ್‌ರೇ. ಅವರ ಕೈಕೆಳಗೆ ಬೇರೆ ಕೆಲಸಗಾರರು ಯಾರೂ ಇರುತ್ತಿರಲಿಲ್ಲ.

ಡಾಕ್ಟರ್ ಸಂತುಕುಮಾರ್ ಮಂದಮಾರುತದಂತೆ ಆಸ್ಪತ್ರೆಯನ್ನು ಪ್ರವೇಶಿಸಿದನು. ಕಾರಿಡಾರ್ ದಾಟಿದನು. ಒಂದೊಂದು ಕಾಲನ್ನು ಯೋಚಿಸಿಯೇ ಇಡುತ್ತಾ, ಆತನು ಮೆಲ್ಲನೆ ಗಾಜಿನ ಕೊಠಡಿಯತ್ತ ಬಂದನು. ಆತನು ತಲೆಯನ್ನೆತ್ತುತ್ತಿದ್ದುದು ತನ್ನ ಲಕ್ಷ್ಯವನ್ನು ಮುಟ್ಟಿದರೆ ಮಾತ್ರವೇ? ಅಲ್ಲಿಯವರೆಗೆ ಆತನ ನೋಟವು ನೆಲದ ಮೇಲೆ ನೆಟ್ಟಿರುತ್ತಿತ್ತು. ಊರಿನಲ್ಲಿ ಹೀಗೆಯೇ ನೆಲ ನೋಡಿಕೊಂಡು ನಡೆಯುವ ಒಬ್ಬ ಮನುಷ್ಯನಿದ್ದನು. ಅವನೇ ಸೈನ್ಯದಿಂದ ನಿವೃತ್ತನಾಗಿ ಬಂದಿದ್ದ ವರ್ಗಿಸ್ ಅಣ್ಣ. ಅವನೊಂದಿಗೆ ಒಂದು ಚಿನ್ನದ ನಾಣ್ಯ ಎಲ್ಲಾದರೂ ಬಿದ್ದು ಹೋಗಿದೆಯೇ ಎಂದು ಅಮ್ಮ ಹಾಸ್ಯದಿಂದ ಕೇಳುತ್ತಿದ್ದಳು.

ಡಾಕ್ಟರ್ ಸಂತುಕುಮಾರ್ ತುಪ್ಪವನ್ನು ಬೆಣ್ಣೆಯನ್ನು ಹೆಚ್ಚಾಗಿ ಸೇವಿಸುತ್ತಿದ್ದನು. ಆತನ ದೇಹವು ಬೊಜ್ಜು ಬೆಳೆದು ಅಲ್ಲಲ್ಲಿ ನೇತಾಡುತ್ತಿತ್ತು. ಉಬ್ಬಿದ ಕೆನ್ನೆಗಳಲ್ಲಿ ಸೋಡ ಬಾಟಲ್‌ನಲ್ಲಿನ ಗೋಲಿಯಂತಿರುವ ಕಣ್ಣುಗಳನ್ನು ದೊಡ್ಡದಾಗಿ ಬಿಟ್ಟುಕೊಂಡು ಅವನು ನಡೆದನು. ಆತನ ಎಡಬಲಗಳಲ್ಲಿ ಚಂದವಾಗಿದ್ದ ಒಂದೇ ಒಂದು ಅವಯುವವೆಂದರೆ ಆತನ ಹಲ್ಲುಗಳು ಮಾತ್ರವಾಗಿತ್ತು. ಕಪ್ಪು ಬೀಟೆ ಮರದ ಬಣ್ಣವುಳ್ಳ ಮುಖಕ್ಕೆ ಅದೊಂದು ಅಲಂಕಾರವಾಗಿತ್ತು.

"ಪ್ರಾರಂಭಿಸೋಣವೇ ? ನನ್ನ ಜೊತೆಗಾರರೆಲ್ಲಾ ಎಲ್ಲಿ ?" ಆತನು ಮೇರಿಯನ್ನು ಕೇಳಿದನು.

ಡ್ಯೂಟಿ ರೂಮ್‌ಗಳಿಂದ ಹೌಸ್ ಸರ್ಜನ್‌ಗಳು ಓಡಿ ಬಂದರು. ಅವರ ಹಿಂದೆ ರೆಸಿಡೆಂಟೂ, ಟ್ಯೂಟರೂ ಬಂದರು.

ಮೇರಿ ಅವರನ್ನು ಹಿಂಬಾಲಿಸಿದಳು. ಡಾಕ್ಟರ್ ಸಂತುಕುಮಾರ್ ಆಗಾಗ್ಗ ಮೇರಿಯೊಂದಿಗೆ ಒಂದೊಂದನ್ನು ಕೇಳುತ್ತಿದ್ದನು. ಎಲ್ಲಾ ಅವಳ ಊರಿನ ವಿಷಯಗಳು. ಬೆಡ್‌ನ ಬಳಿ ಬಂದಾಗ ಮಾತ್ರ ಆತನ ಭಾವವೇ ಬದಲಾಯಿತು.

ಬೆಡ್‌ನ ಮೇಲೆ ಮಲಗಿದ್ದ ರೋಗಿ ಕೈಗಳನ್ನು ಜೋಡಿಸಿ ನಮಸ್ಕರಿಸಿ ಎದ್ದೇಳಲು ನೋಡಿದನು.

"ಮಲಗೇ ಇರಿ ಯಜಮಾನರೇ. ಏಳಲು ಇನ್ನೂ ಆಗಿಲ್ಲ. ಎದ್ದೇಳಲು ನಿಮಗೆ ಸಾಧ್ಯವಾದರೆ ಗುಣಮುಖರಾದಂತೆಯೇ ಭಾವಿಸಬಹುದಷ್ಟೆ."

ಮೂತ್ರನಾಳದಲ್ಲಿ ರಬ್ಬರ್ ಟ್ಯೂಬ್ ಹಾಕಿದ್ದ ರೋಗಿಯು ಮಲಗಿಕೊಂಡೇ ಸಂತುಕುಮಾರನನ್ನು ನೋಡಿದನು. ಅನಂತರ ಆ ರೋಗಿಯು ದುಃಖಪೂರಿತ ಸ್ವರದಲ್ಲಿ ಹೇಳಿದನು.

"ನನ್ನನ್ನು ಕಾಪಾಡಿ."

"ಕಾಪಾಡುವುದು ನಾನಲ್ಲ" ಅದು ಹೇಳುತ್ತಾ ಡಾ. ಸಂತುಕುಮಾರ್ ಕೈ ಕೈತ್ತಿಬಿಟ್ಟು ಮೇಲಕ್ಕೆ ನೋಡಿದನು. ಅನಂತರ ಹೌಸ್ ಸರ್ಜನ್ ಅನ್ನು ಕೇಳಿದನು.

"ಈಗ ಏನೆಲ್ಲಾ ಕೊಡುತ್ತಿದ್ದೀರಿ ?"

ಅವನು ಅನೇಕ ಔಷಧಿಗಳ, ಮಾತ್ರೆಗಳ ಹೆಸರುಗಳನ್ನು ಮಗ್ಗಿ ಕೋಷ್ಟಕವನ್ನು ಹೇಳುವಂತೆ ಬಡಬಡನೆ ಹೇಳಿದನು. ಸಂತುಕುಮಾರ್ ಎಲ್ಲಕ್ಕೂ ತಲೆಯಾಡಿಸುತ್ತಾ ಕೇಳಿದನು. ಆಗೆಲ್ಲಾ ಆತನ ಕೆನ್ನೆಯಲ್ಲಿನ ಸ್ನಾಯುಗಳು ಚಲಿಸುತ್ತಿದ್ದವು.

ಮಂಚದಲ್ಲಿ ಮಲಗಿರುವ ಒಬ್ಬೊಬ್ಬ ರೋಗಿಯೂ ಡಾಕ್ಟರನ್ನು ಜಿಜ್ಞಾಸೆಯಿಂದ ನೋಡಿದರು. ಅನೇಕವನ್ನು ಕೇಳಿದರು. ಔಷಧಿಗಳ ಬಗ್ಗೆಯೂ, ರೋಗದ ಬಗ್ಗೆಯೂ ಕೇಳಿದರು. ಆದರೆ ಅವರನ್ನು ಕೊರೆಯುತ್ತಿದ್ದ ಅತಿ ದೊಡ್ಡ ಪ್ರಶ್ನೆ 'ನನ್ನ ರೋಗವು ಗುಣವಾಗುತ್ತದೆಯೆ' ಎಂಬುದಾಗಿತ್ತು. ಆದರೆ ಯಾವ ರೋಗಿಯೂ ಅದನ್ನು ಕೇಳಲಿಲ್ಲ ಅಷ್ಟೆ.

ಹದಿನೆಂಟು ಮಂಚಗಳನ್ನು ಸುತ್ತುಹಾಕಿದ ನಂತರ ಯಾರೊಂದಿಗೂ ಏನನ್ನೂ ಮಾತನಾಡದೆ ಡಾ. ಸಂತುಕುಮಾರ್ ಕಾರಿಡಾರ್‌ಗೆ ಬಂದನು. ಹೌಸ್ ಸರ್ಜನರು ಆತನನ್ನು ಹಿಂಬಾಲಿಸಿದರು. ಈ ಆಸ್ಪತ್ರೆಯಲ್ಲಿ ಎಲ್ಲವೂ ಸರಪಣಿಗಳಿದ್ದಂತೆ. ಒಂದೊಂದೇ ಕೊಂಡಿಗಳಿಗೆ ಇಲ್ಲಿ ಅಸ್ತಿತ್ವವಿಲ್ಲ. ರೋಗಾಣುಗಳಿಗೂ ಅಷ್ಟೆ.

ಗಂಟೆ ಹನ್ನೊಂದಾಯಿತು. ಇಂದು ಸೂಪರಿಂಟೆಂಡೆಂಟ್ ಬರುವುದಿಲ್ಲ. ಮೇರಿಗೆ ಸಂಬಂಧಿಸಿದಂತೆ ಸೂಪರಿಂಟೆಂಡೆಂಟ್‌ನ ರೌಂಡ್ ಎನ್ನುವುದು ಅವಳಿಗೊಂದು ಭಯಂಕರ ಸ್ವಪ್ನವಾಗಿತ್ತು.

ಅವನು ಈ ಆಸ್ಪತ್ರೆಯಲ್ಲಿನ ದೇವರಂತೆ ಯಾವತ್ತಾದರೂ ಅವನು ಬರದಿದ್ದರೆ ಆ ದಿವಸ ವಾರ್ಡ್ ಬಹಳ ಅನಾಥವಾದಂತೆ ಮೇರಿಗನ್ನಿಸುತ್ತೆ.

ಮುಕ್ಕಾಲು ಪಾಲು ಕೆಲಸ ಮುಗಿದಾಗ ಮೇರಿ ಡ್ಯೂಟಿ ರೂಮಿನಲ್ಲಿನ ಸ್ಟೂಲ್ ಮೇಲೆ ಕುಳಿತಿದ್ದಳು. ಅವಳ ಹಿಂದೆ ಸ್ಟರಿಲೈಸರ್ ಶಬ್ದವನ್ನುಂಟು ಮಾಡುತ್ತಿತ್ತು. ಅದರಲ್ಲಿ ಸ್ಟೈಲ್‌ನ ಉಪಕರಣಗಳು ರೋಗಾಣುಗಳಿಂದ ಬಿಡುಗಡೆಯನ್ನು ಹೊಂದುತ್ತಿವೆ. ಎಲ್ಲಿಯೋ ಆದರೂ ಬಿಡುಗಡೆಗೆ ಬೆಂಕಿಯದೋ ಮನುಷ್ಯರದೋ ಶಕ್ತಿ ಬೇಕು.

ಡಾಕ್ಟರ್ ರವೀಂದ್ರನಾಥ್ ಕೋಣೆಯನ್ನು ಪ್ರವೇಶಿಸಿದನು. ಹತ್ತಿಯ ಗಿಡದಿಂದ ಒಂದು ತುಂಡು ಹತ್ತಿ ಹಾರಿ ಬಂದು ಬಿದ್ದಂತೆ ಮೇರಿಗನ್ನಿಸಿತು. ರವೀಂದ್ರನಾಥ್ ಬಹಳ ತೆಳ್ಳಗಿರುವ, ಕೃಶವಾದ ದೇಹವುಳ್ಳ ಮನುಷ್ಯನು. ಮಡಿಸಿಟ್ಟಿದ್ದ ಷರಟಿನ ತೋಳುಗಳಿಂದ ಒಂದು ಪೆನ್ಸಿಲ್‌ನಂತೆ ಆತನ ಕೈಗಳು ಇಳಿಬಿದ್ದಿದ್ದವು. ಪ್ಯಾಂಟೂ ಷರ್ಟೂ ದೇಹದೊಂದಿಗೆ ಅಂಟಿಕೊಂಡಿಲ್ಲದೆ ದೊಳ ದೊಳ ಅಂತಿತ್ತು. ಆದರೆ ರವೀಂದ್ರನಾಥ ಮುಖವು ತೇಜೋಯುಕ್ತವಾಗಿತ್ತು. ಈ ಆಸ್ಪತ್ರೆಯಲ್ಲಿ ಅಂತಹ ಒಂದು ಮುಖವು ಇನ್ಯಾರಿಗೂ ಇರಲಿಲ್ಲ. ಹತ್ತಿಕೊಂಡು ಉರಿಯುತ್ತಿರುವಂತಹ ಕಣ್ಣುಗಳು. ಒಂದೊಂದು ಬೋಗನ್‌ವಿಲ್ಲದ ಹೂವಿನಂತೆ ಮನಸ್ಸನ್ನು ಆಕರ್ಷಿಸುತ್ತೆಂದು ಅನ್ನಿಸುವ ನೋಟ. ಸೂಜಿ ಬೀಳುವ ಶಬ್ದವನ್ನು ಸಹ ಆವಾಹಿಸಿ ತೆಗೆಯಲು ಅವಸರಪಡುವ ಚೂಪಾದ ಎದ್ದು ನಿಂತಿರುವ ಕಿವಿಗಳು.

ಅನೇಕ ದೋಷಗಳು ರವೀಂದ್ರನಾಥ್‌ನಲ್ಲಿದ್ದವು. ಆದರೆ ಅನೇಕರಿಗಿರುವ ಒಂದು ದೋಷ-ಕನ್ನಡಕ-ವು ಆತನಿಗಿರಲಿಲ್ಲ.

"ಸಿಸ್ಟರ್ ನನಗೊಂದು ರಯಲ್ಸ್ ಟ್ಯೂಬ್* ಬೇಕು." ಯಾವ ವಿಧವಾದ ಮುನ್ನುಡಿಯೂ ಇಲ್ಲದೆ ರವೀಂದ್ರನಾಥ ಹೇಳಿದನು. ಆತನು ಸಾಮಾನ್ಯವಾಗಿ ಆವಶ್ಯವಾದದ್ದನ್ನು ಮಾತ್ರವೇ ಮಾತಾಡುವನು.

ಮೇರಿ ಏನೂ ಮಾತನಾಡದೆ ಒಂದು ಟ್ಯೂಬ್ ತೆಗೆದು ಕಿಡ್ನಿ ಟ್ರೇನಲ್ಲಿಟ್ಟಳು. ರವೀಂದ್ರನಾಥ್ ಒಂದು ನಿಧಿಯನ್ನು ತೆಗೆದುಕೊಳ್ಳುವಂತೆ ಅದನ್ನು ತೆಗೆದುಕೊಂಡು ಥ್ಯಾಂಕ್ಸ್ ಹೇಳಿದನು.

ರವೀಂದ್ರನಾಥ್ ಎಂ.ಡಿ. ಓದುತ್ತಿದ್ದನು. ಆತನನ್ನು ರವಿ ಎಂದು ಕರೆಯಲು ಮೇರಿ ಅನೇಕ ಸಲ ಯೋಚಿಸಿರುವುದುಂಟು. ಒಳ್ಳೆಯ ಉತ್ಸಾಹವಿರುವ ಯುವ ಡಾಕ್ಟರವನು. ಆತನ ಬುದ್ಧಿವಂತಿಕೆ ಆತನ ದೇಹದಂತಿರಲಿಲ್ಲ. ಸ್ವಲ್ಪವೂ ವಿಶ್ರಮಿಸದೆ ಕೆಲಸ ಮಾಡಲು ಆತ ಸಿದ್ಧ. ಆತನಿಗೆ ಸ್ವಲ್ಪವೂ ಸೋಮಾರಿತನವಿರಲಿಲ್ಲ. ಅನೇಕರು ಇತರರಿಗೆ ತಮ್ಮ ಸಣ್ಣಪುಟ್ಟ ಕೆಲಸಗಳನ್ನು ವಹಿಸಿ ಸ್ವತಂತ್ರರಾಗುವಾಗ ಆತನು ಇತರರ ಕೆಲಸಗಳನ್ನು ಸಹ ತಾನು ವಹಿಸಿಕೊಳ್ಳುವುದುಂಟು. ಮನುಷ್ಯ ಬಹಳ ಸಾಧು.

ಆಗ ತಾನೇ ಅಡ್ಮಿಟ್ ಆದ ಹೊಟ್ಟೆ ಊದಿಕೊಂಡಿದ್ದ ಒಬ್ಬ ರೋಗಿಯ ಮಂಚದ ಬಳಿ ಆತನು ಕುಳಿತನು. ಅನಂತರ ತಾನು ತಂದಿದ್ದ ಟ್ಯೂಬನ್ನೊಮ್ಮೆ ಬಿಡಿಸಿದನು. ಅದು ಮೂರಡಿ ಉದ್ದ ಇರಬೇಕು. ಟ್ಯೂಬ್‌ನ ಕೊನೆಯಲ್ಲಿ ಒಂದು ಗಟ್ಟಿಯಾದ

* ರಯಲ್ಸ್ ಟ್ಯೂಬ್: ಜಠರದ ದ್ರವವನ್ನು ಹೊರತೆಗೆಯಲು ಉಪಯೋಗಿಸುವ ಟ್ಯೂಬ್.

ದ್ರಾವಕವನ್ನು ಹಚ್ಚಿದ ನಂತರ ಅದನ್ನು ರೋಗಿಯ ಮೂಗಿನ ದ್ವಾರದಲ್ಲಿ ತಳ್ಳತೊಡಗಿದನು. ರೋಗಿ ಕೆಮ್ಮಲು ಪ್ರಾರಂಭಿಸಿದನು. ಒಂದೊಂದು ಸಲ ಕೆಮ್ಮುವಾಗಲೂ ಟ್ಯೂಬ್ ಹೊರಕ್ಕೆ ಎಗರುತ್ತಿತ್ತು. "ನುಂಗು ನುಂಗು" ಎಂದು ರವೀಂದ್ರನಾಥ್ ಮಧ್ಯ ಮಧ್ಯೆ ರೋಗಿಗೆ ನಿರ್ದೇಶನ ನೀಡುತ್ತಿದ್ದನು. ಆದರೆ ರೋಗಿ ಅದನ್ನು ಅರ್ಥಮಾಡಿಕೊಳ್ಳುತ್ತಲೇ ಇರಲಿಲ್ಲ. ಸಹನೆಯನ್ನು ಸ್ವಲ್ಪವಾದರೂ ಕಳೆದುಕೊಳ್ಳದೆ ಡಾಕ್ಟರ್ ರವೀಂದ್ರನಾಥ್ ತನ್ನ ಕೆಲಸವನ್ನು ಮುಂದುವರೆಸಿದನು.

ಬಹಳ ಹೊತ್ತು ಪ್ರಯಾಣಪಟ್ಟನಂತರ ಟ್ಯೂಬ್‌ನ ಉದ್ದ ಕಡಿಮೆಯಾಗತೊಡಗಿತು. ಹಾವು ಹುತ್ತದೊಳಕ್ಕೆ ಪ್ರವೇಶಿಸುವಂತೆ ಅದು ಒಳಹೋಯಿತು. ಅರ್ಧ ಅಡಿ ಬಾಕಿಯಾದಾಗ ಟ್ಯೂಬ್‌ನ ತುದಿಯನ್ನು ಹಣೆಯ ಮೇಲಿಟ್ಟು ಪ್ಲಾಸ್ಟರ್ ಹಾಕಿ ಅಂಟಿಸಿದನು.

ಮೇರಿ ಒಮ್ಮೆ ನಿಟ್ಟುಸಿರಿಸಿಟ್ಟಳು. ಸದ್ಯ ಇನ್ನು ಅವನ ಹೊಟ್ಟೆಗೆ ಏನಾದರೂ ಆಹಾರವು ಸೇರುತ್ತಲ್ಲ. ಆದರೆ ಡಾಕ್ಟರ್ ಅವಳನ್ನು ಕೇಳಿದ್ದು ದೊಡ್ಡ ಒಂದು ಸಿರಿಂಜ್ ಅನ್ನು. ಆ ಸಿರಿಂಜನ್ನು ತೆಗೆದುಕೊಂಡು ಟ್ಯೂಬ್‌ನ ಕೊನೆಯಲ್ಲಿ ಸಿಗಿಸಿ ಆತನು ಅದನ್ನು ಎಳೆಯತೊಡಗಿದ. ಹತ್ತು ನಿಮಿಷಗಳಲ್ಲಿ ಒಂದು ದೊಡ್ಡ ಕಿಡ್ನಿ ಟ್ರೇ ತುಂಬಿತು.

ರೋಗಿಯ ಹೊಟ್ಟೆಯು ಸ್ವಲ್ಪ ಕೆಳಕ್ಕಿಳಿಯಿತು.

ಗಂಟೆ ಹನ್ನೆರಡಾಯಿತು. ರಿಲೀವ್ ಮಾಡಬೇಕಾದ ಸಿಸ್ಟರ್ ಕುಂಞ್ಞಮ್ಮ ಅಲ್ಲಿಯವರೆಗೂ ಬಂದಿರಲಿಲ್ಲ. ಅದು ಅವಳ ಅಭ್ಯಾಸವಾಗಿತ್ತು. ಸಾಧಾರಣವಾಗಿ ಅರ್ಧ ಗಂಟೆಯಷ್ಟು ಹೊತ್ತಾಗಿಯೇ ಅವಳು ಬರುತ್ತಿದ್ದುದು.

ಆದರೆ, ಅಂದು ಅವಳು ಒಂದು ಗಂಟೆಯಷ್ಟು ಹೊತ್ತಾಗಿಯೇ ಬಂದಿದ್ದು. ಬಂದ ಒಡನೆ ಯೂನಿಫಾರಂ ತುರುಕಿ ತುಂಬಿದ್ದ ತನ್ನ ಚೀಲವನ್ನು ಮೇಜಿನ ಮೇಲಿಟ್ಟು ಒಂದೇ ಸಮ ನಗತೊಡಗಿದಳು. ಆ ನಗು ಅವಳ ಕುಳ್ಳು ದೇಹವನ್ನು ಹಿಡಿದು ಕುಲುಕಿತು. ನಗುವಾಗ ಅವಳು ಪರಿಸರವನ್ನು ಮರೆತಿದ್ದಳು. ನಗು ಕೇಳಿ ಎಚ್ಚೆತ್ತ ರೋಗಿಗಳು ಗಾಜಿನ ಕೊಠಡಿಯತ್ತ ನೋಡಿದರು. ನಗು ಮುಗಿದು ಏದುಸಿರು ಬಿಡುತ್ತಾ ಅವಳು ಮೇರಿಯ ತೋಳನ್ನು ಒತ್ತುತ್ತಾ ಹೇಳಿದಳು.

"ನನ್ನನ್ನು ಮದುವೆಯಾದವನು ಬಂದ ಕಣೆ. ಇವತ್ತು ಬೆಳಗ್ಗೆ ಬಂದ" ಮತ್ತೆ ಉಸಿರೆಳೆದುಕೊಳ್ಳುತ್ತಾ ಅವಳು ಮುಂದುವರೆಸಿದಳು. "ವಿಷಯವನ್ನು ತಿಳಿಸದೆ ಇದ್ದಕ್ಕಿದ್ದಂತೆ ಬಂದಾಗ ನಾನು ಹಾಗೇ ಕಾಲು ಕೀಲಿಸಿದವಳಂತೆ ನಿಂತುಬಿಟ್ಟೆ."

ಯೂನಿಫಾರಂ ಹಾಕಿಕೊಂಡು ಅವಳು ತ್ವರೆಯಿಂದ ಬಂದಳು. ಗಂಜಿಯ*ವಾಸನೆ ಡ್ಯೂಟಿರೂಂನಲ್ಲಿ ವ್ಯಾಪಿಸಿತು.

"ಹನ್ನೆರಡಕ್ಕೆ ಸಿ.ಪಿ. ಕೊಡಬೇಕು. ನಾಲ್ಕಕ್ಕೆ ನಾಲ್ಕು ಗಂಟೆ ಫೀಡ್ ಮಾಡಬೇಕು. ಹದಿನಾಲ್ಕನ್ನೂ ಸ್ವಲ್ಪ ಸರಿಯಾಗಿ ಗಮನಿಸಿಕೋ. ನಾಲ್ಕು ಗಂಟೆ ಕಾಣುತ್ತಾನೆಯೋ ಎಂದು ಸಂದೇಹವಾಗುತ್ತಿದೆ. ಈಗಲೇ ಶ್ವಾಸ ಎಳೆಯಲು ಪ್ರಾರಂಭಿಸಿದ್ದಾನೆ." ಇಷ್ಟು

---

* ಗಂಜಿ: ಬಟ್ಟೆಗೆ ಬಳಸುವ ಗಂಜಿ

ಹೇಳಿ ಮೇರಿ ಅವಸರವಸರವಾಗಿ ಹೊರಟಳು "ಬಾಕಿ ಎಲ್ಲಾ ಟಿಕೆಟ್*ನಲ್ಲಿದೆ.

ಹಾಗೆಯೇ ಮೇರಿ ತನ್ನ ಡ್ಯೂಟಿಯನ್ನು ವರ್ಗಾಯಿಸುವುದು ಕಳೆಯಿತು. ನಾಲ್ಕು ಗಂಟೆಯ ಹೊತ್ತಿಗೆ ಅವಳು ತನ್ನ ಜವಾಬ್ದಾರಿಯಿಂದ ಸ್ವತಂತ್ರಳಾದಳು.

ಕಾರಿಡಾರ್ ಪ್ರವೇಶಿಸಿದಾಗ ಅವಳಿಗೆ ಹಸಿವಾಗಲು ಪ್ರಾರಂಭಿಸಿತು. ಎಲ್ಲಾ ಮನೋವಿಕಾರಗಳೂ ಇಲ್ಲೇ ಆರಂಭವಾಗುವುದು.

ಮೇರಿ ಹಾಸ್ಟೆಲ್‌ನ ಡೈನಿಂಗ್ ರೂಮಿನ ಕಡೆಗೆ ಅವಸರವಸರವಾಗಿ ನಡೆದಳು.

---

* ಟಿಕೆಟ್: ಕೇಸ್ ಶೀಟ್

# ಹನ್ನೆರಡು

ಒಂದು ವಾರದ ರಜೆ ಮುಗಿದಾದ ಮೇಲೆ ಕುಞ್ಞಮ್ಮ ಹಾಸ್ಟೆಲ್‌ಗೆ ಹಿಂದಿರುಗಿ ಬಂದಳು. ಅವಳು ಬರುವುದನ್ನು ದೂರದಿಂದಲೇ ನೋಡಿದ ಮೇರಿ ಗೇಟಿನ ಬಳಿಗೆ ಹೋದಳು.

"ಇದೇನು ? ಇಷ್ಟೇ ಬೇಗ ?" ಮೇರಿ ಕೇಳಿದಳು.

"ಅವರಿಗೆ ಲೀವಿಲ್ಲವಲ್ಲಾ ? ಒಟ್ಟು ಎರಡು ವಾರಗಳ ಲೀವ್ ಇತ್ತು ಅಷ್ಟೇ. ಇನ್ನು ಊರಿಗೆ ಹೋಗಿ ತಮ್ಮ ತಾಯಿಯನ್ನು ನೋಡಿಕೊಂಡು ಅವರು ವಾಪಸ್ ಹೋಗುತ್ತಾರೆ." ನಿರಾಶೆಯಿಂದ ಕುಞ್ಞಮ್ಮ ಹೇಳಿದಳು.

"ಏನೇ ಆಗಲಿ ಒಂದು ವಾರವಾದರೂ ಸಿಕ್ಕಿತಲ್ಲ ?"

ನಿರಾಶೆ ತುಂಬಿದ್ದ ಕುಞ್ಞಮ್ಮಳ ಮನಸ್ಸನ್ನು ತಿರುಗಿಸಲೋಸುಗ ಮೇರಿ ಹೇಳಿದಳು.

"ಬಹಳ ಬೋರಾಗಿತ್ತು."

"ಅದು ಹೇಗೋ ? ನಿನ್ನ ಗಂಡ ಬಂದಿದ್ದು ನಿನಗೆ ಬೋರ್ ಆಯಿತೇ ?" ಮೇರಿ ಸಂದೇಹದಿಂದ ಕೇಳಿದಳು.

"ಹೊಟೇಲ್‌ನಲ್ಲಿ ಅಲ್ಲವೇ ತಂಗಿ ? ಅವರಾದರೋ ಹೊರಗೆ ಇಳಿದು ಎಲ್ಲಿಯೂ ಹೋಗಿ ಸುತ್ತಾಡಿ ನೋಡಲಿಲ್ಲ."

"ಮತ್ತೆ ಒಂದು ವಾರ ಹೊಟೇಲ್ ರೂಮ್‌ನಲ್ಲಿ ಏನು ಮಾಡಿದಿರಿ ?" ಮೇರಿ ಆಶ್ಚರ್ಯದಿಂದ ಕೇಳಿದಳು.

"ಅವರು ನನ್ನನ್ನೆ ತಬ್ಬಿ ಹಿಡಿದುಕೊಂಡು ಮಲಗೇ ಇದ್ದರು. ದೇವರೇ ನನ್ನ ಮೈಯೆಲ್ಲಾ ಹಣ್ಣಾಗಿ ಹೋಗಿದೆ ಕಣೆ." ಕೈಯಲ್ಲಿರುವ ಲೆದರ್ ಬ್ಯಾಗನ್ನು ನೆಲದ ಮೇಲಿಟ್ಟು ಕುಞ್ಞಮ್ಮ ಸುಸ್ತಾಗಿ ನೆಲದ ಮೇಲೆ ಕುಳಿತಳು.

ಹಾಸ್ಟಲಿನಲ್ಲಿ ಗಲಾಟೆ ಶಬ್ದ ಏನೂ ಇರಲಿಲ್ಲ. ನೈಟ್ ಡ್ಯೂಟಿ ಮಾಡುವವರು ನಿದ್ದೆಯಲ್ಲಿ ಮುಳುಗಿದರು. ಮಧ್ಯಾಹ್ನ ಎರಡು ಗಂಟೆಯಾಗಿತ್ತು. ವರಾಂಡದಲ್ಲಿ ಯಾರೂ ಇರಲಿಲ್ಲ.

ಕುಞ್ಞಮ್ಮಳ ಬಳಿ ಅವಳ ತೋಳಿಗೆ ಅಂಟಿಕೊಂಡೇ ಮೇರಿಯೂ ಕುಳಿತಳು. ಕುಞ್ಞಮ್ಮ ಬಲು ನಿಶ್ಶಕ್ತಳಾಗಿದ್ದಳು. ಕಣ್ಣಿನ ಕೆಳಭಾಗದಲ್ಲಿ ಕಪ್ಪಾಗಿತ್ತು. ಕಣ್ಣುಗಳಲ್ಲಿ ಒಂದು ವಾರದ ನಿದ್ದೆಯೂ ಕತ್ತಲೆಯೂ ಒತ್ತಲ್ಪಟ್ಟಿರುವಂತೆ ತೋರಿತು.

ಅವಳ ಸ್ಥೂಲವಾದ ಕತ್ತಿನಲ್ಲೂ ಕೆನ್ನೆಯಲ್ಲೂ ಕಪ್ಪಗಾಗಿದ್ದ ಗುರುತುಗಳಿದ್ದವು. ಸೊಂಟದಲ್ಲೂ ತೋಳಿನಲ್ಲೂ ಸ್ನಾಯುಗಳು ಬಿರಿದಿದ್ದವು. ಅಸ್ಥಿಸಂಧಿಗಳಲ್ಲಿ ಬಾವಿತ್ತು.

ಕುಞ್ಞಮ್ಮಳ ಗಂಡ ಸೈನ್ಯದಲ್ಲಿ ಕೆಲಸ ಮಾಡುತ್ತಿದ್ದನು. ವರ್ಷದ ರಜಾ ದಿನಗಳಲ್ಲಿ ಅವನು ಕುಞ್ಞಮ್ಮಳನ್ನು ಹುಡುಕಿಕೊಂಡು ಆಸ್ಪತ್ರೆ ನಗರಕ್ಕೆ ಬರುವುದು ರೂಢಿಯಾಗಿತ್ತು. ಅವನಿಗೆ ರಜೆ ಸಿಕ್ಕಾಗ ಕುಞ್ಞಮ್ಮಳಿಗೆ ರಜೆ ಸಿಗುತ್ತಿರಲಿಲ್ಲ. ಕಳೆದ ಮೂರು ವರ್ಷಗಳಿಂದ ಇದು ಹೀಗೆ ನಡೆಯುತ್ತಿತ್ತು. ಮೇಟ್ರನ್ ಹೆಲೆನ್ ಸಿಂಗರು ಮನಃಪೂರ್ವಕವಾಗಿ ಒಡ್ಡುತ್ತಿದ್ದ ಉಪದ್ರವಗಳ ಉದಾಹರಣೆಯಾಗಿತ್ತದು.

ಮೂರು ವರ್ಷಗಳ ಹಿಂದೆ ಕುಞ್ಞಮ್ಮಳ ಮದುವೆಗೆ ಬೇಕಾಗಿದ್ದ ರಜವನ್ನೇ ಮೇಟ್ರನ್ ಮನಸ್ಸಿಲ್ಲದ ಮನಸ್ಸಿನಿಂದ ನೀಡಿದ್ದರು.

"ಯಾತಕ್ಕೀ ದರಿದ್ರದ ಮದುವೆ ? ಪುರುಷನ ದಾಸಿಯಾಗಿ ಬಾಳಲೇನು ? ಈ ಮನುಷ್ಯರಿಗೆ ನಾಚಿಕೆ ಎನ್ನುವುದೇ ಇಲ್ಲ" ಮದುವೆ ನಿಶ್ಚಯಿಸಿದ ವಿಷಯವನ್ನು ಮೇಟ್ರನ್‌ರೊಂದಿಗೆ ಕುಞ್ಞಮ್ಮಳು ಹೇಳಿದಾಗ ಆಕೆಯ ಪ್ರತಿಕ್ರಿಯೆ ಹಾಗಿತ್ತು.

ಮೇರಿಯ ಮಡಿಲಲ್ಲಿ ತಲೆಯನ್ನಿಟ್ಟುಕೊಂಡು ಕುಞ್ಞಮ್ಮ ಹೇಳಿದಳು.

"ನನಗೀಗ ಅನ್ನಿಸುತ್ತಿದೆ ಕಣೆ" ಇದ್ದಕ್ಕಿದ್ದಂತೆ ಕುಞ್ಞಮ್ಮ ಹೇಳಿ ನಿಲ್ಲಿಸಿದಳು.

"ಹುಂ, ಏನು ?" ಮೇರಿ ಕೇಳಿದಳು.

"ಈ ಮದುವೆ ಬೇಕಾಗಿರಲಿಲ್ಲ."

ಕುಞ್ಞಮ್ಮಳ ಧ್ವನಿಯಲ್ಲಿ ದೊಡ್ಡ ನಿರಾಶೆಯಿತ್ತು. ಅವಳು ಮೇರಿಯ ಮೊಳಕಾಲನ್ನು ತಡವುತ್ತಿದ್ದಳು.

"ಏನಿದು ? ವಾಟ್ ಹ್ಯಾಪನ್ಡ್"

ಥಟ್ಟನೆ ವರಾಂಡವನ್ನು ಪ್ರವೇಶಿಸಿದ ಮೇಟ್ರನ್ ಕೇಳಿದರು. ಕುಞ್ಞಮ್ಮಳು ಮೇರಿಯೂ ಸರ್ರೆಂದು ಬೆಚ್ಚಿಬಿದ್ದು ಎದ್ದರು.

"ಯೂ ರಿಟರ್ನ್‌ಡ್ ಬ್ಯಾಕ್ ? ಹೌ ಯು ಎಂಜಾಯ್ಡ್ ? ನೈಸ್ ?" ಕೋಪದಿಂದಲೂ ಅಸಹನೆಯಿಂದಲೂ ಹೇಳುತ್ತಿದ್ದರೂ ಆಕೆಯ ಮುಖದಲ್ಲಿ ತಿಳಿನಗೆ ಇತ್ತು.

ಮೇಟ್ರನ್ ಹೆಲೆನ್ ಸಿಂಗ್ ಅವಸರವಸರವಾಗಿ ಹೊರಕ್ಕೆ ಹೊರಟಿದ್ದರು.

"ಮೇರಿ ಆರ್ ಯು ಫ್ರೀ ?" ಹುಬ್ಬು ಮೇಲೇರಿಸುತ್ತಾ ಆಕೆ ಕೇಳಿದರು.

"ನೋ ಮೇಡಂ, ಐ ಗಾಟ್ ಈವಿನಿಂಗ್ ಡ್ಯೂಟಿ."

"ದಟೀಸ್ ನೈಸ್. ದನ್ ಐ ವಿಲ್ ಗೋ ಏಲೋನ್."

ಯಾರೊಂದಿಗೂ ಅಲ್ಲವೆಂಬಂತೆ ಹೇಳುತ್ತಾ ಮೇಟ್ರನ್ ಹೆಲೆನ್ ಸಿಂಗ್ ಗೇಟನ್ನು ದಾಟಿ ಹೊರಕ್ಕೆ ಹೋದರು.

ತಿಳಿ ಹಸಿರು ಬಣ್ಣದ ಒಂದು ಚೀನಾ ಸಿಲ್ಕ್ ಸೀರೆಯನ್ನಾಕೆ ಉಟ್ಟಿದ್ದರು. ಕುಞ್ಞಮ್ಮಳ ಕಣ್ಣುಗಳು ಆ ಸೀರೆಯ ಮೇಲೆ ನೆಟ್ಟಿದ್ದವು. ಮೇಟ್ರನ್ ಹೆಲೆನ್ ಸಿಂಗ್‌ಗೆ ಎಣಿಸಿದರೂ ಮುಗಿಯದಷ್ಟು ಸೀರೆಗಳಿದ್ದವು. ಪ್ರತಿ ತಿಂಗಳೂ ಸಂಬಳ ಬಂದೊಡನೇ ಆಕೆ ಜವಳಿ ಅಂಗಡಿಗೆ ಹೋಗುವರು. ಆಕೆ ಹಿಂದಿರುಗುವಾಗ ಒಂದು ದೊಡ್ಡ ಮೂಟೆಯೊಡನೆ ಆಕೆ ಬರುವರು. ಮೇಟ್ರನ್ ಹೆಲೆನ್ ಸಿಂಗ್ ಒಮ್ಮೆ ಉಟ್ಟ ಸೀರೆಯನ್ನು ಇನ್ನೊಮ್ಮೆ ಉಡುವುದನ್ನು ಯಾರೂ ನೋಡೇ ಇರಲಿಲ್ಲ.

ಕುಞ್ಞಮ್ಮಳು ಮೇರಿಯೂ ಅವರ ರೂಮಿಗೆ ನಡೆದರು. ಅವರಿಬ್ಬರೂ ಒಂದೇ ರೂಮಿನಲ್ಲಿದ್ದರು.

"ನನಗಿಂದು ಯಾವತ್ತೂ ಇಲ್ಲದ ಸುಸ್ತಾಗುತ್ತಿದೆ. ನೀನು ನನಗೇನಾದರೂ ಮಾಡೇ" ಕೈಕಾಲು ಸೇದುವಂತಾಗಿ ತಲೆಯೂ, ಕತ್ತೂ ಮುರುಟಿಕೊಂಡು ಬಿಟ್ಟಿದ್ದ ಕುಞ್ಞಮ್ಮ ಹೇಳಿದಳು.

"ಏನು ಮಾಡಲಿ ಅಕ್ಕಾ?" ಮೇರಿ ಕೇಳಿದಳು.

"ನನಗೇನೇನೂ ಕೈಲಾಗುತ್ತಿಲ್ಲ. ನೀನು ನನಗೆ ಸ್ವಲ್ಪ ಮಸಾಜ್ ಮಾಡು."

ಸೀರೆ ಬ್ಲೌಸ್ ಒಳಲಂಗಗಳನ್ನು ಬಿಚ್ಚಿ ಕೊಳೆಬಟ್ಟೆಗಳನ್ನು ಹಾಕುವ ಕುಕ್ಕೆಯೊಳಕ್ಕೆ ಬಿಸಾಡುತ್ತಾ ಕುಞ್ಞಮ್ಮ ಹೇಳಿದಳು.

ಕುಞ್ಞಮ್ಮ ಬಾಗಿಲು ಮುಚ್ಚಿ ಬೋಲ್ಟ್ ಹಾಕಿದಳು. ಬ್ರಾ ಮತ್ತು ಕಾಚ ಮಾತ್ರ ಧರಿಸಿದ್ದ ಕುಞ್ಞಮ್ಮ ಬಂದು ಮಂಚದ ಮೇಲೆ ಮಲಗಿದಳು. ಅವಳ ತೊಡೆಗಳು ಯೂ ಫೋಮ್ ಹಾಸಿಗೆಯ ತುಂಬ ಚೆಲ್ಲಿದ್ದವು.

ಅವಳ ತೋಳುಗಳಲ್ಲಿ ಜಿಡ್ಡು ಕೊಬ್ಬು ಜಿನುಗುತ್ತಿತ್ತು.

ಮೇರಿ ಮೆಡಿಕ್ರೀಮ್ ಟ್ಯೂಬನ್ನು ಅದುಮಿ ತನ್ನ ಅಂಗೈಗಳಲ್ಲಿ ಕ್ರೀಮ್ ಹಾಕಿಕೊಂಡು ಉಜ್ಜಿಕೊಂಡ ನಂತರ ಕುಞ್ಞಮ್ಮಳ ದೇಹದಲ್ಲೆಲ್ಲಾ ಹಚ್ಚಿದಳು. ಕುಞ್ಞಮ್ಮಳ ತೋಳಿನಲ್ಲೂ ಎದೆಯ ಮೇಲೂ, ಕತ್ತಿನಲ್ಲೂ ಮೊಳಕಾಲುಗಳ ಮೇಲೂ ಮೇರಿಯ ಮೃದುವಾದ ಕೈಗಳು ಚಲಿಸುತ್ತಲೇ ಇದ್ದುವು.

ಅವರಿಬ್ಬರೂ ಮಧ್ಯೆ ಮಧ್ಯೆ ಮಾತುಗಳನ್ನಾಡುತ್ತಿದ್ದರು. ಮಾತುಕತೆಗಳ ಮಧ್ಯೆ ಕುಞ್ಞಮ್ಮಳ ಮಾತುಗಳು ಜಾರಿದುವು.

ಮೇರಿ ಮೆಲ್ಲನೆ ನೀವುತ್ತಲೇ ಇದ್ದಳು.

ಇದ್ದಕ್ಕಿದ್ದಂತೆ ಕುಞ್ಞಮ್ಮಳ ದೇಹದಲ್ಲೆಲ್ಲಾ ಒಂದು ನಡುಕ ಉಂಟಾಯಿತು. ಅವಳು ಬೆವರ ತೊಡಗಿದಳು. ಕುಞ್ಞಮ್ಮಳ ಸ್ನಾಯುಗಳು ಸಡಿಲವಾದುವು. ಅಸ್ಥಿ ಸಂಧಿ ಬಂಧಗಳಿಂದ ಬಾವು ಇಳಿಯಿತು.

ಕುಞ್ಞಮ್ಮಳ ಕಣ್ಣಿನ ರೆಪ್ಪೆಗಳು ಅರ್ಧ ನಿಮೀಲಿತವಾದವು. ಕಣ್ಣುಗುಡ್ಡೆಗಳ ಅರ್ಧ ಮುಚ್ಚಿದ್ದ ಕಣ್ಣುಗಳಲ್ಲಿ ಉರುಳಾಡುತ್ತಾ ಮೇಲಕ್ಕೇರಿದವು.

ಮೇರಿ ಮೈ ತೊಳೆದುಕೊಳ್ಳಲು ಬಾತ್‌ರೂಮ್ ಪ್ರವೇಶಿಸಿದಳು.

ಸಾಯಂಕಾಲ ಡ್ಯೂಟಿ ಮುಗಿದು ಮೇರಿ ವಾಪಾಸ್ ಬರುವಾಗ ಹಾಸ್ಟೆಲ್‌ನ ಗೇಟಿನಲ್ಲಿ ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿ ನಿಂತಿರುವುದನ್ನು ಕಂಡಳು.

"ಗುಡ್ ಈವಿನಿಂಗ್ ಸಿಸ್ಟರ್" ಶರ್ಮಾಜಿಯ ಗಡುಸಾದ ಧ್ವನಿ.

"ಗುಡ್ ಈವಿನಿಂಗ್ ಸಾರ್" ಮೇರಿಯ ಸಣ್ಣನೆಯ ಧ್ವನಿಯು ಆ ಗಡುಸು ಧ್ವನಿಯಲ್ಲಿ ಎಲ್ಲೋ ಸೇರಿಕೊಂಡು ಬಿಟ್ಟಿತ್ತು.

"ಸಿಸ್ಟರ್ ಕುಞ್ಞಮ್ಮ ಬಂದರೇನು?"

"ಬಂದರು." ಮೇರಿ ಹೇಳಿದಳು.

"ಓ ಮೈಗಾಡ್, ಐಯಾಮ್ ಲಕ್ಕಿ."

ಶರ್ಮ ಗಹಗಹಿಸುತ್ತಾ ಹೇಳಿದನು.

"ಬೇಗ ಹೋಗಿ ಎಬ್ಬಿಸಿ."

ಎಂದೂ ಇಲ್ಲದ ಉತ್ಸಾಹದಿಂದ ಗೇಟನ್ನು ಎಳೆದು ತೆಗೆದು ಒಳಕ್ಕೆ ಹೋದನು. ಗೇಟಿನ ಕಾವಲುಗಾರನು ಸಬ್ ಇನ್‌ಸ್ಪೆಕ್ಟರ್‌ಗೆ ಒಂದು ಸೆಲ್ಯೂಟ್ ಹೊಡೆದನು.

ಶರ್ಮಾಜಿ ಅತಿಥಿ ಕೋಣೆಯ ಬಾಗಿಲ ಬಳಿ ಬಂದನು. ಸಂದರ್ಶನ ಸಮಯವಲ್ಲವಾದ್ದರಿಂದ ಅತಿಥಿ ಕೋಣೆಯ ಬಾಗಿಲಿಗೆ ಬೀಗ ಹಾಕಲಾಗಿತ್ತು. ವಾಚ್‌ಮನ್ ಬಾಗಿಲು ತೆರೆದುಕೊಟ್ಟನು. ಸಬ್‌ಇನ್‌ಸ್ಪೆಕ್ಟರ್ ಶರ್ಮಾಜಿಗೆ ಅಲ್ಲಿ ಯಾವ ಸಮಯದಲ್ಲೂ ಪ್ರವೇಶ ಸ್ವಾತಂತ್ರ್ಯವಿತ್ತು.

"ಕುಞ್ಞಮ್ಮಳಿಗೆ ಹುಷಾರಿಲ್ಲ" ಮೇರಿ ಶರ್ಮನಿಗೆ ಸಂದೇಶ ನೀಡಿದಳು.

"ಎಲ್ಲಿದ್ದಾಳೆ ಹಾಗಾದರೆ ?" ಶರ್ಮಾಜಿ ಉದ್ವೇಗದಿಂದ ಕೇಳಿದನು.

ಸುಸ್ತಾಗಿ ಮಲಗಿದ್ದಾಳೆ. ಮೇರಿ ಹೇಳಿದಳು.

"ನಾನು ಬಂದಿದ್ದೇನೆಂದು ಹೇಳು, ಪ್ಲೀಸ್" ಸಬ್‌ಇನ್‌ಸ್ಪೆಕ್ಟರ್ ಶರ್ಮಾಜಿ ಹೇಳಿದನು.

"ಸಂತೋಷದಿಂದ ಅವಳ ಮನಸ್ಸು ಬೀಗುತ್ತದೆ."

ರೂಮ್‌ನ ಬಾಗಿಲು ತೆಗೆದು ಮೆಲ್ಲನೆ ಮೇರಿ ಒಳಕ್ಕೆ ಹೋದಳು. ಸುಸ್ತಾಗಿ ಕೈಕಾಲುಗಳನ್ನು ಹಾಸಿಗೆಯಲ್ಲಿ ಅಡ್ಡಾದಿಡ್ಡಿಯಾಗಿ ಚೆಲ್ಲಿ ನದಿಯಲ್ಲಿ ಕೊಚ್ಚಿಕೊಂಡು ಹೋಗುತ್ತಿರುವ ಶವದಂತೆ ಕುಞ್ಞಮ್ಮ ಮಲಗಿದ್ದಳು.

ಮೇರಿ ಕುಞ್ಞಮ್ಮಳನ್ನು ಮುಟ್ಟಿ ಕೂಗಿದಳು. ಮೇರಿಯ ಕೈ ಬೆರಳುಗಳು ಕುಞ್ಞಮ್ಮಳ ನಾಭಿಯ ಮೇಲಾಡಿದವು. ಅಲ್ಲಿ ಸ್ನಾಯುಗಳು ಸಡಿಲವಾಗಿದ್ದವು. ಕಾಲಿನಲ್ಲಿ ಬಾವು ಇಳಿದಿತ್ತು.

ಕೈಗಳನ್ನು ಹೆಣೆದುಕೊಂಡು ಮೇಲಕ್ಕೆತ್ತಿ ಕುಞ್ಞಮ್ಮ ಕಣ್ಣುಗಳನ್ನು ತೆರೆದಳು.

"ಶರ್ಮಾಜಿ" ಮೇರಿ ಪುಸುಗುಟ್ಟಿದಳು.

ಒಂದು ಮಿಂಚು ಹೊಡೆದಂತೆ ಕುಞ್ಞಮ್ಮ ಥಟ್ಟನೆ ಎದ್ದಳು. ಅವಳ ಆಲಸ್ಯದ ಚರಿತ್ರೆಯು ಎಲ್ಲೋ ಅಡಗಿಹೋಯಿತು.

"ಎಲ್ಲಿ ?"

ಮೇರಿ ಒಂದು ನಿಮಿಷ ಸ್ತಬ್ಧಳಾದಳು. ಕಣ್ಣುಗಳನ್ನು ಉಜ್ಜುತ್ತಾ ಕುಞ್ಞಮ್ಮ ಕೇಳಿದಳು.

"ಎಲ್ಲಿ ನನ್ನ ಶರ್ಮಾಜಿ ?"

"ಗೆಸ್ಟ್ ಹೌಸ್‌ನಲ್ಲಿ ?" ಮೇರಿ ಹೇಳಿದಳು.

ಬಾಗಿಲನ್ನು ತೆರೆದು ಕುಞ್ಞಮ್ಮ ಓಡಲು ನೋಡಿದಳು. ಮೇರಿ ಕುಞ್ಞಮ್ಮಳನ್ನು ತಟ್ಟನೆ ಹಿಡಿದುಕೊಂಡಳು.

"ಈ ವೇಷದಲ್ಲೇ ಹೋಗುತ್ತೀಯ ?" ಮೇರಿ ಕೇಳಿದಳು.

ಕುಞ್ಞಮ್ಮಳಿಗೆ ಇದ್ದಕ್ಕಿದ್ದಂತೆ ನಾಚಿಕೆ ಅನಿಸಿತು.

ಅವಳು ಅವಸರವಾಗಿ ಬಟ್ಟೆ ಹಾಕಿಕೊಳ್ಳಲು ತೊಡಗಿದಳು.

ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿಯನ್ನು ಕುಞ್ಞಮ್ಮ ಪರಿಚಯ ಮಾಡಿಕೊಂಡು ಎರಡು ವರ್ಷಗಳಾಗಿದ್ದುವು. ಅದಕ್ಕೆ ಮುಂಚೆ ಒಬ್ಬ ಫ್ಯಾಕ್ಟರಿ ಯಜಮಾನ ಅವಳ

ಜೊತೆಗಾರನಾಗಿದ್ದನು. ಅದಕ್ಕೂ ಮುಂಚೆ ಫ್ಯಾಕ್ಟರಿಯ ಯಜಮಾನನೇ ಆಗಿದ್ದನು. ಅವನು ಹೃದ್ರೋಗದಿಂದಾಗಿ ಕುಞ್ಞಮ್ಮಳ ಸೇವೆಯಲ್ಲೇ ತೀರಿಹೋದನಂತರ ಅವನ ಮಗನು ಅವಳ ಪ್ರೇಮಿಯಾದನು. ಅವನನ್ನು ಕುಞ್ಞಮ್ಮಳೇ ತ್ಯಜಿಸಿದಳೋ, ಅಥವಾ ಅವನೇ ಕುಞ್ಞಮ್ಮಳನ್ನು ಬಿಟ್ಟನೋ ಯಾರಿಗೂ ತಿಳಿಯದು. ಅವನು ಈಗಲೂ ಕ್ಲಬ್‌ಗೆ ಬರುತ್ತಾ, ಇಸ್ಪೀಟ್ ಆಡುತ್ತಾ, ಮದ್ಯಪಾನ ಮಾಡುತ್ತಾ ಬಿಲಿಯರ್ಡ್ಸ್ ಟೇಬಲ್ ಅನ್ನು ನೋಡುತ್ತಾ ಇದ್ದನು.

ಮದುವೆಯಾದ ಮೇಲೆ ಕುಞ್ಞಮ್ಮ ಸರಿಹೋದಳೆಂದು ಎಲ್ಲರೂ ಭಾವಿಸಿದರು. ಆದರೆ ಅವರ ಲೆಕ್ಕಾಚಾರಗಳನ್ನೆಲ್ಲಾ ತಲೆಕೆಳಗು ಮಾಡುತ್ತಾ ಹನಿಮೂನ್‌ನ ಬಿಸಿಯು ಆರುವುದಕ್ಕಿಂತ ಮುಂಚೆಯೇ ಸಬ್‌ಇನ್ಸ್‌ಪೆಕ್ಟರ್ ಶವರ್ಮಾಜಿ ಕುಞ್ಞಮ್ಮಳ ತುಟಿಗಳ ಮೇಲೆ ಮುತ್ತಿಟ್ಟನು.

ಪ್ರಥಮ ಚುಂಬನವೇ ಬಹಿರಂಗ ಚುಂಬನವಾಗಿತ್ತು. ಹೋಟೆಲ್‌ನಲ್ಲಿನ ಗೆಸ್ಟ್ ರೂಮ್‌ನಲ್ಲಿ ಇನ್ನ್ಯಾರೂ ಇಲ್ಲದ ಒಂದು ಸಮಯದಲ್ಲಿ ಮೇರಿ ಚಾಕೋಲೇಟ್ ಪೊಟ್ಟಣದೊಂದಿಗೆ ಪ್ರವೇಶಿಸಿದಾಗ, ಅವರಿಬ್ಬರೂ ಪ್ರಥಮ ಚುಂಬನದಲ್ಲಿ ಮಗ್ನರಾಗಿದ್ದರು. ಅಂದು ರಾತ್ರಿ ಮೇರಿಯ ಕೈಹಿಡಿದುಕೊಂಡು ಕುಞ್ಞಮ್ಮ ಹೇಳಿದಳು: "ನೀನು ಅದನ್ನು ನೋಡಿದೆ ಅಲ್ಲವೇ ಮೇರಿ ?" ಮೇರಿ ಮಾತನಾಡಲಿಲ್ಲ. "ನಮ್ಮ ಪ್ರಥಮ ಚುಂಬನವಾಗಿತ್ತದು." ಕುಞ್ಞಮ್ಮ ಮೇರಿಯನ್ನು ತಬ್ಬಿಕೊಂಡು ಫಕ್ಕನೆ ನಕ್ಕಿದಳು.

ಅಂದು ಮೇರಿ ಬಹಳವಾಗಿ ನಡುಗಿಬಿಟ್ಟಳು. ಮದುವೆ ಆದ ಮೇಲೂ ಒಬ್ಬ ಯುವತಿ ಯಾಕೆ ಹೀಗೆಲ್ಲಾ ವರ್ತಿಸುತ್ತಾಳೆಂಬ ಆಶ್ಚರ್ಯದಲ್ಲಿ ಮೇರಿ ಮೂಕಳಾದಳು.

ಸಾಯಂಕಾಲ ಇನ್ ಅಂಡ್ ಔಟ್ ಬುಕ್‌ನಲ್ಲಿ ಪರ್ಮಿಷನ್ ಬರೆದ ನಂತರ ಕುಞ್ಞಮ್ಮ ಸಬ್‌ಇನ್ಸ್‌ಪೆಕ್ಟರ್ ಶವರ್ಮಾಜಿಯೊಂದಿಗೆ ಹೊರಕ್ಕೆ ಹೋದಳು.

ಗೇಟನ್ನೂ ದಾಟಿ ಶವರ್ಮಾಜಿಯ ದೇಹದೊಂದಿಗೆ ಬೆಸೆದುಕೊಂಡು ಹಂಸದಂತೆ ಎಡವಿ ಬೀಳುತ್ತಾ ನಡೆದು ಮರೆಯಾಗುವುದನ್ನು ಕಣ್ಣು ಕಾಣುವವರೆಗೆ ಮೇರಿ ನೋಡುತ್ತಾ ನಿಂತಳು.

"ವಾಟ್ ಹ್ಯಾಪನ್ಸ್!" ಮೇಟ್ರನ್ ಹೆಲೆನ್ ಸಿಂಗ್‌ರ ಧ್ವನಿಯನ್ನು ಕೇಳಿ ಮೇರಿ ಹಿಂದಿರುಗಿ ನೋಡಿದಳು.

ಒಂದು ಪ್ಯಾಕೆಟ್ ಅನ್ನು ಹಿಡಿದು ಮೇಟ್ರನ್ ವಿಶೇಷ ಗೇಟಿನ ಮೂಲಕ ಪ್ರವೇಶಿಸಿದ್ದರು. ಆಕೆ ಒಮ್ಮೊಮ್ಮೆ ಯಾರಿಗೂ ಗೊತ್ತಾಗದಂತೆ ಒಳ ಪ್ರವೇಶಿಸಿ ಬಿಡುತ್ತಿದ್ದರು. ಮಧ್ಯೆ ಒಬ್ಬ ಪೋಲೀಸಿನವನಂತೆಯೂ ಒಂದು ಬೆಕ್ಕಿನಂತೆಯೂ ಮೆಲ್ಲನೆ ನುಸುಳಿಕೊಂಡು ಬಂದು ಗುಂಡು ಹಾರಿಸುವಂತೆ ಮಾತುಕತೆ ಆರಂಭಿಸಿದರು.

"ಬಾ ಮೇರಿ, ನಾವು ಕೊಠಡಿಗೆ ಹೋಗೋಣ."

ಮೇರಿಯು ಹೆಲೆನ್ ಸಿಂಗ್‌ರ ಕೈಗಳಿಂದ ಪ್ಯಾಕೆಟ್‌ಗಳನ್ನು ಪೊಟ್ಟಣಗಳನ್ನೂ ತೆಗೆದುಕೊಂಡು ಆಕೆಯ ಹಿಂದೆ ನಡೆದಳು.

ಹೆಲೆನ್ ಸಿಂಗ್ ಪ್ಯಾಕೆಟ್‌ಗಳನ್ನು ಬಿಚ್ಚಿ ಸಾಮಾನುಗಳನ್ನೆಲ್ಲಾ ಒಂದೊಂದಾಗಿ ಮಂಚದ ಮೇಲೆ ಎತ್ತಿಟ್ಟರು. ಸೀರೆ ಟವೆಲ್, ಚಾಕೋಲೇಟ್, ಕಂಡೆನಸ್ಡ್ ಮಿಲ್ಕ್, ಸಾಸೇಜ್ ಎಲ್ಲವನ್ನೂ ಸಾಲಾಗಿಟ್ಟರು. ಚಾಕೋಲೇಟ್‌ನ ಟಿನ್ ತೆರೆದು ಅದರಲ್ಲಿದ್ದುದನ್ನು ಕೈತುಂಬ ಬಾಚಿ ತೆಗೆದುಕೊಂಡು ಮೇರಿಗೆ ಕೊಟ್ಟರು. ಮೇರಿಯ ಕೈಗಳಲ್ಲಿ ಹಿಡಿಸದೆ ಮೂರು ನಾಲ್ಕು ಚಾಕೋಲೇಟ್‌ಗಳು ಕೆಳಕ್ಕೆ ಬಿದ್ದವು. ಅವಸರದಿಂದ ಅದರ ಪೈಕಿ ಒಂದನ್ನು ತೆಗೆದುಕೊಂಡು ಫಾಯಿಲ್ ಅನ್ನು ಬಿಡಿಸಿ ಆಕೆ ತಮ್ಮ ಬಾಯಲ್ಲಿ ಹಾಕಿಕೊಂಡರು. ಅದರ ರುಚಿಯನ್ನು ಸವಿಯುತ್ತಾ ಹೆಲೆನ್ ಸಿಂಗ್ ಹೇಳಿದರು.

"ಕುಞ್ಞಮ್ಮಳ ಬಿಸಿ ಆರಲಿಲ್ಲ ಅಲ್ಲವೇ ?"

ಮೇರಿ ಏನೂ ಅರ್ಥವಾಗದವಳಂತೆ ಮೇಟ್ರನ್‌ನ ಕಡೆ ಪಿಳಪಿಳನೆ ನೋಡಿದಳು.

"ಗಂಡ ವಿದಾಯ ಹೇಳಿ ಹೋಗಿ ಇನ್ನೂ ಕೆಲ ಗಂಟೆಗಳಾದರೂ ಕಳೆದಿಲ್ಲ" ಚಾಕೋಲೇಟನ್ನು ಸುತ್ತಿದ್ದ ಅಲ್ಯೂಮಿನಿಯಂ ಫಾಯಿಲ್ ಅನ್ನು ಸುರುಟಿ ಕುಕ್ಕೆಗೆ ಬಿಸಾಡುತ್ತಾ ಆಕೆ ಹೇಳಿದರು: "ಈ ಕಾಗದದ ಬೆಲೆ ಸಹ ಅವಳು ಅವನಿಗೆ ನೀಡಲಿಲ್ಲ."

ಈ ಬಗೆಯ ಸಂದರ್ಭಗಳಲ್ಲಿ ಅಭಿಪ್ರಾಯಗಳನ್ನು ಹೇಳುವುದು ಬಹಳ ಅಪಾಯಕರವಾದ್ದರಿಂದ ಮೇರಿ ಮೌನ ವಹಿಸಿದ್ದಳು. ಮೇಟ್ರನ್ ಏನೇನೋ ಮಾತನಾಡುತ್ತಿದ್ದರು. ಆಕೆ ಹೇಳಿದ್ದೆಲ್ಲವೂ ಗಂಡಸರ ಬಗೆಗಿನ ದೂಷಣೆಯಾಗಿತ್ತು. ಹೆಣ್ಣು ಹಾಳಾಗುವುದು ಗಂಡಸಿನ ಕೈಲಾಗದ ಸ್ವಭಾವದಿಂದ ಎಂಬುದು ಆಕೆಯ ಸಿದ್ಧಾಂತವಾಗಿತ್ತು.

ಹೆಲೆನ್ ಸಿಂಗ್ ಸ್ನಾನ ಕೋಣೆಯನ್ನು ಪ್ರವೇಶಿಸಿ ಬಟ್ಟೆ ಬದಲಾಯಿಸಿದ ನಂತರ ಹೇಳಿ ನಿಲ್ಲಿಸಿದ ಸಂಭಾಷಣೆಯನ್ನು ಮುಂದುವರೆಸುತ್ತಾ ಹೊರಕ್ಕೆ ಬಂದರು. ಅನಂತರ ಐದು ಹತ್ತು ನಿಮಿಷಗಳು ಅಲ್ಲಿ ಮೌನ ನೆಲೆಸಿತ್ತು. ಅಷ್ಟು ಹೊತ್ತೂ ಆಕೆ ಕನ್ನಡಿಯ ಮುಂದೆ ಕುಳಿತು ಪೌಡರ್ ಹಚ್ಚಿಕೊಳ್ಳುತ್ತಿದ್ದರು. ಕಿವಿಯ ಮೇಲಿನ ತಲೆಗೂದಲುಗಳನ್ನು ಸುರುಟಿ ಮಡಿಸಿ ಸರಿ ಮಾಡದೆ ಕೋಪದಿಂದ ಎದ್ದರು. ಕೂಜದಿಂದ ಒಂದು ಗ್ಲಾಸ್ ನೀರು ತೆಗೆದುಕೊಂಡು ತುಟಿಯನ್ನಾಲ್ಲಾಡಿಸದೆ ಕುಡಿದರು. ಗದ್ದದ ಮೇಲಿನಿಂದ ಉರುಳಿಬಿದ್ದ ಒಂದು ಹನಿ ನೀರು ಬಣ್ಣ ಹಾಕಿದ ಆಕೆಯ ಕಾಲಿನ ಬೆರಳಿನ ಮೇಲೆ ಬಿದ್ದು ಗ್ಲಾಸ್ ಒಡೆದು ಚೆದರುವಂತೆ ಚೆದುರಿತು.

ನೀರು ಕುಡಿದಾದ ಮೇಲೆ ಆಕೆ ತಣ್ಣಗಾದರು.

ತಲೆದಿಂಬುಗಳೆರಡನ್ನು ಸೇರಿಸಿ ಮಂಚದ ಅಡ್ಡಪಟ್ಟಿಯ ಮೇಲಿಟ್ಟು ಅದಕ್ಕೊರಗಿಕೊಂಡು ಹೆಲೆನ್ ಸಿಂಗ್ ವಿಶ್ರಮಿಸಲು ತಯಾರಾಗುತ್ತಿದ್ದರು.

"ಮೇರಿ, ನೀನು ಯಾರನ್ನಾದರೂ ಪ್ರೀತಿಸುತ್ತಿರುವೆಯಾ ?" ಹೆಲೆನ್ ಸಿಂಗ್ ತಮ್ಮ ಕಣ್ಣುಗಳಲ್ಲಿ ಒಂದು ಪ್ರಕಾಶವನ್ನು ತರಿಸಿಕೊಂಡು ಕೇಳಿದರು.

"ನಿಜವಾಗಿಯೂ ನಾನು ಪ್ರೀತಿಸಿದ್ದೆ" ಆ ವಿಷಯವು ಸತ್ತು ಹೋಗಿದ್ದುದರಿಂದ ಮೇರಿಗೆ ಇನ್ನೇನನ್ನೂ ಯೋಚಿಸಬೇಕಾಗಿ ಬರಲಿಲ್ಲ.

"ನೀನು ಯಾರನ್ನು ಪ್ರೀತಿಸಿದೆ ?"

"ಒಂದು ಬೆಕ್ಕಿನ ಮರಿಯನ್ನು." ಮೇರಿ ಕ್ಷಮೆ ಬೇಡುವಂತೆ ಮುಂದುವರೆಸಿದಳು. "ಆದರೆ ಆ ಪ್ರೀತಿಯು ಬಹಳ ಕಾಲವಿರಲಿಲ್ಲ. ಬೆಕ್ಕಿನ ಮರಿ ಸತ್ತು ಹೋಯಿತು."

ನಿರಾಶೆಯಿಂದ ಆಕೆಯ ಮುಖ ಬಾಡಿತು. ಸ್ವಲ್ಪ ಕೋಪವೂ ಬಂತು. ಆಕೆ ಹೇಳಿದರು:"

"ನಾನು ಕೇಳಿದ್ದು ಗಂಡಸರ ವಿಷಯವನ್ನು." ಸ್ವಲ್ಪ ನಿರಾಶೆಯೂ ಹೆಚ್ಚು ಕೋಪವೂ ಮಿಶ್ರವಾದ ಧ್ವನಿಯಿಂದ ಹೆಲೆನ್ ಸಿಂಗ್ ಮಾತನಾಡಿದರು.

"ಇಲ್ಲ ಮೇಟ್ರನ್ ಇಲ್ಲ. ನಾನದನ್ನು ಒಮ್ಮೆಯೂ ಮಾಡಿಲ್ಲ" ಮೇರಿ ತಕ್ಷಣ ಹೇಳಿದಳು. ಮೇರಿಯ ತೆಳ್ಳನೆಯ ಶರೀರದಿಂದ ಒಂದು ದೊಡ್ಡ ನಿಟ್ಟುಸಿರು ಹೊರಬಂತು.

"ಒಳ್ಳೆಯದಾಯಿತು. ಬಹಳ ಒಳ್ಳೆಯದಾಯಿತು. ನೀನು ಅದೃಷ್ಟವಂತೆ. ಹೆಲೆನ್ ಸಿಂಗ್ ಹೇಳಿದರು.

ಸ್ವಲ್ಪ ಹೊತ್ತಿನವರೆಗೆ ಯಾರೂ ಏನೂ ಮಾತನಾಡಲಿಲ್ಲ.

ಅನಂತರ ಹೆಲೆನ್ ಸಿಂಗ್ ಥಟ್ಟನೆ ಎದ್ದು ತಲೆದಿಂಬುಗಳನ್ನು ಸರಿಮಾಡಿ ನೇರವಾಗಿ ಮಲಗಿದ ನಂತರ ಹೇಳಿದರು.

"ಮೇರಿ ನೀನಿನ್ನು ಹೋಗು."

ಮೇರಿ ಕೆಳಕ್ಕಿಳಿದು ಬಂದಾಗ ಲಾನ್ ನಿರ್ಜನವಾಗಿತ್ತು. ಕಾವಲುಗಾರನು ಒಂದು ಸಿಗರೇಟ್ ಅನ್ನು ಹತ್ತಿಸಿಕೊಂಡು, ಗೇಟ್‌ನ ಕಂಬಕ್ಕೊರಗಿ ಒರಗಿ ನಿಂತಿದ್ದನು. ಸುಮಾರಾದ ಬೆಳದಿಂಗಳು.

ಡೈನಿಂಗ್ ಹಾಲ್‌ನಲ್ಲಿ ದೊಡ್ಡ ಗಲಭೆ. ಡ್ಯೂಟಿ ಕಳೆದು ಬಂದವರ ನೂಕುನುಗ್ಗಲು.

ಮೇರಿ ಕೊಠಡಿಯನ್ನು ಪ್ರವೇಶಿಸಿ ಬಾಗಿಲನ್ನು ಮುಂದಕ್ಕೆಳೆದಳು. ಕುಞ್ಞಮ್ಮಳ ಹಾಸಿಗೆಯಲ್ಲಿ ಅರ್ಧ ಓದಿ ಬೋರಲು ಹಾಕಿದ್ದ ಒಂದು ದೊಡ್ಡ ಕಾದಂಬರಿ ಯಾರನ್ನೋ ಕಾಯುತ್ತಿರುವಂತೆ ತೋರಿತು. ಮೇರಿ ಅದನ್ನು ತೆಗೆದುಕೊಂಡು ನೋಡಿದಳು. ಮುಟ್ಟತ್ತು ವರ್ಕಿ*ಯವರ ಕಾದಂಬರಿ.

ಹನ್ನೆರಡು ಗಂಟೆ ಕಳೆದಿರಬೇಕು. ಕುಞ್ಞಮ್ಮ ಬಂದಳು. ಮುಂದಕ್ಕೆ ಎಳೆದಿದ್ದ ಬಾಗಿಲನ್ನು ಮೆಲ್ಲನೆ ತೆರೆದು ಕುಞ್ಞಮ್ಮ ಒಳಕ್ಕೆ ನುಸುಳಿದಳು. ಲೈಟ್ ಹಾಕದೆ ಅವಳು ವಸ್ತ್ರಗಳನ್ನು ಬಿಚ್ಚಿ ಬೇರೆ ಹಾಕಿಕೊಳ್ಳಲುದ್ಯುಕ್ತಳಾದಳು. ಸ್ತ್ರೀ ಪುರುಷರ ಒಂದು ಸಮ್ಮಿಶ್ರ ವಾಸನೆಯು ಕೊಠಡಿಯಲ್ಲಿ ಹರಡಿತು. ತಕ್ಷಣವೇ ಕೋಣೆಯಲ್ಲಿ ಬಿಸಿ ಹರಡಿದಂತೆ ಮೇರಿಗನ್ನಿಸಿತು.

"ತಂಗಿ, ನೀನು ನಿದ್ದೆ ಮಾಡಿದೆಯಾ ?" ಕುಞ್ಞಮ್ಮಳ ಧ್ವನಿಯು ಕೇಳಿಸಿತು. ಆ ಧ್ವನಿಯಲ್ಲಿ ಶಾಂತಿಯಿತ್ತು. ಅವಳು ಮೇರಿಯ ಬಳಿ ಬಂದು ಒಂದು ಚಾಕೋಲೇಟ್

---

* ಮುಟ್ಟತ್ತು ವರ್ಕಿ: ಪ್ರಸಿದ್ಧ ಮಲಯಾಳಂ ಕಾದಂಬರಿಕಾರ

ಅವಳ ಬಾಯಲ್ಲಿ ತುರುಕಿದಳು.

"ತಂಗಿ ನನ್ನ ಸುಸ್ತೆಲ್ಲಾ ಮಾಯವಾಯಿತು." ಮಂಚದ ಮೇಲೆ ಮೈಚೆಲ್ಲಿ ಕುಞ್ಞಮ್ಮ ಹೇಳಿದಳು.

"ಶರ್ಮಾಜಿ ಇಷ್ಟು ಹೊತ್ತೂ ನನಗೆ ಮಸಾಜ್ ಮಾಡುತ್ತಿದ್ದರು."

ಒಂದು ಹಗುರವಾದ ಪ್ರಣಯಗೀತೆ ಕುಞ್ಞಮ್ಮಳ ತುಟಿಗಳಿಂದ ಹೊರಹೊಮ್ಮಿತು. ನಿದ್ದೆ ಬಂದು ಅವಳನ್ನು ಆವರಿಸುವವರೆಗೂ ಕುಞ್ಞಮ್ಮ ಆ ಗೀತೆಯನ್ನು ಮೂಗಿನಲ್ಲೇ ಗುಂಯ್ ಗುಟ್ಟುತ್ತಿದ್ದಳು.

# ಹದಿಮೂರು

ಮಾರನೆಯ ದಿನ ಬೆಳಿಗ್ಗೆ ಮೇಟ್ರನ್ ಹೆಲೆನ್ ಸಿಂಗ್ ಕುಞ್ಞಮ್ಮಳನ್ನು ತಮ್ಮ ಕೋಣೆಗೆ ಕರೆಸಿ ಅವಳನ್ನು ಬಹಳ ಹೊತ್ತು ನಿಂದಿಸಿದರು. ಕುಞ್ಞಮ್ಮ ಎಲ್ಲವನ್ನೂ ವಿನಯದಿಂದ ಶ್ರದ್ಧೆಯಿಂದ ಕೇಳಿದನಂತರ ಹೇಳಿದಳು:

"ಮೇಟ್ರನ್, ಇದೆಲ್ಲಾ ನನ್ನ ವೈಯಕ್ತಿಕ ವಿಷಯಗಳು. ಹಾಸ್ಪಿಟಲ್ ವಿಷಯದಲ್ಲೇನಾದರೂ ನನ್ನಿಂದ ಅಡ್ಡಿಗಳಾಗಿದ್ದಲ್ಲಿ, ನೀವು ಅಡ್ಡ ಬರಬಹುದು."

ಇದನ್ನು ಕೇಳಿದೊಡನೆ ಕೋಪದಿಂದ ಮೇಟ್ರನ್ ಹಾರಾಡುತ್ತಾರೆಂದೇ ಕುಞ್ಞಮ್ಮ ಭಾವಿಸಿದಳು. ಆದರೆ ಮೇಟ್ರನ್ ಸ್ವಲ್ಪವೂ ಕ್ಷೋಭಿತರಾಗದೆ ಹೇಳಿದರು.

"ಕುಞ್ಞಮ್ಮ ಜನರು ನಗುತ್ತಿದ್ದಾರೆ."

ಕುಞ್ಞಮ್ಮ ಹೇಳಿದಳು, "ಜನರು ನಗಲಿ, ಮೇಟ್ರನ್. ಅವರಿಗೆ ಬರುವುದೇ ನಗು. ಅವರಿಗೆ ಗೊತ್ತಿರುವುದೂ ಅದೇ. ಲೋಕವೇ ನಕ್ಕರೂ ನನಗೇನಿಲ್ಲ."

"ಸರಿ, ನಿನ್ನ ಇಷ್ಟ" ಮೇಟ್ರನ್ ಹೇಳಿದರು. "ಆದರೆ ನಿನ್ನ ಡ್ಯೂಟಿಯನ್ನು ಬೇರೆ ವಾರ್ಡಿಗೆ ಹಾಕಿದ್ದೇನೆ."

"ಯಾವ ನರಕಕ್ಕಾದರೂ ಹಾಕಿ, ನನಗೇನೂ ಆಕ್ಷೇಪಣೆ ಇಲ್ಲ." ಕುಞ್ಞಮ್ಮ ಸ್ವಲ್ಪ ತಮಾಷೆಯಿಂದಲೂ ಗಾಂಭೀರ್ಯದಿಂದಲೂ ಹೇಳಿದಳು. "ಅಲ್ಲಿಗೇನೋ ನಿನ್ನನ್ನೇ ಹಾಕಿದ್ದೇನೆ. ಹೆರಿಗೆ ವಾರ್ಡ್‌ಗೆ" ಮೇಟ್ರನ್‌ರ ಕೆಂಪಾದ ತುಟಿಗಳಲ್ಲಿ ಒಂದು ಹಾಸ್ಯದ ನಗೆ ಮಿಂಚಿತು.

ಅಂದು ರಾತ್ರಿ ಮಲಗಿದಾಗ ನಿದ್ದೆ ಬರುವ ಮೊದಲು ಕುಞ್ಞಮ್ಮ ಮೇರಿಯೊಂದಿಗೆ ಹೇಳಿದಳು:

"ತಂಗಿ, ನಿನ್ನ ಮೇಡಂ ನನ್ನ ಮೇಲೆ ಸೇಡು ತೀರಿಸಿಕೊಂಡರು."

"ಹೇಗಮ್ಮ?"

"ನನ್ನನ್ನು ಆಕೆ ನರಕಕ್ಕೆ ಕಳಿಸಿದರು."

"ಏನು ?"

"ನಾಳೆಯಿಂದ ನಾನು ಹೆರಿಗೆ ವಾರ್ಡ್‌ನಲ್ಲಿ"

ಮೇರಿ ನಕ್ಕುಬಿಟ್ಟಳು. ಅನಂತರ ಹೇಳಿದಳು.

"ಒಳ್ಳೆಯದಾಯಿತು. ಅಕ್ಕ, ನೀನು ಸ್ವಲ್ಪ ಕಾಲ ಆ ನರಕದಲ್ಲೇ ಇರು."

ಮೇಟ್ರನ್ ಹೆಲೆನ್ ಸಿಂಗ್ ಸ್ವಲ್ಪ ಹಾಗೇನೇ. ಯಾರೊಂದಿಗಾದರೂ ಆಕೆಗೆ ಒಮ್ಮತವಿಲ್ಲದಿದ್ದಲ್ಲಿ ಅವರನ್ನು ಹೆರಿಗೆ ವಾರ್ಡಿಗೆ ಸ್ಥಳಾಂತರಿಸುವರು.

ಅದೂ ಒಂದು ನರಕವೇ ಅಲ್ಲವೇ ?

ಯಾವಾಗಲೂ ಅರ್ಧ ಘಂಟೆ ತಡವಾಗಿ ಡ್ಯೂಟಿಗೆ ಬರುತ್ತಿದ್ದ ಕುಞ್ಞಮ್ಮ ಅಂದು

ರೂಢಿಗಿಂತ ಮುಂಚೆಯೇ ಹೆರಿಗೆ ವಾರ್ಡಿಗೆ ಬಂದಳು. ಅಲ್ಲಿಗೆ ಬಂದಾಗಲೇ ಅವಳಿಗೆ ವಾಂತಿ ಬಂದಂತಾಯಿತು.

ಶುಚಿತ್ವದ ವಿಷಯದಲ್ಲಿ ಈ ಆಸ್ಪತ್ರೆಯು ಹೆಸರುವಾಸಿಯಾಗಿತ್ತು. ಫಿನಾಯಿಲ್ ನಲ್ಲಿ ಅದ್ದಿದ ಗೋಣಿಯ ಬಟ್ಟೆಯ ತುಂಡಿನೊಂದಿಗೆ ಗೋಡೆಯನ್ನು ನೆಲವನ್ನು ಒರೆಸುವ ಪ್ರೋಪೆಟ್ ಲಾಲ್‌ಗಳಿಂದ ಆಸ್ಪತ್ರೆ ತುಂಬಿದ್ದರೂ ಸಹ ಹೆರಿಗೆ ವಾರ್ಡ್‌ನ ಸಹಿಸಲಸಾಧ್ಯವೆನಿಸಿದ ವಾಸನೆಯನ್ನು ಒರೆಸಿ ಹೋಗಲಾಡಿಸಲು ಸಾಧ್ಯವಾಗಿರಲಿಲ್ಲ.

ಆದರೆ ಕುಞ್ಞಮ್ಮ ಅಂದು ಎದುರಿಸಿದ್ದು ಬೇರೆ ಒಂದು ವಾಸನೆಯನ್ನಾಗಿತ್ತು. ಎಂದೂ ಕಂಡು ಕೇಳರಿಯದ ವಾಸನೆಯು.

ಕುಞ್ಞಮ್ಮಳ ಡ್ಯೂಟಿ ಲೇಬರ್ ರೂಮ್‌ನಲ್ಲಾಗಿತ್ತು. ಇಪ್ಪತ್ತು ಜನ ಹೆಂಗಸರಿಗೆ ಆ ಕೋಣೆಯಲ್ಲಿ ಹೆರಬಹುದಾದ ಸೌಕರ್ಯವಿತ್ತು. ಅವರಿಗೋಸ್ಕರ ಇಪ್ಪತ್ತು ಮಂಚಗಳೂ, ಅದಕ್ಕೆ ಬೇಕಾದ ಸಲಕರಣೆಗಳೂ ಅಲ್ಲಿತ್ತು. ಆದರೆ ಅಂದು ಕುಞ್ಞಮ್ಮ ಲೇಬರ್ ರೂಮ್ ಅನ್ನು ಪ್ರವೇಶಿಸುವ ಹೊತ್ತಿಗೆ ಹೆರಿಗೆಯ ನೋವು ತಿನ್ನುತ್ತಿದ್ದ ಇಪ್ಪತ್ತಕ್ಕಿಂತ ಹೆಚ್ಚು ಜನಸ್ತ್ರೀಯರು ಅಲ್ಲಿ ಬಂದಿದ್ದರು. ಮೊದಲು ಬಂದ ಇಪ್ಪತ್ತು ಜನ ಸ್ತ್ರೀಯರು ಮಂಚದ ಮೇಲೆ ಮಲಗಿ ನೋವು ತಿನ್ನುತ್ತಿದ್ದರು. ಅನಂತರ ಬಂದವರನ್ನು ನೆಲದ ಮೇಲೆ ಮಲಗಿಸಲಾಗಿತ್ತು. ಅವರಲ್ಲೊಬ್ಬಳು ಚೊಚ್ಚಲು ಹೆರಿಗೆಗೆ ಬಂದವಳಾಗಿದ್ದಳು. ಅವಳಿಗೆ ಹದಿನೆಂಟು ವಯಸ್ಸಿರಬೇಕು. ತೆಳ್ಳನೆಯ ಶರೀರ. ಪರ್ವತದಂತೆ ಎದ್ದು ನಿಂತಿದ್ದ ಹೊಟ್ಟೆಯು. ಆ ಹೆಣ್ಣಿನ ಮುಖದಲ್ಲಿ ಭಯದ ಪರಿಭ್ರಮದ ಒಂದು ಭೂಲೋಕವೇ ಪ್ರತಿಬಿಂಬಿಸುತ್ತಿತ್ತು. ಅವಳು ಹೆರಿಗೆಯ ನೋವನ್ನು ಹಲ್ಲು ಕಚ್ಚಿ ಸಹಿಸುತ್ತಾ ನರಳುತ್ತಿದ್ದಳು. ಡಾಕ್ಟರ್ ತನುಜ ಅವಳನ್ನು ಸಮಾಧಾನ ಪಡಿಸುತ್ತಿದ್ದರು. ನೆಲದ ಮೇಲೆ ಮಲಗಿದ್ದ ಆ ರೋಗಿಗೆ ಸರಿಹೊಂದುವಂತೆ ಡಾಕ್ಟರ್ ತನುಜ ನೆಲದ ಮೇಲೆ ಕುಕ್ಕುರುಗಾಲಿನಲ್ಲಿ ಕುಳಿತುಕೊಂಡು ಅವಳನ್ನು ಉಪಚರಿಸುತ್ತಿದ್ದರು. ನರ್ಸ್ ತಂದುಕೊಟ್ಟ ಇನ್‌ಜೆಕ್ಷನ್ ಅನ್ನು ಡಾಕ್ಟರ್ ತನುಜ ಗರ್ಭಿಣಿಯ ತೋಳಿನಲ್ಲಿ ಚುಚ್ಚಿದರು. ಆ ಗರ್ಭಿಣಿಗೆ ಸೂಜಿ ತನ್ನ ಶರೀರಕ್ಕೆ ಚುಚ್ಚಿದ ಅನುಭವವೇ ತೋರಲಿಲ್ಲ.

ಡಾಕ್ಟರ್ ತನುಜ ಅವಳ ಹೊಟ್ಟೆಯ ಮೇಲೆ ಕೈ ಇಟ್ಟುಕೊಂಡೇ ಹೇಳಿದರು.

"ನಿನ್ನ ಎಲ್ಲಾ ಶಕ್ತಿಯನ್ನುಪಯೋಗಿಸಿ ಮುಕ್ಕಬೇಕು ಗೊತ್ತಾ?" ಗರ್ಭಿಣಿ ಮುಕ್ಕಿದಳು.

"ಮಗು ಬೇಕಿದ್ದರೆ ಹೀಗೆ ಒತ್ತಡ ಕೊಟ್ಟರೆ ಸಾಲದು. ಪೂರ್ಣ ಶಕ್ತಿಯನ್ನುಪಯೋಗಿಸಿ ಮುಕ್ಕಬೇಕು."

ಹತಾಶಳಾದ ಗರ್ಭಿಣಿ ಎಲ್ಲಾ ದೇವರುಗಳನ್ನು ಪ್ರಾರ್ಥಿಸಿ ಶಕ್ತಿಯನ್ನು ಪ್ರಯೋಗಿಸಿದಳು. ಹೊಟ್ಟೆ ಒಂದಿಂಚೂ ಅಲ್ಲಾಡಲಿಲ್ಲ.

"ಇದಲ್ಲಾ ಏನೇನು ಸಾಲದು. ಇನ್ನು ಪ್ರಯತ್ನಿಸು."

ಡಾಕ್ಟರ್ ತನುಜ ಮೆಲ್ಲನೆ ಎದ್ದರು. ಚೊಚ್ಚಲು ಹೆರಿಗೆಗೆ ಬಂದವಳಾದ್ದರಿಂದ ಇನ್ನೂ ಹೊತ್ತು ತೆಗೆದುಕೊಳ್ಳುತ್ತೆಂದು ಆಕೆಗೆ ಗೊತ್ತು. ಥಟ್ಟನೆ ಒಂದು ಆರ್ತನಾದ ಪಕ್ಕದ ಮಂಚದಿಂದ ಹೊರಬಂದುದನ್ನು ಆಕೆ ಕೇಳಿದರು. ಅವಳೊಬ್ಬಳು ಬೊಜ್ಜು

ಬೆಳೆದ ಸ್ತ್ರೀಯಾಗಿದ್ದಳು. ಕೈಕಾಲುಗಳು ಬಡಿದು ಅವಳು ಗಲಾಟೆ ಮಾಡುತ್ತಿದ್ದಳು. ಅಪಸ್ಮಾರದ ಆರಂಭ.

"ಸಮಸ್ಯೆ ಏನಾದರೂ ಇದೆಯೇನು ?" ಕುಕ್ಕುರಗಾಲಿನಲ್ಲಿ ಕುಳಿತಿದ್ದ ಸ್ಥಳದಿಂದ ತಲೆಯನ್ನೆತ್ತಿ ಡಾಕ್ಟರ್ ತನುಜ ಕೇಳಿದಳು.

"ಇಲ್ಲ ಮೇಡಂ" ಕುಞ್ಞಮ್ಮ ಹೇಳಿದಳು.

ಅಷ್ಟು ಹೊತ್ತಿಗೆ ಒಂದು ಮಂಚವು ಖಾಲಿಯಾಯಿತು. ಚೊಚ್ಚಲು ಹೆರಿಗೆಗೆ ಬಂದವಳನ್ನು ಅಲ್ಲಿಗೆ ವರ್ಗಾಯಿಸಲಾಯಿತು. ನೋವು ತಿನ್ನುವಾಗಲೇ ಅವಳಿಗೆ ಒಂದು ಬಡ್ತಿ ಸಿಕ್ಕಿತ್ತು.

ಡಾಕ್ಟರ್ ತನುಜ ಆ ಕೋಣೆಯಲ್ಲಿ ಅತ್ತಿಂದಿತ್ತ ನಡೆದಾಡಿದರು. ಬೇರೆ ಮೂರು ನಾಲ್ಕು ಡಾಕ್ಟರುಗಳೇನೋ ಇದ್ದರು. ಆದರೂ ಎಲ್ಲಾ ಕಡೆಗೂ ಡಾಕ್ಟರ್ ತನುಜಾನೇ ಹೋಗುತ್ತಿದ್ದಳು. ಅದಾಕೆಯ ಸ್ವಭಾವವು.

ನೋವು ತಿನ್ನುತ್ತಿದ್ದ ಒಬ್ಬಳು ಬಸುರಿ ಹುಡುಗಿಯನ್ನು ಆಯಾ ವಾರ್ಡ್‌ನಿಂದ ಕರೆದುಕೊಂಡು ಬಂದಳು. ಆ ಸ್ತ್ರೀಗೆ ನಡೆಯುವುದೇ ಕಷ್ಟವಾಗಿತ್ತು. ಒಂದು ದೋಣಿಯು ಹಾಯ್ದುಕೊಂಡು ಬರುವಂತೆ ಆಯಾ ಅವಳನ್ನು ಕರೆದು ತರುತ್ತಿದ್ದಳು.

ಆಯಾ ಗರ್ಭಿಣಿಯನ್ನೇ ಅಲ್ಲಿ ಬಿಟ್ಟು ಹೊರಟು ಹೋದಳು. ಆ ಗರ್ಭಿಣಿಗೆ ಎಲ್ಲಿ ನಿಲ್ಲಬೇಕು ಅಥವಾ ಎಲ್ಲಿ ಮಲಗಬೇಕು ಎಂದುಕೊಂಡು ತೊಳಲುತ್ತಿದ್ದಳು. ಗರ್ಭವನ್ನು ಹೊರಲೇ ಅವಳಿಗೆ ಬಹು ಕಷ್ಟವಿದ್ದಂತೆ ತೋರಿತು. ಅವಳು ಮೆಲ್ಲಮೆಲ್ಲನೆ ನಿಧಾನವಾಗಿ ಹೆಜ್ಜೆಯಿಡುತ್ತಾ ಹೆರಿಗೆಯ ವಾರ್ಡ್‌ನ ಗೋಡೆಯನ್ನು ಒರಗಿ ನಿಂತಳು. ಅವಳ ಮುಖವು ಇನ್ನೂ ಬಿಳಿಚಿಕೊಂಡು ಒಂದು ಆಕ್ರೋಶವು ಅವಳ ತೆರೆದ ಬಾಯಿಯಿಂದ ಹೊರಬಂದಿತು.

ಇದ್ದಕ್ಕಿದ್ದಂತೆ ಗರ್ಭಿಣಿಯು ಅಗಲಿಸಿದ್ದ ಕಾಲುಗಳ ಮಧ್ಯದಿಂದ ಘನವಾದ ಒಂದು ಪುಟ್ಟ ವಸ್ತು ನೆಲದ ಮೇಲೆ ಬೀಳುವ ಶಬ್ದ ಕೇಳಿಸಿತು. ಗರ್ಭಿಣಿಯ ಮುಖವು ಮೊದಲಿಗಿಂತ ಹೆಚ್ಚಾಗಿ ಬಿಳಿಚಿತು. ಅವಳು ಪ್ರಜ್ಞೆ ತಪ್ಪಿ ನೆಲದ ಮೇಲೆ ಬೀಳುವುದರಲ್ಲಿದ್ದಳು. ಆಗ ಯಾರೋ ಅವಳನ್ನು ಹಿಡಿದುಕೊಂಡರು. ಒಂದು ಆರ್ತನಾದವು ಮೊಳಗಿತು.

ನೆಲದ ಮೇಲೆ ಬಿದ್ದ ಆಗ ತಾನೇ ಜನಿಸಿದ್ದ ಮಗುವಿನ ಅಳು ಮೊಳಗಿತು. ಡಾಕ್ಟರ್ ತನುಜ ಅತ್ತ ಕಡೆಗೆ ಓಡಿ ಬಂದರು.

"ನಿನಗೆ ಮಲಗಿ ಹೆರಲು ಯೋಗವಿಲ್ಲ."

ಡಾಕ್ಟರ್ ತನುಜ ಗರ್ಭಿಣಿಯ ತಲೆ ನೇವರಿಸುತ್ತಾ ಹೇಳಿದರು.

"ಪರವಾಗಿಲ್ಲ ನಿನ್ನ ಮಗುವಿಗೆ ಏನೂ ಆಗಿಲ್ಲ."

ಮಗು ಮತ್ತೆ ಅತ್ತಿತು. ಆರೋಗ್ಯಕರವಾದ ಒಂದು ಅಳು. ಆದರೂ ಭೂಮಿಯ ಮೇಲೆ ಅದರ ಪ್ರಥಮ ಆಗಮನವೇ ಒಂದು ಪತನವಾಗಿತ್ತು.

ನೆಲದ ಮೇಲೆ ಬಿದ್ದು ಹುಟ್ಟಿದ ಮಗುವನ್ನೂ ಅದರ ತಾಯಿಯನ್ನೂ ಕುಞ್ಞಮ್ಮ ಮಂಚಕ್ಕೆ ವರ್ಗಾಯಿಸಿದಳು.

ಒಂದೊಂದು ಬಾರಿಯೂ ಮೇಜಿನ ಬಳಿಗೆ ಮಂಚದ ಬಳಿಗೆ ಓಡಿ ಓಡಿ

ಕುಞ್ಞಮ್ಮ ಬೆವರಿಬಿಟ್ಟಳು. ಎಲ್ಲಾದರೂ ಸ್ವಲ್ಪ ಹೊತ್ತು ಕುಳಿತುಕೊಳ್ಳಬೇಕೆಂದು ಅವಳಿಗನ್ನಿಸಿತು. ಕುಳಿತುಕೊಳ್ಳುವುದು ಹೋಗಲಿ, ನಿಲ್ಲಲು ಸಹ ಸಮಯವಿಲ್ಲದ ಒಂದು ಅವಸ್ಥೆಯಾಗಿತ್ತವಳದು. ಏದುಸಿರು ಬರುತ್ತಿದ್ದರೂ ಮಧ್ಯೆ ಮಧ್ಯೆ ಕುಞ್ಞಮ್ಮ ಹಾರಾಡುತ್ತಿದ್ದಳು.

ಲೇಬರ್ ರೂಮ್ ಶಬ್ದಾವೃತವಾಯಿತು. ಹೆಚ್ಚಿನ ಸಂಖ್ಯೆಯಲ್ಲಿ ಗರ್ಭಿಣಿಯರು ಬರುತ್ತಿದ್ದರು. ರೋದನದಿಂದಲೂ ಅಟ್ಟಹಾಸದಿಂದಲೂ ಕೊಠಡಿಯು ತುಂಬಿತು. ಎಲ್ಲೆಲ್ಲೂ ಹೆರಿಗೆಯ ವಾಸನೆಯೇ.

ನಾಲ್ಕು ಗಂಟೆಗಳ ಕಾಲ ಕಳೆದೂ ಚೊಚ್ಚಲ ಹೆರಿಗೆಗೆ ಬಂದವಳಲ್ಲಿ ಯಾವ ಒಂದು ಚಲನೆಯೂ ಇಲ್ಲ. ಅವಳು ಬಾಡಿ ಕ್ಷೀಣಳಾಗಿ ಮಲಗಿದ್ದಳು. ಅವಳು ತನ್ನ ಕೈಕಾಲುಗಳನ್ನು ಬಡಿದು ಬಡಿದು ಸುಸ್ತಾಗಿ ದೃಷ್ಟಿಯನ್ನು ಮೇಲಕ್ಕೆ ಮಾಡಿ ನರಳುತ್ತಿದ್ದಳು. ಇನ್ನು ಅಳಲು ಅವಳಲ್ಲಿ ಶಕ್ತಿಯೇ ಇರಲಿಲ್ಲ. ಬಾಯಿ ತೆರೆದುಕೊಳ್ಳುತ್ತಿತ್ತಲ್ಲದೆ ಒಂದು ಗಾಳಿ ಸಹ ಹೊರಕ್ಕೆ ಬರಲಿಲ್ಲ.

"ಇವಳನ್ನು ಥಿಯೇಟರ್‌ಗೆ ಕರೆದುಕೊಂಡು ಹೋಗು" ಡಾಕ್ಟರ್ ತನುಜ ಹೇಳಿದರು. "ಇನ್ನು ಬೇರೆ ದಾರಿಯೇ ಇಲ್ಲ. ನೆನ್ನೆ ಸಾಯಂಕಾಲ ಪ್ರಾರಂಭಿಸಿದ ನೋವಲ್ಲವೇ ?"

ಕುಞ್ಞಮ್ಮಳೂ ಆಯಾಗಳೂ ಸೇರಿ ಚೊಚ್ಚಲು ಹೆರಿಗೆಗೆ ಬಂದವಳನ್ನು ಸ್ಟ್ರೆಚರ್‌ಗೆ ಬದಲಾಯಿಸಿದರು. ಸ್ಟ್ರೆಚರನ್ನು ತಳ್ಳಿಕೊಂಡು ಆಯಾ ಮುಂದೆ ಮುಂದೆ ಹೋದಳು. ಅವರೆಲ್ಲ ಆಪರೇಷನ್ ಥಿಯೇಟರ್ ಪ್ರವೇಶಿಸಿದರು.

ಡಾಕ್ಟರ್ ತನುಜ ಆಪರೇಷನ್ ಥಿಯೇಟರ್ ಅನ್ನು ಪ್ರವೇಶಿಸಬೇಕಾದರೆ ಯಾರೋ ಆಕೆಯ ಹಿಂದೆ ಬಿಕ್ಕಿ ಬಿಕ್ಕಿ ಅಳುತ್ತಿರುವಂತೆ ತೋರಿತ್ತು. ಡಾಕ್ಟರ್ ತನುಜ ಹಿಂದಿರುಗಿ ನೋಡಿದರು. ಯಾರೂ ಇಲ್ಲ. ಮತ್ತೆ ಡಾಕ್ಟರ್ ತನುಜನನ್ನು ತಳ್ಳಿ, ನೂಕಿಕೊಂಡು ಆಕೆಯ ಮುಂದಿನಿಂದ ಆಪರೇಷನ್ ಥಿಯೇಟರ್ ಅನ್ನು ಪ್ರವೇಶಿಸುತ್ತಿರುವುದಾಗಿ ತನುಜಳಿಗೆ ಅನ್ನಿಸಿತು. ಆದರೆ ಕಣ್ಣಿಗೆ ಮಾತ್ರ ಯಾರೂ ಕಾಣಿಸುತ್ತಿರಲಿಲ್ಲ.

ಅದೇ ಅವನೇ.

ಸಿಸೇರಿಯನ್ ಆಪರೇಷನ್‌ನ ಸಿದ್ಧತೆಗಳು ಆರಂಭವಾದವು.

ಡಾಕ್ಟರ್ ತನುಜ ಕೈ ತೊಳೆದುಕೊಂಡು ಗ್ಲೌಸ್‌ಗಳನ್ನು ಧರಿಸಿದರು. ಆಕೆಯ ನಿಲುವನ್ನು ಕಂಡರೆ ಒಂದು ನೃತ್ಯಕ್ಕೆ ಸಜ್ಜಾಗುತ್ತಿರುವಂತಿತ್ತು. ಆಕೆಯ ಕಣ್ಣುಗಳು ಥಿಯೇಟರ್‌ನಲ್ಲೆಲ್ಲಾ ಓಡಿಯಾಡುತ್ತಿದ್ದವು.

ರೋಗಿಗೆ ಮತ್ತು ಬರಿಸಲಿರುವ ಇನ್‌ಜೆಕ್ಷನ್ ಅನ್ನು ಆ ಚೊಚ್ಚಲು ಹೆರಿಗೆಗೆ ಬಂದವಳಿಗೆ ಅವಳ ಧಮನಿಯಲ್ಲಿ ಚುಚ್ಚಿ ಏರಿಸಲಾಯಿತು. ಅವಳ ಕಣ್ಣುಗಳು ಮುಚ್ಚಿಕೊಂಡವು. ಅನಸ್ತೇಷಿಯಾದ ರಬ್ಬರ್ ನಾಳವನ್ನು ಅವಳ ಗಂಟಲಿನಲ್ಲಿಳಿಸಿದರು. ಬೋಯಿಲ್ ಯಂತ್ರದ ಸೂಜಿಗಳು ಚಲಿಸಿದುವು. ಕೆಂಪು ಹಸಿರು ಇಂಡಿಕೇಷನ್‌ಗಳು ಕೆಳಕ್ಕಿದು ಮೇಲೇರುತ್ತಿದ್ದವು.

ಚೊಚ್ಚಲು ಹೆರಿಗೆಗೆ ಬಂದವಳು ಮತ್ತಿನಲ್ಲಿದ್ದಳು. ಇನ್ನೂ ಈ ಲೋಕದಲ್ಲಿ,

ಅವಳ ಶರೀರದಲ್ಲಿ ಏನು ನಡೆದರೂ ಅವಳಿಗೆ ಗೊತ್ತಾಗುತ್ತಿರಲಿಲ್ಲ.

ಡಾಕ್ಟರ್ ತನುಜ ಆಪರೇಷನ್ ಮಾಡಲು ಆರಂಭಿಸಿದರು. ಆತ್ಮವಿಶ್ವಾಸವು ಆಕೆಯ ಮುಖದಲ್ಲಿ ಎದ್ದು ಕಾಣುತ್ತಿತ್ತು. ಆಕೆ ಒಂದೊಂದು ಕೆಲಸವನ್ನೂ ಬಹು ಕೌಶಲದಿಂದ ನಡೆಸುತ್ತಿದ್ದರು. ಗಾಭರಿಯಾಗಲಿ ಆತುರವಾಗಲಿ ಆಕೆಯ ಕೆಲಸದಲ್ಲಿ ಕಾಣುತ್ತಿರಲಿಲ್ಲ. ಚಾಕುವನ್ನು ತೆಗೆದುಕೊಳ್ಳುವುದೂ, ಕುಯ್ಯುವುದೂ, ಹರಿಯಲಾರಂಭಿಸಿದ್ದ ರಕ್ತವನ್ನು ಆರ್ಟರಿ ಫೋರ್‌ಸೆಪ್ಸ್‌ನಿಂದಾಗಿ ಹಿಡಿದು ನಿಲ್ಲಿಸುವುದೂ ಎಲ್ಲವೂ ಬಹಳ ತನ್ಮಯತೆಯಿಂದ ಆಕೆ ಮಾಡುತ್ತಿದ್ದರು.

ಚೊಚ್ಚಿಲು ಹೆರಿಗೆಗೆ ಬಂದವಳ ಕೆಳ ಹೊಟ್ಟೆಯ ಮೇಲೆ ನೀಳವಾಗಿ ಚಾಕು ಚಲಿಸಿತು. ಮೊದಲು ಹೊಟ್ಟೆಯೂ ಅನಂತರ ಗರ್ಭಕೋಶವೂ ಬಿರಿದುವು. ಆಗ ತಾನೇ ಹುಟ್ಟಿದ ಮಗುವಿನ ದೃಶ್ಯವು ರಕ್ತಪ್ರವಾಹದ ಮಧ್ಯೆ ಪ್ರತ್ಯಕ್ಷವಾಯಿತು. ಗ್ಲೌಸ್ ತೊಟ್ಟ ಕೈಗಳಿಂದ ಹೊಕ್ಕಳು ಬಳ್ಳಿಯೊಂದಿಗೇ ಮಗುವನ್ನು ಆಕೆ ಎತ್ತಿ ಹಿಡಿದರು. ಹೊಕ್ಕಳ ಬಳ್ಳಿಯನ್ನು ಆಕೆ ಕತ್ತರಿಸಿದರು. ತಾಯಿಯೊಂದಿಗಿದ್ದ ಮಗುವಿನ ಸ್ಥಾಯಿಯಾದ ಬಂಧನವು ಅದರೊಂದಿಗೆ ಅಂತ್ಯಗೊಂಡಿತು.

ಕಾಲುಗಳನ್ನು ಹಿಡಿದು ತಲೆಕೆಳಗು ಮಾಡಿ ಮಗುವನ್ನು ಸ್ವಲ್ಪ ಹೊತ್ತು ನೇತಾಡುವಂತೆ ಆಕೆ ಹಿಡಿದುಕೊಂಡಿದ್ದರು.

ಅದರ ಬಾಯಿಂದ ತಿಳಿಯಾದ ಒಂದು ದ್ರಾವಕವು ಹೊರಬಂದಿತು. ತಮ್ಮ ಕಿರುಬೆರಳಿನಿಂದ ಡಾಕ್ಟರ್ ತನುಜ ಮಗುವಿನ ಬಾಯನ್ನು ಶುದ್ಧಮಾಡಿದರು. ಅನಂತರ ಅದರ ಪೃಷ್ಠದ ಮೇಲೆ ಮೆಲ್ಲನೆ ಒಂದೇಟು ಕೊಟ್ಟರು.

ಆ ಏಟು ಬಿದ್ದಾಗ ಡಾಕ್ಟರ್‌ನ ಕೈಯಲ್ಲಿ ನೇತಾಡುತ್ತಿದ್ದ ಮಗುವಿನ ಮುಖದಲ್ಲಿನ ಸ್ನಾಯುಗಳು ಬಿಗಿದುಕೊಂಡುವು. ಮುಚ್ಚಿಕೊಂಡಿದ್ದ ಆ ಎಳೆಯ ಕಣ್ಣುಗಳು ಬಿಗಿದುಕೊಂಡವು. ಮೂಗು ಕೆಂಪಾಯಿತು. ಕಿವಿಗಳು ಮತ್ತೊಮ್ಮೆ ಕೆಂಪಾದವು. ಎಳೆಯ ತುಟಿಗಳಲ್ಲಿ ಒಂದು ನಡುಕವು ಹರಿದು ಬಾಯಿ ಬಿರಿಯಿತು.

"ವ್ಯಾಂ....." ಹಾಗೆ ಆ ರೋದನವು ಎದ್ದಿತು.

ಆನಂದಕರವೆನಿಸಿದ ಆ ಪುಟ್ಟ ಅಳು ಆಪರೇಷನ್ ಥಿಯೇಟರ್‌ನಲ್ಲಿ ಮೊಳಗಿತು.

ಬಟ್ಟೆ ಹಾಸಿದ್ದ ಅಲ್ಯೂಮಿನಿಯಂ ಟ್ರೇನಲ್ಲಿ ಡಾಕ್ಟರ್ ತನುಜ ಮಗುವನ್ನು ಮಲಗಿಸಿದರು. ಚೊಚ್ಚಿಲು ಹೆರಿಗೆಗೆ ಬಂದವಳಿಗೆ ಇನ್ನು ಜ್ಞಾನ ಬಂದೇ ಇರಲಿಲ್ಲ. ಮತ್ತಿನಲ್ಲೇ ಮಲಗಿದ್ದ ಅವಳನ್ನು ನೋಡಿ ಡಾಕ್ಟರ್ ತನುಜ ಹೇಳಿದರು.

"ಇಷ್ಟು ಹೊತ್ತು ಮಾಡಿದ್ದೆಲ್ಲವೂ ನಿನ್ನ ಮಗುವಿಗಾಗಿ ಇನ್ನು ಮಾಡಹೋಗುವುದು ನಿನ್ನ ಗಂಡನಿಗಾಗಿ."

ಆಕೆ ಗರ್ಭಕೋಶದ ಗಾಯದ ಬಾಯನ್ನು ಹೊಲೆದು ಕಟ್ಟಲು ಪ್ರಾರಂಭಿಸಿದರು. ಅದರ ಮಧ್ಯೆ ಅವಳ ಹೊಟ್ಟೆಯನ್ನು ತಟ್ಟುತ್ತಾ ಡಾ. ತನುಜಾ ಕೇಳಿದರು

"ಏ ಹುಡುಗಿ, ನಿನಗೆ ಕೇಳಿಸುತ್ತಿದೆಯೇ ?"

ಡಾಕ್ಟರ್ ತನುಜ ನಿಮಿಷಾರ್ಧದಲ್ಲಿ ಗರ್ಭಕೋಶವನ್ನು ಹೊಲೆದು ಕಟ್ಟಿದರು.

ಮತ್ತನ್ನುಂಟು ಮಾಡುವ ಔಷಧಿಯನ್ನು ಕೊಡುವ ಡಾಕ್ಟರ್ ಬೋಯಿಲ್ಸ್ ಯಂತ್ರದ ಪಕ್ಕದಲ್ಲಿ ಅದನ್ನು ಅಂಟಿಕೊಂಡೇ ನಿಂತಿದ್ದರು. ಆದರೆ ಆ ಯಂತ್ರವನ್ನು

ಯಾರೋ ಹಿಂದಕ್ಕೆ ಎಳೆಯುತ್ತಿರುವಂತೆ ಆತನಿಗೆ ಅನುಭವವಾಯಿತು. ಆತನ ಕಾಲುಗಳಲ್ಲಿ ಯಾರೋ ಉಜ್ಜುತ್ತಿದ್ದರು. ಆದರೆ ಅಲ್ಲಿ ಯಾರೂ ಇರಲಿಲ್ಲ.

ಅದು ಅವನೇನೇ.

ಮತ್ತು ಬರುವ ಔಷಧಿ ಕೊಡುವ ಡಾಕ್ಟರ್ ರಬ್ಬರ್ ಟ್ಯೂಬ್ ಅನ್ನು ಗಂಟಲಿನಿಂದ ಹೊರಕ್ಕೆಳೆದರು. ಅನಂತರ ರೋಗಿಯ ನಾಡಿಯ ಮೇಲೆ ಕೈಬೆರಳುಗಳಿಂದ ಉಜ್ಜ ತೊಡಗಿದರು. ಅನಂತರ ಇನ್ನೊಂದು ಕೈಯಿಂದ ರೋಗಿಯ ಹಣೆಯನ್ನು ತಡವತೊಡಗಿದರು.

ಡಾಕ್ಟರ್ ತನುಜನ ಅಸಿಸ್ಟೆಂಟ್ ಹೊಟ್ಟೆಯನ್ನು ಹೊಲೆದು ಕಟ್ಟಲಾರಂಭಿಸಿದನು.

ಡಾಕ್ಟರ್ ತನುಜ ಗ್ಲೌಸುಗಳನ್ನು ಸಡಿಲಿಸಿ ತೆಗೆದು ನೆಲದ ಮೇಲೆ ಬಿಸುಟರು. ಆಕೆ ಬಹಳ ಉಲ್ಲಾಸದಿಂದ ವಾಷ್ ಬೇಸಿನ್ ಬಳಿ ಹೋದರು.

ಆಪರೇಷನ್ ಥಿಯೇಟರ್‌ನ ಅತಿ ಪಕ್ಕದಲ್ಲೇ ಇರುವ ಡ್ರೆಸ್ಸಿಂಗ್ ರೂಮಿನಲ್ಲಿದ್ದು ಡಾಕ್ಟರ್ ತನುಜ ಒಂದು ಕಪ್ ಟೀಯನ್ನು ಸಿಪ್ ಮಾಡುತ್ತಾ ಕುಡಿಯುತ್ತಿರುವಾಗ ಯಾರೋ ಬಂದು ಆಕೆಯನ್ನು ಕೂಗಿದರು. "ಮೇಡಂ, ರೋಗಿಗೆ ಏನೋ ಆಗಿದೆ."

ಟೀ ಕಪ್ಪನ್ನು ಮೇಜಿನ ಮೇಲಿಟ್ಟು ಆಕೆ ಥಿಯೇಟರ್ ಅನ್ನು ಪ್ರವೇಶಿಸಿದರು. ಅನೈಸ್ತೆಟಿಸ್ಟ್ ಆಪರೇಷನ್ ಟೇಬಲ್‌ನ ಬಳಿ ಪರಿಭ್ರಮದಿಂದ ನಿಂತಿದ್ದನು.

"ಮೇಡಂ, ರೋಗಿ ಇನ್ನೂ ಪ್ರಜ್ಞಾಹೀನರಾಗೇ ಇದ್ದಾರೆ.

ಡಾಕ್ಟರ್ ತನುಜ ರೋಗಿಯನ್ನು ಪರಿಶೋಧಿಸಲು ಪ್ರಾರಂಭಿಸಿದರು. ನಾಡಿ ಮಿಡಿತವನ್ನು ಲೆಕ್ಕ ಹಾಕಿದರು. ರಕ್ತದ ಒತ್ತಡವನ್ನು ದಾಖಲೆ ಮಾಡಿಕೊಂಡರು.

ಡಾಕ್ಟರ್ ತನುಜದ ಮುಖದಲ್ಲಿ ಗಾಬರಿಯ ಸಣ್ಣನೆಯ ನರಳು ಪಸರಿಸಿತ್ತು. ಆಕೆಯ ಕೈಗಳು ಧೃತಿಯಿಂದ ಚಲಿಸಿದುವು. ಥಿಯೇಟರ್‌ನಲ್ಲಿ ವ್ಯಾಕುಲತೆಯು ವರ್ಧಿಸಿತು. ನರ್ಸ್‌ಗಳೂ, ಅಸಿಸ್ಟೆಂಟ್ ಡಾಕ್ಟರ್‌ಗಳೂ ಅತ್ತಿತ್ತ ಓಡಿದರು.

ರೋಗಿಯ ತೋಳಿನಲ್ಲೂ ಧಮನಿಯಲ್ಲೂ ಔಷಧಿಗಳನ್ನು ಚುಚ್ಚಿ ಏರಿಸಲಾಯಿತು. ತುರ್ತು ಶುಶ್ರೂಷೆಗಳ ಪ್ರತಿಧ್ವನಿ ಥಿಯೇಟರಿಯಲ್ಲಿ ಎಲ್ಲೆಲ್ಲೂ ಮೊಳಗುತ್ತಿತ್ತು.

"ಶ್ವಾಸಗತಿ ಕಡಿಮೆಯಾಗುತ್ತಿದೆಯಲ್ಲಾ" ಯಾರೊಂದಿಗೂ ಅಲ್ಲವೆಂಬಂತೆ ಡಾಕ್ಟರ್ ತನುಜ ಹೇಳಿದರು. ಆಕೆಯ ಮಾತುಗಳಲ್ಲಿ ಭಯ ತುಂಬಿತ್ತು.

ಶಕ್ತಿಯುತವಾದ ಒಂದು ನಿಟ್ಟುಸಿರಿನಂತೆ ಅವಳ ಶ್ವಾಸೋಚ್ಛ್ವಾಸವು ತಟ್ಟನೆ ನಿಂತು ಹೋಯಿತು. ಐದು ಹತ್ತು ನಿಮಿಷಗಳ ನಂತರ ಮೆಲ್ಲನೆ ಅವಳ ಎದೆಯು ಉಬ್ಬತೊಡಗಿತು. ಆದರೂ ಶ್ವಾಸಗತಿಗೆ ತಾಳವೋ ಶಕ್ತಿಯೋ ಇರಲಿಲ್ಲ.

ರೋಗಿ ಕಣ್ಣು ಮುಚ್ಚಿಕೊಂಡು ಒಬ್ಬ ನಿಸ್ಸಂಗಿಯಂತೆ ಮಲಗಿದ್ದಳು. ಕಣ್ಣುಗಳು ಶಾಶ್ವತವಾದ ಸಮಾಧಾನದೊಂದಿಗೆ ಮುಚ್ಚಿಕೊಂಡಿರುವಂತೆ ಅನ್ನಿಸಿತು. ಮುಖದಲ್ಲಿ ಪೂರ್ಣವಾದ ಸಂತೃಪ್ತಿಯು ತುಂಬಿಕೊಂಡು ನಿಂತಿತ್ತು. ಒಂದು ಮಗುವನ್ನು ಭೂಮಿಗೆ ಸನ್ಮಾನಿಸಿದ ಮಾತೃತ್ವದ ಸಂತೃಪ್ತಿ.

ಶ್ವಾಸಗತಿ ಮತ್ತೆ ಕಡಿಮೆಯಾಗತೊಡಗಿತು. ರೋಗಿಯ ಮುಖಭಾವವು ಬದಲಾಗತೊಡಗಿತು. ತುಟಿಗಳಲ್ಲಿ ವಿವರ್ಣತೆಯು ಮೊದಲು ಪ್ರತ್ಯಕ್ಷವಾಯಿತು.

ಅನಂತರ ತಿಳಿ ನೀಲಿಬಣ್ಣವು ಹರಡಲಾರಂಭವಾಯಿತು.

ಡಾಕ್ಟರ್ ತನುಜ ಅಸಹಾಯಕಳಾಗಿ ಏನನ್ನು ಮಾಡದೇ ಆಪರೇಷನ್ ಟೇಬಲ್‌ನ ಅಂಚನ್ನು ಹಿಡಿದುಕೊಂಡು ಸ್ವಲ್ಪಹೊತ್ತು ಕಣ್ಣುಗಳನ್ನು ಮುಚ್ಚಿ ನಿಂತರು.

ಅನಂತರ ಮನಸ್ಸನ್ನು ನಿಯಂತ್ರಿಸಿಕೊಳ್ಳುತ್ತಾ ರೋಗಿಯ ಹಣೆಯನ್ನು ತಡವುತ್ತಾ ನಿಂತರು.

ನೀಲಿ ಬಣ್ಣ ಆವರಿಸಿಕೊಳ್ಳುತ್ತಿರುವ ರೋಗಿಯೊಂದಿಗೆ ಡಾಕ್ಟರ್ ತನುಜ ಹೇಳಿದರು.

"ಐ ಆಮ್ ಸಾರಿ ಮಗು...."

ರೋಗಿಯ ಉಗುರುಗಳೂ, ತುಟಿಗಳೂ, ನೀಲಿ ಬಣ್ಣವನ್ನು ತಾಳಿದವು. ಕೆನ್ನೆಗಳಲ್ಲೂ, ನಾಭಿಯಲ್ಲೂ, ಕತ್ತಿನಲ್ಲೂ ನೀಲಿ ಬಣ್ಣವು ಹರಡಲಾರಂಭವಾಯಿತು.

ಶ್ವಾಸವು ಹಾಗೇ ನಿಂತುಹೋಯಿತು.

ಡಾಕ್ಟರ್ ತನುಜ ಸ್ಟೆತೋಸ್ಕೋಪಿನೊಂದಿಗೆ ಮುಂದೆಬಂದರು. ಆಕೆ ಹೃದಯದ ಬಡಿತವನ್ನು ಪರೀಕ್ಷಿಸತೊಡಗಿದರು. ಕೇಳುತ್ತಿದೆಯೋ ಏನೋ ?

ಥಿಯೇಟರ್‌ನಲ್ಲಿ ಮೌನವಾವರಿಸಿತು. ಸ್ಮಶಾನದಲ್ಲಿನ ಶಾಂತಿಯು ಅಲ್ಲಿ ಪೂರ್ಣವಾಗಿ ನೆಲೆಸಿತು. ಅಲ್ಲಿರುವ ಮನುಷ್ಯರೆಲ್ಲಾ ನಿಶ್ಶಬ್ದರಾಗಿದ್ದರು. ಆಪರೇಷನ್‌ಗೆ ಉಪಯೋಗಿಸಿದ ಕರೆ ಹೋಗಲಾಡಿಸಲ್ಪಟ್ಟ ಸ್ಟೀಲ್‌ನ ಆಯುಧಗಳು ಚಲನವಿಲ್ಲದೆ ಮಲಗಿರುವ ರೋಗಿಯ ಬಳಿಯಲ್ಲೇ ನಿಶ್ಚಲವಾಗಿ ನೆಲೆಗೊಂಡಿವೆ. ಸ್ಟೆತೋಸ್ಕೋಪ್ ಕಿವಿಗಳಿಂದ ತೆಗೆದು ಡಾಕ್ಟರ್ ತನುಜ ಹೇಳಿದರು "ಹೃದಯವು ನಿಂತು ಹೋಯಿತು."

ಫಕ್ಕನೆ ಆಪರೇಷನ್ ಥಿಯೇಟರ್‌ನ ವೆಂಟಿಲೇಟರ್ ತಾನಾಗಿಯೇ ತೆರೆದು ಮುಚ್ಚಿ ಮಾಡತೊಡಗಿತು.

ಅದೇ ಅವನೇನೇ.

ಡಾಕ್ಟರ್ ತನುಜ ಎರಡು ಅಂಗೈಗಳನ್ನು ರೋಗಿಯ ಎದೆಯ ಮೇಲೆ ಎಡಭಾಗದಲ್ಲಿ ಮೇಲೆ ಮೇಲೆ ಅಮುಕಲು ಪ್ರಾರಂಭಿಸಿದರು. ಮೊದಲನೆಯ ಬಾರಿ ಅದುಮಿದಾಗ ಶಕ್ತಿಯಿಂದ ಒಂದು ಗಾಳಿ ಹೊರಕ್ಕೆ ಬಂದಿತು. ಹಾಗೆ ಬಹಳ ಹೊತ್ತು ಡಾಕ್ಟರ್ ತನುಜ ಕಾರ್ಡಿಯಾಕ್ ಮಸಾಜ್ ಮಾಡಿದರು. ಏನೂ ಫಲ ಕಾಣಲಿಲ್ಲ. ಸೂಕ್ಷ್ಮವಾದ ನೀರ್ಗುಳ್ಳೆಗಳು ರೋಗಿಯ ತುಟಿಗಳಲ್ಲಿ ಪ್ರತ್ಯಕ್ಷವಾದುವಲ್ಲದೆ ಮತ್ತೇನೂ ಸಂಭವಿಸಲಿಲ್ಲ. ರೋಗಿಯ ಹೃದಯವು ಯಾವಾಗಲೋ ನಿಶ್ಶಬ್ದವಾಗಿ ಹೋಗಿತ್ತು.

ರೋಗಿ ಅಷ್ಟು ಹೊತ್ತಿಗೆ ನೀಲಿಯ ಒಂದು ಕೊರಡಾಗಿ ಮಾರ್ಪಟ್ಟಿದ್ದಳು.

ದೇಹಕ್ಕೆ ಹೊದೆಸಿದ್ದ ಬಟ್ಟೆಯನ್ನು ಡಾಕ್ಟರ್ ತನುಜ ತೀರಿ ಹೋದ ರೋಗಿಯ ಮುಖದ ಮೇಲೆ ಮುಚ್ಚಿದರು.

ಥಿಯೇಟರ್‌ನಲ್ಲಿ ಒಂದು ಸಣ್ಣ ರೋದನವೆದ್ದಿತು.

ಬೆತ್ತದ ತೊಟ್ಟಿಲಲ್ಲಿ ಮಲಗಿರುವ ಮಗು ಅಳುತ್ತಿತ್ತು.

ಆದಿ ರೋದನದ ಅನಂತರೋದನವಾಗಿತ್ತದು.

# ಹದಿನಾಲ್ಕು

ಸರ್ಜಿಕಲ್ ವಾರ್ಡ್‌ನ ಕೊನೆಯಲ್ಲಿ ಕಾರಿಡಾರ್ ಟರ್ನ್ ಆಗುವ ಸ್ಥಳದಲ್ಲಿ ಒಂದು ದೊಡ್ಡ ಕೋಣೆ ಇದೆ. ಆ ಕೋಣೆಯ ಗೋಡೆಯ ಮೇಲೆ ಬಾಗಿಲಿನ ಮೇಲುಭಾಗದಲ್ಲಿ ಒಂದು ಬೋರ್ಡ್ ಅನ್ನು ಕಾಣಬಹುದು. ಮಿಸ್ಟರ್ ಗೋವರ್ಧನ್ ಆಚಾರಿ ಎಫ್.ಆರ್.ಸಿ.ಎಸ್. ಅವರೇ ಸರ್ಜರಿ ವಿಭಾಗದ ಮುಖ್ಯಸ್ಥರು. ಪ್ರೊಫೆಸರ್ ಹಾಗೂ ಪ್ರಸಿದ್ಧ ಶಸ್ತ್ರಕ್ರಿಯೆ ತಜ್ಞರೂ ಆದ ಮಿಸ್ಟರ್ ಆಚಾರಿ ಅವರಿಗೆ ಡಾಕ್ಟರ್ ಎಂದು ತಾವೇ ಹೇಳಿಕೊಳ್ಳುವುದಾಗಲಿ, ಇತರರು ಡಾಕ್ಟರ್ ಎಂದು ಅವರನ್ನು ಸಂಬೋಧಿಸುವುದಾಗಲಿ ಇಷ್ಟವಿಲ್ಲ. ಎಲ್ಲಾ ಸರ್ಜನ್‌ಗಳೂ ಮಿಸ್ಟರ್‌ರೇ ಎಂಬುದು ಆಚಾರಿಯವರ ಅಭಿಪ್ರಾಯವು.

ಮಿಸ್ಟರ್ ಆಚಾರಿ ತಮ್ಮ ಕೋಣೆಯಲ್ಲಿನ ರಿವಾಲ್ವಿಂಗ್ ಚೇರ್‌ನಲ್ಲಿ ಕುಳಿತುಕೊಂಡು ಆಪರೇಷನ್ ಲಿಸ್ಟ್ ಪರಿಶೀಲಿಸುತ್ತಿದ್ದರು. ಬಿಳಿ ಬನಿಯನ್, ಕಪ್ಪು ಪ್ಯಾಂಟ್ ಆಗಿತ್ತು ಅವರ ವೇಷ. ಆಪರೇಷನ್ ದಿವಸಗಳಲ್ಲಿ ಕೋಣೆಯನ್ನು ಪ್ರವೇಶಿಸಿದೊಡನೆಯೇ ಅವರು ಕೋಟನ್ನು, ಟೈಯನ್ನು ಷರ್ಟ್‌ಅನ್ನು ಬಿಚ್ಚಿ ಬಟ್ಟೆ ಬದಲಾಯಿಸುವರು. ಕರಿಯ ಬೀಟೆ ಮರದ ಬಣ್ಣವೂ, ದೊಡ್ಡ ಡೊಳ್ಳು ಹೊಟ್ಟೆಯೂ ಗುಂಡಾದ ಕಣ್ಣುಗಳೂ, ದೇಹದಲ್ಲೆಲ್ಲಾ ರೋಮಗಳೂ ಇರುವ ಎತ್ತರವಾಗಿದ್ದ ಮನುಷ್ಯ ಮಿಸ್ಟರ್ ಆಚಾರಿ. ಅವರಿಗೆ ಮಿಸ್ಟರ್ ಚಿಂಪಾಂಜಿ ಎಂಬ ಹೆಸರೂ ಇತ್ತು. ಹಲವಾರು ವರ್ಷಗಳ ಹಿಂದೆ ಅವರ ವಿದ್ಯಾರ್ಥಿಗಳೇ ಕೊಟ್ಟ ಮುದ್ದು ಹೆಸರಾಗಿತ್ತದು. ಆದರೆ ಒಬ್ಬನೂ ಆ ಹೆಸರನ್ನು ಉಚ್ಚರಿಸುತ್ತಿರಲಿಲ್ಲ. ಯಾರ ಎದುರಿಗೆ ಬಂದರೆ ಆ ಹೆಸರು ಅವನ ಮನಸ್ಸನ್ನು ಪ್ರವೇಶಿಸುತ್ತಿರಲಿಲ್ಲ. ಯಾರಾದರೂ ಅವರನ್ನು ಚಿಂಪಾಂಜಿ ಎಂದು ನೆನೆಸಿಕೊಂಡು ಬಿಟ್ಟರೆ ಅವನ ಜೀವನವು ಹಾಳಾದಂತೆಯೇ.

ಮಿಸ್ಟರ್ ಗೋವರ್ಧನ್ ಆಚಾರಿಯ ಅತಿ ಸನಿಹದಲ್ಲೇ ಇರುವ ಕುರ್ಚಿಗಳಲ್ಲಿ ಇಬ್ಬರು ಡಾಕ್ಟರ್‌ಗಳು ಬೆಕ್ಕಿನ ಮರಿಗಳಂತೆ ಅಡಗಿ ಕುಳಿತಿದ್ದರು. ಡಿಪಾರ್ಟ್‌ಮೆಂಟ್‌ನ ಒಬ್ಬ ಲೆಕ್ಚರರ್ ಹಾಗೂ ಒಬ್ಬ ಸೀನಿಯರ್ ರೆಸಿಡೆಂಟ್ ಆಗಿದ್ದರವರು.

ಅವರ ಕಣ್ಣುಗಳೂ ಆ ಆಪರೇಷನ್ ಲಿಸ್ಟ್‌ನ ಮೇಲೆ ಹರಿದಾಡುತ್ತಿತ್ತು. ಮಿಸ್ಟರ್ ಆಚಾರಿ ಪೆನ್ನನ್ನು ಮುಚ್ಚಿ ಮೇಜಿನ ಮೇಲಿಟ್ಟನಂತರ ತಲೆಯನ್ನೆತ್ತಿ ಕೇಳಿದರು.

"ಯಾವ ಕೇಸುಗಳನ್ನು ತೆಗೆದುಕೊಳ್ಳಬೇಕು ? ಇವತ್ತು ನಾನು ಎರಡನ್ನು ಮಾಡುವುದು."

ಲಿಸ್ಟ್‌ನಲ್ಲಿ ಕಣ್ಣುಗಳನ್ನೋಡಿಸಿದ ನಂತರ ಲೆಕ್ಚರರ್ ಹೇಳಿದರು.

"ಒಂದು ಪ್ರೊಸ್ಟೇಟ್, ಒಂದು ಕಿಡ್ನಿ ಸ್ಟೋನ್."

"ಸರಿ, ಎಲ್ಲರೂ ಬಂದು ನೋಡಿ ಹೋದದ್ದೇ ?" ಮಿಸ್ಟರ್ ಆಚಾರಿ ಕೇಳಿದರು. 'ನೋಡಿ ಹೋದದ್ದೇ ?' ಎಂಬ ಪ್ರಶ್ನೆಗೆ ದೊಡ್ಡ ಅರ್ಥವಿದೆ. ಎಲ್ಲರೂ ಹಣವನ್ನು ಕೊಟ್ಟಿದ್ದಾರೆಯೇ ? ಎಂಬರ್ಥ. ಮಿಸ್ಟರ್ ಆಚಾರಿಯ ಮನಸ್ಸಾಕ್ಷಿಯನ್ನು ಕಾಪಾಡುವವನೇ ಆ ಲೆಕ್ಚರರ್. ಆಪರೇಷನ್ ಆಗಬೇಕಾಗಿರುವ ರೋಗಿಗಳೂ ಬಂಧುಗಳೂ ಲೆಕ್ಚರರ್‌ರ ಮನೆಗೆ ಹೋಗಿ ಆತನ ಕೈಯಲ್ಲೇ ಹಣ ಕೊಡುತ್ತಿದ್ದರು. ಮಿಸ್ಟರ್ ಆಚಾರಿಗೆ ಒಂದೊಂದು ಆಪರೇಷನ್‌ಗೂ ಒಂದೊಂದು ರೇಟಿತ್ತು. ಅವರು ಅದಕ್ಕಿಂತ ಹೆಚ್ಚು ತೆಗೆದುಕೊಳ್ಳುತ್ತಿದ್ದರಲ್ಲದೆ ಒಂದು ರೂಪಾಯಿ ಸಹ ಕಡಿಮೆ ತೆಗೆದುಕೊಳ್ಳುತ್ತಿರಲಿಲ್ಲ. ಆಪರೇಷನ್ ದಿವಸಗಳಲ್ಲಿ ಹತ್ತು ಹದಿನೈದು ಕೇಸುಗಳನ್ನು ಕಾಣಬಹುದಿತ್ತು. ಬಹು ಹೆಚ್ಚು ಹಣವನ್ನು ಕೊಡುವ ಎರಡೋ ಮೂರೋ ಕೇಸುಗಳನ್ನೇ ಅವರು ತೆಗೆದುಕೊಳ್ಳುತ್ತಿದ್ದುದು. ಮಿಕ್ಕ ಕೇಸುಗಳನ್ನು ತಮ್ಮ ಕೈಕೆಳಗಿನ ಸರ್ಜನ್‌ಗಳಿಗೇ ಒಪ್ಪಿಸಲಾಗುತ್ತಿತ್ತು. ಅವರ ಯೂನಿಟ್‌ನಲ್ಲಿ ಹನ್ನೆರಡು ಸರ್ಜನ್‌ರೂ, ನಾಲ್ಕು ಆಪರೇಷನ್ ಥಿಯೇಟರ್‌ಗಳೂ ಇದ್ದವು: ಎರಡು ಮೇಜರ್ ಥಿಯೇಟರ್‌ಗಳೂ, ಎರಡು ಮಿನಿ ಥಿಯೇಟರ್‌ಗಳೂ ಆಗಿದ್ದವವು. ಮೇಜರ್ ಥಿಯೇಟರ್‌ಗಳನ್ನೇ ಮಿಸ್ಟರ್ ಆಚಾರಿ ಪ್ರವೇಶಿಸುವುದು.

ಮಿಸ್ಟರ್ ಆಚಾರಿ ಕೆಲ ದಿನಗಳು ಅತಿಯಾದ ಆವೇಶದಿಂದಲೇ ಬರುತ್ತಿದ್ದರು. ಅಂದು ಅವರು ಲಿಸ್ಟಿನಲ್ಲಿರುವ ಎಲ್ಲಾ ಆಪರೇಷನ್‌ಗಳನ್ನೂ ತಾವೇ ಮಾಡಿ ಮುಗಿಸುತ್ತಿದ್ದರು. ತೆಗೆದುಕೊಳ್ಳುವ ಹಣಕ್ಕೆ ನ್ಯಾಯ ತೋರಿಸಬೇಕಲ್ಲವೇ ? ಅಂದು ಬೆಳಿಗ್ಗೆ ಥಿಯೇಟರ್ ಅನ್ನು ಪ್ರವೇಶಿಸಿದರೆ ಅವರು ರಾತ್ರಿಯಾಗುವವರೆಗೂ ಮನುಷ್ಯ ಶರೀರಗಳನ್ನು ಕುಯ್ದು ಕತ್ತರಿಸಿ ತುಂಡು ಮಾಡುತ್ತಲೇ ಇರುತ್ತಾರೆ. ಅಂದು ಆಚಾರಿಗೆ ವಿಶ್ರಾಂತಿಯೋ, ಊಟ ತಿಂಡಿಗಳೋ ಬೇಕಾಗುವುದಿಲ್ಲ. ಒಂದೊಂದು ಆಪರೇಷನ್ ಮುಗಿಯುವಾಗಲೂ ಗ್ಲೌಸುಗಳನ್ನು ಬಿಚ್ಚಿ ತೆಗೆದು ಬಿಸಾಕಿ ಸೈಡ್ ರೂಮಿಗೆ ಒಂದು ಒಂದು ಲೋಟ ನಿಂಬೆಯ ಪಾನಕವನ್ನು ಕುಡಿದ ನಂತರ ಪಕ್ಕದ ರೋಗಿಯ ಟೇಬಲ್‌ಗೆ ಬರುವವರೆಗಿನ ವಿರಾಮ ವೇಳೆಯಲ್ಲಿ ಅವರ ಗಜಲನ್ನು ಓದುವರು. ಗಜಲ್‌ಗಳಲ್ಲೇ ಅವರ ಜೀವವಿರುತ್ತಿತ್ತು. ಪುಸ್ತಕವನ್ನು ಕಣ್ಣಿನ ಹತ್ತಿರಕ್ಕೆ ಹಿಡಿದು ಅದಕ್ಕೆ ಮುತ್ತನ್ನೀಯುತ್ತಿರುವಂತೆಯೇ ಅವರು ಓದುತ್ತಿದ್ದರು. ಥಿಯೇಟರ್‌ನಲ್ಲಿ ಎಲ್ಲಾ ಸಿದ್ಧವಾಗುವಾಗ ಕೊನೆಯಾಗಿ ಓದಿದ ಪಂಕ್ತಿಗಳುಳ್ಳ, ಅಚ್ಚು ಹಾಕಿದ್ದ ಪೇಜ್‌ಗೆ ಒಂದು ಮುತ್ತನ್ನಿತ್ತು ಅವರು ಪುಸ್ತಕವನ್ನೇ ಮುಚ್ಚಿಡುವರು. ಅನಂತರ ಯಾರೂ ಕಾಣದಂತೆ ಅದನ್ನು ಡ್ರಾಯರ್‌ನಲ್ಲಿ ಜೋಪಾನ ಮಾಡುವರು.

"ಎಲ್ಲರೂ ಬಂದು ನೋಡಿ ಹೋದರೇ ?" ಮಿಸ್ಟರ್ ಆಚಾರಿ ಮತ್ತೆಯೂ ಕೇಳಿದರು.

"ಇವರಲ್ಲಿಬ್ಬರು ನನ್ನನ್ನೇ ಕಾಣಲಿಲ್ಲ" ಲೆಕ್ಚರರ್ ಹೇಳಿದನು.

"ಓಹೋ" ತಾತ್ಸಾರದಿಂದ ನೋಡುತ್ತಾ ಮಿಸ್ಟರ್ ಆಚಾರಿ ಕೇಳಿದರು "ಇಂತಹ ರೋಗಿಗಳೂ ಉಂಟೇನು ?"

ಹಣವನ್ನು ಕೊಡುವುದರ ಬಗ್ಗೆ ಮಿಸ್ಟರ್ ಆಚಾರಿ ಯಾವಾಗಲೂ ಕೇಳುವ ಪ್ರಶ್ನೆಯಾಗಿತ್ತದು.

ಲೆಕ್ಚರರ್ ಏನೂ ಮಾತನಾಡದೆ ನಿಂತಾಗ ಅವರಿಗೆ ಕೋಪ ಬಂತು. ಧ್ವನಿ ಎತ್ತರಿಸಿ ಅವರು ಹೇಳಿದರು:

"ಆ ಎರಡನ್ನೂ ತೆಗೆದು ಹಾಕು."

"ಸರ್" ಸ್ವಲ್ಪ ಮೆಲ್ಲಗಿನ ಸ್ವರದಲ್ಲೇ ಲೆಕ್ಚರರ್ ಹೇಳಲಾರಂಭಿಸಿದನು: "ಅದರಲ್ಲೊಂದು ಕೇಸ್ ಸ್ವಲ್ಪ ಸೀರಿಯಸ್ ಆಗಿದೆ."

"ಗೋ ಟು ಹೆಲ್" ಮಿಸ್ಟರ್ ಆಚಾರಿ ಕುರ್ಚಿಯಿಂದೆದ್ದ. "ಅವರೊಂದಿಗೆ ಆದಷ್ಟು ಬೇಗ ಗುಳಿಯತ್ತ ಹೋಗಲು ಹೇಳು." ಮಿಸ್ಟರ್ ಆಚಾರಿ ಇಂಗ್ಲೆಂಡ್‌ಗೆ ಹೋಗಿ ಕಷ್ಟಪಟ್ಟು ಓದಿ ಬಂದದ್ದು ಸುಮ್ಮನೆ ಅಲ್ಲ- ಹಣಕ್ಕೋಸ್ಕರ ಆಗಿತ್ತು.

ಸ್ವಲ್ಪ ಹೊತ್ತು ಕಳೆದಾಗ ಯಾರೊಂದಿಗೂ ಅಲ್ಲವೆಂಬಂತೆ ಅವರು ಹೇಳಿದರು.

"ಹಣವಿಲ್ಲದಿದ್ದರೆ ಏಕೆ ಬದುಕಿರಬೇಕು ?"

ಅಷ್ಟು ಹೊತ್ತಿಗೆ ಏಳೆಂಟು ಮೆಡಿಕೋಗಳು ಮಿಸ್ಟರ್ ಆಚಾರಿಯ ಕೋಣೆಯನ್ನು ಪ್ರವೇಶಿಸಿದರು.

"ಗುಡ್ ಮಾರ್ನಿಂಗ್ ಸರ್" ಮೆಡಿಕೋಗಳು ಮಿಸ್ಟರ್ ಆಚಾರಿಯನ್ನು ವಂದಿಸಿದರು.

ಮಿಸ್ಟರ್ ಆಚಾರಿ ಕೇಳಿದಂತೆ ತೋರಲಿಲ್ಲ. ಅವರನ್ನು ತೀಕ್ಷ್ಣವಾಗಿ ನೋಡುತ್ತಾ "ಯಾವುದಾದರೂ ಮೂಲೆಗೆ ಹೋಗಿರಿ."

ಮೆಡಿಕೋಗಳು ವಿಶಾಲವಾದ ಆ ಕೋಣೆಯಲ್ಲಿನ ಒಂದು ಭಾಗಕ್ಕೆ ಹೋಗಿ ಒಂದು ಮೂಲೆಗೆ ಸರಿದು ನಿಂತರು. ಇಂದಿನ ದಿವಸವು ಕಠೋರವಾಗಿರುತ್ತೆಂದು ಅವರಿಗೆ ಅರ್ಥವಾದಾಗ ಅವರು ಸಾಧ್ಯವಾದಷ್ಟು ಅಡಗಿ ನಿಂತರು. ಯಾರೂ ಶಬ್ದ ಮಾಡಲಿಲ್ಲ. ಪಿಸುಪಿಸು ಮಾತನಾಡಲೂ ಇಲ್ಲ. ಆದರೂ ದೇವದಾಸ್ ಲಕ್ಷ್ಮಿಯನ್ನು ನೋಡಿ ಕಣ್ಣು ಮಿಟುಕಿಸಿದನು.

ಒಬ್ಬ ರೋಗಿಯನ್ನು ಮಲಗಿಸಿದ ಸ್ಟ್ರೆಚರ್ ಅನ್ನು ಆ ಕೋಣೆಯೊಳಕ್ಕೆ ಉರುಳಿಸಿಕೊಂಡು ವಾರ್ಡ್‌ಬಾಯ್‌ಗಳು ಬಂದರು. ಕೋಣೆಯ ಮಧ್ಯದಲ್ಲಿ ಸ್ಟ್ರೆಚರ್ ಅನ್ನು ನಿಲ್ಲಿಸಿದರು. ಮಲಗಿದ್ದಂತೆಯೇ ಆ ರೋಗಿಯು ಮಿ. ಆಚಾರಿಗೆ ಕೈ ಜೋಡಿಸಿ ನಮಸ್ಕರಿಸಿದನು. ಆತನ ಕಣ್ಣುಗಳಲ್ಲಿ ಭಯ, ಭಕ್ತಿ, ಮರ್ಯಾದೆಗಳು ತುಂಬಿದ್ದವು. ಇನ್ನು ಅವನ ಜೀವವು ಮಿಸ್ಟರ್ ಆಚಾರಿಯ ಕೈಯಲ್ಲಿದೆ.

ಆ ರೋಗಿ ದಪ್ಪಗೆ, ಬೆಳ್ಳಗೆ, ಲಕ್ಷಣವಾಗಿದ್ದನು. ಮುವ್ವತ್ತು ಮುವ್ವತ್ತೈದು ವಯಸ್ಸಿರಬಹುದು. ಅವನ ರೋಮವಿಲ್ಲದ ಮುಂಗೈ ಮೇಲೆ ಒಂದು ರಾಡೋ ವಾಚ್ ಕಟ್ಟಿದ್ದನು. ಕತ್ತಿನಲ್ಲಿ ದಪ್ಪಗಿದ್ದ ಒಂದು ಚಿನ್ನದ ಚೈನನ್ನು ಹಾಕಿದ್ದನು.

"ವಾಚ್, ಚೈನ್ ಎಲ್ಲಾ ಬಿಚ್ಚಿಬಿಡಿ. ನೀವು ಸ್ವರ್ಗಕ್ಕೆ ಹೋಗುತ್ತಿದ್ದೀರಲ್ಲವೇ ?"

ಮಿಸ್ಟರ್ ಆಚಾರಿ ರೋಗಿಯನ್ನು ನೋಡಿ ನಗುತ್ತಾ ಹೇಳಿದರು.

ಆ ರೋಗಿಯು ನಿಶ್ಚಯವಾಗಿಯೂ ಬಹಳ ಧನಿಕನೇ. ಅಲ್ಲದಿದ್ದರೆ ಮಿಸ್ಟರ್ ಆಚಾರಿ ಇಷ್ಟು ಸೌಮ್ಯವಾಗಿಯೂ ಲಲಿತವಾಗಿಯೂ ಮಾತನಾಡುವುದಿಲ್ಲ. ಅವರ ಪ್ಯಾಕೆಟ್ ಅವನು ಮುಂಚೆಯೇ ತುಂಬಿಸಿರಬೇಕು.

"ದೊಡ್ಡ ಮನುಷ್ಯರೇ, ಯಾಕೆ ನೀವು ಬಚ್ಚಿಟ್ಟುಕೊಂಡಿದ್ದೀರಿ ? ಬನ್ನಿ ಬನ್ನಿ,

ನಿಮಗೆ ಕಲಿಯಲು ಆಸಕ್ತಿ ಇಲ್ಲವೇನು ?" ವಿದ್ಯಾರ್ಥಿಗಳನ್ನು ಕೈಬೀಸಿ ಕರೆಯುತ್ತಾ ಮಿಸ್ಟರ್ ಆಚಾರಿ ಹೇಳಿದರು.

ಮೆಡಿಕೋಗಳಲ್ಲಿ ಚಲನೆ ಕಾಣಬಂದಿತು. ಅವರೆಲ್ಲಾ ಸ್ಟ್ರೆಚರ್ ಬಳಿ ಬಂದರು. ದೇವದಾಸ್‌ನ ಎದೆ ಹೊಡೆದುಕೊಳ್ಳಲಾರಂಭಿಸಿತು. ಮಿಸ್ಟರ್ ಆಚಾರಿ ಯಾರೊಂದಿಗೆ ಪ್ರಶ್ನೆಗಳನ್ನು ಕೇಳುತ್ತಿರಬಹುದು ? ಒಬ್ಬೊಬ್ಬ ವಿದ್ಯಾರ್ಥಿಯೂ ತನ್ನ ಸರದಿಯನ್ನು ಕಾದು ಹೆದರಿಕೊಂಡಿದ್ದನು. ಏನಾದರೂ ತಪ್ಪೋ ಅಸಂಬದ್ಧವೋ ಹೇಳಿಬಿಟ್ಟರೆ ಪರೀಕ್ಷೆ ಬರುವವರೆಗೂ ಆಚಾರಿ ಅದನ್ನು ಜ್ಞಾಪಕವಿಟ್ಟುಕೊಂಡಿರುತ್ತಿದ್ದರು.

"ಇಲ್ಲದಿದ್ದರೆ ತಾನೇ ನೀವೇನು ಕಲಿಯಲು ಬಂದವರೇನು ? ನಿಮ್ಮಲ್ಲಿ ಯಾವನಾದರೂ ಒಬ್ಬನಿಗಾದರೂ ಕಲಿಯಬೇಕೆಂದಿದೆಯೇನು ? ತಂದೆತಾಯಿಯರ ಹಣವನ್ನು ಖರ್ಚು ಮಾಡಿ ಮುಗಿಸಲಿಕ್ಕೆ ಬೇರೆ ದಾರಿಯಿಲ್ಲವಾದುದರಿಂದ ಇಲ್ಲಿಗೆ ಬಂದಿರಿ. ಅಲ್ಲವೇ ? ದೊಡ್ಡ ಮನುಷ್ಯರುಗಳೇ ?"

ಅಪರಾಧೀ ಮನೋಭಾವದಲ್ಲಿ ಅವರೆಲ್ಲರೂ ರೋಗಿಯನ್ನೇ ನೋಡುತ್ತಾ ಇದ್ದರು.

"ಈ ಕೆಲಸವನ್ನು ನೀವೆಲ್ಲಾ ನೋಡಿದ್ದಿರೇನು ?" ಮಿಸ್ಟರ್ ಆಚಾರಿ ಕೇಳಿದರು.

"ಸರ್...." ಮೆಡಿಕೋಗಳು ಹೇಳಿದರು.

"ಸರಿ ಬಹಳ ಒಳ್ಳೆಯದು. ನಾವು ಈತನ ಕಿಡ್ನಿಯಿಂದ ಒಂದು ಕಲ್ಲು ತೆಗೆಯುತ್ತೇವೆ. ಒಂದು ದೊಡ್ಡ ಕಲ್ಲು." ಆಚಾರಿ ಹೇಳಿದರು. ಅನಂತರ ರೋಗಿಯನ್ನು ನೋಡಿ ಹೇಳಿದರು.

"ಆನಂದ್, ಇದೆಲ್ಲವನ್ನು ಕೇಳಿ ನೀವು ಸ್ವಲ್ಪವೂ ಹೆದರಬೇಕಾದ್ದಿಲ್ಲ. ದೊಡ್ಡ ಕಲ್ಲಾದರೂ ನಿಮಗೇನೂ ಗೊತ್ತಾಗುವುದಿಲ್ಲ."

ರೋಗಿಯ ಬೆನ್ನು ತಟ್ಟಿ ಅವನಿಗೆ ಉತ್ತೇಜನ ನೀಡುತ್ತಾ ಮಿಸ್ಟರ್ ಆಚಾರಿ ಹೇಳಿದರು.

"ಸರಿ, ಆನಂದ್‌ನನ್ನು ಥಿಯೇಟರ್‌ಗೆ ಕರೆದುಕೊಂಡು ಹೋಗಿ."

ಮಿಸ್ಟರ್ ಆಚಾರಿ ತನ್ನ ಕುರ್ಚಿಯಲ್ಲಿ ಕುಳಿತುಕೊಂಡು ಮೆಡಿಕೋಗಳನ್ನು ಕರೆದರು.

"ಸರಿ ವಿದ್ಯಾರ್ಥಿಗಳೇ, ಎಲ್ಲರೂ ಕುಳಿತುಕೊಳ್ಳಿ."

ಮಿಸ್ಟರ್ ಆಚಾರಿ ಎಲ್ಲಾ ಕೆಲಸಗಳನ್ನೂ ಆರ್ಭಟದಿಂದಲೇ ಮಾಡುತ್ತಿದ್ದುದು. ತಮ್ಮ ದೊಡ್ಡ ಕೋಣೆಯಲ್ಲಿ ಅವರು ಸರ್ವಸ್ವವನ್ನು ಸಾಧಿಸಿಯೇ ತೀರುತ್ತಿದ್ದರು. ವಿದ್ಯಾರ್ಥಿಗಳನ್ನು ಅವರು ಬಹಳ ಹೊತ್ತು ತಮ್ಮ ಕೋಣೆಯಲ್ಲಿ ಕುಳ್ಳಿರಿಸಿ ಹೇಳಿಕೊಡುತ್ತಿದ್ದರು. ಡಿಪಾರ್ಟ್‌ಮೆಂಟಲ್ ಮೀಟಿಂಗ್ ತಮ್ಮ ಕೋಣೆಯಲ್ಲೇ ನಡೆಸುತ್ತಿದ್ದರು. ಮಿಸ್ಟರ್ ಆಚಾರಿಯವರ ಕೋಣೆಗೆ ಬೇರೆಯಾಗಿ ಎರಡು ಬಾಗಿಲುಗಳಿದ್ದವು. ಒಂದು ಆಪರೇಷನ್ ಥಿಯೇಟರ್‌ಗೆ ಮತ್ತೊಂದು ತಮ್ಮ ಪ್ರೈವೇಟ್ ರೂಮ್‌ಗೆ.

ಮಿಸ್ಟರ್ ಆಚಾರಿ ಆನಂದ್‌ನ ಎಕ್ಸ್‌ರೇ ಫಿಲಂಗಳನ್ನು ಒಂದೊಂದಾಗಿ ಪರಿಶೋಧಿಸಿದ ನಂತರ ಒಂದನ್ನು ತೆಗೆದುಕೊಂಡು ಲೋಬಿಯಲ್ಲಿಟ್ಟರು. ಎಕ್ಸ್‌ರೇ

ಲೋಬಿಯಲ್ಲಿ ಬೆಳಕು ಬಿದ್ದಾಗ ಆನಂದನ ಮೂತ್ರಪಿಂಡಗಳಲ್ಲಿನ ಕಲ್ಲು ಸ್ಪಷ್ಟವಾಗಿ ಕಂಡಿತು.

ಮಿಸ್ಟರ್ ಆಚಾರಿ ಮೆಲ್ಲನೆ ವಿದ್ಯಾರ್ಥಿಗಳಿಗೆ ಹೇಳಿಕೊಡತೊಡಗಿದರು.

ಅರ್ಧ ಘಂಟೆ ಕಳೆದಾದ ಮೇಲೆ ಸೀನಿಯರ್ ರೆಸಿಡೆಂಟ್ ಕೋಣೆಯನ್ನು ಪ್ರವೇಶಿಸಿದನು. ಮಿಸ್ಟರ್ ಆಚಾರಿ ತಲೆ ಎತ್ತಿ ನೋಡಿದರು.

"ರೆಡಿ ಸಾರ್" ಸೀನಿಯರ್ ರೆಸಿಡೆಂಟ್ ಹೇಳಿದನು.

"ಹಾಗಾದರೆ ಇವತ್ತಿಗೆ ಇಷ್ಟು ಸಾಕು. ಇನ್ನು ಥಿಯೇಟರ್‌ಗೆ ಹೋಗೋಣ."

ಮಿಸ್ಟರ್ ಆಚಾರಿ ಎದ್ದು ಥಿಯೇಟರ್‌ಗೆ ಹೋಗುವ ತಮ್ಮ ವೈಯಕ್ತಿಕ ಬಾಗಿಲಿನಲ್ಲಿ ಮರೆಯಾದರು.

ವಿದ್ಯಾರ್ಥಿಗಳು ಹೊರಕ್ಕಿಳಿದು ಕಾರಿಡಾರ್ ಮೂಲಕ ಆಪರೇಷನ್ ಥಿಯೇಟರ್‌ಗೆ ನಡೆದರು.

ಥಿಯೇಟರ್‌ನ ಹೊರಗಿರುವ ಕೋಣೆಯಲ್ಲಿ ಬಹಳ ಜನರು ಗುಂಪು ಗೂಡಿದ್ದರು. ಎಲ್ಲರೂ ಷೂಸ್ ಬಿಚ್ಚುತ್ತಿದ್ದರು. ಬಗೆಬಗೆಯ ಷೂಗಳಿಂದ ಆ ಸ್ಥಳವು ತುಂಬಿತ್ತು.

ವಿದ್ಯಾರ್ಥಿಗಳು ಥಿಯೇಟರ್‌ನೊಳಕ್ಕೆ ಪ್ರವೇಶಿಸಿದರು. ಥಿಯೇಟರ್‌ನ ಒಳಕ್ಕೆ ಅವರ ಪ್ರಪ್ರಥಮ ಪ್ರವೇಶವಾಗಿತ್ತದು.

ಸಾಧಾರಣವಾಗಿ ವಿದ್ಯಾರ್ಥಿಗಳನ್ನು ಥಿಯೇಟರ್‌ನೊಳಕ್ಕೆ ಪ್ರವೇಶ ಮಾಡಲು ಬಿಡುವುದಿಲ್ಲ. ಥಿಯೇಟರ್‌ನ ಪಕ್ಕದಲ್ಲೇ ಇರುವ ಕೋಣೆಯಲ್ಲಿರುವ ಕ್ಲೋಸ್ಡ್ ಸರ್ಕ್ಯೂಟ್ ಟಿ.ವಿ.ಯಲ್ಲಿ ಆಪರೇಷನ್ ತೋರಿಸುವುದೇ ರೂಢಿಯು. ಆದರೆ ಮಿಸ್ಟರ್ ಆಚಾರಿ ಮಾತ್ರ ವಿದ್ಯಾರ್ಥಿಗಳನ್ನು ತಮ್ಮ ಸುತ್ತಲೂ ನಿಲ್ಲಿಸಿಕೊಂಡು ಆಪರೇಷನ್ ಮಾಡುತ್ತಾರೆ. ಅಷ್ಟೇ ಅಲ್ಲ, ಅದು ತಮ್ಮ ವಿದ್ಯಾರ್ಥಿಗಳಿಗೆ ಮಿಸ್ಟರ್ ಆಚಾರಿ ತೋರಿಸುವ ಒಂದು ಔದಾರ್ಯವಾಗಿತ್ತು.

ಮೂತ್ರಪಿಂಡದಲ್ಲಿ ಕಲ್ಲಿರುವ ಆನಂದ್ ಎಂಬ ರೋಗಿ ಆಪರೇಷನ್ ಟೇಬಲ್ ಮೇಲೆ ಮಲಗಿದ್ದಾನೆ. ಸ್ವಲ್ಪ ಮುಂಚೆ ಆತನ ಮುಖದಲ್ಲಿ ಕಂಡ ಪ್ರಸನ್ನತೆಯು ಎಲ್ಲೋ ಮರೆಯಾಗಿ ಹೋಗಿತ್ತು. ಕೆಂಪಾಗಿ ಉಬ್ಬಿದ್ದ ಆ ಕೆನ್ನೆಗಳು ಸ್ವಲ್ಪ ಬಿಳಿಚಿಕೊಂಡಿದ್ದುವು. ಕಣ್ಣುಗಳಲ್ಲಿ ಅಕಾರಣವಾದ ಒಂದು ಭೀತಿಯು ನೆರಳಾಡುತ್ತಿರುವಂತಿತ್ತು.

ಮುಖಕ್ಕೆ ಮುಸುಕೂ, ಟೋಪಿಯೂ, ಗೌನೂ ಧರಿಸಿ ಮಿಸ್ಟರ್ ಆಚಾರಿ ಗ್ಲೌಸ್ ಅನ್ನು ಹಾಕಿಕೊಂಡು ಕೈಗಳೆರಡನ್ನು ಜೋಡಿಸಿಕೊಂಡು ಆನಂದನ ಬಳಿ ನಿಂತರು. ಮಿಸ್ಟರ್ ಆಚಾರಿಯು ಗುಂಡಗಿನ ಕಣ್ಣುಗಳು ಎಕ್ಸ್‌ರೇ ರಶ್ಮಿಗಳಂತೆ ಆನಂದನ ದೇಹದ ಮೂಲಕ ಮೂತ್ರಪಿಂಡಕ್ಕಿಳಿದು ಹೋಗುತ್ತಿತ್ತು.

ಆಪರೇಷನ್ ಥಿಯೇಟರ್‌ನಲ್ಲಿ ಈಥರ್‌ನ ವಾಸನೆ ಎದ್ದಿತು.

ತಾವು ಪ್ರಪ್ರಥಮವಾಗಿ ಆಪರೇಷನ್ ನೋಡಲೆಂದು ವಿದ್ಯಾರ್ಥಿಗಳು ಒಬ್ಬರನ್ನೊಬ್ಬರು ತಳ್ಳಿಕೊಂಡು ಚಲಿಸುತ್ತಿದ್ದರು.

ಮತ್ತಿನಲ್ಲಿ ಮುಳುಗಿದ್ದ ಆನಂದನನ್ನು ಪಕ್ಕಕ್ಕೆ ಸರಿಸಿ ಮಲಗಿಸಿ, ಹೊಟ್ಟೆಯ

ಭಾಗದಿಂದ ಹಿಡಿದು ಬೆನ್ನು ಮೂಳೆಗಳ ಒಳಭಾಗದ ಮೂಲಕ ಸ್ಪೈನಲ್ ಕಾರ್ಡ್‌ವರೆಗೂ ಒಂದು ದೊಡ್ಡ ಗೀರೆಳೆದು ಕುಯ್ದರು. ಮಿಸ್ಟರ್ ಆಚಾರಿ ಹಸಿ ಮಾಂಸದಲ್ಲಿ ಚೂಪಾದ ಬ್ಲೇಡ್ ಅನ್ನು ಒತ್ತಿದಾಗ ಉಂಟಾದ ಸಣ್ಣ ಜಿಲ್ ಎಂಬ ಶಬ್ದವನ್ನು ನಿಶ್ಶಬ್ದವಾಗಿದ್ದ ಆ ಥಿಯೇಟರ್‌ನಲ್ಲಿ ದೇವದಾಸ್ ಕೇಳಿಸಿಕೊಂಡನು. ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೂ ರಕ್ತವು ಸೋರತೊಡಗಿತು. ಪುಟ್ಟಪುಟ್ಟ ದಾರದ ಚೂರುಗಳಂತೆ ಅನೇಕ ರಕ್ತನಾಳಗಳು ಪ್ರತ್ಯಕ್ಷವಾದವು. ರಕ್ತವನ್ನು ಸೋರಿಸುತ್ತಿರುವ, ರಕ್ತವನ್ನು ಸಣ್ಣ ಸಣ್ಣ ಕಣಗಳಾಗಿ ಚಿಮ್ಮಿಸುತ್ತಿರುವ ಮಿಸ್ಟರ್ ಆಚಾರಿಯ ಚಾಕು ಮತ್ತೆಯೂ ಆಳಕ್ಕೆ ಹೋಗಿ ಚಲಿಸುತ್ತಿತ್ತು. ಬೆಂಕಿಯ ನಾಲಿಗೆಗಳಂತೆ ರಕ್ತ ಚೆಲ್ಲಾಡುತ್ತಿತ್ತು. ದಾರದ ಚೂರುಗಳಂತಿರುವ ರಕ್ತನಾಳಗಳು ದಪ್ಪ ದಪ್ಪವಾಗಿವೆ. ಚಿಲುಮೆಗಳಂತೆ ಅವು ದೊಡ್ಡದಾಗುತ್ತಿವೆ. ರಕ್ತವು ಧಾರೆಯಾಗಿ ಹರಿಯುತ್ತಿತ್ತು. ನಾಲ್ಕು ಭಾಗಗಳಿಗೂ ರಕ್ತ ಹರಿಯುತ್ತಿತ್ತು. ಆ ಚಿಲುಮೆಗಳೆಲ್ಲಾ ಸೇರಿಕೊಂಡು ಒಂದು ದೊಡ್ಡ ಚಿಲುಮೆಯಾಗುತ್ತಿತ್ತು. ರಕ್ತದ ಮಟ್ಟವು ಮೇಲಕ್ಕೇರುತ್ತಿದೆ. ಅದೊಂದು ರಕ್ತದ ಹೊಳೆಯಾಗಿ ಮಾರ್ಪಡುತ್ತಿತ್ತು. ಏನನ್ನೂ ನೋಡಲಾಗುತ್ತಿಲ್ಲ. ಸರ್ವತ್ರವೂ ಕೆಂಪು ಬಣ್ಣ ಹರಡಿತ್ತು.

ದೇವದಾಸ್, ಇದನ್ನು ನೋಡುತ್ತಿದ್ದವನು ಲಕ್ಷ್ಮಿಯ ಭುಜದ ಮೇಲೆ ಒರಗಿದನು. ಅವಳು ಅವನನ್ನು ಹಿಡಿದುಕೊಳ್ಳುವ ವೇಳೆಗೆ ಅವನು ಅವಳ ಕೈಯಿಂದ ಜಾರಿ ನೆಲದ ಮೇಲೆ ತಲೆ ತಗುಲಿಸಿಕೊಂಡು ಬಿದ್ದುಬಿಟ್ಟನು.

ದೇವದಾಸ್ ಬೆವರಿನಲ್ಲಿ ಮಿಂದು ಹೋಗಿದ್ದನು. ಅವನ ಮುಖವು ಹತ್ತಿಯಂತೆ ಬಿಳಿಚಿಕೊಂಡಿತ್ತು. ಲಕ್ಷ್ಮಿ ಅವನ ಷರ್ಟ್‌ನ ಬಟನ್‌ಗಳನ್ನು ಬಿಚ್ಚುವಾಗ ಮಿಸ್ಟರ್ ಆಚಾರಿ ತಿರುಗಿ ಸಹ ನೋಡದೆ ಹೇಳಿದರು:

"ನಥಿಂಗ್ ಹ್ಯಾಪನ್ಡ್"

ಮಿಸ್ಟರ್ ಆಚಾರಿ ತಮ್ಮ ಕೆಲಸವನ್ನು ಮುಂದುವರೆಸಿದರು.

ಆಪರೇಷನ್ ಥಿಯೇಟರ್‌ನ ಡ್ಯೂಟಿ ನರ್ಸ್ ಜ್ಞಾನತಪ್ಪಿ ಬಿದ್ದ ದೇವದಾಸ್‌ನನ್ನು ನೋಡುತ್ತಿದ್ದಳು. ಆಗ ಮಿಸ್ಟರ್ ಆಚಾರಿ ಏನೋ ಕೇಳಿದರು. ಡ್ಯೂಟಿ ನರ್ಸ್‌ಗೆ ಅದು ಕೇಳಿಸಿದರೂ ಅರ್ಥವಾಗಲಿಲ್ಲ.

ಯಾವುದೋ ವಸ್ತುವಿಗಾಗಿ ಕೈಚಾಚಿ ನಿಂತಿರುವ ಆಚಾರಿಯವರ ನೋಟವನ್ನು ನರ್ಸ್‌ನ ಕಣ್ಣುಗಳು ಎದುರಿಸಿದವು.

"ವಾಟ್ ಆರ್ ಯೂ ಡೂಯಿಂಗ್ ಸ್ಟುಪಿಡ್ ಗರ್ಲ್....." ಮಿಸ್ಟರ್ ಆಚಾರಿಯ ಕಣ್ಣುಗಳು ಕೋಪದಿಂದ ಕೆಂಡವನ್ನುಗುಳತೊಡಗಿದವು. "ಇಲ್ಲೇನು ನಾಟಕ ನಡೆಯುತ್ತಿದೆಯೆಂದು ತಿಳಿದಿದ್ದೀಯ ?"

"ಸರ್... ಸರ್." ಏನನ್ನೋ ಹೇಳಲೆಂದು ಅವಳು ಪ್ರಯತ್ನಿಸಿದಳಾದರೂ ಅವಳ ಬಾಯಲ್ಲಿ ಮಾತುಗಳೇ ಹೊರಡಲಿಲ್ಲ.

"ಯು ಗೆಟ್ ಔಟ್...." ಮಿಸ್ಟರ್ ಆಚಾರಿಯ ಧ್ವನಿ ಥಿಯೇಟರ್ ಅನ್ನೇ ಹಿಡಿದು ಅಲ್ಲಾಡಿಸಿತು. ಡ್ಯೂಟಿ ಸಿಸ್ಟರ್ ಒಂದು ನಿಮಿಷ ಅವಾಕ್ಕಾಗಿ ನಿಂತಳು.

ಕೈಯಲ್ಲಿದ್ದ ಉಪಕರಣವನ್ನು ತಕ್ಷಣವೇ ಟೇಬಲ್‌ನ ಮೇಲಿಟ್ಟು ಅವಳು ಅಲ್ಲಿಂದ ಹೊರಟುಹೋದಳು.

"ಅಪ್ರಯೋಜಕರು..." ಮಿಸ್ಟರ್ ಆಚಾರಿ ಧ್ವನಿ ತಗ್ಗಿಸಿ ಹೇಳಿದರು.

ಬೇಕಿದ್ದ ಆಯುಧಗಳನ್ನು ತಾವೇ ಬಗ್ಗಿ ತೆಗೆದುಕೊಂಡು ಮತ್ತೆ ತಮ್ಮ ಕೆಲಸದಲ್ಲವರು ಮಗ್ನರಾದರು.

ಎರಡು ಆಪರೇಷನ್‌ಗಳೂ ಕಳೆದನಂತರ ಮಿಸ್ಟರ್ ಆಚಾರಿ ತಮ್ಮ ವಿಶ್ರಾಂತಿ ಕೋಣೆಗೆ ಹೋದರು. ವಿಶ್ರಾಂತಿ ಕೋಣೆಯ ಬಳಿ ಯಾವಾಗಲೂ ಒಬ್ಬ ಕಾವಲುಗಾರನಿರುತ್ತಾನೆ. ಯಾರಿಗೂ ಅವರ ವಿಶ್ರಾಂತಿ ಕೋಣೆಗೆ ಹೋಗಲು ಅನುಮತಿ ಇರುವುದಿಲ್ಲ. ಆದರೆ ಮಿಸ್ಟರ್ ಆಚಾರಿ ತಮಗೆ ಬೇಕಾದವರನ್ನು ಮಾತ್ರ ಅಲ್ಲಿಗೆ ಕರೆಸಿಕೊಳ್ಳಬಹುದು. ಅವರಿಗೆ ಮಾತ್ರ ಅನುಮತಿ ನೀಡಲಾಗುತ್ತದೆ.

ಥಿಯೇಟರಿನೊಳಗೆ ಪ್ರಜ್ಞೆ ಇಲ್ಲದೆ ಬಿದ್ದ ವಿದ್ಯಾರ್ಥಿಯನ್ನು ಮಿಸ್ಟರ್ ಆಚಾರಿ ತಮ್ಮ ವಿಶ್ರಾಂತಿ ಕೋಣೆಗೆ ಕರೆಸಿಕೊಂಡರು.

ದೇವದಾಸ್ ಮಿಸ್ಟರ್ ಆಚಾರಿಯ ಎದುರಿಗೆ ಪ್ರತ್ಯಕ್ಷನಾದನು.

"ಯುವರ್ ನೇಮ್ ?" ಮಿಸ್ಟರ್ ಆಚಾರಿ ಕೇಳಿದರು.

"ದೇವದಾಸ್."

"ಗುಡ್ ನೇಮ್. ಆದರೆ ನಿನಗೆ ಧೈರ್ಯ ಏನೇನೂ ಸಾಲದು."

"ನನಗೇನೂ ಜ್ಞಾಪಕವಿಲ್ಲ ಸರ್"

"ನಿನ್ನಂತೆ ಮನಸ್ಸಿನ ಸ್ಥೈರ್ಯವಿಲ್ಲದವರಿಗೆ ಇದು ತಕ್ಕ ಜಾಗವಲ್ಲ. ಜ್ಞಾಪಕವಿರಲಿ."

ದೇವದಾಸ್‌ನ ಬಾಯಲ್ಲಿ ಮಾತು ಹೊರಡಲಿಲ್ಲ."

"ಹೋಗು."

ಸ್ವಲ್ಪ ಹೊತ್ತು ಕಳೆದ ಮೇಲೆ ಡ್ಯೂಟಿ ನರ್ಸನ್ನು, ಮಿಸ್ಟರ್ ಆಚಾರಿ ಕರೆಸಿದರು. ಕೆಂಡದಿಂದ ಹೊರಬರುವ ಒಂದು ಕಿಡಿಯಂತೆ ಅವಳು ಆಚಾರಿಯವರ ಟೇಬಲ್ ಮುಂದೆ ಬಂದು ನಿಂತಳು.

"ಸಿಸ್ಟರ್" ಮಿಸ್ಟರ್ ಆಚಾರಿಯವರ ಧ್ವನಿ ಏರಿತು. "ನನ್ನ ಜೊತೆ ಕೆಲಸ ಮಾಡಲು ಬಹಳ ಕಷ್ಟವಾಗಿರಬಹುದು. ಥಿಯೇಟರ್‌ಗೆ ಬಂದ ಮೇಲೆ ಲೋಕವೇ ತಲೆಕೆಳಗಾದರೂ ನೀವು ಅದನ್ನು ಗಮನಿಸಬೇಕಾಗಿಲ್ಲ. ಅದರೊಳಗೆ ನಿಮಗೆ ಉಸಿರೆಳೆದುಕೊಳ್ಳಲೂ ಸಹ ಹಕ್ಕಿಲ್ಲ."

ಡ್ಯೂಟಿನರ್ಸ್‌ನ ಮುಖವು ಬಿಳಿಚಿಕೊಂಡಿತು. ಅವಳ ಹೃದಯ ಬಡಿದುಕೊಳ್ಳುತ್ತಿತ್ತು.

"ಅರ್ಥವಾಯಿತೇ ?"

"ಸರ್."

"ಹೀಗೆ ಹತ್ತಿರ ಬನ್ನಿ" ತಮ್ಮ ಅಂಗೈಯನ್ನು ದೊಡ್ಡದಾಗಿ ಅಗಲಿಸಿ ಮಿಸ್ಟರ್ ಆಚಾರಿ ಅವಳನ್ನು ಬಳಿಗೆ ಕರೆದರು."ಈ ಸಲ ನಿಮ್ಮನ್ನು ನಾನು ಕ್ಷಮಿಸಿದ್ದೇನೆ."

ಮಿಸ್ಟರ್ ಆಚಾರಿ ತಾವೇ ಎದ್ದರು. ಅವಳ ಬಳಿಗೆ ಹೋದರು. ಅವರ

ಬಿಸಿಯುಸಿರು ಅವಳ ತಲೆಗೆ ತಗುಲಿತು.

"ನಿಮ್ಮನ್ನೇ ನೋಡಿದಾಗಲೇ ನೀವೊಬ್ಬ ಒಳ್ಳೆಯ ಹುಡುಗಿ ಎಂದು ನಾನು ಅರ್ಥ ಮಾಡಿಕೊಂಡೆ." ಅವಳ ಹೆಗಲ ಮೇಲೆ ಕೈಯಿಟ್ಟು ಅವರು ಹೇಳಿದರು.

"ನಿಮ್ಮ ಹೆಸರೇನು ?"

"ಮೇರಿ" ಅವಳು ಹೇಳಿದಳು.

"ಬ್ಯೂಟಿಫುಲ್ ನೇಮ್" ಮೇರಿಯ ಹೆಗಲ ಮೇಲೆ ಮತ್ತೊಮ್ಮೆ ತಟ್ಟಿ ಅವರು ಹೇಳಿದರು.

"ಸರಿ, ಈಗ ಹೋಗಿ."

# ಹದಿನೈದು

ಬುಧವಾರ ಆಬ್‌ಸ್ಟೆಟ್ರಿಕ್ಸ್ ಅಂಡ್ ಗೈನಕಾಲಜಿ ವಿಭಾಗದಲ್ಲಿ ಜನರ ಗುಂಪು ಬಲು ದೊಡ್ಡದಾಗಿತ್ತು. ಡಾಕ್ಟರ್ ತನುಜ ಅಂದು ರೋಗಿಗಳನ್ನು ಪರಿಶೋಧಿಸಲಿದ್ದರು.

ಸ್ತ್ರೀಯರು ಮತ್ತು ಮಕ್ಕಳ ಒಂದುಪ್ರವಾಹವೇ ಔಟ್ ಪೇಷೆಂಟ್ ವಾರ್ಡ್‌ನಲ್ಲಿ ತುಂಬಿ ಹರಿಯತೊಡಗಿತು. ಗಲಾಟೆ, ಕೂಗಾಡುವಿಕೆ, ದೀನರೋದನ, ನರಳುವಿಕೆ ಇವು ಆ ಸ್ಥಳದಲ್ಲೆಲ್ಲಾ ಮೊಳಗುತ್ತಿದ್ದುವು. ಮುಟ್ಟು ನಿಂತವರೂ, ಮುಟ್ಟಾಗದಿರುವವರೂ, ಚೊಚ್ಚಲು ಹೆರಿಗೆಗೆ ಬಂದಿರುವವರೂ, ತುಂಬಿದ ಬಸುರಿಯರೂ, ರಕ್ತ ಸ್ರಾವವಿರುವವರೂ, ಬಹು ಮಕ್ಕಳನ್ನು ಹೊತ್ತಿರುವ ಗರ್ಭಿಣಿಯರೂ, ಗರ್ಭಕೋಶದಲ್ಲಿ ಕ್ಯಾನ್ಸರ್ ಗೆಡ್ಡೆ ಇದ್ದು ನರಳುತ್ತಿರುವವರೂ, ಕಿಬ್ಬೊಟ್ಟೆಯಲ್ಲಿ ಗಡ್ಡೆ ಇರುವವರೂ, ಬಿಳಿ ಸೆರಗು ಹೋಗುತ್ತಿರುವವರೂ, ಕಾಮೋದ್ರೇಕಗೊಳ್ಳದಿರುವವರೂ, ಕೈಲಾಗದ ಗಂಡಂದಿರಿರುವ ನಿರ್ಭಾಗ್ಯೆಯರೂ, ಮದುವೆಯಾಗದೆ ಗರ್ಭ ಧರಿಸಿದ ಕನ್ಯೆಯರೂ, ಗಂಡನಿದ್ದೂ ಹೆರದವರೂ, ಇದಕ್ಕಿಂತ ಹೆಚ್ಚಾಗಿ ರೋಗಿಗಳೂ, ಡಾಕ್ಟರ್ ತನುಜರನ್ನು ಕಾಣಲು ಅವಕಾಶಕ್ಕಾಗಿ ಕಾದಿದ್ದರು.

ಗೈನಕಾಲಜಿ ವಿಭಾಗದಲ್ಲಿ ಸಮರ್ಥರಾದ ಬೇರೆ ಡಾಕ್ಟರ್‌ಗಳಿದ್ದರು. ಆದರೆ ಅವರ್ಯಾರಿಗೂ ಇಷ್ಟು ಜನರು ಗುಂಪು ಸೇರುವುದಿಲ್ಲ. ಡಾಕ್ಟರ್ ತನುಜರನ್ನು ಒಂದು ಸಲ ಕಂಡರೆ, ಅಥವಾ ಆಕೆಯನ್ನು ಒಮ್ಮೆ ಮುಟ್ಟಿದರೆ ಅಥವಾ ಆಕೆಯ ಬಾಯಿಂದ ಒಂದು ಮಾತನ್ನು ಕೇಳಿದರೆ ಸಾಕು, ರೋಗಗ್ರಸ್ತರಾದ ಸ್ತ್ರೀಯರಿಗೆ ಸಂತೃಪ್ತಿಯಾಗುತ್ತಿತ್ತು. ಅದರೊಂದಿಗೆ ರೋಗಿಗಳ ರೋಗವು ವಾಸಿಯಾಗಿಯೂ ಬಿಡುತ್ತಿತ್ತು. ಅವರ ಜೀವನವು ಸಫಲವಾಗುತ್ತಿತ್ತು.

ಡಾಕ್ಟರ್ ತನುಜ ಔಟ್ ಪೇಷೆಂಟ್‌ನಲ್ಲಿನ ತಮ್ಮ ಕೋಣೆಯನ್ನು ಪ್ರವೇಶಿಸಿದರು. ನಿಗದಿಪಡಿಸಿದ್ದ ವೇಳೆಗೆ ಅರ್ಧ ಗಂಟೆ ಮುಂಚೆಯೇ ಆಕೆ ಯಾವಾಗಲೂ ಬರುತ್ತಿದ್ದರು. ಆಕೆ ಬಂದ ನಂತರವೇ ತಮ್ಮ ಯೂನಿಟ್‌ನ ಇತರ ಡಾಕ್ಟರ್‌ಗಳು ಒಬ್ಬೊಬ್ಬರಾಗಿ ಬರುತ್ತಿದ್ದರು. ಅದರಲ್ಲಿ ಆಕೆಗೆ ಯಾವ ಆಕ್ಷೇಪಣೆಯೂ ಇರಲಿಲ್ಲ. ಸಕಾರಣವಾಗಿ ಸ್ವಲ್ಪ ಹೊತ್ತಾಗಿ ಬಂದರೆ ಆಕೆ ಆಕ್ಷೇಪಿಸುತ್ತಿರಲಿಲ್ಲ.

ತನುಜ ಅತೀವ ಸುಂದರಿ. ಆಕೆಯ ವಿಶಾಲವಾದ ಕಣ್ಣುಗಳು ಮಾತ್ರವೇ ಸಾಕು, ಈ ಲೋಕವನ್ನೆಲ್ಲಾ ತಮ್ಮ ಅಧೀನದಲ್ಲಿಟ್ಟುಕೊಳ್ಳಲು ರೋಗಿಗಳೂ, ವಿದ್ಯಾರ್ಥಿಗಳೂ, ಡಾಕ್ಟರ್‌ಗಳೂ, ನರ್ಸ್‌ಗಳೂ, ಕೌತುಕದಿಂದ ಆಕೆಯನ್ನು ನೋಡುತ್ತಾ ನಿಲ್ಲುವುದನ್ನು ಕಾಣಬಹುದು.

ಡಾಕ್ಟರ್ ತನುಜರಿಗೆ ನಲ್ವತ್ತರ ಹತ್ತಿರ ಹತ್ತಿರ ವಯಸ್ಸಾಗಿತ್ತು. ಆಕೆ ಈಗಲೂ ಡಾಕ್ಟರ್ (ಮಿಸ್) ತನುಜ. ಎಷ್ಟೋ ಗಂಡಸರ ಸ್ವಪ್ನಗಳನ್ನೂ ಪ್ರತೀಕ್ಷೆಗಳನ್ನು

ಭೇದಿಸಿಕೊಂಡು ಆಕೆ ಈ ಪ್ರಾಯಕ್ಕೆ ಬಂದಿದ್ದರು.

ಪ್ರಸಿದ್ಧ ಗೈನಕಾಲಜಿಸ್ಟ್ ಆದ ಪ್ರೊಫೆಸರ್ ಚಟ್ಟೋಪಾಧ್ಯಾಯರ ಶಿಷ್ಯೆಯಾಗಿದ್ದರು ಡಾಕ್ಟರ್ ತನುಜ. ಅವರ ಕೈಕೆಳಗೇ ಆಕೆಯು ವಿದ್ಯಾಭ್ಯಾಸವನ್ನೂ ಉನ್ನತ ವಿದ್ಯಾಭ್ಯಾಸವನ್ನೂ ನಡೆಸಿದ್ದರು. ಚಟ್ಟೋಪಾಧ್ಯಾಯರ ಅಚ್ಚುಮೆಚ್ಚಿನ ಶಿಷ್ಯೆ ಯಾಗಿದ್ದರು ಆಕೆ.

ಅವರಿಬ್ಬರ ಈ ಬಂಧನವು ಹತ್ತುವರ್ಷಗಳ ಕಾಲ ಮುಂದುವರೆದಿತ್ತು. ಆಕೆಯು ಅವರೊಂದಿಗೆ ಹೋಗುವಾಗ ತಂದೆ ಮಗಳಂತೆ ತೋರುತ್ತಿತ್ತು. ಪತಿ ಪತ್ನಿ ಎಂದೂ ತೋರುತ್ತಿತ್ತು. ಪ್ರೇಮಿಗಳೆಂದು ತೋರುತ್ತಿತ್ತು. ಗುರುಶಿಷ್ಯೆಯರೆಂದು ತೋರುತ್ತಿತ್ತು. ಆದರೆ ಆಕೆಗೂ ಅವರಿಗೆ ಇದ್ದ ಪರಸ್ಪರ ಬಂಧನವು ಏನಾಗಿತ್ತೆಂದು ಯಾರಿಗೆ ಗೊತ್ತು? (ದೇವರಿಗೆ ಮಾತ್ರ ಗೊತ್ತು.)

ಚಟ್ಟೋಪಾಧ್ಯಾಯರು ಒಂದು ದಿವಸ ಇದ್ದಕ್ಕಿದ್ದಂತೆ ಹೃದಯಾಘಾತದಿಂದ ತೀರಿಹೋಗುವವರೆಗೆ ಆ ಬಂಧನವು ಅಡೆತಡೆಯಿಲ್ಲದೆ ಮುಂದುವರೆದಿತ್ತು. ಚಟ್ಟೋಪಾಧ್ಯಾಯರ ಬಗೆಗಿನ ನೆನಪುಗಳನ್ನು ಆಕೆಯು ಒಂದು ನಿಟ್ಟುಸಿರಿನೊಂದಿಗೆ ಹೊರಕ್ಕೆ ಬಿಡದೆಯೇ ತಮ್ಮ ಹೃದಯದಲ್ಲೇ ಜೋಪಾನವಾಗಿಟ್ಟಿದ್ದರು.

ಆಲಿವ್ ಬಣ್ಣದಲ್ಲಿರುವ ಮನೋಹರವಾದ ತಮ್ಮ ಸೀರೆಯ ಮೇಲೆ ಏಪ್ರನ್ ಅನ್ನು ಇಳಿಬಿಟ್ಟುಕೊಂಡು ಡಾಕ್ಟರ್ ತನುಜ ಅವಸರದಿಂದ ಹೇಳಿದರು:

"ಬಿಡಿ, ಒಳಕ್ಕೆ ಬಿಡು."

ಬಾಗಿಲ ಬಳಿ ಕಾವಲು ನಿಲ್ಲುವ ಅಟೆಂಡರ್ ರೋಗಿಯನ್ನು ಒಳಬಿಟ್ಟನು. ಒಬ್ಬ ವೃದ್ಧೆಯಾಗಿದ್ದಳವಳು.

ಚೆನ್ನಾಗಿ ನರೆತ ತಲೆಗೂದಲು. ಬಹಳವಾಗಿ ಸುಕ್ಕಾಗಿದ್ದ ಮುಖ. ಹಲ್ಲಿಲ್ಲದ ಬಾಯಿ.

ವಸಡುಗಳನ್ನು ತೋರಿಸುತ್ತಾ ವೃದ್ಧೆಯು ನಕ್ಕಳು.

"ಹುಂ, ಏನಾಯಿತು?" ಡಾಕ್ಟರ್ ತನುಜ ಕೇಳಿದರು.

"ಮಗಳೇ, ನನಗೆ ಆರೋಗ್ಯವಿಲ್ಲ. ನನ್ನನ್ನು ನೀನು ಚೆನ್ನಾಗಿ ಪರೀಕ್ಷಿಸಬೇಕು."

ವೃದ್ಧೆಯು ವಿವರಣೆಯ ಪ್ರಾರಂಭದಲ್ಲಿದ್ದಳು. ನೂರಾರು ಜನ ರೋಗಿಗಳು ಕೋಣೆಯ ಹೊರಗೆ ಜೇನುಗೂಡಿನಲ್ಲಿನ ನೊಣಗಳಂತೆ ನಿಂತಿದ್ದಾರೆ. ಆದರೆ ಡಾಕ್ಟರ್ ತನುಜ ತಮ್ಮ ನಡೆನುಡಿಯಲ್ಲಿ, ಮಾತುಕತೆಗಳಲ್ಲಿ ಒಮ್ಮೆಯೂ ತರಾತುರಿ ತೋರಿಸುತ್ತಿರಲಿಲ್ಲ. ಮುಂಜಾವಿನಿಂದ ಮುಂಜಾವಿನವರೆಗೆ ರೋಗಿಗಳನ್ನು ನೋಡುತ್ತಿರಲೂ ಆಕೆ ಸಿದ್ಧರು.

"ಮಗಳೇ, ಹತ್ತು ಹದಿನೈದು ವರ್ಷಗಳಿಂದ ನನಗೆ ಹೊಟ್ಟೆನೋವು. ನನ್ನನ್ನು ಪರೀಕ್ಷಿಸದ ಡಾಕ್ಟರುಗಳಿಲ್ಲ. ಆದರೇನು ನನ್ನ ರೋಗವು ಇದುವರೆಗೆ ಗುಣವಾಗಿಲ್ಲ. ಹೊಟ್ಟೆಯಲ್ಲಿ ಒಂದು ಗಡ್ಡೆ ಇದೆಯೆಂದೇ ಎಲ್ಲರೂ ಹೇಳಿದ್ದಾರೆ. ಯಾವ ಗಡ್ಡೆಯನ್ನು ನಾನು ಇದುವರೆಗೂ ಕಂಡಿಲ್ಲ. ಆಪರೇಷನ್ ಮಾಡಬೇಕೆಂದೇ ನನ್ನನ್ನು ಪರೀಕ್ಷಿಸಿದವರೆಲ್ಲಾ ಹೇಳುತ್ತಾರೆ. ನನ್ನ ಕುಟುಂಬದಲ್ಲಿ ಇಲ್ಲಿಯವರೆಗೂ ಯಾರೂ ಆಪರೇಷನ್ ಮಾಡಿಸಿಕೊಂಡಿಲ್ಲ. ಮಗಳೇ ನನ್ನನ್ನು ನೋಡಿ ಔಷಧಿ ಕೊಡು. ನನ್ನ

ರೋಗ ವಾಸಿ ಮಾಡು. ಕಿಬ್ಬೊಟ್ಟೆಯಲ್ಲಿ ಗಡ್ಡೆ ಇದ್ದಲ್ಲಿ ಔಷಧಿ ಕೊಟ್ಟು ಅದನ್ನು ವಾಸಿ ಮಾಡಿಬಿಡು."

ಡಾಕ್ಟರ್ ತನುಜ ವೃದ್ಧೆಯನ್ನು ಮಂಚದ ಮೇಲೆ ಮಲಗಿಸಿ ಪರೀಕ್ಷಿಸತೊಡಗಿದರು. ಹೊರಗಿನಿಂದ ನೋಡುವಾಗಲೇ ಆಕೆಯ ಹೊಟ್ಟೆ ದಪ್ಪವಾಗಿ ಕಾಣುತ್ತಿತ್ತು. ಒಳವಸ್ತ್ರಗಳನ್ನು ತೆಗೆದಾಗ ಪಾರ್ಶ್ವಗಳಲ್ಲಿ ನೇತಾಡುತ್ತಿದ್ದ ಹೊಟ್ಟೆ ಕಾಣಿಸಿತು. ಜೊತೆಗೆ ಹೊಕ್ಕುಳಿನ ಮೇಲೆ ಕಟ್ಟಿದ್ದ ಒಂದು ಬಟ್ಟೆಯ ಗಂಟೂ ಕಾಣಿಸಿತು. ಬಟ್ಟೆಯಲ್ಲಿ ಏನೋ ಪದಾರ್ಥಗಳನ್ನಿಟ್ಟು ಅದನ್ನು ಹೊಕ್ಕುಳಿಗೆ ಸೇರಿಸಿ ಕಟ್ಟಲಾಗಿತ್ತು.

"ಇದೇನಿದು ? ಇದನ್ನು ಬಿಚ್ಚಿ ಹಾಕಿ ?"ಡಾಕ್ಟರ್ ತನುಜ ಹೇಳಿದರು.

"ಅಯ್ಯೋ, ಅದನ್ನು ಬಿಚ್ಚ ಬೇಡಿ. ಅದಲ್ಲೇ ಇರಲಿ" ಬಟ್ಟೆಯ ಗಂಟಿನ ಮೇಲೆ ಕೈಯನ್ನಿಟ್ಟುಕೊಂಡು ವೃದ್ಧೆ ಹೇಳಿದಳು.

"ನಾನು ಅಲ್ಲಿ ಪರೀಕ್ಷಿಸಬೇಕು. ಆ ಗಂಟು ಬಿಚ್ಚಿ" ಧ್ವನಿ ಏರಿಸಿ ತನುಜ ಹೇಳಿದರು. ಅಷ್ಟು ಹೊತ್ತಿಗೆ ಯೂನಿಟ್‌ನಲ್ಲಿರುವ ರೆಸಿಡೆಂಟು, ಹೌಸ್ ಸರ್ಜನರೂ ಬಂದರು.

"ಬೇಡ ಅದಲ್ಲೇ ಇರಲಿ." ವೃದ್ಧೆ ಹಠದಿಂದ ಹೇಳಿದಳು.

"ಏನಿದು ?" ಡಾಕ್ಟರ್ ಕುತೂಹಲ ವರ್ಧಿಸಿತು.

ವೃದ್ಧೆಯ ವಿರೋಧವನ್ನು ಲೆಕ್ಕಿಸದೆ ಅವರೆಲ್ಲರೂ ಸೇರಿ ಸೊಂಟಕ್ಕೆ ಕಟ್ಟಿದ್ದ ಆ ಬಟ್ಟೆಯ ಗಂಟನ್ನು ಬಿಚ್ಚಿದರು. ಬಿಚ್ಚಿ ನೋಡಿದಾಗ ಅದರಲ್ಲಿ ಕೆಲ ಚಿನ್ನದ ಒಡವೆಗಳಿದ್ದವು.

"ಹುಂ ಇದೇನು ?" ಡಾಕ್ಟರ್ ತನುಜ ಕೇಳಿದರು.

ವೃದ್ಧೆ ಅಳತೊಡಗಿದಳು. ಆಕೆ ಒಂಟಿಯಾಗಿಯೇ ಆಸ್ಪತ್ರೆಗೆ ಬಂದಿದ್ದಳು. ಆಕೆಯ ಜೊತೆಯಲ್ಲಿ ಬೇರೆ ಯಾರೂ ಬಂದಿರಲಿಲ್ಲ.

"ನಿನಗೆ ಮಕ್ಕಳಿಲ್ಲವೇ ?" ಡಾಕ್ಟರ್ ತನುಜ ಕೇಳಿದರು.

"ನಾಲ್ಕು ಜನ ಇದ್ದಾರೆ. ಅವರೆಲ್ಲರೂ ಮದುವೆಯಾಗಿ ಗಂಡಂದಿರ ಮನೆಯಲ್ಲಿದ್ದಾರೆ."

"ನೀವು ಒಬ್ಬರೇ ವಾಸಿಸುತ್ತಿದ್ದೀರಾ ?"

"ಹೌದು, ದೊಡ್ಡಮನೆಯಲ್ಲಿ ಏಕಾಕಿಯಾಗಿ."

"ಈ ಚಿನ್ನದ ಒಡವೆಗಳನ್ನು ಹೀಗೇಕೆ ಕಟ್ಟಿಟ್ಟುಕೊಂಡಿದ್ದೀರಿ ?"

ಕಣ್ಣನ್ನು ಒರೆಸಿಕೊಳ್ಳುತ್ತಾ ವೃದ್ಧೆ ಹೇಳಿದಳು.

"ನನ್ನ ಅಂತ್ಯ ಕರ್ಮಗಳಿಗೋಸ್ಕರ ಇಟ್ಟಿದ್ದೆ. ನಾನು ಹಾದಿಬೀದಿ ಪಾಲಾಗಿಬಿಡುತ್ತೇನೆ. ನನ್ನ ಹೆಣ ನಾರಿ ಕೊಳೆತು ಹೋಗುತ್ತೆ." ವೃದ್ಧೆ ಮುಂದುವರೆಸಿದಳು:

"ಮಕ್ಕಳನ್ನು ಜೊತೆಯಲ್ಲಿ ಕರೆದುಕೊಂಡು ಬರದಿದ್ದುದು ಯಾಕೆ ಗೊತ್ತೇ ? ಅವರಿದನ್ನು ಕಂಡರೆ ಕಿತ್ತುಕೊಂಡು ಹೋಗುತ್ತಾರೆ."

ಡಾಕ್ಟರ್ ತನುಜ ವೃದ್ಧೆಯನ್ನು ಪರೀಕ್ಷಿಸಿದರು. ಕಿಬ್ಬೊಟ್ಟೆಯಲ್ಲಿ ಬಹಳ

ದೊಡ್ಡದಾದ ಒಂದು ಗಡ್ಡೆ ಇತ್ತು. ಬಹುಶಃ ಕ್ಯಾನ್ಸರೇ. ವೃದ್ಧೆಗೆ ಇದನ್ನು ಹೇಗೆ ಹೇಳುವುದು.

"ನಿಮ್ಮ ಮಕ್ಕಳನ್ನು ಕರೆದುಕೊಂಡು ಬನ್ನಿ. ಈ ಗಡ್ಡೆ ತೆಗೆದು ಹಾಕಬೇಕು."

"ಹಾಗಾದರೆ ಏನೂ ಬೇಡ. ನಾನು ಹೊರಟು ಹೋಗುತ್ತೇನೆ." ವೃದ್ಧೆ ಕೋಪದಿಂದ ಎದ್ದಳು.

"ಚಿನ್ನದ ಒಡವೆಗಳ ವಿಷಯ ನಾನು ಅವರಿಗೆಲ್ಲಾ ಹೇಳುವುದಿಲ್ಲ. ಆಯಿತೇ ?" ಡಾಕ್ಟರ್ ತನುಜ ಆಕೆಯನ್ನು ಸಮಾಧಾನ ಮಾಡಿದರು.

ವೃದ್ಧೆ ಎದ್ದು ತನ್ನ ಬಟ್ಟೆಗಳನ್ನು ಬಾಚಿ ತೆಗೆದುಕೊಂಡು ಅವಸರವಸರವಾಗಿ ಹೊರಕ್ಕೆ ಹೋದಳು. ಔಟ್ ಪೇಷಂಟ್‌ನಲ್ಲಿನ ಜನ ಸಮುದ್ರದಲ್ಲಿ ಎಲ್ಲೋ ಕರಗಿಹೋದಳು.

ಒಂದು ನಿಮಿಷ ಸಹ ವ್ಯರ್ಥ ಮಾಡದೆ ಡಾಕ್ಟರ್ ತನುಜ ಇನ್ನೊಬ್ಬ ರೋಗಿಯನ್ನು ಕರೆದರು.

ಸುಮಾರು ಮುವ್ವತ್ತು ವರ್ಷ ಪ್ರಾಯದ ಯುವಕನೊಬ್ಬನೂ ಇಪ್ಪತ್ತೈದು ವಯಸ್ಸು ತೋರುವ ಯುವತಿಯೊಬ್ಬಳೂ ಒಳಬಂದರು. ಒಳ್ಳೆಯ ಜೋಡಿ ಎನಿಸಿದ್ದ ಗಂಡಹೆಂಡಿರಾಗಿದ್ದವರು. ಒಬ್ಬರಿಗಾಗಿಯೇ ದೇವರು ಇನ್ನೊಬ್ಬರನ್ನು ಸೃಷ್ಟಿಸಿದಂತೆ ತೋರುತ್ತಿತ್ತು. ಹೆಂಡತಿ ಸಂತೋಷವಾಗಿಯೇ ಇದ್ದರೂ, ಗಂಡನ ಮುಖ ಅದೇಕೋ ವಿಕಾರವಾದ ಒಂದು ನಿರಾಶೆಯಲ್ಲಿ ಮುಳುಗಿದಂತಿತ್ತು.

"ಓ, ಇಬ್ಬರೂ ಬಂದಿರೇನು ?" ಪರಿಚಯವಿರುವ ಭಾವದಲ್ಲಿ ಡಾಕ್ಟರ್ ತನುಜ ಕೇಳಿದರು.

ಡಾಕ್ಟರಿಗೆ ನಮಸ್ಕಾರ ಹೇಳುತ್ತಾ ಅವರಿಬ್ಬರೂ ಕುಳಿತರು. ಬಹಳ ಬೆಲೆ ಬಾಳುವ ಸೀರೆಯನ್ನು ಆಕೆ ಉಟ್ಟಿದ್ದಳು. ಒಂದು ನಿಮಿಷ ಡಾಕ್ಟರ್ ತನುಜ ಆ ಸೀರೆಯನ್ನು ನೋಡಿದರು. ಅವರಿಂದ ತನ್ನ ನೋಟವನ್ನು ಕಿತ್ತು ತೆಗೆದು ಆಕೆ ಕೇಳಿದರು.

"ರಿಪೋರ್ಟ್ ಸಿಕ್ಕಿತೇ ?"

ಗಂಡನು ಒಂದು ಕವರನ್ನು ಮೇಜಿನ ಮೇಲಿಟ್ಟನು.

ರಿಪೋರ್ಟಿನ ಮೇಲೆ ಕಣ್ಣೋಡಿಸಿದ ಡಾಕ್ಟರ್‌ರ ಮುಖದಲ್ಲಿ ಮ್ಲಾನತೆಯು ಪಸರಿಸಿತು.

"ಮದುವೆಯಾಗಿ ಐದು ವರ್ಷಗಳಾದವು ಎಂದು ನೀವು ಹೇಳಿದಿರಲ್ಲವೇ ?"

"ಹೌದು" ಇಬ್ಬರೂ ಒಂದೇ ಧ್ವನಿಯಲ್ಲಿ ಹೇಳಿದರು.

"ಪರವಾಗಿಲ್ಲ, ನಾವು ಎಲ್ಲದಕ್ಕೂ ದಾರಿ ಹುಡುಕೋಣ. ಔಷಧಿಯಿಲ್ಲದ ಯಾವುದಾದರೂ ರೋಗವಿರುತ್ತೇನು ?" ಡಾಕ್ಟರ್‌ರ ಮಾತುಗಳನ್ನು ಅವರಿಬ್ಬರೂ ಶ್ರದ್ಧೆಯಿಂದ ಕೇಳುತ್ತಿದ್ದರು.

"ಇದಕ್ಕೆ ಔಷಧಿ ಇದೆಯೇ ಡಾಕ್ಟರ್ ?" ಗಂಡಸು ಆ ಪ್ರಶ್ನೆಯನ್ನು ಕೇಳಿದನು.

ಒಂದು ನಿಮಿಷ ಡಾಕ್ಟರ್ ತನುಜ ನಿಶ್ಶಬ್ದರಾದರು.

ಪ್ಯಾಂಟ್‌ನ ಜೇಬಿನಲ್ಲಿ ಕೈ ತುರುಕಿ ತನ್ನ ಕರ್ಚೀಫ್ ಹೊರಕ್ಕೆ ತೆಗೆದು ಹಣೆಯನ್ನು ಒರೆಸಿಕೊಳ್ಳುವ ತರಾತುರಿಯಲ್ಲಿದ್ದನು ಆ ಗಂಡಸು. ಹೆಂಗಸು ತನ್ನ ಸೀರೆಯ

ಸೆರಗನ್ನು ಇನ್ನೊಮ್ಮೆ ಸರಿಮಾಡಿ ಎದೆಯನ್ನು ಮುಚ್ಚಿಕೊಂಡಳು.

"ಡಾಕ್ಟರ್" ಗಂಡಸಿನ ಧ್ವನಿ ಹೊರಬಂತು" ಈ ಸತ್ಯವನ್ನು ತಿಳಿಯಲು ನನಗೆ ಐದು ವರ್ಷ ಬೇಕಾಯಿತು."

"ಒಂದೊಂದು ಸಲ ಅದಕ್ಕೆ ಒಂದು ಜೀವನಕಾಲ ಪೂರ್ತಿ ಬೇಕಾಗುತ್ತೆ" ತನುಜ ಹೇಳಿದರು.

"ಪರವಾಗಿಲ್ಲ ನಾವು ಒಂಟಿಯಾಗಿಯೇ ಇರುತ್ತೇವೆ. ಅದೇ ನಮ್ಮ ಹಣೆಯಲ್ಲಿ ಬರೆದಿದ್ದರೆ ಹಾಗೇ ಆಗಲಿ" ಗಂಡನು ಹೇಳಿದನು.

ಅವರಿಬ್ಬರೂ ಎದ್ದರು.

"ಗುಡ್ ಬೈ" ತನುಜ ಹೇಳಿದರು.

ಅನಂತರ ಬಂದಿದ್ದು ಮುವ್ವತ್ತು ವರ್ಷದ ಕಾಲೇಜ್ ಅಧ್ಯಾಪಕಿ ವಿವಾಹಿತಳು. ಆರು ಮಕ್ಕಳ ತಾಯಿ.

ಆಕೆಗೆ ಬೇಕಾದದ್ದು ಎಂ.ಟಿ.ಪಿ. ಮೆಡಿಕಲ್ ಟರ್ಮಿನೇಷನ್ ಆಫ್ ಪ್ರೆಗ್ನೆನ್ಸಿ. ಗರ್ಭಪಾತ ಮಾಡಬೇಕಂತೆ.

ತನುಜ ಸ್ವಲ್ಪ ಹೊತ್ತು ಏನೋ ಯೋಚಿಸಿದರು. ಆಕೆ ತಾವು ಹೀಗೆ ಇಂತಹ ಉದ್ಯೋಗದಲ್ಲೇಕೆ ಸೇರಿಕೊಂಡರು ಎಂಬುದರ ಬಗ್ಗೆ ಆಕೆ ಆಲೋಚಿಸಿದರೇ ? ಅಥವಾ ಈ ಉದ್ಯೋಗದಿಂದ ಪಾರಾಗಬೇಕೆಂದು ಯೋಚಿಸಿದರೇ ? ಈ ಗರ್ಭಕೋಶವೆನ್ನುವುದು ಪ್ರಕೃತಿಯು ಒಂದು ದೊಡ್ಡ ಮಿಥ್ಯೆಯೇ ? ಏನೇನು ಕ್ಲೇಶಗಳನ್ನು ಅದು ತಂದೊಡ್ಡುತ್ತದೆ ? ಒಂದು ಅಂಗೈನ ಗಾತ್ರದಷ್ಟೇ ಇರುವ ಗರ್ಭಕೋಶವು ಮಗು ಹುಟ್ಟುವ ವೇಳೆಗೆ ತಿಂಗಳು ತಿಂಗಳು ದೊಡ್ಡದಾಗುತ್ತ ಬಂದು ಎದೆಯವರೆಗೆ ಬರುತ್ತದೆ. ಮಗುವನ್ನು ಹೊರಕ್ಕೆ ತಳ್ಳಿ ಅದು ಕೆಲವೇ ದಿನಗಳಲ್ಲಿ ಪೂರ್ವ ಸ್ಥಿತಿಗೆ ಬಂದುಬಿಡುತ್ತದೆ. ಕೆಲವು ಸಲ ಗರ್ಭಕೋಶವು ಗುಣವಾಗದ ರೋಗದ ಬೆಳೆಯ ಭೂಮಿಯಾಗಿ ಬದಲಾಗುತ್ತದೆ. ಲೋಕದ ಮುಖಚ್ಛಾಯೆಗಳನ್ನೇ ಅದು ಬದಲಾಯಿಸುತ್ತದೆ.

ಏನೋ ನೆನೆಸಿಕೊಂಡಂತೆ ಡಾಕ್ಟರ್ ತನುಜ ಕೇಳಿದರು:

"ಇದನ್ನು ಯಾಕೆ ತೆಗೆದು ಹಾಕಬೇಕು."

"ಇನ್ನೊಂದು ಮಗುವನ್ನು ಹೆರಲು ನನಗೆ ಸಾಧ್ಯವಿಲ್ಲ ಡಾಕ್ಟರ್. ಹೆತ್ತರೂ ಸಾಕಿ ಸಲಹಿ ಬೆಳೆಸಲು ಸಾಧ್ಯವಿಲ್ಲ."

ಹತಾಶವಾದ ಮಾತೃತ್ವದ ಮಾತುಗಳು.

"ಸರಿ. ಸರಿ" ಅಸಿಸ್ಟೆಂಟ್‌ನನ್ನು ನೋಡುತ್ತಾ ಡಾಕ್ಟರ್ ತನುಜ ಹೇಳಿದರು: "ಅವರಿಗೊಂದು ಡೇಟ್ ಕೊಡಿ"

"ಇನ್ನೊಂದು ಮಾತು. ನೀವು ಬರುವಾಗ ನಿಮ್ಮ ಪತಿಯನ್ನು ಜೊತೆಯಲ್ಲಿ ಕರೆದುಕೊಂಡು ಬರಬೇಕು. ನಾನು ಆತನೊಂದಿಗೆ ಸ್ವಲ್ಪ ಮಾತಾಡಬೇಕು. ಮತ್ತೆ ಹೀಗಾಗಬಾರದಲ್ಲ."

ಬಿಷಪ್‌ರ ಒಂದು ಕಾಗದದೊಂದಿಗೆ ಅವಸರವಸರವಾಗಿ ಮೂರು ನಾಲ್ಕು ಜನ ಕೊಠಡಿಯನ್ನು ಪ್ರವೇಶಿಸಿದರು. ಅವರು ಮಾತನಾಡದಿದ್ದರೂ, ಅವರ ಮುಖಗಳು

ಏನೋ ಒಂದು ತೊಂದರೆಯನ್ನು ಕೂಗಿ ಹೇಳುವಂತಿತ್ತು.

ಡಾಕ್ಟರ್ ತನುಜ ಕಾಗದ ಒಡೆದು ಓದಿದರು.

"ಮಿಸೆಸ್ ಜಾನ್‌ಗೆ ಮೈ ಸರಿಯಿಲ್ಲ." ಬಿಷಪ್‌ನ ಸೋದರಿಯ ಮಗಳೇ ಮಿಸೆಸ್ ಜಾನ್. ಮದುವೆಯಾಗಿ ಹದಿನಾರು ವರ್ಷ ಕಳೆದ ನಂತರ ಆಕೆ ಗರ್ಭಿಣಿಯಾಗಿದ್ದರು. ಗರ್ಭವನ್ನು ಧರಿಸಿ ನಾಲ್ಕೈದು ತಿಂಗಳುಗಳಾದವು. ಈ ಸಂಗತಿಯು ಯಾವ ತೊಂದರೆಯೂ ಇಲ್ಲದೆ ಮುಂದೆ ಹೋಗುತ್ತಿತ್ತು. ಎರಡು ವಾರದ ಹಿಂದೆ ಕೊನೆಯ ಚೆಕ್‌ಅಪ್‌ಗೆ ಬಂದಾಗಲೂ ಸ್ವಲ್ಪ ರಕ್ತಸ್ರಾವವಾಗಿತ್ತಲ್ಲದೆ ಕಷ್ಟಪಾಡುಗಳ ಲಕ್ಷಣಗಳೇನೂ ಕಂಡುಬಂದಿರಲಿಲ್ಲ. ಹೇಳೇನು ಪ್ರಯೋಜನ ? ಗರ್ಭವಲ್ಲವೇ ? ಅದಕ್ಕೆ ಯಾವಾಗ ಎಲ್ಲಿ ಏನು ಸಂಭವಿಸುತ್ತದೆಯೆಂದು ಯಾರು ಹೇಳಬಲ್ಲರು ?

"ಮಿಸೆಸ್ ಜಾನ್ ಎಲ್ಲಿ ?"

"ಎಮರ್ಜೆನ್ಸಿ ರೂಮಿನಲ್ಲಿದ್ದಾರೆ."

"ಸರಿ ನಾವೀಗ ಬರುತ್ತೇನೆ." ಅಸಿಸ್ಟೆಂಟ್‌ನೊಂದಿಗೆ ಹೇಳುತ್ತಾ ರೆಸಿಡೆಂಟ್ ಜೊತೆ ತನುಜ ಎಮರ್ಜೆನ್ಸಿ ವಾರ್ಡ್‌ಗೆ ಹೋದರು.

ಮುವ್ವತ್ತಾರು ವಸಂತಗಳನ್ನು ಕಂಡಿತ್ತ ಮಿಸೆಸ್ ಜಾನ್ ಎಮರ್ಜೆನ್ಸಿ ವಾರ್ಡ್‌ನಲ್ಲಿ ಮಂಚದ ಮೇಲೆ ನೋವಿನಿಂದ ನರಳುತ್ತಾ ಮಲಗಿದ್ದರು. ಆಕೆಯ ಹೊಟ್ಟೆಯನ್ನು ನೋಡಿದರೆ ಹತ್ತು ತಿಂಗಳು ತುಂಬಿದಂತೆ ಕಾಣುತ್ತಿತ್ತು.

"ಮಿಸೆಸ್ ಜಾನ್ ಏನಾಯಿತು ?" ತನುಜ ಪ್ರೀತಿಪೂರ್ವಕವಾದ ಧ್ವನಿಯಲ್ಲಿ ಆಕೆಯ ತಲೆ ಸವರುತ್ತಾ ಕೇಳಿದರು.

"ಅಯ್ಯೋ ನನ್ನ ಕೈಲಾಗೋಲ್ಲ" ಮಿಸೆಸ್ ಜಾನ್‌ಗೆ ಅಷ್ಟು ಮಾತ್ರ ಹೇಳಲು ಸಾಧ್ಯವಾಯಿತು. ಆಕೆಯ ಕಣ್ಣುಗಳು ನೋವಿನಿಂದ ಸಂಕುಚಿತವಾಗುತ್ತಿದ್ದವು. ಆಕೆ ಕೈಗಳನ್ನು ಬೀಸುತ್ತಾ ಕಾಲುಗಳನ್ನು ಬಡಿಯುತ್ತಾ ಇದ್ದಳು.

ಡಾಕ್ಟರ್ ತನುಜ ಮತ್ತು ಆಕೆಯ ಸಹಾಯಕರು ಅತ್ಯಾವಶ್ಯಕವಾದ ಶುಶ್ರೂಷೆಗಳನ್ನಾರಂಭಿಸಿದರು.

ಹದಿನೈದು ನಿಮಿಷಗಳಾಗುವ ವೇಳೆಗೆ ಎಲ್ಲಾ ಪ್ರತೀಕ್ಷೆಗಳನ್ನೂ ತಲೆಕೆಳಗು ಮಾಡಿ ತಿಂಗಳು ತುಂಬದೆಯೇ ಮಿಸೆಸ್ ಜಾನ್ ಹೆತ್ತರು. ಹೆತ್ತಿದ್ದು ಮಗುವನ್ನಾಗಿರಲಿಲ್ಲ. ಅದೇನಾದರೂ ಮಗುವಾಗಿದ್ದಲ್ಲಿ ತಿಂಗಳುಗಳು ಕಳೆಯುವವರೆಗೂ ಇನ್‌ಕ್ಯುಬೇಟರಿನಲ್ಲಿಟ್ಟು ಅದನ್ನು ಕಾಪಾಡಬಹುದಿತ್ತು.

ಇಷ್ಟು ಕಾಲವೂ ಮಿಸೆಸ್ ಜಾನ್‌ಗೆ ಮೋಸವಾಗಿತ್ತು. ಆಕೆಯ ಗರ್ಭವು ಒಂದು ಸುಳ್ಳು ಗರ್ಭವಾಗಿತ್ತು.

ಮಿಸೆಸ್ ಜಾನ್‌ರ ಹೊಟ್ಟೆಯಿಂದ ಹೊರ ಬಂದದ್ದು ಹಾವಿನ ಮೊಟ್ಟೆಗಳ ಒಂದು ಗೂಡಾಗಿತ್ತು.

ಡಾಕ್ಟರ್ ತನುಜ ನಿರಾಶರಾಗಿ ಕ್ಷೀಣಗೊಂಡಿದ್ದರು. ಅವರಿಗೆ ಎಷ್ಟೋ ಸಲ ಸೋಲಾಗಿತ್ತಾದರೂ, ಮಿಸೆಸ್ ಜಾನ್‌ಗೆ ಇಂತಹ ಒಂದು ಸಂದರ್ಭ ಉಂಟಾಗುವುದೆಂದು ತನುಜ ನಿರೀಕ್ಷಿಸಿರಲಿಲ್ಲ.

ಬಹಳ ತಡವಾಗಿ ಡಾಕ್ಟರ್ ತನುಜ ಅಂದು ತಮ್ಮ ಕ್ವಾರ್ಟರ್ಸ್ ಸೇರಿದರು. ಆಕೆ

ಪೋರ್ಟಿಕೋವಿನಲ್ಲಿ ಕಾರು ನಿಲ್ಲಿಸಿದಾಗ ರೂಢಿಯಂತೆ ತಾಯಿ ವರಾಂಡದಲ್ಲಿ ಬಂದು ನಿಂತಿದ್ದರು.

ಡಾಕ್ಟರ್ ತನುಜ ತಮ್ಮ ಕಿಟ್ ಅನ್ನು ಸೋಫಾದ ಮೇಲಿಟ್ಟು ಬೇಸರದಿಂದ ಸೋಫಾದ ಮೇಲೆ ಮೈಚೆಲ್ಲಿದರು. ಆ ವೇಳೆಗೆ ತಾಯಿ ಕಾಫಿಯೊಂದಿಗೆ ಬಂದರು.

ತಾಯಿ ಮಕ್ಕಳು ಅಭಿಮುಖರಾಗಿ ಕುಳಿತರು.

ಕಾಫಿ ಕುಡಿದ ನಂತರ ಡಾಕ್ಟರ್ ತನುಜರಿಗೆ ಒಂದು ನವೋಲ್ಲಾಸ ತೋರಿದಂತಾಯಿತು.

ಆ ಮನೆಯಲ್ಲಿ ಅವರಿಬ್ಬರು ಮಾತ್ರವೇ ಇದ್ದದ್ದು. ತಾಯಿಗೆ ಮಗಳು, ಮಗಳಿಗೆ ತಾಯಿ ಮಾತ್ರ ಇದ್ದರು. ತಂದೆ ಬಹಳ ಹಿಂದೆಯೇ ಅವರನ್ನು ಬಿಟ್ಟು ಹೋಗಿಬಿಟ್ಟಿದ್ದರು.

"ಮಗಳೇ. ಅವರೆಲ್ಲಾ ನಾಳೆ ಬೆಳಿಗ್ಗೆ ಬರುತ್ತಾರಂತೆ" ತಾಯಿ ಸಂತೋಷದೊಂದಿಗೆ ಹೇಳಿದರು.

"ಓಹ್, ಕೊನೆಗೆ ಅವರು ಹಾಗೆ ತೀರ್ಮಾನಿಸಿದರು ಅಲ್ಲವೇ ?"

"ನಿನ್ನ ಅದೃಷ್ಟ ಮಗಳೇ ?" ತಾಯಿ ಹೇಳಿದರು.

ಡಾಕ್ಟರ್ ತನುಜರು ಮದುವೆಯಾಗುವುದನ್ನು ನೋಡಲು ಆಕೆಯ ತಾಯಿ ಹಲವಾರು ವರ್ಷಗಳಿಂದ ಕಾದಿದ್ದರು. ಹೆಣ್ಣಾಗಿ ಹುಟ್ಟಿದನಂತರ ಒಬ್ಬ ಪುರುಷನನ್ನು ಮದುವೆಯಾಗಿ ಅವನೊಂದಿಗೆ ಸಹಬಾಳ್ವೆ ನಡೆಸಿದರೇನೇ ಅದು ಸಫಲವಾದ ಬಾಳೆಂದು ತಾಯಿಯ ನಂಬಿಕೆಯಿತ್ತು. ಸೇವೆಯೇ ಆದರೂ, ಶುಶ್ರೂಷೆಯೇ ಆದರೂ ಅದರಲ್ಲೇ ಬಹಳಷ್ಟು ಸಮಯ ಕಳೆದುಹೋಗುವಾಗ ಮನಸ್ಸಿಗೆ ಬಲು ಬೇಸರವಾಗುತ್ತದೆ. ಕುಟುಂಬವೇ ಒಬ್ಬ ಸ್ತ್ರೀಯ ಬಾಳಿನಲ್ಲಿ ಬಹುವಾಗಿ ಪ್ರಕಾಶವನ್ನುಂಟು ಮಾಡುವ ಬೆಳಕು. ಹೀಗೆಂದು ತಾಯಿ ಅನೇಕ ಬಾರಿ ತನುಜರಿಗೆ ಹೇಳಿರುವುದುಂಟು.

ತಾಯಿಯ ಮುಖದಲ್ಲಿ ಬಾಳಿನ ಸಾಕ್ಷಾತ್ಕಾರದ ಸಂತೃಪ್ತಿ ಸ್ಪಷ್ಟವಾಗಿತ್ತು.

ತನುಜ ಊಟ ಮಾಡಿದ ನಂತರ ಮಹಡಿಯ ಮೇಲಿದ್ದ ತಮ್ಮ ಕೋಣೆಯನ್ನು ಪ್ರವೇಶಿಸಿ ಬಾಗಿಲು ಹಾಕಿಕೊಂಡರು. ಆಕೆ ಸ್ಟೀರಿಯೋ ಆನ್ ಮಾಡಿದರು. ಮೆಹದಿ ಹಸನ್‌ರ ಗಜಲ್‌ಗಳು ಕೋಣೆಯಲ್ಲಿ ಧ್ವನಿಸತೊಡಗಿದವು.

ಏಕ್ ಉಮರ್ ಭೀ ಕಮ್ ಹೈ
ಹಾಲೇ ದಿನ್ ಸುನಾನೆ ಕೋ
ಏಕ್ ಯಾದ್ ಕಾಫೀ ಹೈ
ಉಮರ್ ಭರ್ ರುಲಾನೇ ಕೋ

ಕರ್ಟನ್ ಅನ್ನು ಎಳೆದು ಪಕ್ಕಕ್ಕೆ ಸರಿಸಿ ಕಿಟಕಿಯ ಗಾಜಿನ ಮೂಲಕ ಡಾಕ್ಟರ್ ತನುಜ ಹೊರಕ್ಕೆ ನೋಡಿದರು.

ಒಳ್ಳೆಯ ಬೆಳದಿಂಗಳ ರಾತ್ರಿ. ಆಕಾಶದಲ್ಲಿ ನಕ್ಷತ್ರಗಳು ಪೂರ್ಣವಾಗಿ ಉದಯಿಸಿದ್ದುವು. ಆಸ್ಪತ್ರೆ ನಗರವು ಬೆಳದಿಂಗಳಲ್ಲಿ ಮಿಂದು ನದಿಯ ಸ್ನಾನವನ್ನು ಮಾಡಿದಂತಿತ್ತು. ಒಬ್ಬ ಏಕಾಂತ ಪಥಿಕನಂತೆ ರಸ್ತೆಯು ಗ್ರಾಮದತ್ತ ಮೆಲ್ಲಮೆಲ್ಲನೆ

ಹರಿದಾಡಿ ಹೋಗುತ್ತಿರುವಂತೆ ತೋರಿತು. ಗ್ರಾಮದ ಎಲ್ಲೆಯಲ್ಲಿ ಎಲ್ಲೋ ಒಂದು ಗುಂಡು ಹಾರಿಸಿದ ಶಬ್ದ ಮೊಳಗಿತ್ತು. ಬಾಣ ಬಿರುಸುಗಳು ಆಕಾಶದತ್ತ ಹಿಸ್ ಎಂದು ಹಾಯ್ದು ಹೋದವು.

ಎಲ್ಲೋ ಸಂತೆ ನಡೆಯುತ್ತಿವೆ. ಆಕಾಶದಲ್ಲಿ ನಕ್ಷತ್ರಗಳು, ಭೂಮಿಯಲ್ಲಿ ಉತ್ಸವ. ಎಲ್ಲರಿಗೂ ಏಕಾಂತ.

ವೃಕ್ಷಗಳ ಎಲೆಗಳ ಹರಡುವಿಕೆಯ ಮಧ್ಯೆ ಚಂದ್ರನನ್ನು ಕಂಡಾಗ ಡಾಕ್ಟರ್‌ಗೆ ತಮ್ಮ ಕಣ್ಣಿಂದ ಒಂದು ಮರೆಯು ಸರಿದಂತೆ ತೋರಿತು. ಪ್ರಪಂಚವೆಲ್ಲವೂ ಒಂದು ತೇಜಸ್ಸಿನಲ್ಲಿ ಮಿಂದು ಹೋಗುತ್ತಿರುವಂತೆ ಆಕೆಗನ್ನಿಸಿತು.

ಡಾಕ್ಟರ್ ತನುಜ ಕೆಳಕ್ಕಿಳಿದು ಹೋದಾಗ ತಾಯಿ ತಮ್ಮ ಕೋಣೆಯಲ್ಲಿ ಭಕ್ತಿಗೀತೆಗಳನ್ನು ಓದುತ್ತಾ ಮಲಗಿದ್ದರು.

"ಏನು ಮಗಳೇ, ಈ ಹೊತ್ತಿನಲ್ಲಿ?" ತಾಯಿ ಪುಸ್ತಕವನ್ನು ಮುಚ್ಚಿಟ್ಟು ಕೇಳಿದರು.

"ಅಮ್ಮ ಅವರನ್ನೆಲ್ಲಾ ಬರಬೇಡವೆಂದು ಹೇಳು."

"ಅರೆ, ಏನಾಯಿತು?"

"ನನಗಿನ್ನು ಮದುವೆ ಬೇಡ."

ಡಾಕ್ಟರ್ ತನುಜ ಮೆಲ್ಲಮೆಲ್ಲನೆ ಮಹಡಿ ಹತ್ತಿ ಹೋದರು. ಆಕೆಯ ತುಟಿಗಳಲ್ಲಿ ಮೆಹದಿ ಹಸನ್ ಗೋಳಾಡುತ್ತಿದ್ದರು.

ಏಕ್ ಯಾದ್ ಕಾಫೀ ಹೈ
ಉಮರ್ ಭರ್ ರುಲಾನೆ ಕೋ....

*Vasicular More-ನ್ನು ಹೆರುವುದು ಎಂದರೆ ಹಾವಿನ ಮೊಟ್ಟೆಗಳ ಗೂಡು ಅಥವಾ ದ್ರಾಕ್ಷಿ ಗೊಂಚಲನ್ನು ಹೆರುವುದು ಎಂದು ಹೇಳುತ್ತಾರೆ. ಇದಕ್ಕೆ ದ್ರಾಕ್ಷಿ ಗರ್ಭ ಎಂದೂ ಹೇಳುವುದುಂಟು.

# ಹದಿನಾರು

ಆರು ರೋಗಿಗಳನ್ನು ಆರು ಮಂಚಗಳಲ್ಲಿ ಮಲಗಿಸಿ ಹೊದಿಕೆ ಹೊದಿಸಲಾಗಿತ್ತು. ಮೂಗು ಬಾಯಿ ಬಿಟ್ಟರೆ ದೇಹದ ಬೇರೆ ಯಾವ ಭಾಗವೂ ಹೊರಕ್ಕೆ ಕಾಣುತ್ತಿರಲಿಲ್ಲ. ಅವರು ಬೇರೆ ಬೇರೆ ರೋಗಗಳಿದ್ದ ಆರು ರೋಗಿಗಳು. ಯಾವುದೋ ನಾಟಕದಲ್ಲಿನ ನಿಶ್ಶಬ್ದರಾಗಿ ಮಲಗಿರುವ ಕಥಾಪಾತ್ರಗಳಂತೆ ಅವರು ನಿಶ್ಚಲರಾಗಿ ಮಲಗಿದ್ದರು.

ಡಾಕ್ಟರ್ ಸಂತುಕುಮಾರ್ ಮಂಚಗಳನ್ನು ಸುತ್ತುಹಾಕುತ್ತಾ ನಡೆದನು. ಮಂಚದಲ್ಲಿ ಹೊದಿಸಿ ಮಲಗಿಸಿದ್ದ ರೋಗಿಗಳ ಶರೀರಗಳನ್ನು ಆತ ಒಂದು ಗಿಡುಗನಂತೆ ನೋಡಿದನು.

ವಿದ್ಯಾರ್ಥಿಗಳು ನಿಶ್ಶಬ್ದರಾಗಿ ನಿಂತಿದ್ದರು. ಏನು ನಡೆಯಲಿದೆಯೆಂದು ಯಾರಿಗೂ ತಿಳಿಯದು. ಡಾಕ್ಟರ್ ಸಂತುಕುಮಾರ್ ಊಹೆಗೆ ಅತೀತವಾದ ವಿಷಯಗಳನ್ನೇ ಯಾವಾಗಲೂ ಮಾಡುವುದು.

ದೇವದಾಸ್‌ನನ್ನು ನೋಡುತ್ತಾ ಆತನು ಕೇಳಿದನು. "ಇವರ ಬಗ್ಗೆ ಏನಾದರೂ ಹೇಳಲು ಸಾಧ್ಯವೇ ?"

ಎಂತಹ ಪ್ರಶ್ನೆ ಅದು ? ಡಾಕ್ಟರ್ ಸಂತುಕುಮಾರ್‌ನ ಉದ್ದೇಶವಾದರೂ ಏನು ? ಆತನ ಈ ಆಟಗಳು ವಿದ್ಯಾರ್ಥಿಗಳನ್ನು ಎಷ್ಟೋ ಬಾರಿ ಕಷ್ಟದಲ್ಲಿ ನೂಕಿವೆ.

ಏನು ಹೇಳಲೂ ಸಾಧ್ಯವಾಗದೆ ಪರದಾಡುತ್ತಾ ನಿಂತಿದ್ದ ದೇವದಾಸನನ್ನು ಪ್ರೋತ್ಸಾಹಿಸುತ್ತಾ ಡಾಕ್ಟರ್ ಸಂತಕುಮಾರ್ ಹೇಳಿದನು:

"ಏನಾದರೂ ಹೇಳು. ಈ ಗಾಢ ಮೌನಕ್ಕಿಂತ ಏನಾದರೂ ಹೇಳುವುದು ಒಳ್ಳೆಯದು."

"ಇವರು ಆರು ರೋಗಿಗಳು" ದೇವದಾಸ್ ಹೇಳಿದನು.

ಸಂತಕುಮಾರ್‌ನ ಮುಖಭಾವವನ್ನು ನೋಡಿದರೆ ಆತನು ಬೇರೇನೋ ಉತ್ತರವನ್ನೇ ನಿರೀಕ್ಷಿಸಿದ್ದನೆಂದು ಕೂಗಿ ಹೇಳುತ್ತಿತ್ತು.

"ನೆಕ್ಸ್ಟ್"

"ಆರು ಮನುಷ್ಯರು."

"ಎಕ್ಸಾಕ್ಟಲೀ" ಡಾಕ್ಟರ್ ಸಂತುಕುಮಾರ್ ಆವೇಶಭರಿತನಾಗಿ ತನ್ನನ್ನೇ ಮರೆತವನಂತೆ ಚಕಿತನಾದನು. ಆತನ ಭಾರೀ ಶರೀರವು ಆತನ ಇಷ್ಟಕ್ಕೆ ಸರಿಯಾಗಿ ಒಮ್ಮೆಯೂ ಬಗ್ಗುವುದಿಲ್ಲ. ಆದರೂ ಇಳಿದು ಬಿದ್ದಿರುವ ಆತನ ಹೊಟ್ಟೆಯು ಮೂರು ನಾಲ್ಕು ಸಲ ಅಲ್ಲಾಡಿದಾಗ ಆತನು ಅದನ್ನು ತನ್ನ ಕೈನಿಂದ ಹಿಡಿದು ನಿಲ್ಲಿಸಿದನು.

"ಲಕ್ಷ್ಮಿ ಹೇಳಿದ್ದೇ ಸರಿ. ನಾವು ಇಲ್ಲಿ ಪರೀಕ್ಷಿಸುವವರೆಗೂ ಇವರು ಕೇವಲ

ಮನುಷ್ಯರು.'' ಡಾಕ್ಟರ್ ಸಂತುಕುಮಾರ್ ಸಂತೋಷದಿಂದ ಹೇಳಿದನು. "ಆದರೆ ನಾನಿಲ್ಲಿ ಕೆಲವು ಕಾರ್ಯಗಳನ್ನು ತೋರಿಸುತ್ತೇನೆ. ಇಲ್ಲಿ ಮಲಗಿರುವವರನ್ನು ನಾನು ನೋಡೇ ಇಲ್ಲ. ನನ್ನ ಹೌಸ್ ಸರ್ಜನ್ ಈ ಆರು ಜನರನ್ನು ಇಲ್ಲಿ ಹೊದಿಸಿ ಮುಚ್ಚಿ ಮಲಗಿಸಿದ್ದಾನೆ. ಇವರ ನಾಲಿಗೆ ಮಾತ್ರ ನೋಡಿ ಇವರ ರೋಗವನ್ನು ನಾನು ಕಂಡು ಹಿಡಿಯಬೇಕು. ಮನುಷ್ಯರ ನಾಲಿಗೆಗೆ ಬಗೆಬಗೆಯ ಶಕ್ತಿಯಿದೆ. ಅಗಿಯಲೂ, ನುಂಗಲೂ, ರುಚಿ ಕಂಡು ಹಿಡಿಯಲೂ, ಕಚಗುಳಿ ಇಡಲೂ, ಭಾಷಣ ಮಾಡಲೂ, ಮಾತಾಡಿ ಮಾತಾಡಿ ಮನುಷ್ಯರಿಗೆ ಬೇಸರವನ್ನುಂಟು ಮಾಡಲು ಮಾತ್ರ ಇರುವ ಒಂದು ಉಪಕರಣವಲ್ಲ ನಾಲಗೆಯೆನ್ನುವುದು. ಶರೀರದ ಪ್ರವೃತ್ತಿಯನ್ನೆಲ್ಲಾ ಪ್ರತಿಬಿಂಬಿಸುವ ಕನ್ನಡಿ ಅದು. ಒಬ್ಬೊಬ್ಬ ರೋಗಿಯ ನಾಲಗೆಯಲ್ಲಿ ಅವನ ರೋಗ ಲಕ್ಷಣಗಳು ಕಲ್ಲಿನಲ್ಲಿ ಕೆತ್ತಿದಂತೆ ದಾಖಲಾಗಿರುತ್ತವೆ. ಸಪ್ತಸ್ವರಗಳಿಂದ ನಮಗೆ ಬೇಕಾದ ಸ್ವರವನ್ನು ಬೇರ್ಪಡಿಸಿಕೊಳ್ಳುವಂತೆ, ನಮ್ಮ ಕಣ್ಣಿನಿಂದ ನಾಲಗೆಯನ್ನು ನೋಡಿ ಬೇಕಾದ ವಿಷಯಗಳನ್ನು ತಿಳಿದುಕೊಂಡು ರೋಗನಿದಾನ ಮಾಡಲು ಸಾಧ್ಯ.

ಡಾಕ್ಟರ್ ಸಂತುಕುಮಾರ್ ಆತನ ಕೆಲಸವನ್ನು ಆರಂಭಿಸಿದನು. ಕೊಠಡಿಯಲ್ಲಿನ ದೀಪಗಳನ್ನೆಲ್ಲಾ ಆತನು ಆರಿಸಿದನು. ಎಲ್ಲಾ ಕಿಟಕಿಗಳನ್ನು ತೆರೆದಿಟ್ಟನು. ಅನಂತರ ಹಗಲಿನ ಬೆಳಕಿನಲ್ಲಿ ಕೈಗಳನ್ನು ಹಿಂದೆ ಕಟ್ಟಿಕೊಂಡು ಬಗ್ಗಿ ಆತನು ಆರು ನಾಲಿಗೆಗಳನ್ನೂ ಬಹು ಸೂಕ್ಷ್ಮವಾಗಿ ಪರಿಶೋಧಿಸಿದನು. ಐದೂ ಜನರ ರೋಗವು ಏನೆಂದು ಆತನು ಹೇಳಿದನು. ಆರನೆಯ ರೋಗಿಯ ಬಗ್ಗೆ ಏನೋ ಯೋಚಿಸಿದ ನಂತರ ಏನನ್ನೂ ಹೇಳದೆ ನಿಂತನು.

ಹೌಸ್ ಸರ್ಜನ್ ಡಯಾಗ್ನಸಿಸ್ ಬರೆದಿಟ್ಟ ಚಾರ್ಟನ್ನು ಆತನ ಕೈಯಲ್ಲಿ ಕೊಟ್ಟನು. ಆತನು ನಿರ್ಣಯಿಸಿ ಐದು ರೋಗಗಳಲ್ಲಿ ನಾಲ್ಕು ಸರಿಯಾಗಿದ್ದವು. ಆತ ಮೌನ ವಹಿಸಿದ ಆರನೆಯವನ ವಿಷಯದಲ್ಲಿಯಾದರೆ ಆ ರೋಗಿಗೆ ಯಾವ ರೋಗವೂ ಇಲ್ಲವಾಗಿತ್ತು.

ಒಬ್ಬ ಐಂದ್ರಜಾಲಿಕನ ಸಂತೃಪ್ತಿಯಿಂದ ಆತನು ತನ್ನ ಕುರ್ಚಿಯಲ್ಲಿ ಕುಳಿತನು. ಮೇಜಿನ ಮೇಲಿದ್ದ ಜಾರ್‌ನಿಂದ ಆತನು ನೀರನ್ನು ಲೋಟದಲ್ಲಿ ಸುರಿದುಕೊಂಡು ಗಟಗಟನೆ ಕುಡಿದನು.

ಆತನ ಡೊಳ್ಳು ಹೊಟ್ಟೆಯು ಇನ್ನೂ ಸ್ವಲ್ಪ ಊದಿಕೊಂಡು ಅದು ಮೇಜಿನ ಕೆಳಗೆ ಉರುಳಿ ಹೋಗುತ್ತಿರುವಂತೆ ತೋರಿತು.

"ಸರಿ ಸರಿ ಕೂಗಲಾರಂಭಿಸು."

ಡಾಕ್ಟರ್ ಸಂತುಕುಮಾರ್‌ನ ಔಟ್ ಪೇಷಂಟ್ ಕೆಲಸ ಪ್ರಾರಂಭವಾಗುತ್ತಿತ್ತು.

ಮೊದಲು ಬಂದಿದ್ದು ಹದಿನೈದು ವಯಸ್ಸಿನ ಹುಡುಗಿಯಾಗಿತ್ತು. ನೋಡಲು ಐದು ವಯಸ್ಸೆಂದು ಸಹ ಹೇಳಲಾಗುತ್ತಿರಲಿಲ್ಲ. ಅವಳು ಕುಳ್ಳನೆಯ ಶರೀರ, ಒಣಗಿ ಸುಕ್ಕಾದ ಚರ್ಮ, ಬಿಳಿಚಿಕೊಂಡ್ದ ಮುಖದವಳಾಗಿದ್ದಳು. ನಿರ್ಜೀವವಾದ ಕಣ್ಣುಗಳು ಶೂನ್ಯದಲ್ಲಿ ನೆಟ್ಟಿದ್ದವು.

"ಇವಳನ್ನು ಯಾಕೆ ಇಲ್ಲಿಗೆ ಕರೆದುಕೊಂಡು ಬಂದಿರಿ ?'' ಕೋಪದಿಂದ ಸಂತುಕುಮಾರ್ ಕೇಳಿದನು.

"ಯಾವ ಬಗೆಯ ಗುಣವೂ ಕಾಣುತ್ತಿಲ್ಲ ಡಾಕ್ಟರ್."

"ಗುಣವಾಗುತ್ತೆಂದು ನಾನು ಹೇಳಲಿಲ್ಲವಲ್ಲಾ. ಇಲ್ಲಿ ಈ ಆಸ್ಪತ್ರೆಯಲ್ಲಿ ರೋಗಿಯನ್ನು ಬಿಟ್ಟುಬಿಡಿ ಎಂದು ನಾನು ನಿಮಗೆ ಹೇಳಿದೆ. ಅದನ್ನು ನೀವು ಕೇಳಲಿಲ್ಲ."

ಸಂತುಕುಮಾರ್‌ನ ಧ್ವನಿ ಏರುತ್ತಿತ್ತು.

"ಮನೆಯಲ್ಲಿ ನಾನೊಬ್ಬನೇ ಇರುವುದು. ಇವಳ ತಾಯಿ ತೀರಿಕೊಂಡಳು. ಇವಳಿಗಿಂತ ಚಿಕ್ಕ ನಾಲ್ಕು ಮಕ್ಕಳಿದ್ದಾರೆ ನನಗೆ. ಅವರನ್ನು ನೋಡಿಕೊಳ್ಳಲು ಮನೆಯಲ್ಲಿ ಯಾರೂ ಇಲ್ಲ."

"ಸ್ವಾಮೀ, ಯಜಮಾನರೇ ಇಲ್ಲಿ ಒಂದು ಬೆಡ್ ದೊರಕಲು ರೋಗಿಗಳು ಎಷ್ಟು ಪರದಾಡುತ್ತಾರೆ ಗೊತ್ತೇ ? ಹಾಗಿರಬೇಕಾದರೆ ನಾವು ಕೊಡುತ್ತಿರುವ ಬೆಡ್ ನಿಮಗೆ ಬೇಕಾಗಿಲ್ಲ. ನಿಮ್ಮ ವಿಷಯ ಬಹಳ ಕಷ್ಟಕ್ಕಿಟ್ಟುಕೊಂಡಿತಲ್ಲ ?" ಹೌಸ್ ಸರ್ಜನ್ ಅನ್ನು ನೋಡುತ್ತಾ ಡಾಕ್ಟರ್ ಸಂತುಕುಮಾರ್ ಹೇಳಿದನು. ಯಾರೊಂದಿಗೆ ಏನು ಹೇಳುವಾಗಲೂ ತನ್ನ ಹೌಸ್ ಸರ್ಜನ್‌ನನ್ನು ನೋಡುತ್ತಲೇ ಡಾಕ್ಟರ್ ಸಂತುಕುಮಾರ್ ಮಾತನಾಡುತ್ತಿದ್ದನು.

"ಸ್ವಾಮಿ, ಈ ಸಲ ನಾನು ಅವಳನ್ನು ಇಲ್ಲಿ ಬಿಡಲೇಬಂದಿದ್ದೇನೆ."

"ಓ ಬಹಳ ದೊಡ್ಡ ಕೆಲಸ ಮಾಡಲು ಬಂದಿದ್ದೀರಿ ಬಿಡಿ." ಡಾಕ್ಟರ್ ಸಂತುಕುಮಾರ್ ತಿರುಗಿ, ರೋಗಿಯ ನಾಡಿ ಹಿಡಿದು ನೋಡುತ್ತಾ ಹೇಳಿದನು. "ಇವಳನ್ನು ಒಂದು ಚಾಪೆಯಲ್ಲಿ ಸುತ್ತಿಕೊಂಡು ಮನೆಗೆ ಕರೆದುಕೊಂಡು ಹೋಗಿ."

"ಅಲ್ಲಿ ಚಿಕಿತ್ಸೆ ಮಾಡಿದರೆ ಸಾಕೆ ಡಾಕ್ಟರ್ ?"

ಡೊಳ್ಳು ಹೊಟ್ಟೆ ಹಿಡಿದುಕೊಂಡು ಡಾಕ್ಟರ್ ಸಂತುಕುಮಾರ್ ಎದ್ದನು. "ಚಿಕಿತ್ಸೆ ಬೇಡ ಗೊತ್ತಾಯಿತೇ, ಯಜಮಾನರೇ, ಇವಳ ತಾಯಿಯನ್ನು ಹೂತಿಟ್ಟ ಗುಳಿಯ ಪಕ್ಕದಲ್ಲೇ ಮತ್ತೊಂದು ಗುಳಿಯನ್ನು ತೋಡಿ ಹೋಗಿ, ಹೋಗಿ, ನನ್ನ ಮುಂದೆ ನಿಲ್ಲಬೇಡಿ. ಚಾಪೆಯಲ್ಲಿ ಸುತ್ತಿ ತೆಗೆದುಕೊಂಡು ಹೋಗಿ."

ರೋಗಿಯನ್ನು ಎದೆಗವಚಿಕೊಂಡು ಅವನು ಅಳಲು ಪ್ರಾರಂಭಿಸಿದನು. ನಲ್ವತ್ತು ವರ್ಷ ಪ್ರಾಯದ ಆ ಮನುಷ್ಯನ ಕಣ್ಣ ನೀರು ಸಹ ಬತ್ತಿಹೋಗತೊಡಗಿತ್ತು.

"ಅಯ್ಯೋ ಅಳಲು ಪ್ರಾರಂಭಿಸಿಯೋ ಬಿಟ್ಟರಲ್ಲ", ಡಾಕ್ಟರ್ ಸಂತುಕುಮಾರ್ ಹೌಸ್ ಸರ್ಜನ್‌ನನ್ನು ನೋಡುತ್ತಾ ಹೇಳಿದನು. "ಸರಿ, ಸರಿ, ವಾರ್ಡ್‌ಗೆ ಬದಲಾಯಿಸಿ. ಹೈ ಪ್ರೋಟೀನ್ ಡಯಟ್ ಕೊಡಬೇಕು. ಶ್ವಾಸಕೋಶಗಳು ಎರಡೂ ಹಾಳಾಗಿ ಹೋಗಿವೆ. ಆದರೂ ಒಂದು ಕೈ ನೋಡೋಣ."

ಕಛೇರಿಯಲ್ಲಿ ಕೆಲಸ ಮಾಡುವ ನಲವತ್ತು ವಯಸ್ಸಿನ ಒಬ್ಬ ಪ್ಯೂನ್ ಬಂದನು. ರೋಗಿಯು ಕುಳಿತುಕೊಳ್ಳುವ ಸ್ಟೂಲ್ ಮೇಲೆ ಕುಳಿತನು.

"ಏನು ಕಾಯಿಲೆ ? ಬಹಳ ವಿಸ್ತಾರವಾಗಿ ಹೇಳಬೇಡ. ಒಂದೇ ಮಾತಿನಲ್ಲಿ ಹೇಳು."

"ಸುಸ್ತು.... ಬಹಳ ಸುಸ್ತು" ಇಷ್ಟು ಹೇಳಿ ಅವನು ತುಟಿಯನ್ನು ಮುಚ್ಚಿಕೊಂಡನು.

"ಯಾಕೀ ಬಹಳ ? ಸುಸ್ತು ಎಂದು ಮಾತ್ರ ಹೇಳಿದರೆ ಸಾಲದೇ ?" ಡಾಕ್ಟರ್ ಸಂತುಕುಮಾರ್ ರೋಗಿಯ ಕಣ್ಣಿನ ರೆಪ್ಪೆಗಳನ್ನು ಅರಳಿಸಿ, ನಾಲಿಗೆ ನೋಡಿ, ನಾಡಿ ಹಿಡಿದು ನೋಡಿ, ಅನಂತರ ಕೇಳಿದನು.

"ಹಾಲು ಕುಡಿಯುತ್ತೀಯಾ ?"

"ಇಲ್ಲ"

"ಮೊಟ್ಟೆ ತಿನ್ನುತ್ತೀಯಾ ?"

"ಇಲ್ಲ"

"ಮಾಂಸ, ಮೀನು ತಿನ್ನುತ್ತೀಯಾ ?"

"ಇಲ್ಲ"

ಸಂತುಕುಮಾರ್‌ನ ಮುಖಭಾವ ಬದಲಾಯಿತು. ಕೋಪವೂ ರೋಷವೂ ಕಲೆತ ಧ್ವನಿಯಲ್ಲಿ ಆತ ಕೇಳಿದನು.

"ಹೋಗಲಿ, ಹುಲ್ಲಾದರೂ ತಿನ್ನುತ್ತೀಯಾ ?"

ರೋಗಿ ಪಿಳಪಿಳನೆ ಕಣ್ಣುಬಿಡುತ್ತಾ ಹೇಳಿದನು.

"ಸರ್, ಒಂದರ್ಥದಲ್ಲಿ ನಮಗೆ ಹುಲ್ಲು ತಿನ್ನಲೂ ಸಹ ದಾರಿಯಿಲ್ಲ. ದೈವಭಕ್ತನಾದ, ಲಂಚ ತೆಗೆದುಕೊಳ್ಳದ ಒಬ್ಬ ಪ್ಯೂನ್ ಸಾರ್, ನಾನು. ತಂದೆತಾಯಿಯರನ್ನೂ ಹೆಂಡತಿ ಮಕ್ಕಳನ್ನು ಸಾಕಲು ನನಗೆ ಬರುವ ಸಂಬಳ ಸಾಕಾಗುವುದಿಲ್ಲ."

ರೋಗಿಯ ಭುಜದ ಮೇಲೆ ತಟ್ಟುತ್ತಾ ಸಂತುಕುಮಾರ್ ಅವನನ್ನು ಎಬ್ಬಿಸಿ ಮಂಚದ ಮೇಲೆ ಮಲಗಿಸಿದನು. ಅನಂತರ ಬಲು ಪ್ರೀತಿಯಿಂದ, ದಯೆಯಿಂದ ಆತನನ್ನು ಪರೀಕ್ಷಿಸತೊಡಗಿದನು. ಬೀರುವನ್ನು ತೆಗೆದು ಬೆಲೆಬಾಳುವ ಟಾನಿಕ್‌ಗಳನ್ನು ಬಿಸ್ಕಿಟ್‌ಗಳನ್ನು ಆತನು ಅವನಿಗೆ ಕೊಟ್ಟನು.

"ಗೆಳೆಯಾ, ನಿನಗೆ ಯಾವ ರೋಗವೂ ಇಲ್ಲ. ಸರಿಯಾದ ಆಹಾರದ ಕೊರತೆಯೇ ನಿನ್ನ ಈ ಸುಸ್ತಿಗೆ ಕಾರಣ. ನಿತ್ಯ ಕಡಲೆಕಾಳು, ಹೆಸರುಕಾಳನ್ನು ನೆನೆಹಾಕಿ ತಿನ್ನು. ಸಮಯ ಸಿಕ್ಕಾಗೆಲ್ಲಾ ಮೀನು ಮಾಂಸಗಳನ್ನು ಸೇವಿಸು. ಆಗಾಗ ಬಂದರೆ ಇಂತಹ ಔಷಧಿಗಳನ್ನು ಕೊಡುತ್ತೇನೆ."

ರೋಗಿಯ ಕಣ್ಣುಗಳಲ್ಲಿ ನಂಬಿಕೆಯ ಕಿರಣಗಳು ಪ್ರತಿಬಿಂಬಿಸಿದವು.

"ಸರಿ ಹೋಗು" ಸಂತುಕುಮಾರ್ ಹೇಳಿದನು. "ಇನ್ನೊಂದು ಮಾತು ಹೇಳುತ್ತೇನೆ ಕೇಳು. ಹುಲ್ಲನ್ನು ಮಾತ್ರ ತಿಂದು ನಡೆದಾಡಿದರೆ ನೀನು ಸತ್ತೇ ಹೋಗುತ್ತಿ. ಆಮೇಲೆ ಇನ್ನೊಂದು ವಿಷಯ, ಎಲ್ಲಾ ಫೈಲುಗಳನ್ನು ಬೇಗ ಬೇಗ ತಲುಪಿಸಬೇಕು. ಗೊತ್ತಾಯಿತೇ ?"

ಡಾಕ್ಟರ್ ಸಂತುಕುಮಾರನಿಗಿಂತ ಕೊಬ್ಬಿ ಗುಂಡಗಿದ್ದ ಒಬ್ಬ ಮನುಷ್ಯನು ಒಳಗೆ ಪ್ರವೇಶಿಸಿದನು. ಆತನಿಗೆ ಅರವತ್ತಕ್ಕಿಂತ ಹೆಚ್ಚು ವಯಸ್ಸಿರಬೇಕು. ಬೆರಳುಗಳಲ್ಲೆಲ್ಲಾ ಚಿನ್ನದ ಉಂಗುರಗಳಿದ್ದವು. ಬೆಲೆಬಾಳುವ ಸೆಂಟಿನ ಪರಿಮಳವು, ಗಂಧದ ತೈಲದ ಸುಗಂಧ, ಸಿಂಧೂರವನ್ನು ಧರಿಸಿದ ಕೊಬ್ಬಿದ ಆತನ ಹೆಂಡತಿಯೂ ಜೊತೆಯಲ್ಲಿದ್ದಳು. ಜೊತೆಗೆ ಧಡೂತಿಯಾದ ಸೇವಕನೊಬ್ಬನೂ ಜೊತೆಯಲ್ಲಿದ್ದನು.

"ಅಲ್ಲ, ಇದುವರೆಗೆ ನೀವು ಸತ್ತಿಲ್ಲವೇ ?" ಡಾಕ್ಟರ್ ಸಂತುಕುಮಾರ್ ಕೇಳಿದನು.

"ಇಲ್ಲ, ನಾನು ಸತ್ತಿಲ್ಲ."

ಸಂತುಕುಮಾರ್‌ನ ಔಟ್‌ಪೇಷೆಂಟಿನಲ್ಲಿನ ಒಬ್ಬ ಸ್ಥಿರ ರೋಗಿಯಾಗಿದ್ದನು. ಆ ಧನಿಕನು. ಅವನನ್ನು ನೋಡಿದಾಗಲೆಲ್ಲಾ ಸಂತುಕುಮಾರ್ ಕೇಳುವ ಮೊದಲು ಕುಶಲ ಪ್ರಶ್ನೆಯಾಗಿತ್ತದು.

"ಆ ದೊಡ್ಡ ಬೆಂಚು ತೆಗೆದುಕೊಂಡು ಬಾ. ಈ ಸ್ಟೂಲ್‌ನಲ್ಲಿ ಈ ಮಹಾಶಯ ಕುಳಿತುಕೊಂಡರೆ ಮೊಸಾಕ್ ಒಡೆದು ಹಾಳಾಗುತ್ತೆ." ಸಂತುಕುಮಾರ್ ವಾರ್ಡ್‌ಬಾಯ್‌ನನ್ನು ಕೂಗಿ ಕರೆದು ಹೇಳಿದನು.

"ಆಹಾಹಾಹಾ..." ಧನಿಕನು ಘೊಳ್ಳೆಂದು ನಕ್ಕನು.

ಬೆಂಚಿನಲ್ಲಿ ಕುಳಿತ ಧನಿಕನು ಆಯಾಸ ಪರಿಹಾರವಾದ ಮೇಲೆ ಹೇಳಿದನು.

"ಪ್ರೆಷರ್ ನೋಡಬೇಕು. ಷುಗರ್ ನೋಡಬೇಕು. ಇ.ಸಿ.ಜಿ. ತೆಗೆಯಬೇಕು. ದೇವರೇ, ನನಗೆ ಯಾವತ್ತು ಪ್ರೆಷರ್ ಬರುತ್ತೆ? ನನ್ನ ಮೂತ್ರದಲ್ಲಿ ಯಾವತ್ತು ಷುಗರ್ ಬರುತ್ತೆ?"

ಆ ಧನಿಕನ ಸ್ಥಿರವಾದ ಆವಶ್ಯಕತೆಗಳು ಇದಾಗಿದ್ದವು. ಆತನಷ್ಟೇ ಧನಿಕರಾದ ಆತನ ಮಿತ್ರರಿಗೆಲ್ಲಾ ಪ್ರೆಷರ್, ಷುಗರ್, ಅಟಾಕ್ ಆಗಿತ್ತು. ಅನೇಕರು ಕಾಲದ ಪರದೆಯ ಹಿಂದೆ ಮರೆಯಾಗಿ ಹೋಗಿದ್ದರು.

"ಯಾಕಿಷ್ಟು ಬೇಗ ನೀವು ಸಾಯಬೇಕು" ಸಂತು ಕುಮಾರ್ ಕೇಳಿದನು. ರೂಢಿಯಾದ ಪ್ರಶ್ನೆಯಾಗಿತ್ತದು.

"ಸಾಯಬೇಕಿಲ್ಲ. ನನಗೆ ಒಳ್ಳೆ ಒಳ್ಳೆ ರೋಗಗಳು ಬರಬೇಕೆಂಬ ಆಸೆಯಿದೆ. ಅನಂತರ ಅದಕ್ಕೆ ಚಿಕಿತ್ಸೆ ಮಾಡಿಸಿಕೊಳ್ಳಬೇಕು. ಔಷಧಿ ತೆಗೆದುಕೊಳ್ಳಬೇಕು. ಹಾಗೆ ರೋಗವು ಗುಣವಾಗಿ ನಾನು ಬಹಳ ದಿನಗಳು ಬದುಕಬೇಕು. ನನಗೂ ಒಂದು ಮಾತ್ರೆಯನ್ನು ತಿನ್ನಬೇಕೆಂಬ ಆಸೆಯಿರುವುದಿಲ್ಲವೇ ?"

ಧನಿಕನ ಕಿವಿಯಲ್ಲಿದ್ದ ವಜ್ರದ ಹತ್ತಕಡಕವನ್ನು ಮುಟ್ಟಿ ನೋಡುತ್ತಾ ಸಂತಕುಮಾರ್ ಹೇಳಿದನು.

"ಲಾಲಾ, ನೀವು ಹೆಣ್ಣೇನು ? ಈ ಓಲೆ ನಿಮಗೇಕೆ ? ಇದನ್ನು ನಿಮ್ಮ ಹೆಂಡತಿಗೆ ಕೊಟ್ಟು ಬಿಡಿ. ಇದು ಆಕೆಗೆ ಚೆನ್ನಾಗಿ ಒಪ್ಪುತ್ತೆ."

"ಇಲ್ಲ ನಾನಿದನ್ನು ತೆಗೆಯುವುದಿಲ್ಲ. ನನ್ನ ತಾಯಿಗೆ ಹೆಣ್ಣು ಮಕ್ಕಳಿರಲಿಲ್ಲ. ನಾನೇ ಕೊನೆಯ ಮಗ. ಅವರು ಸಾಯುವವರೆಗೂ ನನ್ನನ್ನೇ ಒಂದು ಹೆಣ್ಣಿನಂತೆಯೇ ನೋಡಿಕೊಂಡಿದ್ದರು. ನಾನು ದೊಡ್ಡವನಾಗುವವರೆಗೂ, ನನಗೆ ಚಿಕ್ಕಂದಿನಲ್ಲಿ ಹುಡುಗಿಯ ಬಟ್ಟೆಗಳನ್ನು ಹಾಕಿ ಬೆಳೆಸಿದರು. ಸಂತು, ನಿನಗಿದೆಲ್ಲ ಗೊತ್ತೇ ?"

ಸಂತುಕುಮಾರ್‌ನನ್ನು ಸಂತು ಎಂದು ಒಂದು ಸಲ, ಡಾಕ್ಟರ್ ಎಂದು ಒಂದು ಸಲ ಆತ ಕರೆಯುತ್ತಿದ್ದನು. ಅವರಿಬ್ಬರೂ ಅಷ್ಟರಮಟ್ಟಿಗೆ ಆಪ್ತರಾಗಿದ್ದರು.

ಔಟ್‌ಪೇಷೆಂಟ್‌ನಲ್ಲಿನ ಸುಮಾರು ಸಮಯವನ್ನು ಅಪಹರಿಸಿದ ಧನಿಕನೂ ಆತನ ಪರಿವಾರವೂ ಹೊರಟುಹೋದರು.

ಅನಂತರ ಗ್ರಾಮಸ್ಥನೊಬ್ಬನೂ, ಅವನ ಹೆಂಡತಿಯೂ ವಿಷಾದದಿಂದಲೂ ನಾಚಿಕೆಯಿಂದಲೂ ನಿಂತಿದ್ದರು.

"ನಿಮ್ಮಲ್ಲಿ ಯಾರಿಗೆ ಖಾಯಿಲೆ ?" ಸಂತಕುಮಾರ್ ಕೇಳಿದನು.

ಇಬ್ಬರೂ ಪರಸ್ಪರ ನೋಡುತ್ತಾ ನಿಂತಿದ್ದರು. ಅನಂತರ ಅವನ ಹೆಂಡತಿ ನೆಲವನ್ನು ನೋಡುತ್ತಾ ಹೆಬ್ಬೆರಳುಗಳಿಂದ ನೆಲದ ಮೇಲೆ ಗೆರೆಗಯೆಳೆಯ ತೊಡಗಿದಳು.

"ಖಾಯಿಲೆ ಏನಿಲ್ಲ" ಏರಿದ ಧ್ವನಿಯಲ್ಲೇ ಗಂಡಸು ಮಾತನಾಡಲಾರಂಭಿಸಿದನು.

"ಮತ್ತೇಕೆ ನನಗೆ ತೊಂದರೆ ಕೊಡುತ್ತಿದ್ದೀರಿ ?"

"ತೊಂದರೆ ಕೊಡಲು ಬಂದಿಲ್ಲ. ಮದುವೆಯಾಗಿ ನಾಲ್ಕು ವರ್ಷಗಳಾದವು" ಅವನ ಧ್ವನಿ ಮತ್ತೆ ಏರಿತು. ಔಟ್ ಪೇಷೆಂಟ್‌ನಲ್ಲೆಲ್ಲಾ ಅವನು ಹೇಳುವುದು ಕೇಳಿಸುತ್ತಿತ್ತು. ಸುತ್ತಲೂ ಇದ್ದವರು ಅವರಿಬ್ಬರನ್ನು ಗಮನಿಸತೊಡಗಿದರು.

"ಹಾಗಾದರೆ ನಿಮಗೆ ಖಾಯಿಲೆ ಇದೆ ಅಲ್ಲವೇ ?" ಗಂಡಸನ್ನು ಮುಟ್ಟುತ್ತಾ ಸಂತುಕುಮಾರ್ ಹೇಳಿದನು.

"ನನಗೇನೇ ? ಅಯ್ಯೋ ನನಗೆ ಯಾವ ಖಾಯಿಲೆಯೂ ಇಲ್ಲ" ಮೊದಲಿಗಿಂತ ಇಮ್ಮಡಿಯಾದ ಸ್ವರದಲ್ಲಿ ಅವನು ಕೂಗಿದನು. ಏರುಸ್ವರದಲ್ಲಿ ನಡೆಯುತ್ತಿದ್ದ ಈ ಮಾತನಾಡುವ ಸ್ವಭಾವವು ಅವನಿಗೆ ಜನ್ಮಸಿದ್ಧ ಹಕ್ಕಾಗಿರಬೇಕು.

"ಇವನ ಖಾಯಿಲೆಯು ಏನೆಂದು ಗೊತ್ತೇ ಜೊತೆಗಾರರೇ ?" ವಿದ್ಯಾರ್ಥಿಗಳನ್ನು, ಸುತ್ತಲೂ ಇರುವವರನ್ನು ಕೂಗಿ ಡಾಕ್ಟರ್ ಸಂತುಕುಮಾರ್ ಹೇಳಿದನು "ಬಹಳ ಚಿಕ್ಕಂದಿನಲ್ಲೇ ಈತನು ಒಂದು ಮೈಕ್ ನುಂಗಿಬಿಟ್ಟನು."

ಔಟ್‌ಪೇಷೆಂಟ್‌ನಲ್ಲಿ ನಗೆಯ ಹೊನಲೆದ್ದಿತು.

"ಸ್ವಾಮೀ ಯಜಮಾನರೇ, ಸ್ವಲ್ಪ ಮೆಲ್ಲಗೆ ಮಾತನಾಡಿ" ಡಾ. ಸಂತುಕುಮಾರ್ ಹೇಳಿದನು.

"ಇವಳಿಗೆ ಇದುವರೆಗೂ ಮಕ್ಕಳಾಗಲಿಲ್ಲ" ಹೆಂಡತಿಯ ಕಡೆ ಕೈ ತೋರಿಸಿ ಗಂಡನು ಹೇಳಿದನು. ಆಗ ಅವನ ಧ್ವನಿ ಇಳಿದಿತ್ತು. ಮನಃಪೂರ್ವಕವಾಗಿ ಧ್ವನಿ ತಗ್ಗಿಸಿ ಹೇಳಿದ್ದರಿಂದ ಮಾತುಗಳು ಒಂದೊಂದೇ ಹೊರಬಂದವು.

"ನಾನೇನು ಮಾಡಬೇಕು ಅದಕ್ಕೆ ?" ಸಂತುಕುಮಾರ್ ಕೇಳಿದನು.

"ಇವಳು ಗರ್ಭಿಣಿಯಾಗಬೇಕು." ಗಂಡನು ತನ್ನ ಆವಶ್ಯಕತೆಯನ್ನು ಮಂಡಿಸಿದನು.

ಸಂತುಕುಮಾರ್ ಬೆರಳನ್ನೆತ್ತಿ ತೋರಿಸುತ್ತಾ ಒಂದು ಕ್ಷಮಾಪಣೆಯೊಂದಿಗೆ ಹೇಳಿದನು:

"ನನಗೆ ಸಾಧ್ಯವಿಲ್ಲ." ವಿದ್ಯಾರ್ಥಿಗಳತ್ತ ಬೆರಳು ಮಾಡಿ ಅವರನ್ನು ಕೇಳಿದನು:

"ನೀವ್ಯಾರಾದರೂ ಸಹಾಯ ಮಾಡಬಲ್ಲಿರಾ ?"

"ಗಂಡನ ಮುಖ ವಿವರ್ಣವಾಯಿತು. ಹೆಂಡತಿಯ ನೋಟವು ನೆಲದ ಮೇಲಿಂದ ಪಾತಾಳಕ್ಕಿಳಿಯಿತು.

"ಕುಳಿತುಕೊಳ್ಳಿ" ಅವನ ಹೆಂಡತಿಯೊಂದಿಗೆ ಸಂತುಕುಮಾರ್ ಹೇಳಿದನು.

"ತಿಂಗಳು ತಿಂಗಳೂ ಸ್ನಾನ ಸರಿಯಾಗಿ ಮಾಡುತ್ತಿದ್ದೀರಾ ?"

ಹೆಂಡತಿ ಗಂಡನನ್ನು ನೋಡಿದಳು.

ಸಂತುಕುಮಾರ್ ಹೇಳಿದನು: "ಆತನ ಸ್ನಾನದ ಬಗ್ಗೆ ನಾನು ಕೇಳಲಿಲ್ಲ. ನಿಮ್ಮ ಸ್ನಾನದ ಬಗ್ಗೆ ಕೇಳಿದೆ."

ಅನಂತರ ಸಂತುಕುಮಾರ್ ಧ್ವನಿಯನ್ನಿಳಿಸಿ ಆ ಗಂಡ ಹೆಂಡತಿಯೊಂದಿಗೆ ಮಾತನಾಡಲು ಆರಂಭಿಸಿದನು. ಸಂತೋಷವೂ ಸಂತೃಪ್ತಿಯೂ ಅವರಿಬ್ಬರ ಮುಖದಲ್ಲಿ ಪ್ರತ್ಯಕ್ಷವಾಯಿತು.

ಪರೀಕ್ಷೆಗೆಂದು ಅವರನ್ನು ಆತನು ಲ್ಯಾಬೋರೇಟರಿಗೆ ಕಳುಹಿಸಿದನು.

ಹೋಟೇಲ್ ಕೆಲಸದಲ್ಲಿದ್ದ ಇಪ್ಪತ್ತು ವರ್ಷದ ಯುವಕನೊಬ್ಬನು ಒಳ ಪ್ರವೇಶಿಸಿದನು.

ನಾಲ್ಕು ದಿಕ್ಕುಗಳತ್ತ ನೋಡುತ್ತಾ ಅವನು ಕಳವಳ ಪಡುತ್ತಿದ್ದನು. ಸಂತುಕುಮಾರ್ ತಲೆಯೆತ್ತಿ ಅವನನ್ನು ನೋಡಿದನು.

"ಏನು ?"

ಅವನು ಯಾತನೆಯಿಂದ ಹೇಳಿದನು.

"ನವೆ"

"ಓ ಜೋರಾದ ರೋಗವೇ ? ಎಲ್ಲಿ ತೋರಿಸು ?"

ಯುವಕನು ಮತ್ತೆ ತಳಮಳಗೊಂಡನು. ಅವನು ಹುಡುಗಿಯರತ್ತ ನೋಡಿದನು.

"ಬೇಗ ತೋರಿಸು ಹೊತ್ತಾಯಿತು" ಸಂತುಕುಮಾರ್ ಕೋಪ ಹೆಚ್ಚುತ್ತಿತ್ತು.

ನವೆಯುಳ್ಳ ಸ್ಥಳವನ್ನು ಬಟ್ಟೆಯ ಮೇಲೆಯೇ ಮುಟ್ಟಿ ಅವನು ತೋರಿಸಿದನು.

"ಸರಿ ಅಂಡರ್‌ವೇರ್ ಬಿಚ್ಚು"

ಯುವಕನು ಗೋಡೆಗೆ ಅಭಿಮುಖವಾಗಿ ನಿಂತು ಅಂಡರ್ ವೇರ್ ಬಿಚ್ಚಿ ನೆಲದ ಮೇಲೆ ಹಾಕಿದನು.

ಸಂತುಕುಮಾರ್ ನವೆಯನ್ನು ಪರೀಕ್ಷಿಸಿದನು. ಅನಂತರ ಆತನು ನೆಲದ ಮೇಲೆ ಬಿದ್ದಿದ್ದ ಅಂಡರ್‌ವೇರ್ ನೋಡಿದನು. ಅದು ವಿಪರೀತ ಕೊಳೆಯಾಗಿ ಹಾಳಾಗಿತ್ತು.

ಡಾಕ್ಟರ್ ಮೇಜಿನ ಮೇಲಿದ್ದ ಒಂದು ಇಕ್ಕಳವನ್ನು ತೆಗೆದುಕೊಂಡನು. ಅದರಿಂದ ಅಂಡರ್‌ವೇರ್ ಅನ್ನು ಚುಚ್ಚಿ ಹಿಡಿದು ತೆಗೆದು ಕಸದ ಬುಟ್ಟಿಯಲ್ಲಿ ಹಾಕಿದನು. ಅನಂತರ ಯುವಕನನ್ನು ನೋಡಿ ಹೇಳಿದನು.

"ನೀನ್ಯಾಕೆ ಇನ್ನೂ ಇಲ್ಲೇ ಇದ್ದೀ ? ನಿನ್ನ ರೋಗವು ಗುಣವಾಗಿದೆ."

ಆಗ ಮೂರು ನಾಲ್ಕು ಜನ ಒಬ್ಬನನ್ನು ಹಿಡಿದು ಕರೆದುತಂದರು. ಶುಶ್ರೂಷೆ ಮಾಡುವವರು ಬಹು ಜನರಿದ್ದುದರಿಂದ ರೋಗಿ ಸಂತುಕುಮಾರ್‌ಗೆ ಕಾಣಿಸಲೇ ಇಲ್ಲ.

"ಯಾಕೀ ಗಲಾಟೆ ? ನೀವೆಲ್ಲರೂ ಅವನನ್ನು ಹಿಸುಕಿ ಹಿಂಡಿ ಹಾಕುತ್ತಿದ್ದೀರಾ ? ನಾನು ರೋಗಿಯನ್ನು ಸ್ವಲ್ಪ ನೋಡುತ್ತೇನೆ."

ರೋಗಿಯನ್ನು ಅವರು ಎಕ್ಸಾಮಿನೇಷನ್ ಟೇಬಲ್ ಮೇಲೆ ಮಲಗಿಸಿದರು.

"ಎದೆನೋವಂತೆ. ಇದ್ದಕ್ಕಿದ್ದಂತೆ ಬಂದಿದೆ. ಸಮೀಪದಲ್ಲಿರುವ ಡಾಕ್ಟರ್ ಬಳಿ ಕರೆದುಕೊಂಡು ಹೋದೆವು. ಆತ ಪರೀಕ್ಷಿಸಿದ ನಂತರ ಹೃದ್ರೋಗವಿರಬೇಕೆಂದು ಸಂದೇಹಪಟ್ಟಾಗ ನಾವು ಇಲ್ಲಿಗೆ ಓಡಿಬಂದೆವು."

"ಸರಿ ಸರಿ. ಎಲ್ಲರೂ ದೂರ ಸರಿದು ನಿಲ್ಲಿ." ಸಂತುಕುಮಾರ್ ರೋಗಿಯನ್ನು ಪರೀಕ್ಷಿಸತೊಡಗಿದನು. ಹಣೆ ಮುಟ್ಟಿ ನೋಡಿ, ಕಣ್ಣುಗಳನ್ನೂ, ಹೊಟ್ಟೆಯನ್ನೂ, ನಾಡಿಯನ್ನೂ ಪರೀಕ್ಷಿಸಿದ ನಂತರ ಅವನ ಜೊತೆಯಲ್ಲಿ ಬಂದವರೊಂದಿಗೆ ಹೇಳಿದನು.

"ನಿಮ್ಮ ಹಾಗಿರುವವರು ಜೊತೆಯಲ್ಲಿ ಬಂದರೆ ಇರುವ ಹೃದಯವೇ ಸ್ತಂಭಿಸಿ ಹೋಗುತ್ತದೆ. ಆಗಲಿ, ಇನ್ನೊಬ್ಬ ಡಾಕ್ಟರ್ ಏನು ಹೇಳಿದರು ?"

"ದೇಹಕ್ಕೆ ಸ್ವಲ್ಪವೂ ಶ್ರಮ ಕೊಡಬೇಡಿ. ಪೂರ್ಣವಿಶ್ರಾಂತಿ ಚಿಕಿತ್ಸೆ ಬೇಕು" ಎಂದು ಹೇಳಿದರು."

"ಓಹೋ ಹಾಗೋ ?" ಸಂತುಕುಮಾರ್ ಎದ್ದು ಬಲಗೈಯಿಂದ ತನ್ನ ಹೃದಯದ ಮೇಲೆ ಹೊಡೆದುಕೊಳ್ಳುತ್ತಾ ಹೇಳಿದನು.

"ಇಲ್ಲಿ ಮಲಗಿರುವ ಮನುಷ್ಯನ ಹೃದಯವು ಸ್ತಂಭಿಸುವುದಕ್ಕಿಂತ ಮುಂಚೆ ನನ್ನ ಈ ಹೃದಯವು ಸ್ತಂಭಿಸುತ್ತೆ." ರೋಗಿಯ ಬೆನ್ನುತಟ್ಟುತ್ತಾ ಹೇಳಿದನು. "ಮಿತ್ರ, ಎದ್ದು ಮನೆಗೆ ಓಡು. ಯಾವ ಔಷಧಿಯೂ ಬೇಡ. ಕೊಡಲಿ ತೆಗೆದುಕೊಂಡು ನಿತ್ಯವೂ ಸೌದೆ ಒಡೆದು ಸೀಳಿ ಚೂರು ಚೂರು ಮಾಡು. ತೋಟದ ಕೆಲಸವೋ, ಪ್ರಕೃತಿಯ ಆಸ್ವಾದನೆಯೋ ಏನು ಬೇಕಾದರೂ ಮಾಡು. ಆದರೊಂದು ವಿಷಯ ಮಾತ್ರ ಜ್ಞಾಪಕವಿರಲಿ. ಅವರೇ ಕಾಳೂ, ಗೆಡ್ಡೆಗಳೂ ತಿನ್ನಬಾರದು. ಹೊಟ್ಟೆಯ ತುಂಬಾ ಗ್ಯಾಸಿದೆ."

ಸುಸ್ತಾಗಿ ಮಲಗಿದ್ದ ರೋಗಿಯ ಮುಖ ಕೆಂಪಡರಿ ಉಬ್ಬಿತು. ಅಲ್ಲಿ ಬಾಡಿದಂತಿದ್ದ ಹೂವು ಬಿರಿಯಿತು.

ಮಧ್ಯಾಹ್ನ ಎರಡು ಗಂಟೆ ಹೊಡೆಯಿತು.

"ಸರಿ, ನಾನು ಹೋಗುತ್ತೇನೆ." ಸಂತುಕುಮಾರ್ ಎದ್ದು ತನ್ನ ಸಹೋದ್ಯೋಗಿಗಳನ್ನು ನೋಡುತ್ತಾ ಹೇಳಿದನು.

"ಮಿಕ್ಕವರನ್ನು ನೀವು ಚಿಕಿತ್ಸೆ ಮಾಡಿ. ಗುಡ್ ಬೈ."

ಡಾಕ್ಟರ್ ಸಂತುಕುಮಾರ್ ಸೈಕಲ್ ತೆಗೆದುಕೊಂಡು ಅದನ್ನು ಹತ್ತಿ ಹೊರಟು ಹೋದನು.

ಎಮರ್ಜೆನ್ಸಿಯ ಎದುರಿಗೆ ಜನರ ಗುಂಪಿನಲ್ಲಿ ಚಿರಪರಿಚಿತನೊಬ್ಬನನ್ನು ಕಂಡಾಗ ಸೈಕಲ್ ನಿಲ್ಲಿಸಿ ಇಳಿದನು.

"ನಮ್ಮ ಲಾಲ್ ತೀರಿಕೊಂಡರು" ಪರಿಚಿತನು ಹೇಳಿದನು.

"ಲಾಲ್‌ರೇ ?" ಡಾಕ್ಟರ್ ಸಂತುಕುಮಾರ್ ಒಂದು ನಿಮಿಷ ದಿಕ್ಕುಕೆಟ್ಟಂತೆ ನಿಂತುಬಿಟ್ಟನು. "ನೀವೇನಾದರೂ ತಮಾಷೆ ಮಾಡುತ್ತಿದ್ದೀರಾ ? ಅವರು ಈಗ ಸ್ವಲ್ಪ ಹೊತ್ತಿಗೆ ಮುಂಚೆ ಹೆಂಡತಿಯೊಂದಿಗೆ ಇಲ್ಲಿಗೆ ಬಂದು ನನಗೆ ತೋರಿಸಿ ಹೋದರಲ್ಲಾ ?"

ಆಶ್ಚರ್ಯದಿಂದ ಸಂತುಕುಮಾರ್ ಕೇಳಿದನು.

"ಹೌದು, ಹಾಗೆ ವಾಪಸ್ ಹೋಗುತ್ತಿರುವಾಗಲೇ ಅಪಘಾತ ನಡೆದಿದ್ದು. ಲಾಲ್‌ರ ಕಾರು ನಿಯಂತ್ರಣತಪ್ಪಿ ಒಂದು ಟ್ರಕ್‌ಗೆ ಡಿಕ್ಕಿ ಹೊಡೆಯಿತು."

ಸಂತುಕುಮಾರ್ ಎಮರ್ಜೆನ್ಸಿಯನ್ನು ಪ್ರವೇಶಿಸಿದನು.

ಎಮರ್ಜೆನ್ಸಿಯಲ್ಲಿ ಟೇಬಲ್ ಮೇಲೆ ಕೈಬೆರಳುಗಳ ತುಂಬ ಚಿನ್ನದ ಉಂಗುರಗಳೊಂದಿಗೆ ಆ ಧನಿಕನು ನಿಶ್ಚಲನಾಗಿ ಮಲಗಿದ್ದನು. ಕಿವಿಯಲ್ಲಿ ವಜ್ರದ ಹತ್ತಕಡಕು ಹೊಳೆಯುತ್ತಿತ್ತು.

ಧನಿಕನ ತಲೆ ಒಡೆದುಹೋಗಿ ಮೆದುಳು ಹೊರಬಂದಿತ್ತು.

"ಸಂತು, ನನಗೆ ಪ್ರೆಷರ್ ಬೇಕು, ಷುಗರ್ ಬೇಕು. ಅನಂತರ ಔಷಧಿ ತೆಗೆದುಕೊಳ್ಳಬೇಕು."

ಧನಿಕನ ಧ್ವನಿ ಸಂತುಕುಮಾರ್‌ನ ಕಿವಿಯಲ್ಲಿ ಮೊಳಗುತ್ತಿತ್ತು.

ಸಂತುಕುಮಾರ್ ಹೊರಬಂದು ತನ್ನ ಸೈಕಲ್ ಮೇಲೆ ರೋಡಿನಲ್ಲಿ ಹೋಗುತ್ತಿರಬೇಕಾದರೆ ಒಂದು ಟ್ರಕ್, ಒಂದು ಕಾರೂ ಪರಸ್ಪರ ಹೆಣೆದುಕೊಂಡಂತೆ ಬಿದ್ದಿರುವುದನ್ನು ಕಂಡನು. ಹತ್ತಿರ ಬಂದಾಗ ಸಂತುಕುಮಾರ್ ಸೈಕಲ್‌ನಿಂದಿಳಿದನು. ಜನರು ಮೆಲ್ಲನೆ ಮಾತನಾಡುತ್ತಾ ಅಲ್ಲಲ್ಲಿ ನಿಂತಿದ್ದರು.

ಧನಿಕನಾದ ಲಾಲ್ ನಿತ್ಯಸಂಚಾರಕ್ಕೆಂದು ಉಪಯೋಗಿಸುತ್ತಿದ್ದ ಕಾರು ಚೂರುಚೂರಾಗಿ ಬಿದ್ದಿತ್ತು. ಚಾನೆಲ್ ಜಜ್ಜಿ ಹೋಗಿತ್ತು. ರೇಡಿಯೇಟರ್ ಒಡೆದು ಹೋಗಿ ನೀರು ರೋಡಿನಲ್ಲಿ ಸುರಿದು ಹೋಗಿತ್ತು. ಗಾಜುಗಳು ಒಡೆದು ಹಾಳಾಗಿ ಹೆಡ್‌ಲೈಟ್‌ಗಳು ಒಳಕ್ಕೆ ಕುಸಿದುಹೋಗಿವೆ. ಸ್ಟಿಯರಿಂಗೂ, ಸೀಟುಗಳೂ ಕುಸಿದು ಹೋಗಿವೆ. ಟಾರ್ ಹಾಕಿದ್ದ ರೋಡಿನಲ್ಲಿ ಸುರಿದು ಹೋಗಿದ್ದ ಪೆಟ್ರೋಲ್‌ನಲ್ಲಿ ಸಪ್ತವರ್ಣಗಳು ಪ್ರತಿಬಿಂಬಿಸುತ್ತಿದ್ದವು.

ಕಾರ್‌ಗೆ ಮೂರೇ ಚಕ್ರಗಳಿದ್ದವು. ಚೆದುರಿ ಹೋದ ನಾಲ್ಕನೆಯ ಚಕ್ರವು ಅಲ್ಲಿ ದೂರದಲ್ಲಿ ರೋಡಿನ ಕೆಳಗೆ ಒಂದು ಗುಂಡಿಯಲ್ಲಿ ನೆಟ್ಟಗೆ ನಿಂತಿತ್ತು.

ಆ ಚಕ್ರದ ಮೇಲೆ ಕರ್ತವ್ಯ ನಿರ್ವಹಣೆಯ ನಂತರ ಏನೂ ತಿಳಿಯದವನಂತೆ ಎಲ್ಲಿಗೋ ಹೊರಡಲೆಂದು ಅಜ್ಞಾತನೂ, ರೂಪವಿಲ್ಲದವನೂ ಆದ ಅವನು ನಿಂತಿದ್ದನು.

●

# ಹದಿನೇಳು

ಡಾಕ್ಟರ್ ಆಚಾರಿಯವರ ಕೋಣೆಯಿಂದ ಸಿಸ್ಟರ್ ಮೇರಿ ಹೊರಕ್ಕೆ ಬಂದಳು. ಮೇರಿಯನ್ನು ನೋಡಿದಾಗ ಬಾಗಿಲಿನಲ್ಲಿ ಕುಳಿತಿದ್ದ ಪ್ಯೂನ್ ಮೆಲ್ಲನೆ ಒಮ್ಮೆ ಅಸ್ಪಷ್ಟ ಧ್ವನಿ ಮಾಡಿದನು. ಮೇರಿ ಅವನನ್ನು ಗಮನಿಸದೆ ಕಾರಿಡಾರ್‌ನತ್ತ ತ್ವರೆಯಿಂದ ನಡೆದಳು.

ಮೇರಿಯ ಮುಖದಲ್ಲಿ ಗಾಬರಿ ತುಂಬಿಕೊಂಡಿತ್ತು. ಮುಖವು ಸ್ವಲ್ಪ ಬಿಳಿಚಿಕೊಂಡಿತ್ತು. ಗಂಜಿಹಾಕಿ ಒಣಗಿಸಿ ಇಸ್ತ್ರಿಮಾಡಿ ಹಾಕಿಕೊಂಡಿದ್ದ ಯೂನಿಫಾರಂನಲ್ಲಿದ್ದ ಸುಕ್ಕುಗಳನ್ನು ನೆಟ್ಟಗೆ ಮಾಡಲು ಯಾರೂ ಕಾಣದಂತೆ ಅವಳು ಶ್ರಮಿಸುತ್ತಿದ್ದಳು.

ಇದ್ದಕ್ಕಿದ್ದಂತೆ ಆ ಕಾರಿಡಾರ್‌ನಲ್ಲಿ ಡಾಕ್ಟರ್ ರವೀಂದ್ರನಾಥ್ ಪ್ರತ್ಯಕ್ಷನಾದನು. ಆತನೊಂದಿಗೆ ವೀಲ್‌ಚೇರ್‌ನಲ್ಲಿ ಒಬ್ಬ ರೋಗಿಯನ್ನು ತಳ್ಳಿಕೊಂಡು ವಾರ್ಡ್ ಬಾಯ್ ಬರುತ್ತಿದ್ದನು. ರವೀಂದ್ರನಾಥ್‌ನ ಕೈಯಲ್ಲೂ ಕಂಕುಳಿನಲ್ಲೂ ಧಾರಾಳವಾಗಿ ಫೈಲ್‌ಗಳೂ, ಪೇಪರ್‌ಗಳೂ ಇರುವುದನ್ನು ಮೇರಿ ಕಂಡಳು. ರೋಗಿಯನ್ನು ಕರೆದುಕೊಂಡು ಯಾವುದೋ ಲ್ಯಾಬೋರೇಟರಿಗೆ ಹೋಗುತ್ತಿರಬೇಕೆಂದೆನ್ನಿಸಿತು.

"ಯಾಕಿಷ್ಟು ಹೊತ್ತಾಯಿತು ?" ರವೀಂದ್ರನಾಥ್ ಮೇರಿಯನ್ನು ಕೇಳಿದನು.

ಮೇರಿ ಒಂದುನಿಮಿಷ ಕಳವಳದಿಂದ ನಿಂತಳು. ಮಿಸ್ಟರ್ ಆಚಾರಿಯ ಕೋಣೆಯಿಂದ ತಾನು ಹೊರಬರುತ್ತಿರುವುದನ್ನು ರವೀಂದ್ರನಾಥ್ ಕಂಡಿದ್ದಾನೆ. ಸಾಲದ್ದಕ್ಕೆ ಈ ದರಿದ್ರ ಯೂನಿಫಾರಂ ಬೇರೆ ಅಲ್ಲಲ್ಲಿ ಸುಕ್ಕು ಬೇರೆ ಆಗಿದೆ. ಆತನಿಗೆ ಇನ್ನೇನಾದರೂ ಸಂದೇಹ ಬಂದಿದೆಯಾ ?

"ಆ ಏನಿಲ್ಲ. ನಾನು ಎಕ್ಸ್‌ರೇ ಫಿಲಂ ತೆಗೆದುಕೊಂಡು ಹೋಗಿದ್ದೆ ?" ಮೇರಿ ತಕ್ಷಣವೇ ಹೇಳಿದಳು.

"ಎಲ್ಲಿಗೆ ?"

"ಡಾಕ್ಟರ್ ಆಚಾರಿಯವರ ಕೋಣೆಗೆ."

"ಹುಷಾರಾಗಿರಬೇಕು" ದನಿಯಿಳಿಸಿ ರವೀಂದ್ರನಾಥ್ ಹೇಳಿದನು. "ಆ ಮನುಷ್ಯನು ಒಬ್ಬ ಒಳ್ಳೆಯ ಲೋಭಿಯು, ಲಂಪಟನು."

"ಸರಿ, ನಾನಿನ್ನು ಬರುತ್ತೇನೆ" ಮೇರಿ ಅವಸರಪಡುತ್ತಾ ಹೇಳಿದಳು.

"ಮೆಡಿಕಲ್ ವಾರ್ಡಿಗೆ ಇಂದು ಬರುವುದಿಲ್ಲವೇ ?" ಸ್ವಾಗತ ಮಾಡುವಂತೆ ರವೀಂದ್ರನಾಥ್ ಕೇಳಿದನು.

"ಖಂಡಿತ ಬರುತ್ತೇನೆ. ಆದರೆ ಮೇಟ್ರನ್ ದಯೆ ತೋರಬೇಕು."

ಮೇರಿ ತನ್ನ ಕೊಠಡಿಗೆ ಬಂದಾಗ ಕುಞ್ಞಮ್ಮ ಒಂದು ಕಾಗದವನ್ನು ಕೈಯಲ್ಲಿ

ಹಿಡಿದುಕೊಂಡು ಏನನ್ನು ಯೋಚಿಸುತ್ತಿದ್ದಳು.

ಮೇರಿ ಯೂನಿಫಾರಂ ಬಿಚ್ಚಿ ಬೇರೆ ಹಾಕಿಕೊಳ್ಳುವಾಗ ಕುಞ್ಞಮ್ಮ ಹೇಳಿದಳು.

"ನೀನೇನು ತಂಗಿ, ನನ್ನೊಂದಿಗೆ ಏನೂ ಕೇಳದೆ ಇದ್ದೀಯಾ ?"

ಮೇರಿ ಮಾತನಾಡುವ ಪರಿಸ್ಥಿತಿಯಲ್ಲಿಲ್ಲವೆಂದು ಅರ್ಥವಾದಾಗ ಕುಞ್ಞಮ್ಮ ಹೇಳಿದಳು.

"ಈ ಕಾಗದ ಯಾರದ್ದೆಂದು ಕೇಳು ತಂಗಿ."

ಮೇರಿ ನೆಲದ ಮೇಲೆ ಬಿಚ್ಚಿಟ್ಟಿದ್ದ ಷೂಸುಗಳನ್ನು ಕಾಲಿನಿಂದ ಮಂಚದ ಕೆಳಗಡೆಗೆ ತಳ್ಳಿದಳು. ಅನಂತರ ಪ್ರಯಾಸದಿಂದ ತನ್ನ ಶರೀರವನ್ನು ನೈಟ್‌ಗೌನ್‌ನೊಳಕ್ಕೆ ತಳ್ಳಿದಳು.

ಮಂಚದ ಮೇಲೆ ಬಿದ್ದುಕೊಂಡು ಯಾರಿಗೋ ಬೇಕಾಗಿ ಎಂಬಂತೆ ಮೇರಿ ಕೇಳಿದಳು.

"ಯಾರ ಕಾಗದ, ಅಕ್ಕ ?"

ಕುಞ್ಞಮ್ಮ ಏನೂ ಮಾತನಾಡಲಿಲ್ಲ. ಕುಞ್ಞಮ್ಮಳಿಗೆ ನವಿರಾದ ಪರಿಭ್ರಮೆ. ಅವಳು ಕಾಗದ ಮಡಿಸಿ ತಲೆದಿಂಬಿನ ಕೆಳಗೆ ಇಟ್ಟು ಮಲಗಿದಳು.

ಇಬ್ಬರೂ ಮೇಲ್ಛಾವಣಿಯನ್ನು ನೋಡುತ್ತಾ ಮಲಗಿದರು. ಇಬ್ಬರಿಗೂ ಪರಸ್ಪರ ತಿಳಿಸಿ ಬಿಚ್ಚಿಡಲಾಗದ ರಹಸ್ಯಗಳಿವೆ.

ಕೊಠಡಿಯಲ್ಲಿ ಒಂದು ಅಳು ಕೇಳಿಬಂತು. ಮೇರಿಯ ತುಟಿಗಳು ವಕ್ರವಾಗುತ್ತಿದ್ದುವು. ಅವಳ ಕಣ್ಣುಗಳು ತುಂಬುತ್ತಿದ್ದವು.

ಕುಞ್ಞಮ್ಮ ಥಟ್ಟನೆ ಎದ್ದು ಮೇರಿಯ ಮಂಚದ ಬಳಿ ಬಂದಳು.

"ತಂಗಿ, ಹೇಳು ನಿನಗೇನಾಯಿತು ?"

"ನನ್ನಿಂದ ಸಾಧ್ಯವಿಲ್ಲ ಅಕ್ಕ. ಸರ್ಜಿಕಲ್ ವಾರ್ಡ್‌ನ ಕೆಲಸವು ಇನ್ನು ನನಗೆ ಸಾಧ್ಯವಿಲ್ಲ. ನಾನು ಬೆಂಕಿಯನ್ನು ಉಡಿಯಲ್ಲಿ ಕಟ್ಟಿಕೊಂಡು ನಡೆಯುತ್ತಿದ್ದೇನೆ."

"ಏನಾಯಿತು ಹೇಳು" ಕುಞ್ಞಮ್ಮ ಕಾತುರದಿಂದ ಕೇಳಿದಳು. ಏನು ನಡೆಯಿತೆಂದೂ ಅದರ ಬಿಸಿಯು ಆರುವುದಕ್ಕೆ ಮುಂಚೆಯೇ ಕುಞ್ಞಮ್ಮಳಿಗೆ ತಿಳಿಯಬೇಕು.

"ಆ ಮನುಷ್ಯ, ಡಾಕ್ಟರ್ ಆಚಾರಿ, ಆತನು ಯಾವಾಗಲೂ ಒಂದು ನೆರಳಿನಂತೆ ನನ್ನೊಂದಿಗೇ ಇರುತ್ತಾನೆ." ಮೇರಿ ರಹಸ್ಯದ ಸುರುಳಿಗಳನ್ನು ಬಿಚ್ಚಿಡುತ್ತಿದ್ದಳು.

"ನಿನ್ನ ಮೇಲೆ ಆತನಿಗೆ ಒಳ್ಳೆಯ ಅಭಿಪ್ರಾಯವಿದೆಯಲ್ಲಾ, ಮೇಟ್ರನ್ ಹೆಲೆನ್ ಸಿಂಗ್‌ನೊಂದಿಗೆ ನಿನ್ನ ಮೇಲೆ ಬಹಳ ಒಳ್ಳೆಯ ಅಭಿಪ್ರಾಯ ನೀಡಿದ್ದಾನಂತಲ್ಲಾ, ಇವತ್ತು ಕೂಡ ಮೇಟ್ರನ್ ಈ ವಿಷಯವನ್ನು ಹೇಳಿದರಲ್ಲಾ ?"

"ನನ್ನನ್ನು ಅಲ್ಲಿಂದ ಬದಲಾಯಿಸಲು ಆತ ಒಪ್ಪುವುದಿಲ್ಲ. ಅದು ಖಂಡಿತವು. ನನ್ನನ್ನು ಅಲ್ಲಿ ಹಾಕಿ ಎಂಟೊಂಭತ್ತು ತಿಂಗಳಾಗಲಿಲ್ಲವೇ ? ವಾರ್ಡ್‌ನಿಂದ ಥಿಯೇಟರ್‌ಗೆ, ಥಿಯೇಟರ್‌ನಿಂದ ವಾರ್ಡ್‌ಗೆ ಮೇಟ್ರನ್ ನನ್ನನ್ನು ಚೆಂಡಾಟ ಆಡುತ್ತಿದ್ದಾರೆ."

"ನೀನೇಕೆ ಮೇಟ್ರನ್‌ನೊಂದಿಗೆ ಏನೂ ಹೇಳದಿರುವುದು ? ಮೇಟ್ರನ್ ನಿನಗೆ

ಬಹಳ ಆಪ್ತರಲ್ಲವೇ ?"

"ಎಷ್ಟೋ ಬಾರಿ ಹೇಳಿದ್ದೇನೆ. ಪ್ರಯೋಜನವಿಲ್ಲ ಅಕ್ಕ. ನನ್ನನ್ನು ಅಲ್ಲಿಂದ ಬದಲಾಯಿಸಬೇಡಿ ಎಂದು ಸೂಪರಿಂಟೆಂಡೆಂಟ್ ಮೇಟ್ರನ್‌ನೊಂದಿಗೆ ಹೇಳಿದ್ದಾರಂತೆ."

"ನಿಜವಾಗಿಯೂ ?" ಕುಞ್ಞಮ್ಮ ಸರ್ರನೆದ್ದಳು.

"ಎಲ್ಲಾ ಆ ಡಾಕ್ಟರ್ ಆಚಾರಿಯವರ ಕೆಲಸ. ಇನ್ನು ನನ್ನ ಮರಣವೇ ಆ ಥಿಯೇಟರ್‌ನಲ್ಲಾಗಿರುತ್ತೆ." ಸ್ವಲ್ಪ ವಿರಾಮದ ನಂತರ ಮೇರಿ ಹೇಳಿದಳು. "ಇಲ್ಲದಿದ್ದರೆ ನಾನು ಆತನನ್ನು ಕೊಲ್ಲುತ್ತೇನೆ ಅಷ್ಟೆ."

ಮೇರಿ ಬಿಕ್ಕಿಬಿಕ್ಕಿ ಅಳತೊಡಗಿದಳು. ಕುಞ್ಞಮ್ಮ ಬಹುವಾಗಿ ಹೇಳಿ ಅವಳನ್ನು ಸಮಾಧಾನಪಡಿಸಿದಳು.

"ಅಕ್ಕ, ಆ ದುಷ್ಟನು ನನ್ನನ್ನು ಇಂದು ಆತನ ಕೋಣೆಯಲ್ಲಿ ಒಂದು ಗಂಟೆಯವರೆಗೆ ಗೋಳಾಡಿಸಿದನು."

"ನಿನ್ನನ್ನು ಗೋಳಾಡಿಸಿದನೇ ?" ಆತುರದಿಂದ ಕುಞ್ಞಮ್ಮ ಕೇಳಿದಳು.

"ದೊಡ್ಡದಾಗಿ ಬಲವಂತವೇನೂ ನಡೆದಿಲ್ಲ. ನಾನು ಅದಕ್ಕೆ ಒಪ್ಪಲಿಲ್ಲ. ನನ್ನನ್ನು ಮುಟ್ಟಲೂ ಸಹ ಒಪ್ಪಲಿಲ್ಲ. ಕೊನೆಗೆ ನನ್ನೊಂದಿಗೆ ಆತ ಹೇಳಿದ. 'ನಿನ್ನ ಒಪ್ಪಿಗೆಯಿಲ್ಲದೆ ನಾನೇನೂ ಮಾಡುವುದಿಲ್ಲ. ನೀನೊಪ್ಪಿದ ಮೇಲೆ ಮಾಡುತ್ತೇನೆ' ಅಂತ. ಸ್ತ್ರೀಯರ ಮೇಲೆ ಆತನಿಗೆ ಪ್ರೀತಿಗಿಂತ ಮರ್ಯಾದೆಯಂತೆ."

"ನೀನು ಹೇಗೆ ತಪ್ಪಿಸಿಕೊಂಡೆ ?" ಕುಞ್ಞಮ್ಮ ಕೇಳಿದಳು.

"ಕೊನೆಗೆ ಆತನು ಸುಸ್ತಾಗಿ ಮಂಚದ ಮೇಲೆ ಮಲಗಿದನು. ದೊಡ್ಡ ನಿಟ್ಟುಸಿರು ಬಿಡುತ್ತಿರುವಾಗ ನಾನು ಮೆಲ್ಲನೆ ಬಾಗಿಲು ತೆರೆದು ಹೊರಕ್ಕೆ ಬಂದುಬಿಟ್ಟೆ." ಮೇರಿಗೆ ಸಮಾಧಾನವಾಗತೊಡಗಿತು. ಅವಳು ಮುಂದುವರೆಸಿದಳು. "ಆ ದರಿದ್ರ ಕಾವಲುಗಾರ ಮುದುಕ ನಾನು ಹೊರಕ್ಕೆ ಬಂದಾಗ ಅರ್ಥಪೂರ್ಣವಾಗಿ 'ಹಾಂ' ಎಂಬ ಧ್ವನಿ ಹೊರಡಿಸಿದನು. ಏನೋ ನಡೆದಂತೆ."

ಅನಂತರ ಯಾರೂ ಏನನ್ನು ಮಾತನಾಡಲಿಲ್ಲ. ಕುಞ್ಞಮ್ಮ ಎದ್ದು ತನ್ನ ಮಂಚ ಹತ್ತಿ ಮಲಗಿದಳು.

ಅಣೆಕಟ್ಟು ಒಡೆದು ಹೋದಂತೆ ಮೇರಿಯ ವ್ಯಥೆಯು ಹೊರಕ್ಕೆ ಹರಿದು ಹೋಯಿತು. ಮೇರಿಯ ಮಾಂಸಖಂಡಗಳು ಸಡಿಲವಾದವು. ಅವಳು ಮಂಚದಲ್ಲಿ ಶಾಂತಿಯನ್ನು ಹುಡುಕುತ್ತಿದ್ದಳು.

ಕುಞ್ಞಮ್ಮಳು ಮುದುರಿಕೊಂಡು ಮಲಗಿದ್ದಳು. ಅವಳು ಆಗಾಗ್ಗೆ ಪಕ್ಕಕ್ಕೆ ಹೊರಳಿಯೂ ಉರುಳಾಡಿಯೂ ಮಾಡುತ್ತಿದ್ದಳು.

'ಹೂಯಿ' ಎಂಬ ಶಬ್ದ ಕುಞ್ಞಮ್ಮ ಹೊರಡಿಸಿದಾಗ ಮೇರಿ ಕೇಳಿದಳು.

"ಹುಂ ಹೇಳು, ಅಕ್ಕ, ಯಾರದ್ದು ಕಾಗದ ?"

ಕುಞ್ಞಮ್ಮ ಎದ್ದೇಳುತ್ತಾ ಹೇಳಿದಳು:

"ಅವರದೇನೇ, ನಾಳೆ ಇಲ್ಲಿಗೆ ಬರುತ್ತಾರಂತೆ."

"ಒಳ್ಳೆಯದಾಯಿತು." ಮೇರಿ ಮಂಚದಿಂದೆದ್ದು ಕುಞ್ಞಮ್ಮಳನ್ನು ತಬ್ಬಿ

ಹಿಡಿದುಕೊಂಡು ಭದ್ರವಾಗಿ ಅಮುಕಿದಳು. ಸ್ವಲ್ಪ ಹೊತ್ತಿನ ನಂತರ ಹಿಡಿತವನ್ನು ಬಿಟ್ಟು, ಹೇಳಿದಳು.

"ಸಂತೋಷಪಡು, ಅಕ್ಕ ಸಂತೋಷಪಡು. ನಿನ್ನ ಮುಖದಲ್ಲಿ ಏನೋ ಒಂದು ನಿಸ್ಸಹಾಯಕತೆ ಕಂಡಾಗ ನಾನು ಹಾಗೇ ನಡುಗಿಬಿಟ್ಟೆ. ಸುಮ್ಮನೆ ಅಭಿನಯಿಸುತ್ತಿದ್ದೆ. ಅಲ್ಲವೇ ?"

ಕುಞ್ಞಮ್ಮನ ಕಣ್ಣುಗಳಲ್ಲಿ ವಿಷಾದವು ಪ್ರತಿಬಿಂಬಿಸಿತ್ತು. ಸುಸ್ತಾದವಳಂತೆ ಅವಳು ಕಂಡುಬಂದಳು.

"ಲೇ ಮೇರಿ, ನನ್ನ ಕೈಯಲ್ಲಿ ಆಗೋದಿಲ್ಲ ಕಣೆ" ಕುಞ್ಞಮ್ಮ ಮಂಚದ ಮೇಲೆ ಮಲಗಿ ಅಳಲಾರಂಭಿಸಿದಳು. ಏನೂ ಅರ್ಥವಾಗದ ಮೇರಿ ದಿಟ್ಟಿಸಿ ನೋಡುತ್ತಾ ನಿಂತಳು.

"ಏನಾಯಿತು ಅಕ್ಕಾ ? ಹೇಳು."

"ಇಲ್ಲ, ಇಲ್ಲ. ಏನಿಲ್ಲ. ನಾನು ಸ್ವಲ್ಪ ಮಲಗಿಕೊಳ್ಳುತ್ತೇನೆ."

ಕುಞ್ಞಮ್ಮ ಮಂಚದ ಮೇಲೆ ಬೋರಲು ಮಲಗಿದಳು.

ಇಬ್ಬರೂ ಅವರವರ ಲೋಕದಲ್ಲಿ ಕೊರಗುತ್ತಿದ್ದರು.

ಮಾರನೆಯ ದಿವಸ ಪೆಟ್ಟಿಗೆಯೊಂದಿಗೂ ಹಾಸಿಗೆಯೊಂದಿಗೂ ಸೈನಿಕನು ಹಾಸ್ಟೆಲ್‌ಗೆ ಬಂದನು.

ಆ ಸೈನಿಕನಿಗೆ ಬಹಳ ಸುಸ್ತಾಗಿದ್ದಂತಿತ್ತು. ಬಹುಶಃ ದೂರ ಪ್ರಯಾಣ ಮಾಡಿ ಬಂದಿದ್ದರಿಂದ ಆಗಿರಬೇಕು. ಆಯಾಸಗೊಂಡಿದ್ದರೂ ಕುಞ್ಞಮ್ಮಳನ್ನು ಕಂಡಾಗ ಅವನ ಮುಖದಲ್ಲಿ ಆನಂದವು ಪ್ರತಿಬಿಂಬಿಸಿತು.

ಕುಞ್ಞಮ್ಮ ಒಂದು ಚರ್ಮದ ಬ್ಯಾಗ್‌ನೊಂದಿಗೆ ಹೊರಬಂದಳು. ಇಬ್ಬರೂ ರಿಕ್ಷಾದಲ್ಲಿ ಹತ್ತಿ ಹೊರಟುಹೋದರು.

ಮೇಟ್ರನ್ ಹೆಲೆನ್ ಸಿಂಗ್ ಕೋಣೆಯಲ್ಲಿದ್ದು ಅವರು ಹೋಗುವುದನ್ನೇ ನೋಡುತ್ತಾ, ಅವರಿಗೆ ಕಾಣಿಸದಂತೆಯೇ ಅವರಿಗೆ ಸುಖಪ್ರಯಾಣವನ್ನು ಹಾರೈಸಿದರು.

ಅವರು ರೂಢಿಯಾಗಿ ಉಳಿದುಕೊಳ್ಳುವ ಹೊಟೇಲ್‌ಗೆ ಬಂದರು. ಚಿರಪರಿಚಿತರಂತೆ ರಿಸೆಪ್ಷನಿಸ್ಟ್ ಅವರನ್ನು ನೋಡಿ ಮುಗುಳ್ನಕ್ಕಳು.

"ಪೊಲೀಸ್ ಕೆಲಸದಿಂದ ಸೈನ್ಯಕ್ಕೆ ಹೋದಿರೇನು ?"

ರಿಸೆಪ್ಷನಿಸ್ಟ್ ಸೈನಿಕನನ್ನು ಕೇಳಿದಳು.

"ಇಲ್ಲವಲ್ಲಾ, ನಾನು ಸೈನ್ಯದಲ್ಲೇ ಇದ್ದಿದ್ದು."

"ಸರಿ, ಸರಿ" ತನಗೇ ಎಲ್ಲೋ ತಪ್ಪಾಗಿರಬೇಕೆಂದು ರಿಸೆಪ್ಷನಿಸ್ಟ್ ಹೇಳಿದರು. ಆದರೆ ಕುಞ್ಞಮ್ಮ ಸ್ವಲ್ಪ ಗಾಬರಿಗೊಂಡಳು.

ಅವರು ಕೋಣೆಯೊಳಗೆ ಹೋದರು. ರಸ್ತೆಯೊಂದಿಗೆ ಅಭಿಮುಖವಾಗಿರುವ ಒಂದು ಕೋಣೆಯಾಗಿತ್ತದು. ಕಿಟಕಿಯನ್ನು ತೆರೆದು ಕುಞ್ಞಮ್ಮ ನಗರವನ್ನು ನೋಡುತ್ತಾ ನಿಂತಳು.

ಸೈನಿಕನು ಹಿಂದಿನಿಂದ ಬಂದು ಕುಞ್ಞಮ್ಮಳನ್ನು ತಬ್ಬಿಕೊಂಡನು.

"ಬಿಡಿ, ನನ್ನನ್ನು ಬಿಡಿ" ಕುಞ್ಞಮ್ಮ ಅಡ್ಡಿಪಡಿಸಿದಳು. "ಹೋಗಿ ನಿಮ್ಮ ಉಡುಪು ಬದಲಾಯಿಸಿ. ನಿಮ್ಮ ಖಾಕಿ ಉಡುಪು ನನ್ನ ಮೇಲೆ ತಗುಲಿದರೆ ನನಗೆ ನವೆಯಾಗುತ್ತದೆ. ಹೋಗಿ ಸ್ನಾನ ಮಾಡಿ. ಆಮೇಲೆ ಎಲ್ಲಾ ಆಗಲಿ."

ಆಶಾಭಂಗದಿಂದ ಪೆಚ್ಚಾದ ಸೈನಿಕನು ಹಿಡಿತವನ್ನು ಬಿಟ್ಟನು. ಅವನು ಬಾತ್ ರೂಮಿಗೆ ಹೋದಾಗ ಅವನಿಂದ ತಪ್ಪಿಸಿಕೊಂಡವಳಂತೆ ಕುಞ್ಞಮ್ಮ ಮತ್ತೆಯೂ ನಗರವನ್ನು ನೋಡುತ್ತಾ ಕುಳಿತಳು.

ಲೈಫ್‌ಬಾಯ್ ಸೋಪ್‌ನ ವಾಸನೆಯೊಂದಿಗೆ ಅವನು ಮತ್ತೆಯೂ ಬಂದನು. ಅವನ ದೇಹದಲ್ಲಿ ಹಣೆಯೂ ನೀರಿನಿಂದ ನೆನದವು.

ಕುಞ್ಞಮ್ಮ ಅವನಿಗೆ ಸೇರಿದಂತೆ ನಿಂತರೂ ಅವಳಿಗೆ ಆವೇಶವೋ ಬಿಸಿಯೋ ಇರಲಿಲ್ಲವಾಗಿತ್ತು.

ಅವನು ಅವಳನ್ನು ಬಿಟ್ಟು ಮಂಚದ ಮೇಲೆ ಸ್ವಲ್ಪ ಹೊತ್ತು ಒಬ್ಬನೇ ಮಲಗಿದನು. ಕುಞ್ಞಮ್ಮ ಕಿಟಕಿಯ ಮೂಲಕ ನಗರವನ್ನು ನೋಡುತ್ತಾ ಇದ್ದಳು.

ಸೈನಿಕನು ತನ್ನ ಪೆಟ್ಟಿಗೆ ತೆರೆದಾಗ ಆ ಟಿನ್‌ನ ಶಬ್ದ ಕೋಣೆಯಲ್ಲಿ ಪ್ರತಿಧ್ವನಿಸಿತು. ಅವನು ಅದರಿಂದ ಬನಾರಸ್ ಸೀರೆಯನ್ನೂ, ಕಾಶಿಯಿಂದ ತಂದ ಸರವನ್ನೂ, ಆಗ್ರಾದಿಂದ ತಂದ ಪೇಠ್* ಅನ್ನು ಹೊರಕ್ಕೆ ತೆಗೆದನು. ತನ್ನ ಪ್ರಿಯತಮೆಗಾಗಿ ತೆಗೆದುಕೊಂಡು ಬಂದ ಉಡುಗೊರೆಗಳನ್ನು ಅವನು ಮಂಚದ ಮೇಲೆ ಸಾಲಾಗಿಟ್ಟನು.

"ಕುಞ್ಞಮ್ಮ ನೀನಿಲ್ಲಿ ಬಾ. ರಸ್ತೆಯಲ್ಲಿ ನೀನ್ಯಾರನ್ನು ನೋಡುತ್ತಿದ್ದೆ ?"

ಸೈನಿಕನು ಬನಾರಸ್ ಸೀರೆಯನ್ನು ತೆಗೆದುಕೊಂಡು ಅದನ್ನು ಬಿಚ್ಚಿ ಹಿಡಿದನು. ತನ್ನ ದೇಹದ ಮೇಲೆ ಎಡದ ಕೈಯಿಂದ ಸೀರೆಯ ಸೆರಗನ್ನು ಎತ್ತಿ ಹಿಡಿದು ಸ್ತ್ರೀಯರು ನಡೆಯುವಂತೆ ನಡೆದನು.

"ಒಳ್ಳೆಯ ಸೀರೆ ಅಲ್ಲವೇ ? ನಿನಗಿಷ್ಟವಾಯಿತೇ ಕುಞ್ಞಮ್ಮ?" ಸೈನಿಕನು ಒಂದು ಸುತ್ತು ಹಾಕಿ ನಡೆದು ಕೇಳಿದನು.

ಕುಞ್ಞಮ್ಮಳಿಗೆ ಅದಾವುದರಲ್ಲೂ ಉತ್ಸಾಹವಿಲ್ಲವಾಗಿತ್ತು. ರಸ್ತೆಗಳಲ್ಲಿ ಬೆವರಿನಲ್ಲಿ ಮಿಂದು ಓಡಾಡುತ್ತಿರುವ ಮನುಷ್ಯರನ್ನೂ, ಮಾರಾಟವಾಗುತ್ತಿರುವ ಎತ್ತುಗಳನ್ನೂ, ನೊಣಗಳಂತೆ ಜನರು ಮುತ್ತಿಕೊಂಡು ನಿಂತಿರುವ ಸಂತೆಯ ಅಂಗಡಿಗಳನ್ನು ಯಾರಿಗಾಗಿಯೋ ಅವಳು ನೋಡುತ್ತಾ ನಿಂತಳು.

"ಕುಞ್ಞಮ್ಮ ಬಾ ಇಲ್ಲಿ. ನನ್ನ ಬಳಿ ಮಲಗಿಕೋ" ಉಡುಗೊರೆಗಳನ್ನು ಒಂದು ಪಕ್ಕಕ್ಕೆ ಸರಿಸಿ, ಹಾಸಿಗೆಯನ್ನು ಹಾಸಿ ಸೈನಿಕನು ಅವಳನ್ನು ಕರೆದನು.

ಸೈನಿಕನ ಸಹನೆ ಕೆಡುತ್ತಿತ್ತು. ಅವನು ಒಂದು ಸಿಗರೇಟ್ ತೆಗೆದುಕೊಂಡು ಹೊತ್ತಿಸಿದನು. ಎರಡು ಮೂರು ಸಲ ಹೊಗೆ ಸೇದಿಬಿಟ್ಟನಂತರ ಉರಿಯುತ್ತಿದ್ದ ಸಿಗರೇಟ್ ಅನ್ನು ಕಿಟಕಿಯ ಮೂಲಕ ರಸ್ತೆಗೆ ಎಸೆದನು. ದೊಡ್ಡ ಒಂದು ಸಿಡಿತ ಉಂಟಾಗುತ್ತೆಂದೂ, ಬೆಂಕಿ ಹತ್ತಿಕೊಳ್ಳುವುದೆಂದೂ ಅವನು ನಿರೀಕ್ಷಿಸಿದನು.

---

*ಆಗ್ರಾ ಪೇಠ್: ಬೂದಗುಂಬಳಕಾಯಿ ಸಕ್ಕರೆ ಹಾಕಿ ಮಾಡಿದ ಒಂದು ಸಿಹಿ ತಿಂಡಿ

ಗಂಟೆಯನ್ನು ಬಾರಿಸುತ್ತಾ ಅಗ್ನಿಶಾಮಕ ವಾಹನವು ಧಾವಿಸಿ ಬರುತ್ತದೆ. ದೀನರೋದನಗಳೂ, ಅಟ್ಟಹಾಸಗಳೂ ಮೊಳಗುತ್ತವೆ ಎಂದು ಅಂದುಕೊಂಡಿದ್ದನು. ಆದರೆ ಹತ್ತು ಹದಿನೈದು ನಿಮಿಷಗಳು ಕಳೆಯಿತಾದರೂ ಏನೂ ಸಂಭವಿಸಲಿಲ್ಲ.

ಸಹನೆ ಕಳಕೊಂಡು ಸೈನಿಕನು ತಕ್ಷಣವೇ ಎದ್ದು ಕುಞ್ಞಮ್ಮಳನ್ನು ಬಾಚಿ ಎತ್ತಿಕೊಂಡು ಬಂದು ಮಂಚದ ಮೇಲೆ ಮಲಗಿಸಿದನು. ಅನಂತರ ಅವನು ಏನೇನು ಮಾಡಿದನೆಂದು ಅವನಿಗೇ ತಿಳಿಯದು.

ಪ್ರಯಾಣದ ಆಯಾಸದಿಂದಲೂ, ಇತರ ಕ್ಲೇಶಗಳಿಂದಲೂ ಸೈನಿಕನು ತನಗೇ ತಿಳಿಯದೆ ನಿದ್ದೆ ಮಾಡಿಬಿಟ್ಟನು.

ನಿದ್ದೆಯಿಂದ ಆಕಸ್ಮಾತ್ತಾಗಿ ಬೆಚ್ಚಿಬಿದ್ದು ಎದ್ದಾಗ ಅವನ ಪಕ್ಕದಲ್ಲಿ ಕುಞ್ಞಮ್ಮ ಮಲಗೇ ಇದ್ದಳು. ಅವಳು ಅವಳನ್ನು ತಬ್ಬಿ ಹಿಡಿದುಕೊಂಡು ಚುಂಬಿಸಿದನು. ಆದರೆ ಮತ್ತೊಮ್ಮೆ ಚುಂಬಿಸಲು ಅವನಿಗೆ ಮನಸ್ಸೇ ಬರಲಿಲ್ಲ. ಕುಞ್ಞಮ್ಮ ಮಲಗಿದ್ದು ಅಷ್ಟರಮಟ್ಟಿಗೆ ನಿರ್ಜೀವವಾಗಿಯಾಗಿತ್ತು.

ಬಾಯಿಗೆ ಬಂದ ಕೆಟ್ಟ ಮಾತುಗಳಿಂದೆಲ್ಲಾ ಅವನು ಅವಳನ್ನು ಕರೆದನು. ಗ್ರಾಮದಲ್ಲೂ, ಸೈನ್ಯದಲ್ಲೂ ಕಲಿತ ಎಲ್ಲ ಬೈಗಳನ್ನೂ ಅವನು ಪ್ರಯೋಗಿಸಿದನು. ಸ್ತ್ರೀಕುಲವನ್ನು ಅಪಮಾನಿಸುವಂತಹ ಕೆಲಸಗಳನ್ನೆಲ್ಲಾ ಅವನು ಮಾಡಿದನು.

ಆದರೂ ಸಹ ಕುಞ್ಞಮ್ಮ ಅಲ್ಲಾಡಲಿಲ್ಲ.

ಸೈನಿಕನಿಗೆ ಕೋಪ ತಡೆಯಲಾಗದೆ ಕುಞ್ಞಮ್ಮಳ ಕಪಾಳಕ್ಕೆ ಬೀಸಿ ಹೊಡೆದನು.

ಕುಞ್ಞಮ್ಮ ಅಳಲಿಲ್ಲ. ಆಕ್ಷೇಪಿಸಲಿಲ್ಲ. ಮೌನವಾಗಿದ್ದಳು.

ಎಲ್ಲಾ ಪರಾಕ್ರಮಗಳೂ ಮುಗಿದಾಗ ಸೈನಿಕನು ಕ್ಷೀಣದಿಂದ ನಿಶ್ಶಕ್ತನಾದನು. ಅವನು ಸುಮ್ಮನೆ ಹಾಸಿಗೆಯಲ್ಲಿ ಮಲಗಿ ಟವಲ್‌ನಿಂದ ತನ್ನ ಬೆವರನ್ನು ಒರೆಸಿಕೊಳ್ಳಲು ಆರಂಭಿಸಿದನು.

ಇದ್ದಕ್ಕಿದ್ದಂತೆ ಕುಞ್ಞಮ್ಮ ಮಾತಾಡತೊಡಗಿದಳು.

"ನೋಡೀಂದ್ರೆ, ನನ್ನನ್ನು ಕ್ಷಮಿಸಿ."

ಕುಞ್ಞಮ್ಮಳ ಬಾಯಿಂದ ಈ ಮಾತುಗಳು ಹೊರಬಂದಾಗ ಸೈನಿಕನು ಅದುರಿಬಿದ್ದನು. ಅವನು ಕುಞ್ಞಮ್ಮಳನ್ನು ತಬ್ಬಿಕೊಂಡು ಕೇಳಿದನು.

"ಏನಾಯಿತು ನನ್ನ ರಾಣೀ ?"

"ನನ್ನನ್ನು ಕ್ಷಮಿಸಿ", ಕುಞ್ಞಮ್ಮ ಮತ್ತೆ ಹೇಳಿದಳು.

"ಸಾವಿರ ಸಲ ಕ್ಷಮಿಸಿದ್ದೇನೆ." ಸೈನಿಕನು ಹೇಳಿದನು "ನೀನು ಏನು ಬೇಕಾದರೂ ಹೇಳು."

"ಅದೇ, ಅದೇ ನಾನು ಹೇಳಬೇಕೆಂದಿರುವುದು. ನಿಮಗಿಷ್ಟವಿಲ್ಲದ ಒಂದು ವಿಷಯವನ್ನು ನಾನು ಹೇಳುತ್ತೇನೆ."

"ಹೇಳು ರಾಣಿ, ನನ್ನ ಹೃದಯದ ರಾಣೀ...."

ಕುಞ್ಞಮ್ಮ ಸೈನಿಕನಿಂದ ಸ್ವಲ್ಪ ದೂರ ಸರಿದು ಮಲಗಿ ಅನಂತರ ಅವನ ಮುಖವನ್ನು ನೋಡದೆಯೇ ಹೇಳಿದಳು.

"ನಾನು ಗರ್ಭಿಣಿಯಾಗಿದ್ದೇನೆ."

"ಏನು ?" ಸೈನಿಕನು ಸಿಡಿದೆದ್ದು ಕೇಳಿದನು.

"ಹೌದು, ನಿಜವಾಗಿಯೂ, ನಾನು ಶರ್ಮಾಜಿಯ ಗರ್ಭವನ್ನು ಹೊತ್ತು ನಡೆಯುತ್ತಿದ್ದೇನೆ."

ಸೈನಿಕನು ಉದ್ವೇಗದಿಂದ ಕುಣಿದಾಡತೊಡಗಿದನು.

"ಯಾರು ಈ ಶರ್ಮ ? ಅವನನ್ನು ನಾನು ಕೊಲ್ಲುತ್ತೇನೆ."

ಸ್ವಲ್ಪ ಹೊತ್ತಾದ ಮೇಲೆ ಸೈನಿಕನು ಶಾಂತನಾದಾಗ ಕುಞ್ಞಮ್ಮ ಎಲ್ಲಾ ರಹಸ್ಯಗಳನ್ನು ಸೈನಿಕನೊಂದಿಗೆ ವಿವರವಾಗಿ ಹೇಳಿದಳು.

ಇದೆಲ್ಲಾ ಕೇಳಿದ ಸೈನಿಕನು ಮೊದಲು ನಿರ್ವಿಕಾರನಾಗಿ ನಿಂತನು. ಆಮೇಲೆ ಅವನು ಕುಞ್ಞಮ್ಮಳ ಕಿಬ್ಬೊಟ್ಟೆಯ ಮೇಲೆ ಮುಖವನ್ನದುಮಿಕೊಂಡು ಪುಟ್ಟ ಹುಡುಗನಂತೆ ಬುಳಬುಳನೆ ಕಣ್ಣೀರು ಸುರಿಸಿದನು.

ಸ್ವಲ್ಪ ಹೊತ್ತಿನವರೆಗೂ ಆ ಅಳು ಸತತವಾಗಿ ಕೇಳಿಸುತ್ತಿತ್ತು. ಅರ್ಧ ರಾತ್ರಿಯಾಗುವ ವೇಳೆಗೆ ಸೈನಿಕನ ಅಳು ನಿಂತಿತು. ಅನಂತರ ಕುಞ್ಞಮ್ಮ ಬೆಳಗ್ಗೆ ಎದ್ದು ನೋಡಿದಾಗ ಅವನು ತನ್ನ ಟಿನ್‌ನ ಪೆಟ್ಟಿಗೆಯನ್ನೂ ಹಾಸಿಗೆಯನ್ನೂ ತೆಗೆದುಕೊಂಡು ಹೊರಟುಹೋಗಿದ್ದನು.

ಕುಞ್ಞಮ್ಮಳಿಗೆ ದುಃಖವೋ ವ್ಯಾಕುಲವೋ ತೋರಲಿಲ್ಲ. ಅವಳು ಅದನ್ನು ನಿರೀಕ್ಷಿಸಿದ್ದಂತೆ ತೋರಿತು.

ತನ್ನ ಚರ್ಮದ ಬ್ಯಾಗ್ ಅನ್ನು ತೆಗೆದುಕೊಂಡು ಕುಞ್ಞಮ್ಮ ಹಾಸ್ಟೆಲ್‌ಗೆ ಹೋದಳು.

ಕುಞ್ಞಮ್ಮಳನ್ನು ಕಂಡಾಗ ಮೇರಿ ಆಶ್ಚರ್ಯದಿಂದ ಕೇಳಿದಳು.

"ಏನಾಯಿತು ಅಕ್ಕಾ ?"

"ಏನಿಲ್ಲ ತಂಗಿ, ಅವರು ಹೊರಟುಹೋದರು."

"ಎಲ್ಲಿಗೆ ?"

"ಎಲ್ಲಿಂದ ಬಂದರೋ ಅಲ್ಲಿಗೇ ಹೋಗಿರಬೇಕು."

ಕುಞ್ಞಮ್ಮ ಇಷ್ಟು ಹೇಳಿ ಒಂದು ಪೇಪರ್ ತೆಗೆದುಕೊಂಡು ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿಗೆ ಕಾಗದ ಬರೆಯಲು ಆರಂಭಿಸಿದಳು.

ಅಂದು ಸಾಯಂಕಾಲ ಶರ್ಮಾಜಿ ಯೂನಿಫಾರಂನಲ್ಲಿ ಹಾಸ್ಟೆಲ್‌ಗೆ ಬಂದನು. ನೋಡಲು ಬಲು ಲಕ್ಷಣವಾಗಿದ್ದನಾತ. ಶರ್ಮಾಜಿಯ ಪರ್ಸನಾಲಿಟಿ ಸ್ಪಷ್ಟವಾಗಿ ಕಾಣುವುದು ಯೂನಿಫಾರಂ ಹಾಕಿಕೊಂಡಾಗ ಮಾತ್ರ.

ಅತಿಥಿ ಕೋಣೆಯಲ್ಲಿ ಶರ್ಮಾಜಿಯ ಪಕ್ಕದಲ್ಲಿ ಅವನಿಗೆ ಅಂಟಿಕೊಂಡಂತೆ ಕುಳಿತುಕೊಂಡು ಕುಞ್ಞಮ್ಮ ವಿಷಯಗಳನ್ನೆಲ್ಲಾ ಹೇಳಿದಳು.

"ಹುಡುಗೀ ನೀನೇಕೆ ಹೆದರುತ್ತೀಯಾ ? ಸೈನಿಕನು ವಾಪಸ್ ಬರುತ್ತಾನೆ. ಹೊರಟು ಹೋದರೂ ಅವನು ಎಲ್ಲಿ ಹೋಗಿ ಸೇರುತ್ತಾನೆಂದು ನನಗೆ ಗೊತ್ತು."

"ಆದರೆ ನನಗೆ ಆತನು ವಾಪಸ್ ಬರಬೇಕೆಂದಿಲ್ಲ."

ಕುಞ್ಞಮ್ಮ ಶರ್ಮಾಜಿಯ ನಿರೀಕ್ಷೆಗಳ ಎತ್ತರಕ್ಕೆ ಬರಲಾರಳು.

"ಮತ್ತೆ ನಿನ್ನ ಮಗುವಿಗೆ ಒಬ್ಬ ತಂದೆ ಬೇಡವೇ ?" ಒಂದು ಪವಾಡವನ್ನು

ಕಂಡಂತೆ ಶರ್ಮಾಜಿ ಹೇಳಿದನು.

"ನನ್ನ ಮಗುವಿಗೆ ತಂದೆ ಬೇರೆ ಇದ್ದಾರಲ್ಲಾ" ಕುಞ್ಞಮ್ಮ ಸತ್ಯವನ್ನು ಹೇಳಿದಳು.

"ನಿನ್ನ ಮಗುವಿಗೆ ತಂದೆ ನಿನ್ನ ಗಂಡನೇ ಆಗಬೇಕು ಅಲ್ಲವೇ ? ಲೋಕರೂಢಿ ಅದಲ್ಲವೇ ?" ಶರ್ಮಾಜಿ ಬೇರೊಂದು ಸತ್ಯವನ್ನು ಹೇಳಿದನು.

"ಅದಕ್ಕೆ...." ಕುಞ್ಞಮ್ಮ ಮಧ್ಯದಲ್ಲೇ ಅವನ ಮಾತುಗಳನ್ನು ನಿಲ್ಲಿಸಿ ಹೇಳಿದಳು.

"ನನ್ನ ಆತನು ಆತ್ಮಾಭಿಮಾನವಿರುವ ಒಬ್ಬ ಮನುಷ್ಯನು. ಶರ್ಮಾಜಿಯ ಮಗುವೇ ನನ್ನ ಹೊಟ್ಟೆಯಲ್ಲಿರುವುದೆಂದು ತಿಳಿದ ನಿಮಿಷವೇ ಆತನು ನನ್ನನ್ನು ಬಿಟ್ಟುಹೋದನು. ಅದು ಅವನ ನೀತಿ."

ಶರ್ಮಾಜಿಯ ಮೈಯಲ್ಲಿ ಒಳಗೇ ನಡುಕವೆದ್ದಿತು. ಅವನ ರೋಮಗಳು ಒಂದು ನಿಮಿಷ ಎದ್ದು ನಿಂತವು.

"ನನಗಿನ್ನು ಯಾರೂ ಬೇಡ. ನನಗೆ ನನ್ನ ಶರ್ಮಾಜಿ ಸಾಕು" ಅವನಿಗಾಗಿ ಹಲುಬುತ್ತಿರುವಂತೆ ಕುಞ್ಞಮ್ಮ ಹೇಳಿದಳು.

"ಅದಕ್ಕೇನು ನಾನಿಲ್ಲೇ ಇದ್ದೇನಲ್ಲಾ" ಶರ್ಮಾಜಿ ಕೃತಕವಾದ ಮುಗುಳ್ನಗೆಯನ್ನು ಬರಿಸಿಕೊಂಡು ಹೇಳಿದನು.

"ಇದ್ದರೆ ಸಾಲದು. ನನ್ನ ಮಗುವಿಗೆ ತಂದೆ ಶರ್ಮಾಜಿ ಎಂದು ಲೋಕಕ್ಕೇ ತಿಳಿಯಬೇಕು " ಕುಞ್ಞಮ್ಮ ಆವೇಶದಿಂದ ಹೇಳಿದಳು." ಆ ಸುದಿನಕ್ಕೋಸ್ಕರ ನಾನು ಈ ಕುಞ್ಞಮ್ಮ ಕಾದಿದ್ದೇನೆ."

"ಅಯ್ಯೋ ನನ್ನನ್ನು ಹಾಳು ಮಾಡಬೇಡ" ಶರ್ಮಾಜಿ ಎದ್ದು ನಿಂತು ಮೇಜಿನ ಮೇಲೆ ಇಟ್ಟಿದ್ದ ತನ್ನ ಟೋಪಿಯನ್ನು ತೆಗೆದುಕೊಂಡು ತಲೆಯ ಮೇಲೆ ಸರಿಯಾಗಿಟ್ಟುಕೊಂಡನು. ಕಪ್ಪಗಿನ ಚಿಕ್ಕ ಲಾಠಿಯನ್ನು ಸವರುತ್ತಾ ಹೇಳಿದನು.

"ಹುಡುಗೀ, ಕುಞ್ಞಮ್ಮ ನೀನು ಹುಷಾರಾಗಿಲ್ಲವೇ ?"

"ನನಗೆ ಯಾವ ಕಾಯಿಲೆಯೂ ಇಲ್ಲ" ಕುಞ್ಞಮ್ಮ ಒಳ್ಳೆ ಮೂಡ್‌ನಲ್ಲಿದ್ದಳು.

"ಹಾಗಾದರೆ ಹುಡುಗೀ ಕೇಳು" ಶರ್ಮ ತನ್ನ ಸಣ್ಣ ಲಾಠಿಯೊಂದಿಗೆ ಒಮ್ಮೆ ತಿರುಗಿದನು. ಅನಂತರ ಹೇಳಿದನು "ಹಾಗಾದರೆ, ಈ ಪಟ್ಟಣದಲ್ಲೇನೇ ನನಗೆ ಅಪ್ಪಾ ಎಂದು ಕರೆಯಲು ಕಡಿಮೆ ಎಂದರೆ ಹತ್ತು ಮಕ್ಕಳಾದರೂ ಇರುತ್ತಾರೆ. ಅವರಿಗೆ ಹತ್ತು ತಾಯಂದಿರೂ ಇರುತ್ತಾರೆ."

ಕುಞ್ಞಮ್ಮ ಎದ್ದು ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿಯ ಬಳಿ ಬಂದಳು.

ಶರ್ಮ ತನ್ನ ಸಣ್ಣ ಲಾಠಿಯಿಂದ ಮುಂದೆ ಬರುತ್ತಿದ್ದ ಕುಞ್ಞಮ್ಮಳನ್ನು ಅವಳ ಹೊಟ್ಟೆಯ ಮೇಲೆ ತಿವಿದು ನಿಲ್ಲಿಸಿದನು. ಅನಂತರ ಮೆಲ್ಲನೆ ಅವಳನ್ನು ತಳ್ಳಿದನು.

ಕುಞ್ಞಮ್ಮ ಸೋಫಾದ ಮೇಲೆ ಬಿದ್ದುಬಿಟ್ಟಳು.

ತನ್ನ ಟೋಪಿಯನ್ನು ಮತ್ತೊಮ್ಮೆ ತಲೆಯ ಮೇಲೆ ಸರಿಯಾಗಿಟ್ಟುಕೊಂಡು ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿ ತನ್ನ ಸಣ್ಣ ಲಾಠಿಯನ್ನು ತಿರುಗಿಸುತ್ತಾ ನರ್ಸುಗಳ ಹಾಸ್ಟೆಲಿನ ಗೇಟನ್ನು ದಾಟಿ ಹೊರಕ್ಕೆ ಹೋದನು.

# ಹದಿನೆಂಟು

ಮೇಟ್ರನ್ ಹೆಲೆನ್ ಸಿಂಗ್ ರಜಾ ದಿನವನ್ನು ಆಚರಿಸುತ್ತಿದ್ದರು. ಆಕೆ ಒಂದು ಹಳೆಯ ಬ್ಯಾಗ್‌ನಿಂದ ಅನೇಕ ಸೀರೆಗಳನ್ನು ತೆಗೆದು ಮಂಚದ ಮೇಲೆ ಸಾಲಾಗಿ ಅಣಿಮಾಡಿ ಅವುಗಳನ್ನು ಇಲ್ಲಿಂದ ಅಲ್ಲಿಗೆ ಬದಲಾಯಿಸುತ್ತಲೂ ಬೇರೆಯಾಗಿಡುತ್ತಲೂ ಇದ್ದರು. ಅನಂತರ ಬಗೆಬಗೆಯ ವರ್ಣಗಳು ಹೊಂದಿಕೊಳ್ಳುವ ವಿಧದಲ್ಲಿ ಅವುಗಳನ್ನು ಅಣಿಮಾಡಲೋಸುಗ ಆಕೆ ಪ್ರಯತ್ನಿಸತೊಡಗಿದರು.

ಬಾಗಿಲಿನ ಮೇಲೆ ಯಾರೋ ತಟ್ಟಿದಂತಾಯಿತು.

"ಒಳಕ್ಕೆ ಬಾ" ಮೇಟ್ರನ್ ತಲೆಯೆತ್ತಿ ಕರೆದರು.

ಮೇರಿ ಒಳಕ್ಕೆ ಬಂದಳು.

"ಶಭಾಷ್" ಮೇರಿಯನ್ನು ಕಂಡಾಗ ಮೇಟ್ರನ್ ಸಂತೋಷದಿಂದ ಹೇಳಿದರು. "ನೀನು ಒಳ್ಳೆಯ ಸಮಯಕ್ಕೆ ಬಂದೆ."

ಮೇರಿ, ಹೆಲೆನ್ ಸಿಂಗ್‌ರ ಮುಂದೆ ಬಂದು ನಿಂತಳು. ಮಂಚದ ಮೇಲೆ ಹರಡಿದ್ದ ಸೀರೆಗಳತ್ತ ಅವಳ ಗಮನ ಸೆಳೆಯಲೆತ್ನಿಸುತ್ತಾ ಮೇಟ್ರನ್ ಹೇಳಿದರು.

"ಚೆನ್ನಾಗಿರುವ, ನಾನು ಉಟ್ಟರೆ ನನಗೆ ಹೊಂದುವ ಒಂದು ಸೀರೆಯನ್ನು ಮುಟ್ಟಿ ತೋರಿಸುತ್ತೀಯಾ, ಮೇರಿ ?"

ಮೇರಿ ಸೀರೆಗಳ ಮೇಲೆ ತನ್ನ ಕಣ್ಣೋಡಿಸಿದಳು. ಅನಂತರ ಸ್ವಲ್ಪ ಹೊತ್ತು ಮೇಟ್ರನ್‌ರವರನ್ನು ನೋಡಿದಳು. ಆಗ ಹೆಲೆನ್ ಸಿಂಗ್ ಕೇಳಿದರು:

"ಮೇರಿ, ಇದುವರೆಗೆ ನನ್ನನ್ನೆಂದೂ ಕಾಣದವಳಂತೆ ನನ್ನನ್ನು ಹೀಗೇಕೆ ನೋಡುತ್ತಿದ್ದೀ ?"

ಮೇರಿ ಹೇಳಿದಳು:

"ಏನಿಲ್ಲ ಮೇಟ್ರನ್ ಇಂದು ನಿಮ್ಮ ಮೂಡ್ ನೋಡುತ್ತಿದ್ದೇನೆ. ಒಂದೊಂದು ನಿಮಿಷವೂ ಒಂದೊಂದು ದಿನಕ್ಕೂ ನೀವು ಬದಲಾಗುತ್ತಾ ಇರುತ್ತೀರಿ."

"ಪರವಾಗಿಲ್ಲವಲ್ಲಾ ?" ಮೇಟ್ರನ್ ಹೇಳಿದರು. "ಹುಡುಗಿಗೆ ಆತ್ಮಸ್ಥೈರ್ಯ ಹೆಚ್ಚುತ್ತಿದೆಯಲ್ಲಾ ?"

ಒಂದು ನಿಮಿಷ ಸಂದೇಹಿಸುತ್ತಾ ಶಾಸ್ತ್ರ ಹೇಳುವ ಗಿಣಿ ಕಾರ್ಡನ್ನು ಕಚ್ಚಿ ತೆಗೆದುಕೊಡುವಂತೆ ಮೇರಿ ಒಂದು ಸೀರೆಯನ್ನು ತೆಗೆದು ಹೆಲೆನ್ ಸಿಂಗ್‌ಗೆ ನೀಡಿದಳು.

"ಭೇಷ್" ಮೇಟ್ರನ್ ಹೇಳಿದರು. "ನಾನೂ ಅದನ್ನೇ ಸೆಲೆಕ್ಟ್ ಮಾಡಿದ್ದೆ. ನಿನ್ನ ಸೌಂದರ್ಯ ಪ್ರಜ್ಞೆಯೂ ವರ್ಧಿಸುತ್ತಿದೆಯಲ್ಲಾ, ಮೇರಿ ?"

ಆ ಸೀರೆಯನ್ನು ಬಿಡಿಸಿ ತನ್ನ ಭುಜದ ಮೇಲೆ ಹಾಕಿಕೊಂಡು ನಂತರ ಹೆಲೆನ್

ಸಿಂಗ್ ನಿಲುಗನ್ನಡಿಯ ಮುಂದೆ ಹೋಗಿನಿಂತು ತಮ್ಮನ್ನು ಸೈಡ್‌ಪೋಸ್‌ಗಳಿಂದ ನೋಡಿಕೊಂಡರು.

"ಚೆನ್ನಾಗಿದೆ." ಹೆಲೆನ್ ಸಿಂಗ್ ತಾವೇ ಹೇಳಿಕೊಂಡರು.

ಮೇರಿಯನ್ನಾಕೆ ಕೇಳಿದರು.

"ಸರಿ ನಿನ್ನ ಕಾರ್ಯಕ್ರಮವೇನು ?"

"ಸ್ವಲ್ಪ ಹೊರಕ್ಕೆ ಹೋಗಬೇಕಿತ್ತು" ಮೇರಿ ಹೇಳಿದಳು.

"ಡಾಕ್ಟರ್ ರವೀಂದ್ರನಾಥ್‌ನೊಂದಿಗೇನು ?" ಹೆಲೆನ್ ಸಿಂಗ್ ಮುಖಕ್ಕೆ ರಾಚಿದಂತೆ ಕೇಳಿಬಿಟ್ಟರು. "ಯಾರೊಂದಿಗೆ ಓಡಿಯಾಡಿದರೂ, ಯಾರನ್ನು ಪ್ರೀತಿಸಿದರೂ ಸರಿ, ಡಾಕ್ಟರ್‌ಗಳನ್ನು ನಂಬಬೇಡವೆಂದು ನಾನು ಹೇಳಿದ್ದನ್ನು ಮರೆತೆಯಾ, ಮೇರಿ ?"

ಮೇರಿ ಸ್ವಲ್ಪ ಹೊತ್ತು ಸ್ತಬ್ಧಳಾಗಿ ನಿಂತಳು.

"ಪರವಾಗಿಲ್ಲ ಮಗು. ನೀನೇಕೆ ಭಯ ಪಡುತ್ತೀ ? ರವೀಂದ್ರನಾಥ್‌ನ ಜೊತೆ ಹೋದರೂ ತೊಂದರೆಯೇನಿಲ್ಲ. ಅವನು ಒಳ್ಳೆಯ ಮನುಷ್ಯನೇ. ಆದರೆ ಅನಂತರ ಸಮಸ್ಯೆಗಳನ್ನೇನೂ ಉಂಟು ಮಾಡಬೇಡ. ಗೊತ್ತಾಯಿತೇ ?" ಹೆಲೆನ್ ಸಿಂಗ್ ಮೇರಿಯನ್ನು ನೋಡಿ ಚಿಕ್ಕದಾಗಿ ಕಣ್ಣು ಮಿಟಕಿಸಿ ಹೇಳಿದರು.

"ಬೈದಿ ವೇ, ಕುಞ್ಞಮ್ಮ ಲೀವ್ ಯಾಕೆ ಕ್ಯಾನ್ಸಲ್ ಮಾಡಿ ವಾಪಸ್ ಬಂದಿದ್ದು ?" ಮೇಟ್ರನ್ ಕೇಳಿದರು.

"ಆತನಿಗೆ ಇದ್ದಕ್ಕಿದ್ದಂತೆ ಕೆಲಸ ಮಾಡುತ್ತಿರುವ ಸ್ಥಳಕ್ಕೇನೆ ಹೋಗಬೇಕಾಗಿ ಬಂತು." ಮೇರಿ ಹೇಳಿದಳು.

"ಏನಾಯಿತು ?"

"ರೆಜಿಮೆಂಟ್‌ನಿಂದ ಟೆಲಿಗ್ರಾಂ ಬಂತು."

"ಓಹೋ. ಬಾರ್ಡರ್‌ನಲ್ಲೇನಾದರೂ ಯುದ್ಧ ಪ್ರಾರಂಭವಾಯಿತೋ ಏನೋ ?" ಹೆಲೆನ್ ಸಿಂಗ್‌ಗೆ ಸಂದೇಹ ಬಂದಿತ್ತು.

"ಏನೋ ಯಾರಿಗೆ ಗೊತ್ತು ?" ಮೇರಿ ತಪ್ಪಿಸಿಕೊಂಡಳು.

"ಸರಿ ಸರಿ, ಬೋಗಸ್ ಥಿಂಗ್ಸ್. ಹೆಲೆನ್ ಸಿಂಗ್ ಹೇಳಿದರು. ನೀನು ನನಗೆ ಸ್ವಲ್ಪ ಸಹಾಯ ಮಾಡು. ಸಾಧ್ಯವಾದರೆ ಇವತ್ತಿನ ನಿನ್ನ ಪ್ರೋಗ್ರಾಂ ಕ್ಯಾನ್ಸಲ್ ಮಾಡು."

ಹಾಗಾದರೆ ಹಾಗೇ ಮಾಡುತ್ತೇನೆ ಎಂಬ ರೀತಿಯಲ್ಲಿ ಮೇರಿ ನಿಂತಳು.

"ನನಗೊಬ್ಬರು ಅತಿಥಿ ಇದ್ದಾರೆ. ಒಬ್ಬ ವಿಶೇಷ ಅತಿಥಿ. ಆ ಪ್ಯಾರೇಲಾಲ್ ಬರಲೂ ಇಲ್ಲ. ಎಲ್ಲಿ ಹೋಗಿ ಹಾಳಾದನೋ."

"ನಾನೇ ಇಲ್ಲಿ ನಿಲ್ಲುತ್ತೇನೆ" ಮೇರಿ ಒಪ್ಪಿಕೊಂಡಳು.

"ಥ್ಯಾಂಕ್ ಯು." ಹೆಲೆನ್ ಸಿಂಗ್‌ರ ತುಟಿಯಲ್ಲಿ ಒಂದು ಮುಗುಳ್ನಗೆ ಬಿರಿಯಿತು. ಆಕೆ ಕಿಚನ್‌ಗೆ ಹೋದರು.

"ಮೊಟ್ಟೆ ಬೇಯಿಸಿಟ್ಟಿದ್ದೇನೆ. ಅದರ ಸಿಪ್ಪೆ ತೆಗೆದು ಮೊಟ್ಟೆಗೆ ಮೆಣಸಿನ ಪುಡಿ ಹಚ್ಚಿ ಅದನ್ನು ತುಪ್ಪದಲ್ಲಿ ಹುರಿದು ತೆಗೆಯಬೇಕು. ಟೊಮೊಟೊ ಜ್ಯೂಸ್‌ನಲ್ಲಿ ಸಾಸೇಜ್ ಮಾಡಬೇಕು. ಹಸುವಿನ ಮಾಂಸ ಕುಯ್ದಿಟ್ಟಿದ್ದೇನೆ. ಹಸಿ ಮೆಣಸಿನಕಾಯಿ,

ಈರುಳ್ಳಿ, ಬೆಣ್ಣೆ ಸೇರಿಸಿ ಅದನ್ನು ಫ್ರೈ ಮಾಡಬೇಕು. ಸ್ವಲ್ಪ ಹಸಿಬಟಾಣಿಯನ್ನು ಸೇರಿಸಿ ಮಾಡಿದ ನೂಡಲ್ಸ್, ಫ್ರಿಡ್ಜ್‌ನಲ್ಲಿದೆ. ಅದನ್ನು ಬಿಸಿ ಮಾಡಿದರೆ ಸಾಕು. ಬ್ರೆಡ್, ಇನ್ನು ಬೇಕಿದ್ದವೆಲ್ಲವನ್ನೂ ಪ್ಯಾರೇಲಾಲ್ ತರುತ್ತಾನೆ." ಒಂದೇ ಉಸಿರಿನಲ್ಲಿ ಇಷ್ಟನ್ನು ಹೇಳಿ ಮೇಟ್ರನ್ ರೂಮ್‌ಗೆ ಹೋದರು.

ಮೇರಿ ಕೆಂಪಗೆ ಗುಂಡಗಿದ್ದ ಐದಾರು ಟೊಮೊಟೋಗಳನ್ನು ಹಿಂಡಿ ಜ್ಯೂಸ್ ತೆಗೆದಳು. ಈರುಳ್ಳಿಯನ್ನು ಹೆಚ್ಚಿದಳು. ಹಸಿ ಮೆಣಸಿನಕಾಯಿ ಚೂರು ಚೂರಾಗಿ ಕತ್ತರಿಸಿದಳು. ಎಲೆಕ್ಟ್ರಿಕ್ ಸ್ಟೌ ಮೇಲೆ ಫ್ರೈಯಿಂಗ್ ಪ್ಯಾನ್‌ನಲ್ಲಿ ಬೆಣ್ಣೆಯನ್ನು ಕಾಸಿದಳು. ಈರುಳ್ಳಿಯನ್ನು ಹಸಿಮೆಣಸಿನ ಕಾಯಿಯನ್ನು ತುಪ್ಪದಲ್ಲಿ ಹುರಿದು ಅದು ಕಪ್ಪಾಗತೊಡಗಿದಾಗ ಟೊಮೊಟೊ ಜ್ಯೂಸ್ ಅನ್ನು ಫ್ರೈಯಿಂಗ್ ಪ್ಯಾನ್‌ನಲ್ಲಿ ಸುರಿದಳು. ಅದು ಬಿಸಿಯಾದಾಗ ಸಾಸೇಜ್‌ನ ಟಿನ್ ಒಡೆದು ಸಾಸೇಜ್ ಇನ್ನು ಫ್ರೈಯಿಂಗ್ ಪ್ಯಾನ್‌ನಲ್ಲಿ ಸುರಿದಳು. ಎಲ್ಲವನ್ನೂ ಚೆನ್ನಾಗಿ ಸೇರಿಸಿ ಕಲಕುತ್ತಿರಬೇಕಾದರೆ ಮೇರಿಗೆ ಎಂದೂ ಇಲ್ಲದ ಒಂದು ಆಹ್ಲಾದವು ತೋರಿತು. ಹೆಲೆನ್ ಸಿಂಗ್‌ರ ವಿಶೇಷ ಅತಿಥಿ ತನ್ನ ಕೈಯಿಂದ ಮಾಡಿದ ಸಾಸೇಜ್ ಅನ್ನು ತಿನ್ನುವುದನ್ನು ಮೇರಿ ತನ್ನ ಊಹಾಲೋಕದಲ್ಲಿ ಕಂಡಳು.

ಸ್ವಲ್ಪ ಹೊತ್ತಿನಲ್ಲಿ ಕಿಚನ್‌ನಲ್ಲಿ ಬಾಯಲ್ಲಿ ನೀರೂರುವ ಬಗೆಬಗೆಯ ವಾಸನೆಗಳುಂಟಾದುವು. ಮೇರಿ ಬೆವರಿನಲ್ಲಿ ಮಿಂದಳು.

"ನನ್ನ ಕೋಣೆಯನ್ನು ನೀನೊಂದು ಭೋಜನ ಶಾಲೆಯನ್ನಾಗಿ ಮಾರ್ಪಡಿಸಿ ಬಿಟ್ಟೆಯಲ್ಲಾ?" ಕಿಚನ್ ಪ್ರವೇಶಿಸಿದ ಮೇಟ್ರನ್ ಮೇರಿಯ ಬೆನ್ನು ತಡವುತ್ತಾ ಹೇಳಿದರು. ಆಕೆಯ ಎಡಗೈನಲ್ಲಿ ಸ್ಟಾಂಪ್‌ಗಳಿರುವ ಆಲ್ಬಂ ಇತ್ತು. ಇಷ್ಟು ಹೊತ್ತೂ ಆಕೆ ನೋಡುತ್ತಾ ನಿಂತಿದ್ದಿರಬೇಕು. ಖಂಡಿತ.

ಪ್ಯಾರೇಲಾಲ್ ಒಂದು ಚೀಲದಲ್ಲಿ ಸಾಮಾನುಗಳೊಂದಿಗೆ ಕಿಚನ್ ಅನ್ನು ಪ್ರವೇಶಿಸಿದನು.

ಎರಡು ಬಾಟಲ್ ಬೀರ್, ಒಂದು ಲಂಡನ್ ಲೂಡ್ಸ್ ಚೆನ್, ಬ್ರೆಡ್, ಜಾಮ್, ಕೇರ್ ಫ್ರೀ.

"ನೀನೇಕೆ ಇಷ್ಟು ತಡಮಾಡಿದೆ?" ಹೆಲೆನ್ ಸಿಂಗ್ ರೇಗಿದಳು.

"ಮೇಂ ಸಾಬ್, ಬೀರ್ ಬರಲು ತಡವಾಯಿತು. ಬೇಸಗೆಯ ಕಾಲವಲ್ಲವೇ? ಒಂದು ಬಂದದ್ದೆಲ್ಲಾ ಜನರು ಆಗಿಂದಾಗ ಕುಡಿದು ಮುಗಿಸಿಬಿಡುತ್ತಾರೆ." ಒಂದು ಕ್ಷಮಾಪಣೆಯೊಂದಿಗೆ ಪ್ಯಾರೇಲಾಲ್ ಹೇಳಿದನು.

"ಸರಿ ಇಂದು ನೀನು ಬೇಗ ಹೋಗು. ಪಾತ್ರೆಗಳನ್ನು ಬೆಳಗ್ಗೆ ಬಂದು ತೊಳೆದುಕೊಟ್ಟರೆ ಸಾಕು." ಮೇಟ್ರನ್ ಹೇಳಿದರು. "ಹ್ಹಾ, ಮತ್ತೆ ನನಗಿಂದು ಕಾಗದಗಳೇನೂ ಬರಲಿಲ್ಲವೇನು?"

"ಇಲ್ಲ ಮೇಂ ಸಾಬ್, ಬಂದದ್ದೆಲ್ಲಾ ಆಫೀಸ್‌ಗೇನೇ."

ರೂಢಿಯಂತೆ ಪ್ಯಾರೇಲಾಲ್ ಹೇಳಿದನು.

"ಸರಿ, ನಾಳೆ ಬರುತ್ತೆಂದು ಕಾಣುತ್ತೆ" ರೂಢಿಯಂತೆ ಹೆಲೆನ್ ಸಿಂಗ್ ಹೇಳಿದರು.

ಹೊರಗೆ ಧ್ವನಿ ಕೇಳಿಸಿದಾಗ ಕೋಣೆಯನ್ನು ಪ್ರವೇಶಿಸಿದ ಹೆಲೆನ್ ಸಿಂಗ್ ಬಾಗಿಲು ತೆರೆದು ನೋಡಿದರು.

ತಿವಾರಿಬಾಬು ನಸುನಗುತ್ತಾ ಹೊರಗೆ ನಿಂತಿದ್ದನು.

"ಮಿಸೆಸ್ ಬರಲಿಲ್ಲವೇ ?" ಹೆಲೆನ್ ಸಿಂಗ್ ಕೇಳಿದರು.

"ಒಳ್ಳೆ ಮಾತಿದು." ಹೊಸಿಲು ದಾಟುವಾಗ ತಿವಾರಿ ಹೇಳಿದನು. "ನೀವು ನನ್ನೊಂದಿಗೆ ಒಬ್ಬನೇ ಬರಬೇಕೆಂದಲ್ಲವೇ ಹೇಳಿದ್ದು ?"

ಅವನು ಆಗಲೇ ಮೇರಿಯನ್ನು ಒಳಗೆ ಕಂಡದ್ದು. ಮೇಟ್ರನ್ ಹೆಲೆನ್ ಸಿಂಗ್‌ರ ಮುಖವು ಪೆಚ್ಚಾಯಿತು. ಗಾಬರಿ, ವ್ಯಾಕುಲ ಸೇರಿದ ದನಿಯಲ್ಲಿ ಆಕೆ ಹೇಳಿದರು:

"ಕುಳಿತುಕೊಳ್ಳಿ, ಕುಳಿತುಕೊಳ್ಳಿ ತಿವಾರಿಬಾಬು" ಕಡೆಗಣ್ಣಿನಿಂದ ಆಕೆ ಮೇರಿಯನ್ನು ನೋಡಿದರು.

ಏನೂ ಅರ್ಥವಾಗದ ನಟನೆಯಲ್ಲಿ ಮೇರಿ ನಿಂತಿದ್ದಳು.

"ಮೇರಿ" ಹೆಲೆನ್ ಮೇರಿಯ ಕಡೆ ಕೈ ತೋರಿಸುತ್ತಾ ತಿವಾರಿ ಬಾಬುವಿಗೆ ಪರಿಚಯಪಡಿಸಿದರು. "ಈ ಹಾಸ್ಪಿಟಲ್‌ನಲ್ಲಿನ ಬಹು ಒಳ್ಳೆಯ ಹುಡುಗಿ" ತಕ್ಷಣವೇ ಅದನ್ನು ತಿದ್ದುತ್ತಾ ಆಕೆ ಹೇಳಿದರು "ಈ ಹಾಸ್ಪೆಲ್‌ನಲ್ಲೇ ಅಲ್ಲ, ಈ ಊರಿನಲ್ಲೇ ಒಬ್ಬ ಒಳ್ಳೆಯ ಹುಡುಗಿ."

ಮೇರಿ ಕೈ ಜೋಡಿಸಿ ನಮಸ್ಕರಿಸಿ ತಿವಾರಿಯ ಎದುರಿಗೆ ನಿಂತಳು. ಅನಂತರ ಅವಳು ಮೇಟ್ರನ್‌ರವರನ್ನು ನೋಡಿದಳು.

ಕೆಂಪು ಹಳದಿ ಹೂಗಳಿರುವ ಸೀರೆಯಲ್ಲಿ ಹೆಲೆನ್ ಸಿಂಗ್ ಅತೀ ಸುಂದರಿಯಾಗಿ ಕಾಣುತ್ತಿದ್ದರು.

ಏನನ್ನಾದರೂ ವಶಪಡಿಸಿಕೊಳ್ಳಲು ಕಾದುನಿಂತಿರುವ ಕೋಣೆಯಂತೆ ನಿಂತಿದ್ದ ಕಣ್ಣಿನಗುಡ್ಡೆಗಳು, ವಯಸ್ಸನ್ನು ಹೇಳಲು ಓಂದೇಟು ಹಾಕುವ ಕೆನ್ನೆಗಳು, ಮುಗುಳ್ನಗೆಯೂ ಲಿಪ್‌ಸ್ಟಿಕ್ಕೂ ತಮ್ಮಲ್ಲಿ ಸ್ಪರ್ಧಿಸುತ್ತಿರುವ ಹವಳದ ವರ್ಣದ ತುಟಿಗಳು, ಕಚ್ಚಿ ತಿಂದು ಬಿಡಲು ಮೋಹ ಉಂಟಾಗುವ ಮೂಗು.

ಕೆಳ ದವಡೆ ಹಾ !

"ಮೇರಿ ನೀನು ಇನ್ನು ಹೋಗು" ಹೆಲೆನ್ ಸಿಂಗ್ ಹೇಳಿದರು. ಆ ಆಜ್ಞೆಗೋಸ್ಕರ ಕಾರು ನಿಂತಿದ್ದವಳಂತೆ ಮೇರಿ ಇದನ್ನು ಕೇಳಿದೊಡನೆ ಹೊರಬಾಗಿಲಿನತ್ತ ಚಲಿಸಿದಳು.

ತಿವಾರಿ ಸೋಫಾದಲ್ಲಿ ಕುಳಿತು, ತನ್ನ ಷರ್ಟಿನ ಗುಂಡಿಗಳನ್ನು ಬಿಚ್ಚಿದನು. ಆತನ ಎದೆಯಲ್ಲಿನ ರೋಮಗಳು ಹೊರಕ್ಕಿಣುಕಿದವು.

ಹೆಲೆನ್ ಸಿಂಗ್ ಫ್ಯಾನ್‌ನ ಸ್ಪೀಡ್ ಅನ್ನು ಜಾಸ್ತಿ ಮಾಡಿದಳು.

ಬೀರುವಿನಿಂದ ಸ್ಟಾಂಪ್ ಆಲ್ಬಮ್ ತೆಗೆದು ತಿವಾರಿಗೆ ಕೊಡುತ್ತಾ ಆಕೆ ಹೇಳಿದರು. "ಸ್ವಲ್ಪ ಹೊತ್ತು ಇದನ್ನು ನೋಡುತ್ತಿರಿ, ನಾನು ಡ್ರಿಂಕ್ಸ್ ತಯಾರು ಮಾಡುತ್ತೇನೆ."

"ಅಯ್ಯೋ, ನಾನು ಮರೆತೇಬಿಟ್ಟೆ" ಜೋಬಿನಲ್ಲಿ ಕೈ ಹಾಕಿ ಹುಡುಕಿ ಒಂದು ಕವರ್ ಹೊರಕ್ಕೆ ತೆಗೆದು ತಿವಾರಿ ಹೇಳಿದನು. "ಥ್ಯಾಂಕ್ ಗಾಡ್.... ನಾನು ಮರೆತಿಲ್ಲ."

ತಿವಾರಿ ಆ ಕವರನ್ನು ಹೆಲೆನ್ ಸಿಂಗ್‌ಗೆ ನೀಡಿದನು. ಅದರಲ್ಲಿ ಸ್ಟಾಂಪುಗಳಿದ್ದವು; ಐದಾರಿರಬೇಕು.

ಆಟದ ಸಾಮಾನು ದೊರಕಿದ ಹುಡುಗಿಯಂತೆ ಸ್ಟಾಂಪ್‌ಗಳನ್ನು ತೆಗೆದುಕೊಂಡು ಆ ಕಿಟಕಿಯ ಬಳಿ ಬೆಳಕಿಗೆ ಓಡಿಹೋದರು. ಹಗಲಿನ ಬೆಳಕಿನಲ್ಲಿ ಸ್ಟಾಂಪ್‌ಗಳನ್ನಾಕೆ ನೋಡತೊಡಗಿದರು. ಎಲ್ಲಾ ನೋಡಿದಾದ ಮೇಲೆ ಅದರಲ್ಲೊಂದು ಸ್ಟಾಂಪ್ ತೆಗೆದುಕೊಂಡು ಮುಂದೆ ಬಂದು ಹೇಳಿದರು.

"ದಿಸ್ ಈಸ್ ಎ ವೆರಿ ರೇರ್ ಸ್ಟಾಂಪ್. ಹೌ ಲಕ್ಕಿ ಐ ಆಮ್ ಸ್ವೀಟ್" ಹೆಲೆನ್ ಆ ಸ್ಟಾಂಪ್ ತಮ್ಮ ತುಟಿಯ ಬಳಿಗೆ ತಂದು ಲೊಚ್ ಎಂಬ ಶಬ್ದ ಮಾಡಿದರು. ಆಕೆಗೆ ತಿಳಿಯದೆಯೇ ಆಕೆಯ ಒಂದು ಚುಂಬನವು ಅದರ ಮೇಲೆ ಬಿತ್ತು.

"ಎಕ್ಸ್‌ಕ್ಯೂಸ್ ಮಿ. ಐ ವಿಲ್ ಮೇಕ್ ಡ್ರಿಂಕ್ಸ್."

ಹೆಲೆನ್ ಸಿಂಗ್ ಕಿಚನ್‌ಗೆ ಹೋದರು.

ಲಂಡನ್ ಬೂಡ್ಸ್ ಜಿನ್, ಲೈಂಕಾರ್ಡಿಲ್, ಐಸ್ ಚೂರು ಮಾಡಿದ್ದು ಎಲ್ಲಾ ಸೇರಿ ಆಕೆ ಎರಡು ಜಿಮ್‌ಲೆಟ್ ತಯಾರು ಮಾಡಿದರು. ಗಾಜಿನ ಜಾಡಿಯಲ್ಲಿದ್ದ ಸಕ್ಕರೆಯ ಸಿರಪ್‌ನಿಂದ ಒಂದೊಂದು ಚೆರಿ ತೆಗೆದುಕೊಂಡು ಎರಡು ಲೋಟಗಳಲ್ಲೂ ಹಾಕಿದರು. ಚೆರಿ ಬಿದ್ದ ಒಡನೆಯೇ ಜಿಮ್‌ಲೆಟ್‌ನ ಸೌಂದರ್ಯವು ವರ್ಧಿಸಿತು.

ಟೀಪಾಯ್ ಮೇಲೆ ಜಿಮ್‌ಲೆಟ್ ಇಟ್ಟುಕೊಂಡು ಹೆಲೆನ್ ಸಿಂಗ್ ಹೇಳಿದರು: "ಚಿಲ್ಡ್ ಬಿಯರ್ ಇದೆ. ಅದಲ್ಲವೇ ತಮ್ಮ ಫೇವರೈಟ್."

ಜಿಮ್‌ಲೇಟ್‌ನ ಉದ್ದನೆಯ ಹಗುರವಾದ ಗ್ಲಾಸ್ ಅನ್ನು ಎರಡು ಕೈಗಳಿಂದಲೂ ಸವರುತ್ತಾ ತೆಗೆದುಕೊಂಡನಂತರ ತಿವಾರಿ ಹೇಳಿದನು:

"ನನಗೆ ಈ ಸುಂದರಿ ಮಾತ್ರ ಸಾಕು."

ಹೆಲೆನ್ ನಕ್ಕಳು.

"ನಿಮಗೆ ಸುಂದರಿಯರನ್ನು ಕಂಡರೆ ಮಾತ್ರ ಇಷ್ಟವೇ ?"

"ಸದ್ಯದಲ್ಲಿ ಹಾಗೆಯೇ ಸುಂದರಿ ಅಲ್ಲದಿದ್ದರೂ ಇಷ್ಟವೇ.... ಆದಿರಲಿ. ಅದು ಬೇರೆ!"

ತಿವಾರಿ ಬಹಳ ಮೃದುವಾಗಿ ಜಿನ್‌ಲೆಟ್‌ನಲ್ಲಿ ಮುತ್ತನ್ನಿಡಲು ಪ್ರಾರಂಭಿಸಿದನು.

"ನನ್ನನ್ನು ನೀವು ಸಂಪೂರ್ಣವಾಗಿ ಒಬ್ಬ ಸ್ತ್ರೀಯನ್ನಾಗಿ ಮಾಡಿದಿರಿ." ಆವಿಯ ಹನಿಗಳು ತಟ್ಟಿದ್ದ ಗ್ಲಾಸ್ ಮೇಲೆ ತೋರು ಬೆರಳಿನಿಂದ ಬರೆಯುತ್ತಾ ತಿವಾರಿ ಹೇಳಿದನು.

"ಹಗಲಿನಲ್ಲಿ ಜಿನ್ನೇ ಐಡಿಯಲ್" ಹೆಲೆನ್ ಸಿಂಗ್ ಹೇಳಿದಳು. "ಸ್ತ್ರೀಗಾದರೂ ಪುರುಷನಿಗಾದರೂ ಅದೇ ಒಳ್ಳೆಯದು."

"ಜಿನ್ ಕುಡಿದರೆ ಪುರುಷನ ಶಕ್ತಿ ಕಡಿಮೆಯಾಗಿಬಿಡುತ್ತೆ" ತಿವಾರಿ ಹೇಳಿದರು.

"ಅದನ್ನು ಸುಲಭವಾಗಿ ಪರಿಹರಿಸಬಹುದು" ಹೆಲೆನ್ ಹೇಳಿದರು.

"ಹೇಗೆ ?"

"ಅದಾದ ಮೇಲೆ ರಮ್ ಕುಡಿದರೆ ಸಾಕು."

"ಅದೂ ಸರಿ ಅನ್ನು" ತಿವಾರಿ ಹೇಳಿದನು.

"ನಿಜವಾಗಿ ಹೇಳಬೇಕೆಂದರೆ ನನಗೂ ರಮ್ಮೇ ಇಷ್ಟ."

"ನಿಮಗಾ ?" ಸ್ವಲ್ಪ ಆಶ್ಚರ್ಯ ಬೆರೆತ ಧ್ವನಿಯಲ್ಲಿ ತಿವಾರಿ ಕೇಳಿದನು.

"ಹೌದು" ನಿಸ್ಸಂಶಯದಿಂದ ಹೆಲೆನ್ ಸಿಂಗ್ ಹೇಳಿದರು.

ಇದ್ದಕ್ಕಿದ್ದಂತೆ ಮೌನ ಅಲ್ಲಿ ತಾಂಡವವಾಡಿತು.

"ಏನು ರಮ್ ಕುಡಿಯುವ ಸ್ತ್ರೀಯರೆಂದರೆ ನಿಮಗೆ ಇಷ್ಟವಿಲ್ಲವೇನು ?" ಹೆಲೆನ್ ಸಂದೇಹಿಸುತ್ತಾ ಕೇಳಿದರು.

ತಿವಾರಿ ಒಂದು ನಿಮಿಷ ಯೋಚಿಸಿ ಹೇಳಿದನು.

"ಅದಕ್ಕೆ ತಕ್ಷಣ ಒಂದು ಉತ್ತರ ಹೇಳಲು ಈ ಸಂದರ್ಭದಲ್ಲಿ ಕಷ್ಟ."

"ಅದೇಕೆ ಹಾಗೆನ್ನುತ್ತೀರಿ ? ಅಭಿಪ್ರಾಯ ಸ್ವಾತಂತ್ರ್ಯ ಯಾವಾಗಲೂ ಇರುತ್ತಲ್ಲಾ, ಅದರಲ್ಲೂ ಮುಖ್ಯವಾಗಿ ತಾವು ಫಿಲಾಸಫಿ ಹೇಳಿಕೊಡುವ ಪ್ರೊಫೆಸರ್ ಅಲ್ಲವೇ ?"

"ಫಿಲಾಸಫಿ ಮಾತ್ರವಲ್ಲ, ನಾನು ಲಾಜಿಕ್ ಅನ್ನು ಹೇಳಿಕೊಡುತ್ತೇನೆ."

"ಅವೆರಡೂ ಪರಸ್ಪರ ಹೊಂದಿಕೊಳ್ಳುವ ಎರಡು ವಿಷಯಗಳು" ಒಂದು ಸಿದ್ಧಾಂತವನ್ನು ಸ್ಥಾಪಿಸುವಂತೆ ಹೆಲೆನ್ ಸಿಂಗ್ ಹೇಳಿದರು.

"ಭೇಷ್" ತಿವಾರಿ ಒಂದೇ ಗುಟುಕಿಗೆ ಜಿಮ್‌ಲೆಟ್ ಕುಡಿದುಬಿಟ್ಟನು. ಅಷ್ಟು ಹೊತ್ತಿಗೆಲ್ಲಾ ಐಸ್ ಕರಗಿ ಹೋಗಿತ್ತು. ಲಿಪ್‌ಸ್ಟಿಕ್ ಹಾಕಿದ್ದ ತುಟಿಗಳಂತೆ ಚೆರಿಹಣ್ಣು ಗಾಜಿನ ಲೋಟದಲ್ಲೇ ಉಳಿಯಿತು.

"ಅದನ್ನು ತಿನ್ನಬೇಕು" ಹೆಲೆನ್ ಹೇಳಿದರು.

ತಿವಾರಿ ಗ್ಲಾಸನ್ನು ಬಾಯಿಯೊಳಕ್ಕೆ ಸಂಪೂರ್ಣವಾಗಿ ಬಗ್ಗಿಸಿಕೊಂಡನು. ಎರಡು ಹಲ್ಲುಗಳ ಮಧ್ಯೆ ಚೆರಿಯು ನಲುಗಿತು.

"ಫಿಲಾಸಫಿಯೂ ಲಾಜಿಕ್ಕೂ ನನಗೆ ಒಂದೇ ತರಹ ಇಷ್ಟ. ಆದರೆ ಅಸಂಬದ್ಧವು ಅಲ್ಲಲ್ಲ. ಒಂದು ಮತ್ತೊಂದರ ಮೇಲೆ ಒತ್ತಡವನ್ನುಂಟು ಮಾಡಲು ನೋಡುತ್ತದೆ." ತಿವಾರಿ ಹೇಳಿದನು.

"ಲೋಕವೇ ಹಾಗಲ್ಲವೇ ? ಲೋಕದಲ್ಲಿ ಒಂದೊಂದು ಪರಮಾಣುವನ್ನು ತುಳಿದು ಹೊಸಕಿ ಹಾಕಲಾಗುತ್ತದೆ" ಹೆಲೆನ್ ಸಿಂಗ್ ಹೇಳಿದರು.

"ನೀವು ಬಹಳ ಓದಿದ್ದೀರಿ ಅಲ್ಲವೇ ?"

"ಅದು ಸರಿಯಲ್ಲ. ಸ್ವಲ್ಪ ಮಟ್ಟಿಗೆ ಓದಿರಬಹುದು. ಆದರೆ ನಾನೀಗ ಹೇಳಿದ್ದು ನನ್ನ ಅನುಭವ."

"ನಿಮಗೆ ದೊಡ್ಡ ಒಂದು ಅನುಭವ ಸಂಪತ್ತೇ ಇದೆಯೆಂದೇ ನಾನು ತಿಳಿದಿದ್ದೇನೆ" ತಿವಾರಿ ಹೇಳಿದನು.

ಹೆಲೆನ್ ಸಿಂಗ್ ಏನನ್ನೋ ನೆನೆಸಿಕೊಂಡು ಜಿಮ್‌ಲೆಟ್ಟನ್ನು ಒಂದೇ ಗುಟುಕಿಗೆ ಕುಡಿದುಬಿಟ್ಟರು. ಆಕೆಯ ಕಣ್ಣುಗಳು ಬಿರಿದು ಬಿರಿದು ಗತಿಸಿದ ಕಾಲದತ್ತ ಹಾರಿಹೋದವು. ಥಟ್ಟನೆ ಹೆಲೆನ್ ಸಿಂಗ್ ಹೇಳಿದರು.

"ಅದು ಮಾತ್ರವೇ ನನ್ನ ಸಂಪಾದನೆ."

"ಏನು ?" ತಿವಾರಿ ಕೇಳಿದನು.

"ಹೌದು ನನ್ನ ಅನುಭವಗಳೇ ನನ್ನ ಸಂಪಾದನೆ. ಆದರೆ ನನ್ನ ಅನುಭವಗಳಲ್ಲೂ

ಕಹಿಯಾದವುಗಳಾಗಿದ್ದವು. ಅವು ನನ್ನನ್ನು ಒಂದಕ್ಕೂ ಪ್ರಯೋಜನವಿಲ್ಲದವಳನ್ನಾಗಿ ಮಾಡಿ ರೂಪಾಂತರಿಸಿದುವು. ನೋಡಿ ಪ್ರೊಫೆಸರ್ ತಿವಾರಿ, ನಾನು ನರ್ಸಾಗ ಬೇಕೆಂದು ಒಂದು ದಿನವೂ ಆಸೆಪಟ್ಟವಳಲ್ಲ. ನಾನು ಒಬ್ಬ ಡಾಕ್ಟರ್ ಆಗಬೇಕೆಂದೇ ಇಚ್ಛಿಸಿದ್ದೆ. ಆದರೆ ಒಬ್ಬ ಅನಾಥ ಹೆಣ್ಣಿನ ಆಸೆಯು ರೂಢಿಯಂತೆ ಛಿದ್ರವಾಗಿ ಚೂರು ಚೂರಾಯಿತು.'' ಹೆಲೆನ್ ತಮ್ಮ ಜೀವನದ ಕಥೆಯನ್ನು ಹೇಳುತ್ತಿದ್ದರು.

''ಒಬ್ಬ ನರ್ಸ್‌ಗೆ ಅವಳ ವ್ಯಕ್ತಿತ್ವವನ್ನು ಸ್ಥಾಪಿಸಿ ನೆಲೆನಿಲ್ಲಿಸಲು ಬಹು ಪ್ರಯಾಸವು. ಅವಳು ಆಸ್ಪತ್ರೆಯಲ್ಲಿ ಕೇವಲ ಒಂದು ಮರದ ಬೊಂಬೆಯು. ಅವಳ ಕಾಲುಗಳಿಗೆ ಸರಪಣಿ ಬಂಧಿಸಲಾಗಿರುತ್ತವೆ. ಆದರೆ ಅವಳ ರಕ್ತವನ್ನು ಹೀರಿ ಕುಡಿಯಲು ಯಾವಾಗಲೂ ಜನರಿರುತ್ತಾರೆ. ವಿಶೇಷವಾಗಿ ಡಾಕ್ಟರ್‌ಗಳು. ಇಗೋ ನೋಡಿ, ಈ ನನ್ನ ಶರೀರವನ್ನು ಒಬ್ಬ ಡಾಕ್ಟರ್ ಹತ್ತು ವರ್ಷಗಳವರೆಗೆ ಆತನ ಸ್ವಂತ ಮಾಡಿಕೊಂಡಿದ್ದನು. ಆತನ ಎಲ್ಲಾ ಇಷ್ಟಗಳನ್ನೂ ಕಷ್ಟಗಳನ್ನೂ ಈ ಶರೀರದ ಮೇಲೆ ಪ್ರಯೋಗಿಸಿದನು. ನಾನು ಆತನನ್ನು ನಂಬಿದೆ. ಆದರೆ ನನಗಿಂತ ಸುಂದರಿಯೆಂದು ಆತನಿಗೆ ತೋರಿದ ಒಬ್ಬ ಹೆಣ್ಣು ಅವನ ಬಳಿ ಬಂದಾಗ ಆತನು ನನಗೆ ದ್ರೋಹ ಬಗೆದನು. ಅನಂತರ ನಾನು ಆ ಸ್ಥಳದಿಂದ ವರ್ಗ ಮಾಡಿಸಿಕೊಂಡು ಬಂದುಬಿಟ್ಟೆ. ಎಷ್ಟು ದೂರ ದಾಟಿ ಹೋಗಬಹುದೋ ಅಷ್ಟೂ ದಾಟಿ ನಾನು ಆತನಿಂದ ದೂರ ಸರಿದೆ. ಆದರೆ ನನ್ನ ನೆನಪುಗಳು ಇಂದೂ ಆ ಸಂಸ್ಥಾನದಲ್ಲೇ ಸುತ್ತು ಹಾಕುತ್ತಾ ಹಾರಾಡುತ್ತಿವೆ. ಅನಂತರ ನಾನು ಪುರುಷರ ಮುಖವನ್ನು ನೋಡಲಿಲ್ಲ. ಅವರನ್ನು ನಾನು ದ್ವೇಷಿಸುತ್ತೇನೆ. ವಿಶೇಷವಾಗಿ ಡಾಕ್ಟರುಗಳನ್ನು. ಐದಾರು ವರ್ಷಗಳು ಕಳೆದಿವೆ. ಆದರೂ ನನ್ನ ಮನಸ್ಸಿನ ಗಾಯವು ಇದುವರೆಗೂ ಒಣಗಿಲ್ಲ. ಅದರಿಂದ ರಕ್ತವು ತೊಟ್ಟು ತೊಟ್ಟಾಗಿ ಬೀಳುತ್ತಲೇ ಇದೆ. ನನ್ನ ಆತ್ಮವು ಚೆಲ್ಲಿದ ರಕ್ತವು ಅದು. ಅದರ ಚಿಲುಮೆಯು ಬತ್ತಿ ಹೋಗುವುದಿಲ್ಲ.''

ಹೆಲೆನ್ ಸಿಂಗ್ ಎದ್ದು ಬಾತ್ ರೂಮಿಗೆ ಹೋದರು. ಆಕೆ ಚೆನ್ನಾಗಿ ಬೆವರಿದ್ದರು. ಆಕೆಯ ಜಿಮ್ಲೆಟ್ ಮುಗಿದು ಹೋಗಿತ್ತು.

ಕೈಯನ್ನು ಮುಖವನ್ನು ತೊಳೆದುಕೊಂಡು ಹೊರಕ್ಕೆ ಬಂದಾದ ಮೇಲೆ ಹೆಲೆನ್ ಸಿಂಗ್ ಮತ್ತೆ ಜೀವಂತವಾದರು.

''ನೋಡಿ ತಿವಾರಿ ಬಾಬು. ಐದಾರು ವರ್ಷಗಳ ನಂತರ ನಾನು ಮೊದಲ ಬಾರಿಗೆ ಒಬ್ಬ ಪುರುಷನ ಮುಂದೆ ಕುಳಿತಿದ್ದೇನೆ.''

''ಇಷ್ಟು ವರ್ಷಗಳೂ ಕುಳಿತಿರಲಿಲ್ಲವೆಂದೇ ?'' ತಿವಾರಿ ಆಶ್ಚರ್ಯದಿಂದ ಕೇಳಿದನು.

''ಕುಳಿತಿರಬಹುದು. ಆದರೆ ಸ್ವಯಿಚ್ಛೆಯಿಂದ ಆಗಿರುವುದಿಲ್ಲ'' ಹೆಲೆನ್ ಸಿಂಗ್ ಹೇಳಿದರು.

ತಿವಾರಿಯ ಮುಖದಲ್ಲಿ ಪ್ರಸನ್ನತೆಯು ಭದ್ರವಾಗಿ ನೆಲೆಯೂರಿತು. ಆಸೆಯ ಕಿರಣಗಳು ಅವನ ಕಣ್ಣುಗಳಲ್ಲಿ ಮಿಂಚಿದವು.

''ನನಗೆ ಸ್ವಲ್ಪ ಬಿಸಿಯಾಗಿರುವುದೇನಾದರೂ ಬೇಕು'' ತಿವಾರಿ ದಾಹದಿಂದ ಹೇಳಿದನು.

"ಇಲ್ಲಿ ಬಿಸಿಯಾಗಿರುವುದೇನೂ ಇಲ್ಲ. ನನ್ನ ದೇಹದ ಬಿಸಿ ಕೂಡ ಕಮ್ಮಿಯಾಗಿದೆ" ಹೆಲೆನ್ ಸಿಂಗ್ ಸಂಕಟದಿಂದ ಹೇಳಿದರು.

"ಈ ಮಾತು ನಾನು ಒಪ್ಪುವುದಿಲ್ಲ." ತಿವಾರಿ ಆಕೆಯ ಸಂಕಟವನ್ನು ದೀರ್ಘವಾಗಿ ಗಮನಿಸುತ್ತಾ ಹೇಳಿದನು. "ಸೌಂದರ್ಯವನ್ನು ಹೆಲೆನ್ ಸಿಂಗ್ ಬಿಟ್ಟರೂ ಸೌಂದರ್ಯವು ಹೆಲೆನ್ ಸಿಂಗ್‌ನನ್ನೂ ಬಿಟ್ಟು ಹೋಗಿಲ್ಲ."

ಹೆಲೆನ್ ಸಿಂಗ್ ಒಂದು ನಿಮಿಷ ತಲೆ ಎತ್ತಿ ನಿಂತರು. ಅಭಿಮಾನವು ಅವರ ಮುಖದಲ್ಲಿ ಮೂಡುತ್ತಿತ್ತು. ಸಂತೋಷವನ್ನು ಒಳಗೇ ಅಡಗಿಸಿಕೊಂಡು ಆಕೆ ಹೇಳಿದರು:

"ಬೆಸ್ಟ್ ಕಾಂಪ್ಲಿಮೆಂಟ್ಸ್" ಹೆಲೆನ್ ಕಿಚನ್‌ಗೆ ನಡೆದು ಹೋಗುತ್ತಾ ಹೇಳಿದರು. "ನಿಜವಾಗಲೂ ನಾನು ಬಿಸಿ ಬಿಸಿಯಾಗಿರುವುದನ್ನು ತೆಗೆದುಕೊಂಡೇ ಬರುತ್ತೇನೆ."

ಎರಡು ರಮ್‌ನೊಂದಿಗೆ ಹೆಲನ್ ಮರಳಿ ಬಂದರು.

"ರಮ್ ಕುಡಿಯುವ ಸ್ತ್ರೀಯರು ನಿಮಗೆ ಇಷ್ಟವಿಲ್ಲ ಎಂದಲ್ಲವೇ ನೀವು ಹೇಳಿದ್ದು ?" ಹೆಲೆನ್ ಕೇಳಿದರು.

"ನಾನು ಹೇಳಿದ್ದು ಹಾಗಲ್ಲ" ತಿವಾರಿ ವಿವರಣೆ ನೀಡಿದನು. "ರಮ್ ಕುಡಿಯುವ ಸ್ತ್ರೀಯರೆಂದರೆ ನನಗಿಷ್ಟವಿಲ್ಲ. ಆದರೆ ನಾನು ಇಷ್ಟಪಡುವ ಸ್ತ್ರೀಯರು ರಮ್ ಕುಡಿಯುವುದು ನನಗೆ ಬಹಳ ಇಷ್ಟ."

"ನಿಮ್ಮ ವಿಷಯ ಲಾಜಿಕ್ ಅಲ್ಲವೇ ?" ಹೆಲೆನ್ ಸಿಂಗ್ ಹೇಳಿದರು.

ತಿವಾರಿ ಆವೇಶದಿಂದ ಎರಡು ಮೂರು ಸಿಪ್ ಒಳಗಿಳಿಸಿದರು. ಆತನು ಒಮ್ಮೆ ಬಿಸಿಯುಸಿರು ಹೊರಕ್ಕೆ ಬಿಟ್ಟನು. ಅನಂತರ ಒಂದು ಸಿಗರೇಟ್ ಹಚ್ಚಿದನು. ಗಾಳಿಯಲ್ಲಿ ಹೊಗೆಯು ಸುರುಳಿಗಳನ್ನು ಬಿಡಲು ಪ್ರಾರಂಭಿಸಿದನು.

ಹೊಗೆಯ ಸುರುಳಿಗಳು ಹೊರಕ್ಕೆ ಬರುವುದನ್ನು ಅದು ಗಾಳಿಯಲ್ಲಿ ಕರಗುವುದನ್ನು, ಹೆಲೆನ್ ಸಿಂಗ್ ಕೌತುಕದಿಂದ ನೋಡುತ್ತಿದ್ದರು.

"ತಿವಾರಿ ಬಾಬು, ಏನಾದರೂ ತೆಗೆದಿಡಲೇ ? ತಮ್ಮ ಹೊಟ್ಟೆ ಹಸಿದಿರಬಹುದು ?" ಹೆಲೆನ್ ಸಿಂಗ್ ಕೇಳಿದರು.

ತಿವಾರಿ ಏನನ್ನು ಮಾತನಾಡದೆ ಹೊಗೆ ಸುರುಳಿಗಳನ್ನು ಸೃಷ್ಟಿಸುತ್ತಿದ್ದನು.

ಹೆಲೆನ್ ಸಿಂಗ್ ಕಿಚನ್‌ಗೆ ಹೋದರು.

ಸಾಸೇಜ್ ಹುರಿದ ಹಸಿವಿನ ಮಾಂಸ, ನ್ಯೂಡೆಲ್ಸ್, ಹುರಿದ ಮೊಟ್ಟೆ, ಬ್ರೆಡ್ ಒಂದೊಂದಾಗಿ ಆಕೆ ಸಣ್ಣ ಮೇಜಿನ ಮೇಲೆ ಅಣಿ ಮಾಡಿದಿರು.

ಆಹಾರವನ್ನು ಕಂಡಾಗ ತಿವಾರಿ ಬಾಕಿಯಿರುವ ರಮ್ ನೆಕ್ಕುತ್ತಾ ಕುಡಿದು ಮುಗಿಸಿದನು.

"ಒಂದು ತೋಳದ ಹಸಿವು ನನ್ನಲ್ಲಿದೆ." ತಿವಾರಿ ಹೇಳಿದನು.

"ಏನಿಷ್ಟವೋ ಅದನ್ನು ಆರಂಭಿಸಿ. ಒಳ್ಳೆಯ ವೆಜಿಟೆಬಲ್ ಸೂಪ್ ಮಾಡಿಟ್ಟಿದೆ. ಬೇಕಿದ್ದರೆ ಒಂದು ಕಪ್ ತೆಗೆದುಕೊಳ್ಳಿ" ಹೆಲೆನ್ ಸಿಂಗ್ ಹೇಳಿದರು.

"ಸೂಪ್ ತೆಗೆದುಕೊಡಿ. ಕ್ರಮ ತಪ್ಪಿಸುವುದು ಬೇಡ. ಮರ್ಯಾದೆಯಿಲ್ಲದೆ ಆಹಾರವನ್ನು ತಿಂದೇನು ಪ್ರಯೋಜನ ?" ತಿವಾರಿ ತನ್ನ ಗ್ಲಾಸನ್ನು ಸ್ಪರ್ಶಿಸುತ್ತಾ

ಹೇಳಿದನು. "ಊಟದ ಜೊತೆ ನನಗೊಂದು ಗ್ಲಾಸ್ ರಮ್ ಸಹ ಬೇಕು."

ಹೆಲೆನ್ ಸಿಂಗ್ ರಮ್ ತೆಗೆದುಕೊಂಡು ಬಂದು ಇಟ್ಟಾಗ ಬಾಗಿಲಿನ ಮೇಲೆ ಯಾರೋ ತಟ್ಟಿದ್ದು ಕೇಳಿಬಂತು. ಬಹಳ ಜೋರಾಗಿ ತಟ್ಟುತ್ತಿದ್ದರು. ಒಂದು ನಿಮಿಷದ ವಿರಾಮದ ನಂತರ ಮತ್ತೆಯೂ ತಟ್ಟಿದ್ದು ಕೇಳಿಬಂತು. ಹೊರಗೆ ಏನೋ ಗಲಾಟೆಯಾಗುತ್ತಿದೆಯೆಂದೆನ್ನಿಸಿತು.

ಹೆಲೆನ್ ಸಿಂಗ್ ಬಾಗಿಲು ತೆರೆದಾಗ ಒಂದು ಹುಲಿಯಂತೆ ಮಿಸೆಸ್ ತಿವಾರಿ ಒಳಕ್ಕೆ ಪ್ರವೇಶಿಸಿದಳು. ಅವಳು ಏದುಸಿರು ಬಿಡುತ್ತಿದ್ದಳು. ಅವಳ ಕಣ್ಣುಗಳಲ್ಲಿ ಕೋಪವು ಹೊತ್ತಿ ಉರಿಯುತ್ತಿತ್ತು.

"ಇಲ್ಲಿ ಏನು ಮಾಡುತ್ತಿದ್ದೀರಿ ? ಈ ಮುಚ್ಚಿದ್ದ ಕೋಣೆಯಲ್ಲಿ ?" ತಿವಾರಿಯತ್ತ ಕೈ ತೋರಿಸುತ್ತಾ ಮಿಸೆಸ್ ಕೇಳಿದಳು.

ರಮ್ ಗ್ಲಾಸ್ ಅನ್ನು ಬಿಗಿಯಾಗಿ ಹಿಡಿದುಕೊಂಡು ತಿವಾರಿ ಸ್ತಬ್ಧನಾಗಿ ನಿಂತನು. ಹೆಲೆನ್ ಸಿಂಗ್ ಒಟ್ಟಿನಲ್ಲಿ ಪರಿಭ್ರಾಂತರಾಗಿ ನಿಂತರು. ಇಂತಹ ಒಂದು ಸಂದರ್ಭವನ್ನು ಅವರಿಬ್ಬರೂ ನಿರೀಕ್ಷಿಸಿರಲಿಲ್ಲ.

"ಸ್ವಲ್ಪ ಮರ್ಯಾದೆ ಇರಬೇಡವೇ ? ಇಲ್ಲಿಗೇ ಬರುತ್ತಿರುವುದೆಂದು ನೀವು ನನ್ನ ಹತ್ತಿರ ಹೇಳಬಹುದಿತ್ತಲ್ಲಾ ?" ಹೆಲೆನ್ ಸಿಂಗ್‌ಳತ್ತ ಕೈ ತೋರಿಸುತ್ತಾ ಅವಳು ಹೇಳಿದಳು. "ಈ ಹೆಣ್ಣನ್ನು ನಾನೇ ನಿಮಗೆ ಪರಿಚಯ ಮಾಡಿಸಿದ್ದೆ. ಅಲ್ಲವೇ ?"

"ಇಷ್ಟೆಲ್ಲಾ ಆಕ್ಷೇಪಣೆ ಮಾಡಲು ಇಲ್ಲಿ ಈಗೇನು ಅಂತಹುದು ನಡೆದಿದೆ ?" ಹೆಲೆನ್ ಸಿಂಗ್ ಕೇಳಿದರು. ಇದ್ದಕ್ಕಿದ್ದಂತೆಯೇ ಹುಚ್ಚು ಧೈರ್ಯ ಅವರಲ್ಲಿ ಪ್ರವೇಶಿಸಿತ್ತು.

"ಹೀಗೆ ಮುಚ್ಚಿದ ಬಾಗಿಲಿನ ಕೋಣೆಯಲ್ಲಿ ಏನು ನಡೆಯೋಲ್ಲ ?" ಮುಖಕ್ಕೆ ತಿರುಗಿಸಿ ಹೊಡೆದಂತೆ ಮಿಸೆಸ್ ತಿವಾರಿ ಹೇಳಿದಳು.

"ಇನ್ನು ಹೊರಡೋಣ ಬನ್ನಿ" ತಿವಾರಿಯ ಷರ್ಟಿನ ಕಾಲರನ್ನು ಹಿಡಿದುಕೊಂಡು ಮಿಸೆಸ್ ತಿವಾರಿ ಹೇಳಿದಳು "ಮನೆ ಸೇರೋಣ. ಮಿಕ್ಕ ವಿಷಯಗಳೆಲ್ಲಾ ಆಮೇಲಾಗಲಿ."

ತಿವಾರಿ ಒಬ್ಬ ಪುಟ್ಟ ಹುಡುಗನಂತೆ ಅವಳನ್ನನುಸರಿಸಿದನು.

ಹೊಸ್ತಿಲನ್ನು ದಾಟುವಾಗ ಮಿಸೆಸ್ ತಿವಾರಿ ಹೆಲೆನ್ ಸಿಂಗ್ ಅನ್ನು ತಿರುಗಿ ನೋಡುತ್ತಾ ಹೇಳಿದಳು "ನಿನಗೆ ನಾನು ಬುದ್ಧಿ ಕಲಿಸುತ್ತೇನೆ."

ಮುಂದೆ ಮಿಸೆಸ್ ತಿವಾರಿ, ಹಿಂದೆ ತಿವಾರಿ ಹೊರಟು ಗೇಟ್ ದಾಟುವುದನ್ನು ಹೆಲೆನ್ ಸಿಂಗ್ ನೋಡುತ್ತಾ ನಿಂತರು.

ಬಾಗಿಲು ಹಾಕಲೆಂದು ಹೋದಾಗ ಹಾಸ್ಟೆಲ್‌ನ ವರಾಂಡದಲ್ಲಿ ಈ ಘಟನೆಗಳನ್ನು ನೋಡುತ್ತಾ ಅಲ್ಲಿ ವಾಸಮಾಡುವವರು ನಿಂತಿರುವ ದೃಶ್ಯವನ್ನು ಹೆಲೆನ್ ಸಿಂಗ್ ಕಂಡರು.

# ಹತ್ತೊಂಭತ್ತು

ಅವನು ಆಸ್ಪತ್ರೆಯಲ್ಲಿರುವ ಸೆಂಟ್ರಲ್ ಔಟ್ ಡೋರ್‌ನಲ್ಲಿದ್ದ ಜನರ ಗುಂಪಿನಲ್ಲಿ ಸಿಕ್ಕಿಕೊಂಡನು. ಆ ಜನರ ಗುಂಪಿನಲ್ಲಿ ಅವನ ಅಸ್ತಿತ್ವವು ನದಿಯಲ್ಲಿ ಒಂದು ಕೊಡ ನೀರನ್ನು ಸುರಿದಂತೆ ಆಗಿತ್ತು.

ಯಾರವನು ? ಎಲ್ಲಿಂದ ಬಂದನು ? ಅವನಿಗೇನು ರೋಗ ?

ಅಜ್ಞಾತವಾದ ಒಂದು ನೋವಿನಿಂದ ಅವನು ಬಳಲಿದ್ದನು. ಮುಖದಲ್ಲಿ ಬಳಲಿಕೆ ತೋರದಂತೆ ಅವನು ಯತ್ನಿಸುತ್ತಿದ್ದನು. ತಳ್ಳಿ ನೂಕಾಡಿ ಅವನು ಮುಂದಕ್ಕೆ ಚಲಿಸುತ್ತಿದ್ದನು. ಮಕ್ಕಳು, ಸ್ತ್ರೀಯರು, ವೃದ್ಧರು ಅವನನ್ನು ಮುಂದಕ್ಕೂ ಹಿಂದಕ್ಕೂ ಎಡಕ್ಕೂ ಬಲಕ್ಕೂ ತಳ್ಳುತ್ತಾ ನಜ್ಜು ಗುಜ್ಜು ಮಾಡುತ್ತಿದ್ದರು. ಅವನ ಮುಳ್ಳಿನ ಮಧ್ಯೆ ಸಿಕ್ಕಿಕೊಂಡ ಒಂದು ಜಜ್ಜಿ ಹೋದ ಬೀಜದಂತಾದನು.

ಅವನು ಮುಂದಕ್ಕೆ ಚಲಿಸುತ್ತಿದ್ದನು. ಒಂದು ಬ್ರಹ್ಮಾಂಡ ಸಮುದ್ರದ ಮೇಲಿನ ಅಲೆಗಳಂತೆ ಎಲ್ಲರೂ ಕೊಚ್ಚಿಹೋಗುತ್ತಿದ್ದರು. ಆ ಕೊಚ್ಚಿ ಹೋಗುವಿಕೆಯಲ್ಲಿ ಸಿಕ್ಕಿಬಿದ್ದವರ ಶರೀರದ ಘಟನೆಯನ್ನು, ನಡೆಯುವಿಕೆಯನ್ನು, ದುಃಖಭಾವನೆಯನ್ನು ಕಂಡು ಅವನಿಗೆ ಆಶ್ಚರ್ಯವು ತೋರಿತು.

ಅವನು ತನ್ನ ಯೌವನದ ವಸಂತ ಕಾಲದಲ್ಲಿ ಯಾವುದೊಂದನ್ನೂ ಬಯಸದೇ ಸುಲಭವಾಗಿ ಫಲವನ್ನು ಪಡೆದ ಒಬ್ಬನಾಗಿದ್ದನು. ಚೆನ್ನಾಗಿ ಓದಬೇಕು, ಫಸ್ಟ್‌ಕ್ಲಾಸ್ ನಲ್ಲಿ ಪಾಸಾಗಬೇಕು, ಬಹುಮಾನಗಳನ್ನು ತೆಗೆದುಕೊಳ್ಳಬೇಕು. ಕವಿತೆಗಳನ್ನು ಬರೆಯಬೇಕು, ದೊಡ್ಡ ಕಾರ್ಯಗಳನ್ನು ಸಾಧಿಸಬೇಕು ಇದೆಲ್ಲಾ ಅವನಿಗೆ ಸಂಬಂಧಿಸಿದಂತೆ ಅಷ್ಟು ಆಶ್ಚರ್ಯಕರವಾಗಿ ತೋರಿರಲಿಲ್ಲ. ಏನು ಮಾಡದಿದ್ದರೂ ಅವನಿಗೆ ಒಂದು ಚಾರಿತ್ರ್ಯಪ್ರಜ್ಞೆ ಇತ್ತು. ಬಹುಪಾಲಿನ ಜನರು ಕೆಲಸ ಮಾಡದಿದ್ದರೆ ಅವರು ಶೋಭಿಸುವುದಿಲ್ಲವಲ್ಲ, ಆದರೆ ಅವನು ಯಾವ ಕೆಲಸವನ್ನು ಮಾಡದಿದ್ದರೂ ಅವನನ್ನು ಯಾರೂ ಅಯೋಗ್ಯನೆಂದು ಆಕ್ಷೇಪಿಸಲಿಲ್ಲ. ಬಿಡುವಿಲ್ಲದ ಕೆಲಸವು ಒಂದು ತೆರೆ ಇದ್ದಂತೆ. ಆ ಕೆಲಸದ ಸಮಯದಲ್ಲಿ ಒಬ್ಬನ ದೈನ್ಯವನ್ನೂ ಕೊರತೆ ಯನ್ನೂ ಅವನಿಗೆ ಅವರ ಹಿಂದೆ ಮರೆ ಮಾಡಲು ಸಾಧ್ಯ. ಸ್ವಜನರೊಂದಿಗೂ ಬಂಧುಗಳೊಂದಿಗೂ ಅವನು ಒಮ್ಮೆಯೂ ಉದಾಸೀನನಾಗಿರಲಿಲ್ಲ. ಅವನು ಸ್ವಾಭಾವಿಕವಾಗಿ ಪರಿಪೂರ್ಣ ಸ್ವಭಾವವುಳ್ಳವನಾಗಿದ್ದನು. ಕಾಯಿಗಳನ್ನಾಗಲೀ, ಹಣ್ಣುಗಳನ್ನಾಗಲೀ ನೀಡದ ಸುಗಂಧ ಪುಷ್ಪಗಳನ್ನು ಹೊತ್ತಿರುವ ಒಂದು ವೃಕ್ಷದಂತಾಗಿದ್ದನವನು. ಪುಷ್ಪಗಳಿರುವುದರಿಂದ ಫಲಗಳ ಅಭಾವ ಯಾರಿಗೂ ಗೊತ್ತಿರಲಿಲ್ಲ.

ಇಂದು ಅವನು ಒಬ್ಬ ರೋಗಿ.

ಆದ್ದರಿಂದ ಅವನು ಸೆಂಟ್ರಲ್ ಔಟ್‌ಡೋರಿನ ಜನಸಂದಣಿಯಲ್ಲಿ ಒಬ್ಬ ಸದಸ್ಯನಾಗಲು - ಬಂದಿದ್ದಾನೆ.

ಆ ಜನಸಮುದ್ರದಲ್ಲಿ ಈಜಿ ಈಜಿ ಡಾಕ್ಟರ್‌ನ ಬಳಿಗೆ ಬಂದಿದ್ದನು.

ಆ ಡಾಕ್ಟರ್ ಬಹಳ ಚಿಕ್ಕ ವಯಸ್ಸಿನವನು. ಅವನು ಒಬ್ಬ ಹೌಸ್ ಸರ್ಜನ್. ಅವನಿಗೆ ಪದವಿ ದೊರಕಿ ಒಂದು ವರ್ಷ ಕೂಡ ಆಗಿರಲಿಲ್ಲ. ಆದರೆ ಎಲ್ಲವೂ ತನಗೆ ಗೊತ್ತಿದೆ ಎಂಬ ಒಂದು ಮನೋಭಾವದೊಂದಿಗೆ ಒಂದು ಠೀವಿಯಲ್ಲಿ ಅವನು ಕುಳಿತಿದ್ದನು. ದುಡಿಯಲು ಮನಸ್ಸಿಲ್ಲದವನಂತೆ ತನ್ನ ಕತ್ತಿನಲ್ಲಿ ಸ್ಟೆತೋಸ್ಕೋಪನ್ನು ಹಾಕಿಕೊಂಡಿದ್ದನು. ತನ್ನ ಕೈಬೆರಳುಗಳ ಮಧ್ಯೆ ಒಂದು ಸಿಗರೇಟ್ ಅನ್ನು ಹತ್ತಿಸಿ ಹಿಡಿದುಕೊಂಡಿದ್ದನು. ಸಿಗರೇಟ್ ಸೇದುವುದಕ್ಕಿಂತಲೂ ಹೆಚ್ಚಾಗಿ ಅವನು ಸುಮ್ಮನೆ ಕೈ ಬೆರಳುಗಳಲ್ಲಿ ಅದನ್ನು ಹಿಡಿದುಕೊಂಡಿದ್ದನು. ಅದು ಹೊಗೆಯಾಡುತ್ತಿತ್ತು. ಸಿಗರೇಟ್‌ಗಿಂತ ದೊಡ್ಡದಾದ ಬೂದಿಯ ಒಂದು ಉದ್ದನೆಯ ತುಂಡು ಕೆಳಕ್ಕೆ ಬೀಳಲೆಂದು ಕಾದು ನಿಂತಂತಿತ್ತು.

"ಸರಿ ನಿಮಗೇನು ರೋಗ ?" ಹೌಸ್ ಸರ್ಜನ್ ಕೇಳಿದನು.

"ಜ್ವರ" ಅವನು ಹೇಳಿದನು.

"ಎಷ್ಟು ದಿನಗಳಿಂದ ಜ್ವರ ?"

"ಜ್ಞಾಪಕ ಬಂದಂದಿನಿಂದ."

"ಏನು ? ನಿಮಗೇನಾದರೂ ಬುದ್ಧಿ ಸರಿಯಿಲ್ಲವೇ ?" ಹೌಸ್ ಸರ್ಜನ್ ಚಕಿತನಾದನು. ಸಿಗರೇಟಿನ ಬೂದಿಯು ಅವನ ಚಲನೆಯಿಂದಾಗಿ ಮೇಜಿನ ಮೇಲೆ ಬಿದ್ದು ಹರಡಿತು.

"ಅಲ್ಲ, ಅಲ್ಲ ನಾನೊಬ್ಬ ರೋಗಿಯೇ. ಆದರೆ ನನಗೆ ಜ್ವರ ಬಂದು ಬಹಳ ದಿನಗಳಾಗಿಲ್ಲ." ಅವನು ಕ್ಷಮೆ ಕೋರುವಂತೆ ಹೇಳಿದನು.

"ಓಹ್, ಹಾಗಾದರೆ ಸರಿಯಾಗಿ ಹೇಳಿ."

ಅವನು ಏನೋ ಲೆಕ್ಕ ಹಾಕಿದನಂತರ ಹೇಳಿದನು:

"ಜ್ವರ ಬಂದು ಎರಡು ವಾರವಾಯಿತು."

"ಸರಿ ಯಾವಾಗಲೂ ಜ್ವರ ಇರುತ್ತದೆಯೇ ? ಅಥವಾ ದಿನದಲ್ಲಿ ಸ್ವಲ್ಪ ಹೊತ್ತು ಮಾತ್ರವೇ ? ಅಥವಾ ದಿನಬಿಟ್ಟು ದಿನವೇ ?" ಹೌಸ್ ಸರ್ಜನ್ ಕೇಳಿದನು.

"ಯಾವಾಗಲೂ ಬೆಚ್ಚಗೆ ಇರುತ್ತೆ. ನನ್ನ ಮೈ ಹಾಗೇ. ಪ್ರಪಂಚದಲ್ಲಿ ಎಲ್ಲರಿಗೂ ಚಳಿಯಾದರೂ ನನಗೆ ಬಿಸಿಯೇ ಇರುತ್ತೆ."

"ವಾಂತಿ ಇದೆಯೇ ?"

"ಇಲ್ಲ"

"ಕೆಮ್ಮಿದೆಯೇ ?"

"ಇಲ್ಲ"

ಹೌಸ್ ಸರ್ಜನ್ ಬೆರಳುಗಳೆಣಿಸಿ ಲೆಕ್ಕ ಮಾಡಿದ ನಂತರ ಏನೋ ತಪ್ಪು ಮಾಡಿದವನಂತೆ ಕೇಳಿದನು.

"ಜ್ವರ ಬಂದಾಗ ಚಳಿಯೂ ನಡುಕವೂ ತೋರುತ್ತೆಯೇ ?"

"ಓ ಯಾವಾಗಲೂ ಚಳಿಯೇ. ಆದರೆ ಚಳಿಯಾಗುವಾಗ ನನಗೆ ಬಿಸಿ ಅನುಭವವಾಗುತ್ತದೆ.

ಅಯ್ಯೋ ರಾಮ, ನಾನು ಕಷ್ಟಕ್ಕೆ ಸಿಕ್ಕಿಹಾಕಿಕೊಂಡೆನಲ್ಲಾ ಎಂಬ ರೀತಿಯಲ್ಲಿ ಹೌಸ್ ಸರ್ಜನ್ ಅವನನ್ನು ನೋಡಿದನು.

"ಮೂತ್ರವು ಹಳದಿಯಾಗಿದೆಯೇ ?"

"ಜ್ವರ ಬಂದಂದಿನಿಂದ ಕಡುಹಳದಿ ಬಣ್ಣದಲ್ಲಿದೆ. ಅದಿಲ್ಲದಿದ್ದಲ್ಲಿ ನನ್ನ ಮೂತ್ರವು ಪನ್ನೀರಿನಂತಿರುತ್ತೆ.

"ಕೀಲುಗಳಲ್ಲಿ ನೋವಿದೆಯೇ ?"

"ಇದೆ."

"ಕೀಲುಗಳು ಊದುವುದುಂಟೇ ?"

"ಆಗಾಗ್ಗೆ ಊದುತ್ತವೆ. ಒಂದೊಂದು ಸಲ ಸರಿಯಾಗಿರುತ್ತೆ."

"ಎದೆ ಹೊಡೆದುಕೊಳ್ಳುತ್ತದೆ ?"

"ಅದೊಂದೇ ಇರೋದು."

"ಚಿಕ್ಕಂದಿನಲ್ಲಿ ಯಾವಾಗಲಾದರೂ ಬಹಳ ಜ್ವರ ಬಂದಿತ್ತೇ ?"

"ನನ್ನ ಚಿಕ್ಕಂದಿನ ವಿಷಯಗಳು ನನಗೆ ಜ್ಞಾಪಕವಿಲ್ಲ."

ಹೌಸ್‌ಸರ್ಜನ್ ಲೆಕ್ಕ ಹಾಕತೊಡಗಿದನು.

ಇದು ಮಲೇರಿಯಾನೇ ? ಜಾಂಡಿಸೇ ? ಟೈಫಾಯಿಡೇ ! ಮೂತ್ರಕೋಶದ ರೋಗವೇ ? ಅಥವಾ ಮಾನಸಿಕ ರೋಗವೇ ? ಥೂ ಹಾಳಾದವನು. ಮೆಡಿಸಿನ್ ಓ.ಪಿ.ಗೆ ಹೇಳಿ ಕಳಿಸಿಬಿಡೋಣ.

ಹೌಸ್‌ಸರ್ಜನ್ ಕೇಸನ್ನು ಕಂಡುಹಿಡಿದ ಗಂಭೀರಭಾವದಲ್ಲಿ ಒಂದು ಚೀಟಿಯನ್ನು ಬರೆದುಕೊಟ್ಟನು. "ಒಂಭತ್ತನೆಯ ನಂಬರ್ ಓ.ಪಿ.ಗೆ ಹೋಗಿ ನಿಮ್ಮ ರೋಗವನ್ನು ಅಲ್ಲಿ ನೋಡಿ ಔಷಧಿ ಕೊಡುತ್ತಾರೆ."

ಅವನು ಚೀಟಿ ತೆಗೆದುಕೊಂಡು ಏನು ಮಾಡಬೇಕೆಂದು ತಿಳಿಯದೆ ಪೆದ್ದು ಪೆದ್ದಾಗಿ ನಿಂತನು.

"ಬೇಗ ಹೋಗಿ ಬಹಳ ಜನರು ಕಾದು ನಿಂತಿದ್ದಾರೆ. ನನಗಿನ್ನೂ ಬೇಕಾದಷ್ಟು ಕೆಲಸವಿದೆ."

ಅವನು ಮಿಕ್ಕವರಿಗೆ ದಾರಿ ಬಿಟ್ಟುಕೊಟ್ಟು ಹಿಂದಕ್ಕೆ ನಡೆದನು. ಅವನ ಹಿಂದಿದ್ದ ರೋಗಿಯು ಹೌಸ್ ಸರ್ಜನ್‌ನ ಮುಂದೆ ಬಂದನು.

ಹೌಸ್ ಸರ್ಜನ್ ಮತ್ತೆ ತನ್ನ ವಾಚನ್ನು ನೋಡಿಕೊಂಡನು. ಹೊತ್ತು ಬಹಳವಾಗಿತ್ತು. ರೋಗಿಗಳ ಮಹಾಸಮುದ್ರದ ಅಲೆಗಳು ತೀವ್ರವಾಗಿ ಹೊಡೆಯುತ್ತಿದ್ದವು. ಹೊತ್ತು ಉಳಿಸುವುದಕ್ಕೋಸ್ಕರ ಹೌಸ್ ಸರ್ಜನ್ ಒಂದು ಅಡ್ಡದಾರಿ ಕಂಡುಹಿಡಿದನು. ಅನಂತರ ಬಂದ ರೋಗಿಗಳೊಂದಿಗೆ ಅವನು ರೋಗದ ವಿವರವೊಂದನ್ನು ಕೇಳಲಿಲ್ಲ.

"ಇಷ್ಟವಾದ ಒಂದು ಹೂವಿನ ಹೆಸರು ಹೇಳಿ" ಹೌಸ್ ಸರ್ಜನ್‌ನ ಧ್ವನಿ ತಕ್ಷಣ ಕೇಳಿಸಿತು.

"ತಾವರೆ ?" ಹಿಂದಿನಿಂದ ಮುಂದಕ್ಕೆ ಬಂದ ರೋಗಿಯು ಹೇಳಿದನು.

"ಸರಿ ಒಂಭತ್ತನೆಯ ನಂಬರ್ ಓ.ಪಿ.ಗೆ ಬೇಗ ಹೋಗಿ." ಚೀಟಿಯನ್ನು ಕೊಡುತ್ತಾ ಹೌಸ್ ಸರ್ಜನ್ ಹೇಳಿದನು.

ಅಬ್ಬ, ತಾನು ತಪ್ಪಿಸಿಕೊಂಡಂತಾಯಿತು. ಇಬ್ಬರಿಗೂ ಒಂದೇ ನಂಬರ್. ಆ ರೋಗಿ ಸಂತೋಷದಿಂದ ಮುಂದೆ ಹೋದ ರೋಗಿಯನ್ನು ಹಿಂಬಾಲಿಸಲು ಪ್ರಯತ್ನಿಸುವ ವೇಳೆಗೆ ಆ ರೋಗಿ ಜನರ ಗುಂಪಿನಲ್ಲಿ ಕರಗಿ ಹೋದನು.

ಅವನು ವಿಷಣ್ಣವದನನಾಗಿ ಸ್ವಲ್ಪ ಹೊತ್ತು ನಿಂತನು. ಅನಂತರ ಅವನು ಸೆಂಟ್ರಲ್ ಔಟ್ ಡೋರ್‌ನಲ್ಲಿನ ಜನಸಂದಣಿಯಲ್ಲಿ ಈಜಾಡಿ ಕಾರಿಡಾರನ್ನು ಪ್ರವೇಶಿಸಿದನು. ಕಾರಿಡಾರ್ ಉದ್ದಕ್ಕೆ ಹೋಗುತ್ತಿತ್ತು. ಅದರ ತುಂಬ ಜನರು ಚಲಿಸುತ್ತಿದ್ದರು. ಅವರೆಲ್ಲರೂ ಗಡಿಬಿಡಿಯಿಂದ ವ್ಯಾಕುಲತೆಯಿಂದ ಎಲ್ಲಿಗೋ ಅವಸರವಸರವಾಗಿ ನಡೆದು ಹೋಗುತ್ತಿದ್ದರು.

ಒಂಭತ್ತನೆಯ ನಂಬರ್ ಓ.ಪಿ.ಯನ್ನು ಹುಡುಕಿಕೊಂಡು ಅವನು ನಡೆಯ ತೊಡಗಿದನು. ಎದುರಿನಲ್ಲಿ ಒಬ್ಬೊಬ್ಬ ಮನುಷ್ಯ ಬರುವಾಗಲೂ ಅವನನ್ನು ದಾರಿ ಕೇಳಲು ಅವನ ನಾಲಿಗೆಯು ಚಲಿಸುತ್ತಿತ್ತು. ಆದರೆ ಅವನ ಧ್ವನಿಯು ಹೊರಕ್ಕೆ ಬರುವುದಕ್ಕಿಂತ ಮುಂಚೆಯೇ ಎದುರಿಗೆ ಬರುವ ವ್ಯಕ್ತಿ ನಡೆದು ಮಾಯವಾಗಿ ಬಿಡುವನು.

ಯಾರೋ ಎತ್ತರಿಸಿದ ಧ್ವನಿಯಲ್ಲಿ ಮಾತನಾಡುತ್ತಿರುವುದು ಅವನ ಕಿವಿಗೆ ಬಿತ್ತು. ಆ ಧ್ವನಿ ಬಹಳ ದೂರದಿಂದ ಕೇಳಿ ಬರುತ್ತಿತ್ತು. ಅವನು ಆ ಧ್ವನಿ ಬರುತ್ತಿದ್ದ ದಿಕ್ಕಿಗೆ ನಡೆದನು. ಆ ಧ್ವನಿಯು ಮೊದಲಿಗಿಂತಲೂ ಜೋರಾಗಿ ಕೇಳಿಸತೊಡಗಿತು. ಒಂದು ಕೋಣೆಯಲ್ಲಿ ಐದು ಹತ್ತು ವಿದ್ಯಾರ್ಥಿಗಳೊಂದಿಗೆ ಯಾರೋ ಭಾಷಣ ಮಾಡುತ್ತಿದ್ದಂತಿತ್ತು.

ಡಾಕ್ಟರ್ ಕ್ವಾಜಾ ಕ್ಲಾಸ್ ತೆಗೆದುಕೊಳ್ಳುತ್ತಿದ್ದರು.

ಅವನು ಇನ್ನೂ ಮುಂದಕ್ಕೆ ನಡೆದನು.

ಮಿಸ್ಟರ್ ಗೋವರ್ಧನ ಆಚಾರಿ ಎಫ್.ಆರ್.ಸಿ.ಎಸ್. ಎಂಬ ಬೋರ್ಡಿನ ಬಳಿ ಬಂದಾಗ ಅವನು ಕೋಣೆಯೊಳಕ್ಕೆ ಬಗ್ಗಿ ನೋಡಿದನು. ಬನಿಯನ್ ಮೇಲೆ ಏಪ್ರನ್ ಧರಿಸಿಕೊಂಡ ಒಬ್ಬ ಮನುಷ್ಯಕಪಿಯಂತೆ ಮಿಸ್ಟರ್ ಆಚಾರಿ, ಎರಡು ಆಡಿನ ಮರಿಗಳಂತಹ ಡಾಕ್ಟರ್‌ಗಳನ್ನು ತಮ್ಮ ಮುಂದೆ ಕೂರಿಸಿಕೊಂಡು ಆಪರೇಷನ್ ಲಿಸ್ಟನ್ನು ಪರಿಶೀಲಿಸುತ್ತಿದ್ದರು. ಕೆಲ ವಿದ್ಯಾರ್ಥಿಗಳು ಅವರ ಬಳಿ ಸರಿದು ನಿಂತಿದ್ದರು. ಮಿಸ್ಟರ್ ಆಚಾರಿ ಕೇಳಿದರು.

"ಎಲ್ಲರೂ ಬಂದು ನೋಡಿ ಹೋದರೇ ?"

ಅವನು ಮುಂದಕ್ಕೆ ನಡೆದನು. ತನ್ನ ಮೂಗಿನ ನೇರಕ್ಕೆ ಅವನು ನಡೆದನು.

ಡಾಕ್ಟರ್ ತನುಜ ಗರ್ಭಿಣಿಯೊಬ್ಬಳ ಆಪರೇಷನ್ ಮಾಡುತ್ತಿರುವ ಥಿಯೇಟರ್‌ನ ಮುಂದೆ ಬರುತ್ತಿದ್ದಾಗ ಪ್ರಸವ ಕೋಣೆಯೊಳಗಿಂದ ಗರ್ಭಿಣಿಯರ ದೀನರೋದನಗಳನ್ನು ಅವನು ಕೇಳಿದನು. ಅನಂತರ ಜನಿಸಿದ ಮಗುವಿನ ಅಳುವೂ ಕೇಳಿಬಂತು. ಡಾಕ್ಟರ್ ತನುಜರ ಸಿಹಿಯಾದ ಸಮಾಧಾನದ ಮಾತುಗಳನ್ನು ಕೇಳಿದನು.

ಪ್ರೆಷರ್, ಷುಗರ್ ಇರುವ ರೋಗಿಯನ್ನು ಮುಂದೆ ಕೂರಿಸಿಕೊಂಡು ಅವನ ಆಹಾರಕ್ರಮಗಳ ಬಗ್ಗೆ ತಮಾಷೆ ಮಾಡುತ್ತಿದ್ದ ಡಾಕ್ಟರ್ ಸಂತುಕುಮಾರನ ಮುಂದಿನಿಂದ ಅವನು ನಡೆದನು.

ಆ ಕಾರಿಡಾರ್‌ನಿಂದ ಪುಟ್ಟ ಕಾರಿಡಾರ್ ಅನ್ನು ಪ್ರವೇಶಿಸಿ ಅವನು ನಡೆಯತೊಡಗಿದನು. ಒಬ್ಬ ದೇವದೂತನ ಧ್ವನಿಯನ್ನು ಅವನು ಕೇಳಿದನು. ಒಬ್ಬ ತಂದೆಯ ವಾಕ್ಯಗಳನ್ನು ಅವನು ಕೇಳಿದನು. ಅದು ಡಾಕ್ಟರ್ ಕುಮಾರ್‌ರ ಕೋಣೆಯಾಗಿತ್ತು.

ಬೃಹತ್ತಾದ ಗ್ರಂಥವೊಂದನ್ನು ತೆರೆದಿಟ್ಟುಕೊಂಡು ಒಂದು ಬೆಟ್ಟದ ಊಸರವಳ್ಳಿಯಂತೆ ತಮ್ಮ ಕಣ್ಣುಗಳನ್ನು ಅದರ ಮೇಲೆ ಎಡದಿಂದ ಬಲಕ್ಕೆ ಚಲಿಸುತ್ತಾ ಡಾಕ್ಟರ್ ಕುಮಾರ್ ಓದುತ್ತಿದ್ದರು. ಆ ಕೋಣೆಯ ತೆಂಕಣ ಭಾಗದಲ್ಲಿ ಗಾಜಿನ ಬೀರುವಿನಲ್ಲಿ ಪೂರ್ಣ ಕಾಯದ ಒಂದು ಅಸ್ಥಿಪಂಜರವು ನೇತಾಡುತ್ತಿದ್ದುದನ್ನು ಕಂಡಾಗ ಅವನಿಗೆ ನಡುಕ ಹುಟ್ಟಿತು. ತನಗೇ ತಿಳಿಯದಂತೆ ಅವನ ಬಾಯಿಂದ 'ಅಯ್ಯೋ' ಎಂಬ ಚೀತ್ಕಾರ ಹೊರಬಂದಿತು.

"ಯಾರು ? ಯಾರದು ?" ಡಾಕ್ಟರ್ ಕುಮಾರ್ ಕೇಳಿದರು.

ಒಂಭತ್ತನೆಯ ನಂಬರ್ ಚೀಟಿಯೊಂದಿಗೆ ಅವನು ಆ ಕೋಣೆಯ ಎದುರಿಗೆ ಕಂಭದಂತೆ ನಿಂತನು.

"ಬನ್ನಿ ಬನ್ನಿ ಒಳಕ್ಕೆ ಬನ್ನಿ."

ಅವನು ಡಾಕ್ಟರ್ ಕುಮಾರ್‌ರವರ ಕೋಣೆಯನ್ನು ಪ್ರವೇಶಿಸಿದನು. ಅವನ ಕೈಯಲ್ಲಿದ್ದ ಚೀಟಿಯನ್ನು ತೆಗೆದುಕೊಂಡು ಅದನ್ನು ಪರಿಶೀಲಿಸಿದ ಡಾಕ್ಟರ್ ಕುಮಾರ್ ಹೇಳಿದರು.

"ಗೆಳೆಯ, ನಿಮಗೆ ದಾರಿ ತಪ್ಪಿಹೋಗಿದೆ. ನೀವು ಹೋಗಬೇಕಾಗಿರುವ ಸ್ಥಳ ಎಷ್ಟೋ ಮುಂದೆ ಇದೆ."

"ಕೊನೆಗೂ ನಾನು ನನ್ನ ಗುರಿಯನ್ನು ಮುಟ್ಟಿಯೇ ಮುಟ್ಟುತ್ತೇನೆ."

ಡಾಕ್ಟರ್ ಕುಮಾರ್ ಸ್ವಲ್ಪ ಹೊತ್ತು ಅವನನ್ನೇ ದಿಟ್ಟಿಸಿ ನೋಡಿದರು. ಅನಂತರ ಅವರು ಅಟೆಂಡರನ್ನು ಕರೆದು "ಆ ಮನುಷ್ಯನನ್ನು ಒಂಭತ್ತನೆಯ ನಂಬರ್ ಒ.ಪಿ.ಗೆ ಕರೆದುಕೊಂಡು ಹೋಗು" ಎಂದು ಆಜ್ಞೆ ಮಾಡಿದರು.

ಕಾರಿಡಾರ್‌ನಲ್ಲಿ ನಡೆದು ನಡೆದು ಅವನು ಒಂಭತ್ತನೆಯ ನಂಬರ್ ಒ.ಪಿ.ಯನ್ನು ಪ್ರವೇಶಿಸಿದನು. ಅಲ್ಲಿ ಡಾಕ್ಟರ್ ಕ್ವಾಜ ರೋಗಿಗಳನ್ನು ಪರೀಕ್ಷಿಸುತ್ತಿದ್ದರು. ಅನಾಟಮಿಯಿಂದ ಅಟೆಂಡರ್‌ನ ಜೊತೆ ಬಂದ ಅವನನ್ನು ಡಾಕ್ಟರ್ ಕ್ವಾಜ ಅವನ ತೋಳು ಹಿಡಿದು ಸ್ವೀಕರಿಸಿದರು. ಡಾಕ್ಟರ್ ಕ್ವಾಜ ಅವನನ್ನು ಸೂಕ್ಷ್ಮವಾಗಿ ನೋಡಿದರು. ಅವನ ಮುಖವು ಭಯದಿಂದ ಕಪ್ಪಾಗಿತ್ತು. ಅವನ ಕಣ್ಣುಗಳಲ್ಲಿ ಅಜ್ಞಾತವಾದ ಭೀತಿಯ ಪ್ರತಿಬಿಂಬಿಸುತ್ತಿದ್ದುದನ್ನು ಡಾಕ್ಟರ್ ಕ್ವಾಜ ಕಂಡರು. ಭೂ ಮಂಡಲದಲ್ಲಿರುವ ಸಕಲ ರೋಗಗಳನ್ನು ಅನುಭವಿಸಲು, ಅದಕ್ಕೆ ತುತ್ತಾಗಲೂ ಕಾದಿರುವ ಒಬ್ಬನಂತೆ ಅವನು ಡಾಕ್ಟರ್ ಕ್ವಾಜರ ಮುಂದೆ ನಿಂತಿದ್ದನು.

ಸ್ವಲ್ಪ ಹೊತ್ತು ಡಾಕ್ಟರ್ ಕ್ವಾಜರನ್ನು ನೋಡಿದ ನಂತರ ಅವನು ಕೇಳಿದನು.

"ತಾವು ದೇವರನ್ನು ತಮ್ಮ ಕಣ್ಣುಗಳಿಂದ ಕಂಡಿದ್ದೀರಾ ?"

ಒಬ್ಬ ವಿದ್ಯಾರ್ಥಿಯಂತೆ ಡಾಕ್ಟರ್ ಕ್ವಾಜ ಹೇಳಿದರು:

"ಇಲ್ಲ, ನಾನಿಲ್ಲಿಯವರೆಗೂ ನೋಡಿಲ್ಲ."

"ಆದರೆ ನಾನು ಕಂಡಿದ್ದೇನೆ" ಅವನು ಹೇಳಿದನು.

"ಯಾವ ರೂಪದಲ್ಲಿ ನೋಡಿದ್ದೀರಿ ?" ಒಳಗೊಳಗೇ ನಗುತ್ತಾ ಡಾಕ್ಟರ್ ಕೇಳಿದರು.

"ಕಣ್ಣಿನ ಮುಂದಿನ ಮಿಂಚಿನಂತೆ" ಅವನು ಉತ್ತರಿಸಿದನು.

ಅನಂತರ ಅವರು ಸ್ವಲ್ಪ ಹೊತ್ತು ಮೌನ ಪಾಲಿಸಿದರು. ಅಲ್ಲಿದ್ದ ಎಲ್ಲರೂ ಕೌತುಕದಿಂದ ಅವನನ್ನು ನೋಡಿದರು.

"ಆಗಲಿ, ನಿಮಗೇನು ಕಾಯಿಲೆ ?" ಕ್ವಾಜ ಕೇಳಿದರು.

ಅವನು ಡಾಕ್ಟರ್ ಕ್ವಾಜರನ್ನು ಒಂದು ಹಸುಗೂಸಿನಂತೆ ನೋಡಿದನು. ಒಂದು ಜನ್ಮವೆಲ್ಲಾ ಹೇಳಿದರೂ ಮುಗಿಯದ ಕಷ್ಟಗಳು ಅವನಿಗಿರುವುದಾಗಿ ಅವನ ಮುಖಭಾವವು ಸಾರಿ ಹೇಳುತ್ತಿತ್ತು. ಅವನ ಕಣ್ಣುಗಳು ಅರಳಿಕೊಂಡವು. ಕತ್ತಿನಲ್ಲಿ ನರಗಳು ನಡುಗುತ್ತಿದ್ದವು.

"ನಾನು ಈಗ ಸಮಾಧಾನದಿಂದ ಸಾಯುತ್ತೇನೆ. ನನ್ನ ಪ್ರಯಾಣ ಇಲ್ಲಿಗೆ ಮುಗಿಯಿತು."

ಆ ವೇಳೆಗೆ ಅವನು ಬಹು ಸುಸ್ತಾಗಿದ್ದನು.

ಡಾಕ್ಟರ್ ಕ್ವಾಜರ ಅನಂತರದ ಪ್ರಶ್ನೆಗಳು ಅವನ ಕಿವಿಯೊಳಗೆ ಹೋಗಲೇ ಇಲ್ಲ. ಜ್ವರ ಬಂದಾಗ ಮಾತನಾಡುವಂತೆ, ಪ್ರಜ್ಞಾಹೀನನಂತೆ ಏನೇನೋ ಹಲುಬುತ್ತಿದ್ದನು.

ಉದ್ರೇಕದ ಸ್ವರಗಳು ಅವನಿಂದ ದೂರವಾದವು. ವ್ಯಾಕುಲತೆಯ ಮಡುವಿನಲ್ಲಿ ತನ್ನ ಜೀವನವನ್ನು ಉರುಳಿಸಿದಂತೆ ಅವನು ಮಂಚದ ಮೇಲೆ ಮಲಗಿದನು.

ಡಾಕ್ಟರ್ ಕ್ವಾಜ ಅವನನ್ನು ವಿಶದವಾಗಿ ಪರೀಕ್ಷಿಸಿದ ನಂತರ ಅವನನ್ನು ಅಡ್‌ಮಿಟ್ ಮಾಡಿಕೊಳ್ಳಬೇಕೆಂದು ವಾರ್ಡ್‌ಗೆ ಕಳುಹಿಸಿದರು.

ಅವನು ವಾರ್ಡಿನೊಳಗೆ ಹೋಗುವಾಗಲೇ ಪ್ರಜ್ಞಾಶೂನ್ಯನಾದನು. ತುರ್ತು ಶುಶ್ರೂಷೆಗಳು ಆರಂಭವಾದವು. ಅವನ ರಕ್ತವೂ ಮೂತ್ರವೂ ಲ್ಯಾಬೋರೇಟರಿಗೆ ಹೋದವು.

ಸಾಯಂಕಾಲ ಡಾಕ್ಟರ್ ಕ್ವಾಜ ವಾರ್ಡ್‌ನಲ್ಲಿ ರೌಂಡ್‌ಗೆ ಬಂದಾಗ ಅವನಿಗಿನ್ನೂ ಪ್ರಜ್ಞೆ ಬಂದಿರಲಿಲ್ಲ.

ಗ್ಲೂಕೋಸ್ ಸಲೈನ್ ಹನಿಹನಿಯಾಗಿ ಅವನ ಧಮನಿಯಲ್ಲಿ ಏರುತ್ತಿತ್ತು.

"ಈತ ಆಹಾರ ಸೇವಿಸಿ ಎಷ್ಟೋ ದಿನಗಳಾಗಿವೆ. ದೇಹದಲ್ಲಿ ಒಂದು ಹನಿ ನೀರು ಸಹ ಇಲ್ಲ. ಸಿವಿಯರ್ ಡಿಹೈಡ್ರೇಷನ್" ಡಾಕ್ಟರ್ ಕ್ವಾಜ ಹೇಳಿದರು.

ಡ್ಯೂಟಿ ನರ್ಸ್‌ಗಳಿಗೂ ಹೌಸ್ ಸರ್ಜನ್‌ಗಳಿಗೂ ನಿರ್ದೇಶನಗಳನ್ನು ನೀಡಿ ಡಾಕ್ಟರ್ ಕ್ವಾಜ ಅಲ್ಲಿಂದ ಹೊರಟುಹೋದರು.

ತನ್ನ ಜೊತೆಗೆ ಸಹಾಯಕ್ಕೆ ಯಾರೂ ಇಲ್ಲದ್ದರಿಂದ ಹೌಸ್ ಸರ್ಜನ್ನೇ ಬಹಳ ಶ್ರದ್ಧೆಯಿಂದ ಅವನ ಶುಶ್ರೂಷೆ ಮಾಡುತ್ತಿದ್ದನು.

ರಾತ್ರಿಯಾಗುವ ವೇಳೆಗೆ ಅವನಿಗೆ ಪ್ರಜ್ಞೆ ಬಂತು. ಕ್ಷೀಣಗೊಂಡಿದ್ದರೂ ಅವನು ಎದ್ದು ಕುಳಿತನು.

"ನನಗೀಗ ಏನೂ ಇಲ್ಲ. ಚೆನ್ನಾಗಿ ಗುಣವಾಗಿದೆ" ಅವನು ಅದನ್ನು ಜೋರಾಗಿ ಹೇಳಲು ಶ್ರಮಿಸಿದನಾದರೂ ಮಾತುಗಳು ತೊದಲುವಂತೆ ಹೊರಬಂದವು.

"ಮಲಗಿಕೊಳ್ಳಿ, ಇನ್ನೂ ಎದ್ದೇಳಲು ಆಗಿಲ್ಲ" ನರ್ಸ್ ಅವನನ್ನು ತಡೆದಳು.

"ಇಲ್ಲ ನನಗೇನೂ ಆಗಿಲ್ಲ." ನಾಲ್ಕು ದಿಕ್ಕಿಗೂ ಕಣ್ಣೋಡಿಸಿದ ನಂತರ ಅವನು ಕೇಳಿದನು. "ನನ್ನ ಪೆಟ್ಟಿಗೆ ಎಲ್ಲಿ?"

"ಮಂಚದ ಕೆಳಗಿದೆ" ನರ್ಸ್ ಹೇಳಿದಳು.

"ಸಿಸ್ಟರ್ ದಯ ಮಾಡಿ ಅದನ್ನು ಸ್ವಲ್ಪ ತೆರೆಯಿರಿ"

ನರ್ಸ್ ಪೆಟ್ಟಿಗೆ ತೆರೆದಳು. ಅವನು ಅದರಿಂದ ಒಂದು ಚಿಕ್ಕ ಸೀಮೆಎಣ್ಣೆ ದೀಪವನ್ನು ಹೊರಕ್ಕೆ ತೆಗೆದನು. ಅದರಲ್ಲಿರುವ ಸೀಮೆಎಣ್ಣೆಯು ಬಹುಮಟ್ಟಿಗೆ ಸೋರಿಹೋಗಿತ್ತು.

"ಇದನ್ನು ಸ್ವಲ್ಪ ಹತ್ತಿಸಿ ಕೊಡಿ" ಅವನೆಂದನು.

"ಅದ್ದೇಕೆ ಇಲ್ಲಿ, ಈಗ ಇನ್ನೂ ಬೆಳಕಿದೆಯಲ್ಲಾ" ನರ್ಸ್ ಟ್ಯೂಬ್ ಲೈಟಿನತ್ತ ಬೆರಳು ತೋರಿಸಿ ಹೇಳಿದಳು.

"ಅದೆಲ್ಲಾ ಸಾಲದು. ಇದನ್ನು ಹತ್ತಿಸದೆ ನಾನು ಒಂದು ಸಂಜೆಯನ್ನೂ ಕಳೆದಿಲ್ಲ. ನಾನು ಇದನ್ನು ಹತ್ತಿಸಿಯೇ ದೇವರನ್ನು ಸ್ಮರಿಸುವುದು."

ಸಿಸ್ಟರ್ ಡ್ಯೂಟಿ ರೂಮಿಗೆ ಹೋಗಿ ಸರ್ಜಿಕಲ್ ಸ್ಪಿರಿಟ್‌ನ ಸೀಸೆಯೊಂದಿಗೆ ಬಂದಳು. ಸೀಮೆಎಣ್ಣೆಯ ದೀಪವನ್ನು ತೆರೆದು ಅದರಲ್ಲಿ ಸ್ಪಿರಿಟ್ ಸುರಿದಳು. ದೀಪದ ಚಿಮ್ನಿಣಿಯ ಗ್ಲಾಸನ್ನು ಚೆನ್ನಾಗಿ ಒರೆಸಿದ ನಂತರ ಬೆಂಕಿ ಕಡ್ಡಿ ಗೀಚಿ ಅದನ್ನು ಹತ್ತಿಸಿದಳು. ಆ ದೀಪವು ಉರಿಯತೊಡಗಿದಾಗ ಅವನ ಮುಖದಲ್ಲಿ ಸಂತೋಷವು ಹರಡಿತು. ಅಲ್ಲಾಡುತ್ತಿರುವ ದೀಪದ ನಾಲಿಗೆಯನ್ನು ನೋಡುತ್ತಾ ಅವನು ಕೈಜೋಡಿಸಿ ನಮಸ್ಕರಿಸಿ ದೇವರನ್ನು ಸ್ಮರಿಸಿದನು. ಅವನ ಕೈಗಳು ನಡುಗಿದವು.

ಬಹಳ ಸಂತೋಷದಿಂದ ಆ ದೀಪವನ್ನು ಅವನು ಮಂಚದ ಬಳಿಯಿದ್ದ ಸೈಡ್ ಟೇಬಲ್ ಮೇಲಿಟ್ಟನು. ಅವನ ಮುಖದಲ್ಲಿ ಶಾಶ್ವತವಾದ ಸಮಾಧಾನವು ನೆಲೆಸಿತು.

ಅವನು ಮತ್ತೆ ಮಲಗಿದನು. ಹೇಳಿಕೊಳ್ಳಲು ಸಾಧ್ಯವಿಲ್ಲದ ಏನೋ ಒಂದು ನಿಶ್ಶಕ್ತಿ ಅವನನ್ನು ಮತ್ತೆ ಮತ್ತೆ ಪೀಡಿಸುತ್ತಿತ್ತು. ಅವನು ನಿದ್ದೆ ಎಚ್ಚರಗಳ ಮಂಪರಿನ ಮಧ್ಯೆ ಮರೆಯಾಗುತ್ತಿದ್ದನು. ಮಧ್ಯೆ ಮಧ್ಯೆ ಏನೋ ಹೇಳುತ್ತಿದ್ದನು. ಮಾತುಗಳು ಸ್ಪಷ್ಟವಾಗಿರಲಿಲ್ಲ. ಅವನ ತುಟಿಗಳು ಏನೋ ಮಂತ್ರವನ್ನು ಜಪಿಸುತ್ತಿದ್ದವು. ಅವನು ಯಾರನ್ನೋ ನಿರೀಕ್ಷಿಸುತ್ತಿರುವಂತೆ ಕಣ್ಣುಗಳನ್ನು ತೆರೆಯಲು ಪ್ರಯತ್ನಪಡುತ್ತಿದ್ದನು. ಕಣ್ಣಿನ ರೆಪ್ಪೆಗಳು ಮುಚ್ಚುತ್ತಿದ್ದವು.

ಹೌಸ್ ಸರ್ಜನ್ ಹಾಗೂ ನರ್ಸ್ ಅವನನ್ನು ಗಮನಿಸುತ್ತಾ ಮಧ್ಯೆ ಮಧ್ಯೆ ಅವನ ಮಂಚದ ಬಳಿ ಬಂದೂ, ಡ್ಯೂಟಿ ರೂಮಿಗೆ ಹಿಂದಿರುಗಿ ಹೋಗುತ್ತಾ ರಾತ್ರಿಯನ್ನೆಲ್ಲಾ ಕಳೆದರು.

ಅರ್ಧರಾತ್ರಿಯ ಸಮಯವಾಗಿತ್ತು.

ವಾರ್ಡ್ ನಿಶ್ಶಬ್ದವಾಗಿತ್ತು. ರೋಗಿಗಳಲ್ಲಿ ಬಹಳಷ್ಟು ಜನ ನಿದ್ದೆಯಲ್ಲಿ ಮುಳುಗಿದ್ದರು.

ಅವನು ಏನೋ ಗೊಣಗಾಡತೊಡಗಿದನು. ಅವ್ಯಕ್ತವಾದ ಧ್ವನಿಯನ್ನು ಕೇಳಿ ಸಿಸ್ಟರ್ ಓಡಿ ಬಂದಳು.

ಆತನು ಕೈಯನ್ನೆತ್ತಿ ಏನನ್ನೋ ನುಡಿದನು. ಅದೇನೆಂದು ಅರ್ಥವಾಗದ ನರ್ಸ್ ದಿಕ್ಕು ತೋಚದಂತೆ ನಿಂತಳು.

ಅವನು ತಲೆಯ ದಿಂಬನ್ನೊರಗಿಕೊಂಡು ಕಣ್ಣನ್ನು ಮುಚ್ಚಿಕೊಂಡು ಅರೆಜ್ಞಾನದಲ್ಲಿ ಮಲಗಿದ್ದನು. ಅವನು ಯಾರನ್ನೋ ನಿರೀಕ್ಷಿಸುತ್ತಿರುವಂತಿತ್ತು. ಯಾರದೋ ಕಾಲಿನ ಸಪ್ಪಳವು ಕೇಳಿ ಬರುತ್ತಿರುವಂತೆ ಅವನ ಕಿವಿಗಳು ಹೊಡೆದುಕೊಳ್ಳುತ್ತಿದ್ದವು. ಪೂರ್ಣಪ್ರಜ್ಞೆಯಿಂದ ಯಾರನ್ನೋ ಕಾಣಲು ಅವನು ಇಚ್ಛಿಸುತ್ತಿರುವಂತೆ ತೋರಿತು. ಅವನ ಮೂಗಿನ ಹೊಳ್ಳೆಗಳು ಅರಳುತ್ತಿದ್ದವು. ಭೂತಕಾಲದ, ವರ್ತಮಾನದ ನೆನಪುಗಳೂ, ಪರಿಚಯಗಳೂ ಅವನನ್ನು ಕಾಡುತ್ತಿದ್ದವೋ ಏನೋ ?

"ದಾಹವಾಗುತ್ತಿದೆಯೋ ?" ಸಿಸ್ಟರ್ ಕೇಳಿದಳು.

ಅವನು ತಲೆಯಾಡಿಸಿ ಇಲ್ಲವೆಂದು ತಿಳಿಸಿದನು. ಅನಂತರ ಪಕ್ಕದ ಟೇಬಲ್ ಮೇಲೆ ಉರಿಯುತ್ತಿದ್ದ ದೀಪದ ಕಡೆ ಕೈ ತೋರಿಸುತ್ತಾ ಅವನು ಅಸ್ಪಷ್ಟವಾಗಿ ಹೇಳಿದನು:

"ಬತ್ತಿಯನ್ನು ಕೆಳಗಿಳಿಸಿ"

"ಉರಿಯುತ್ತಿರಲಿ ಬಿಡಿ. ಅದರ ತುಂಬ ನಾನು ಸ್ಪಿರಿಟ್ ಸುರಿದಿದ್ದೇನೆ" ಮುಗುಳ್ನಗುತ್ತಾ ಸಿಸ್ಟರ್ ಹೇಳಿದಳು.

"ಬೇಡ ನನಗೆ ಹೊತ್ತಾಯಿತು" ಅವನು ಮೆಲ್ಲನೆಯೇ ಹೇಳಿದನು.

ಸಿಸ್ಟರ್ ದೀಪದ ಬತ್ತಿಯನ್ನು ಕೆಳಕ್ಕಿಳಿಸಿದಳು. ಇದ್ದಕ್ಕಿದ್ದಂತೆ ಆ ದೀಪವು ಆರಿಹೋಯಿತು.

ಅವನ ತಲೆ ತಲೆದಿಂಬಿನ ಮೇಲೆ ಭಾರವಾಗತೊಡಗಿತು. ನಿಶ್ಶಕ್ತವಾದ ಕಣ್ಣಿನ ರೆಪ್ಪೆಗಳು ಮತ್ತೆಯೂ ಮುಚ್ಚಿಕೊಂಡವು.

ಅನಂತರ ಅವನು ಏನೂ ಮಾತನಾಡಲಿಲ್ಲ.

ಅನಂತರ ಅವನು ಎದ್ದೇಳಲಿಲ್ಲ.

# ಇಪ್ಪತ್ತು

ಮಿಸ್ಟರ್ ಆಚಾರಿ ಅವರ ಬ್ಲ್ಯಾಕ್ ಕಾರ್ ಹೊತ್ತಿಗೆ ಮುಂಚೆಯೇ ಸರ್ಜರಿ ಡಿಪಾರ್ಟ್‌ಮೆಂಟ್‌ನ ಎದುರಿಗೆ ಬಂದು ನಿಂತಿತು. ಬೂದು ಬಣ್ಣದ ಟೆರಿವುಲನ್ ಸೂಟ್ ಧರಿಸಿದ ಕಾರು ಮೇಲಕ್ಕೊಮ್ಮೆ ಎದ್ದಿತು. ಕಾರಿನ ಡೋರ್‌ಗೆ ಬೀಗ ಹಾಕಿ ಬೀಗದ ಕೈಯನ್ನು ಬೆರಳಲ್ಲಿ ಸಿಕ್ಕಿಸಿಕೊಂಡು ತಿರುಗಿಸುತ್ತಾ ಎಡದ ಕೈನಲ್ಲಿ ಬ್ರೀಫ್‌ಕೇಸಿನೊಂದಿಗೆ ಅವರು ಡಿಪಾರ್ಟ್‌ಮೆಂಟ್‌ಅನ್ನು ಪ್ರವೇಶಿಸಿದರು.

ಮಿಸ್ಟರ್ ಆಚಾರಿ ಒಬ್ಬ ಸರ್ಜನ್ ಆಗಿ ಕೆಲಸ ಮಾಡಲಾರಂಭಿಸಿ ಇಪ್ಪತ್ತೈದು ವರ್ಷಗಳು ತುಂಬಲಿದ್ದವು. ಅವರ ಜೀವವು ಆಪರೇಷನ್‌ಗಳಲ್ಲಡಗಿತ್ತು. ತಾವು ಸಾಯುವವರೆಗೂ ಚಾಕು ತಮ್ಮ ಕೈಯಲ್ಲೇ ಇರಬೇಕೆಂದೇ ಅವರಿಚ್ಛಿಸುತ್ತಿದ್ದರು. ಅಭಿಮಾನದಿಂದಲೂ ಆನಂದದಿಂದಲೂ ಆಚಾರಿ ತಮ್ಮ ಕೈಗಳನ್ನು ನೋಡುವರು. ಒಬ್ಬ ಸರ್ಜನ್‌ನ ಬಹು ದೊಡ್ಡ ಮೂಲಧನವು ತನ್ನ ಕೈಗಳಂತೆ. ಒಮ್ಮೆ ಕೈ ಜಾರಿತೆಂದರೆ ಸಾಕು, ತಮ್ಮ ಜೀವ ಹೋದಂತೆಯೇ.

ಅವರು ಬಹು ಆಸಕ್ತಿಯಿಂದ ಆಪರೇಷನ್ ಮಾಡುತ್ತಿದ್ದರು. ಒಂದು ದಿನ ಸಹ ಅವರು ಉದಾಸೀನರಾಗಿರಲಿಲ್ಲ. ಮೊದಲ ಬಾರಿಗೆ ತಮಗೊಂದು ಶರೀರ ಕುಯ್ಯಲು ದೊರಕುತ್ತಿದೆಯೆಂಬ ದೊಡ್ಡ ಆಸೆಯಿಂದ ಅವರು ಒಂದೊಂದು ಬಾರಿಯೂ ರೋಗಿಯ ದೇಹದ ಮೇಲೆ ಚಾಕು ಆಡಿಸುವರು. ಕ್ಲಿಷ್ಟವಾದ ಕೇಸುಗಳನ್ನು ಹಿಂದಿನ ದಿನ ರಾತ್ರಿಯೇ ಅವರು ನಿದ್ದೆಗೆಟ್ಟು ಪಠಿಸುತ್ತಿದ್ದರು. ಆಪರೇಷನ್ ಮಾಡಬೇಕಾದ ರೀತಿಯನ್ನು ತಮ್ಮ ಊಹಾಲೋಕದಲ್ಲಿ ಚಿತ್ರಿಸಿಕೊಳ್ಳುತ್ತಾರೆ. ಗೊತ್ತಾಗದಿರುವ ವಿಷಯಗಳನ್ನು ಕುರಿತು ಯೋಚಿಸುತ್ತಾ ತಮ್ಮ ಕೋಣೆಯಲ್ಲಿ ಅರ್ಧರಾತ್ರಿಯ ಸಮಯದಲ್ಲೂ ಸಹ ಅವರು ಶತಪಥ ತುಳಿಯುತ್ತಾ ನಡೆಯುವುದನ್ನು ಕಾಣಬಹುದಾಗಿತ್ತು. ಅವರ ಸ್ವಭಾವದಲ್ಲಿ ಏನೇನೋ ದೋಷಗಳಿದ್ದರೂ ಸಹ ಒಬ್ಬ ದೊಡ್ಡ ಸರ್ಜನ್ ಎಂಬ ಸತ್ಕೀರ್ತಿ ಆಚಾರಿ ಹೆಸರಿಗೆ ಶಾಶ್ವತವಾಗಿ ನೆಲೆಸಿತ್ತು.

ಸರ್ಜರಿ ಡಿಪಾರ್ಟ್‌ಮೆಂಟಿನಲ್ಲಿ ಹತ್ತಕ್ಕಿಂತ ಹೆಚ್ಚು ಯೂನಿಟ್‌ಗಳಿವೆ. ಒಂದೊಂದು ಯೂನಿಟ್‌ಗೂ ಮುಖ್ಯಸ್ಥನೂ, ಐದಾರು ಸರ್ಜನ್‌ಗಳೂ ಇದ್ದಾರೆ. ಅದಲ್ಲದೆ ಅನೇಕ ಸರ್ಜನ್‌ರೂ ಹೌಸ್ ಸರ್ಜನ್‌ಗಳೂ, ರೆಸಿಡೆಂಟ್ ಮೆಡಿಕಲ್ ಆಫೀಸರರೂ ಇದ್ದಾರೆ. ಎಂ.ಬಿ.ಬಿ.ಎಸ್. ಮಾಡುತ್ತಿರುವ ವಿದ್ಯಾರ್ಥಿಗಳೂ, ಎಂ.ಡಿ.ಗೆ ಓದುತ್ತಿರುವವರೂ, ಸಂಶೋಧನೆ ಮಾಡುತ್ತಿರುವವರೂ, ಡಿಪಾರ್ಟ್‌ಮೆಂಟಿನಲ್ಲಿದ್ದಾರೆ. ಬಹಳ ಶಿಸ್ತಿನಿಂದ ನಡೆಯುವ ಡಿಪಾರ್ಟ್‌ಮೆಂಟ್ ಆಚಾರಿಯವರದಾಗಿತ್ತು. ಕರ್ತವ್ಯಲೋಪವನ್ನು ತೋರಿಸುವ ಯಾರೊಬ್ಬರೊಂದಿಗೂ ಆಚಾರಿಯವರು ದಯೆ ತೋರಿಸುತ್ತಿರಲಿಲ್ಲ. ಕಠಿಣವಾದ ಶಿಕ್ಷೆ ನೀಡುವ

ವಿಧಾನಗಳನ್ನು ಅವರು ದೃಢವಾಗಿ ನಂಬುತ್ತಿದ್ದರು.

ಮಿಸ್ಟರ್ ಆಚಾರಿಯವರು ಸ್ವತಃ ಲಂಚಕೋರರಾಗಿದ್ದರೂ, ಇತರರಿಗೆ ಅವರು ಅದಕ್ಕೆ ಅನುಮತಿ ನೀಡುತ್ತಿರಲಿಲ್ಲ. ಬಹು ವರ್ಷಗಳ ಹಿಂದೆ ಆಚಾರಿಯವರು ನಡೆಸಿದ ಬಹು ದೊಡ್ಡ ಭ್ರಷ್ಟಾಚಾರದ ಬಗ್ಗೆ ಒಂದು ಕಥೆಯು ನಗರದಲ್ಲೆಲ್ಲಾ ಪ್ರಚಲಿತವಿತ್ತು. ಟೆಟ್ರಾಸೈಕ್ಲಿನ್ ಎಂಬ ಔಷಧಿಯನ್ನು ಪ್ರಪಂಚದಲ್ಲಿ ಮೊಟ್ಟ ಮೊದಲಿಗೆ ಕಂಡುಹಿಡಿದ ವರ್ಷಗಳಲ್ಲಿ ಅದು ನಡೆದಿತ್ತು. ಫೈಜರ್ ಎಂಬ ಅಂತರರಾಷ್ಟ್ರೀಯ ಔಷಧಿಯ ಕಂಪೆನಿಯು ಟೆಟ್ರಾಮೈಸಿನ್ ಎಂಬ ಹೆಸರಿನಲ್ಲಿ ಟೆಟ್ರಾಸೈಕ್ಲಿನ್ ಅನ್ನು ಪ್ರಪಂಚದ ಮಾರುಕಟ್ಟೆಗೆ ಇಳಿಸಿದ್ದ ಕಾಲವಾಗಿತ್ತದು. ಫೈಜರ್ ಕಂಪೆನಿಯು ಲೋಕ ರಾಷ್ಟ್ರಗಳಿಗೆಲ್ಲಾ ಟೆರ್ರಾಮೈಸಿನ್ ಕ್ಯಾಪ್ಸೂಲ್‌ನ ಸ್ಯಾಂಪಲ್‌ಗಳನ್ನು ಕಳುಹಿಸಿ ಅದರ ಫಲದ ಬಗ್ಗೆ ಸರ್ವೇ ನಡೆಸುತ್ತಿತ್ತು. ತಮ್ಮ ನಗರದಲ್ಲಿ ಸರ್ವೇ ಮಾಡಲು ಮಿಸ್ಟರ್ ಆಚಾರಿಯವರನ್ನು ಕಂಪೆನಿಯು ನಿಯಮಿಸಿತ್ತು. ಇಪ್ಪತ್ತು ಸಾವಿರ ಟೆರ್ರಾಮೈಸಿನ್ ಕ್ಯಾಪ್‌ಸೂಲುಗಳನ್ನು ಕಂಪೆನಿಯವರು ಆಚಾರಿಗೆ ಕಳುಹಿಸಿದ್ದರು. ಆಚಾರಿಯವರು ರೋಗಿಗಳಿಗೆ ಆ ಔಷಧಿ ನೀಡಿ ಅದರ ಪರಿಣಾಮಗಳನ್ನು ದಾಖಲೆ ಮಾಡಬೇಕಿತ್ತು. ಟೆರ್ರಾಮೈಸಿನ್ ಆಗಿನ ಕಾಲದಲ್ಲಿ ಬಹಳ ಅಪೂರ್ವವಾದ ಒಂದು ಔಷಧವಾಗಿತ್ತು. ಇಪ್ಪತ್ತು ಕ್ಯಾಪ್‌ಸೂಲುಗಳಿಂದ ಯಾವುದೇ ಮಾರಕವಾದ ರೋಗವನ್ನು ಗುಣಪಡಿಸಲು ಸಾಧ್ಯವಿತ್ತು. ವಿಶೇಷವಾಗಿ ಶಸ್ತ್ರಕ್ರಿಯೆಯ ನಂತರ ಬಾಧಿಸುವ ನಂಜುರೋಗವನ್ನು, ಅದರ ನಂತರ ರೋಗಿಯ ಮರಣವನ್ನು ತಡೆಯಲು ಸಾಮರ್ಥ್ಯವಿದ್ದ ಔಷಧಿಯಾಗಿತ್ತದು. ಅದರ ಅಂದಿನ ಬೆಲೆಯು ಒಂದು ಕ್ಯಾಪ್‌ಸೂಲ್‌ಗೆ ಹತ್ತು ರೂಪಾಯಿಯಾಗಿತ್ತು. ಅದು ಇಪ್ಪತ್ತು ಪೈಸೆಗೆ ಸಮೃದ್ಧವಾಗಿ ಆಹಾರವು ದೊರಕುತ್ತಿದ್ದ ಕಾಲ.

ಮಿಸ್ಟರ್ ಆಚಾರಿ ಇಪ್ಪತ್ತು ಸಾವಿರ ಕ್ಯಾಪ್‌ಸೂಲ್‌ಗಳಲ್ಲಿ ಎರಡು ಸಾವಿರ ಕ್ಯಾಪ್‌ಸೂಲುಗಳನ್ನು ಮಾತ್ರ ತೆಗೆದುಕೊಂಡು ಅದನ್ನು ನೂರು ರೋಗಿಗಳಿಗೆ ಕೊಟ್ಟು ಅವುಗಳು ಅನಂತರ ರೋಗಿಗಳ ಮೇಲೆ ಬೀರುವ ಪರಿಣಾಮಗಳನ್ನು ದಾಖಲು ಮಾಡಿದರು. ಆ ನೂರು ರೋಗಿಗಳ ಅನುಪಾತದಲ್ಲಿ ಅವರು ಸಾವಿರ ರೋಗಿಗಳ ರಿಪೋರ್ಟನ್ನೇ ತಯಾರು ಮಾಡಿದರು. ಮಿಕ್ಕ ಒಂಬೈನೂರು ಸುಳ್ಳು ಹೆಸರುಗಳನ್ನು ಬರೆದುಬಿಟ್ಟರು.

ಮಿಕ್ಕ ಹದಿನೆಂಟು ಸಾವಿರ ಟೆರ್ರಾಮೈಸಿನ್ ಕ್ಯಾಪ್‌ಸೂಲ್‌ಗಳನ್ನು ಮಿಸ್ಟರ್ ಆಚಾರಿ ಒಂದು ಹೋಲ್‌ಸೇಲ್ ಔಷಧಿ ವ್ಯಾಪಾರಿಗೆ ಮಾರಿ ದುಡ್ಡು ಮಾಡಿದರು. ಆ ಹಣದಿಂದ ಅವರು ತಮ್ಮ ಊರಿನಲ್ಲಿ ಮನೋಹರವಾದ ಒಂದು ಕಟ್ಟಡವನ್ನು ಕಟ್ಟಿಸಿದರು. ತಮ್ಮ ತಾಯಿಯ ಜ್ಞಾಪಕಾರ್ಥವಾಗಿ ಆ ಕಟ್ಟಡಕ್ಕೆ ಅವರು 'ಜಯಂತಿ ಬಿಲ್ಡಿಂಗ್ಸ್' ಎಂದು ಹೆಸರಿಟ್ಟರು. ಆದರೆ ವಿದ್ಯಾರ್ಥಿಗಳಿಗೂ ಊರಿನವರಿಗೂ ಈ ರಹಸ್ಯ ತಿಳಿದುಹೋಯಿತು. ಅವರು ಆ ಕಟ್ಟಡವನ್ನು ಮತ್ತೊಂದು ಹೆಸರಿನಲ್ಲಿ ಕರೆಯತೊಡಗಿದರು - ಟೆರ್ರಾಮೈಸಿನ್ ಬಿಲ್ಡಿಂಗ್ಸ್.

ಇಷ್ಟು ವರ್ಷಗಳು ಕಳೆದರೂ ಇಂದೂ ಆ ಕಟ್ಟಡವು ಟೆರ್ರಾಮೈಸಿನ್ ಬಿಲ್ಡಿಂಗ್ಸ್ ಎಂಬ ಹೆಸರಿನಲ್ಲೇ ತಿಳಿಯಲ್ಪಡುತ್ತಿತ್ತು.

ಮಿಸ್ಟರ್ ಆಚಾರಿ ಕೋಟನ್ನೂ ಟೈಯನ್ನೂ ಬಿಚ್ಚಿ ಹ್ಯಾಂಗರ್‌ನಲ್ಲಿ ನೇತು ಹಾಕಿ, ಬನಿಯನ್ ಮೇಲೆ ಏಪ್ರನ್ ಹಾಕಿಕೊಂಡು ತಮ್ಮ ಪ್ರೈವೇಟ್ ರೂಮಿನಲ್ಲಿ ಸೋಫಾದ ಮೇಲೆ ಕುಳಿತರು.

ಎಕ್ಸ್‌ರೇ ಫಿಲಂಗಳೊಂದಿಗೂ, ಕೇಸ್ ರಿಪೋರ್ಟ್‌ಗಳೊಂದಿಗೂ ಮೇರಿ ಆ ಕೋಣೆಯನ್ನು ಪ್ರವೇಶಿಸಿದಳು.

"ಗುಡ್ ಮಾರ್ನಿಂಗ್ ಸರ್" ಮೇರಿ ನಮಸ್ಕಾರವನ್ನು ಹೇಳುತ್ತಾ ತಾನು ತಂದ ವಸ್ತುಗಳನ್ನು ಮೇಜಿನ ಮೇಲಿಟ್ಟಳು.

"ಮಾರ್ನಿಂಗ್, ಮಾರ್ನಿಂಗ್" ಆಚಾರಿ ಕಣ್ಣು ಮಿಟುಕಿಸುತ್ತಾ ಹೇಳಿದರು. ಅವರ ತುಟಿಗಳಲ್ಲಿ ಒಂದು ಕುಚೇಷ್ಟೆಯ ನಗು ಹರಡಿತು.

"ನಾನು ಯಾವ ಯಾವ ಕೇಸುಗಳನ್ನು ಮಾಡಬೇಕು ?" ಮಿಸ್ಟರ್ ಆಚಾರಿ ಮೇರಿಯನ್ನು ಕೇಳಿದರು.

ಮೇರಿ ಮೇಜಿನ ಅಂಚನ್ನು ಹಿಡಿದುಕೊಂಡು ನಿಂತಳಲ್ಲದೆ ಏನನ್ನೂ ಮಾತನಾಡಲಿಲ್ಲ.

ಆಪರೇಷನ್ ಲಿಸ್ಟ್ ಮೇಜಿನ ಮೇಲಿಟ್ಟು ಆಚಾರಿ ಹೇಳಿದರು "ಮೇರಿ, ನೀನೇ ಎಲ್ಲವನ್ನೂ ಓದಿ ನೋಡು. ನಿನಗೆ ಇಷ್ಟವೆನಿಸಿದ ಎರಡು ಕೇಸುಗಳನ್ನೇ ನಾನಿಂದು ನೋಡುತ್ತೇನೆ."

ಮೇರಿಯಲ್ಲಿ ಯಾವ ಬಗೆಯ ಪ್ರತಿಕ್ರಿಯೆಯೂ ಕಾಣದಾದಾಗ ಆಚಾರಿ ಹೇಳಿದರು.

"ಒಂದು ದಿವಸ ನನ್ನ ಇಷ್ಟ. ಒಂದು ದಿವಸ ನಿನ್ನ ಇಷ್ಟ. ನಿನಗೆ ಒಪ್ಪಿಗೆಯೇ ?"

ಆಚಾರಿ ಎದ್ದು ಬಂದು ಮೇರಿಯ ತೋಳನ್ನು ಬಿಗಿಯಾಗಿ ಹಿಡಿದುಕೊಂಡು ಕೇಳಿದರು.

"ಏನಾದರೊಂದು ಮಾತು ಹೇಳು ಹುಡುಗಿ ?

"ತಮ್ಮ ಇಷ್ಟ ಸಾರ್" ಮೇರಿಯ ಧ್ವನಿ ಭಯದಿಂದ ಸ್ವಲ್ಪ ನಡುಗುತ್ತಿತ್ತು.

"ನೀನೇಕೆ ಹೀಗೆ ಭಯಪಡುತ್ತಿದ್ದೀ ? ನಾನೇನು ಒಂದು ತೋಳವೋ, ಅಥವಾ ಇನ್ನೇನಾದರೂ ಆಗಿದ್ದೇನೆಯೇ ?" ಅವಳ ತೋಳಿನ ಮೇಲಿನ ತಮ್ಮ ಹಿಡಿತವನ್ನು ಬಿಗಿ ಮಾಡುತ್ತಾ ಆಚಾರಿ ಕೇಳಿದರು.

"ಏನೂ ಇಲ್ಲ ಸಾರ್" ಮೇರಿಗೆ ಹಾಗೇ ಹೇಳಬೇಕೆನಿಸಿದ್ದು.

"ಮೇರಿ ನೀನು ನನ್ನ ಸ್ವಂತ ಹುಡುಗಿ. ನೀನು ಯಾವಾಗಲೂ ನನ್ನ ಕೋಣೆಗೆ ಬರುತ್ತಿರಬೇಕು. ನಾವು ಸ್ವಲ್ಪ ಹೊತ್ತು ಹೀಗೆಯೇ ಮಾತನಾಡುತ್ತಾ ಇರೋಣ."

ತೋಳಿನ ಮೇಲಿನ ತಮ್ಮ ಹಿಡಿತವನ್ನು ಬಿಟ್ಟು ಮೇರಿಯ ಕತ್ತಿನ ಹಿಂಭಾಗವನ್ನು, ತಲೆಗೂದಲುಗಳನ್ನು ನೇವರಿಸುತ್ತಾ ಆಚಾರಿ ಹೇಳಿದರು.

ತಲೆಯನ್ನು ನೇವರಿಸುತ್ತಿರುವಾಗ ಮೇರಿಯ ಕ್ಯಾಪ್‌ನ ಸ್ಥಾನವು ಸ್ವಲ್ಪ ಬದಲಾಯಿತು. ಅವರು ತಮ್ಮ ಎರಡು ಕೈಗಳಿಂದಲೂ ಬಹು ಮೃದುವಾಗಿ ಆ ಕ್ಯಾಪನ್ನು ಮೇರಿಯ ತಲೆಯ ಮೇಲಿಟ್ಟರು.

ಅನಂತರ ಮಿಸ್ಟರ್ ಆಚಾರಿ ಸ್ವಲ್ಪ ಹಿಂದಕ್ಕೆ ಸರಿದು ಹೇಳಿದರು "ಮೇರಿ, ನಾನು

ಸ್ತ್ರೀಯರನ್ನೇನೂ ತಿಂದುಬಿಡುವುದಿಲ್ಲ. ಆದರೆ ಕೆಲವೊಮ್ಮೆ ತಿನ್ನುತ್ತೇನೆ. ಅದಕ್ಕವರು ಒಪ್ಪಿದರೆ ಮಾತ್ರ."

ಒಂದು ಇಂಟರ್‌ನ್ಯಾಷನಲ್ ನಗೆಹನಿಯನ್ನು ಹೇಳಿದ ಆನಂದದಿಂದ ಆಚಾರಿ ಬಂದು ಸೋಫಾದಲ್ಲಿ ಕುಳಿತರು.

"ಬಾ, ಇಲ್ಲಿ ಕುಳಿತುಕೊ" ಸೋಫಾದ ಮೇಲೆ ತಟ್ಟುತ್ತಾ ಆಚಾರಿ ಹೇಳಿದರು.

"ಈ ಕೋಣೆಯೊಳಕ್ಕೆ ಪ್ರವೇಶಿಸಿದರೆ ನೀನು ನನ್ನ ಸ್ಟಾಫ್‌ನವಳಾಗಿರುವುದಿಲ್ಲ. ಈ ಕೋಣೆಯಲ್ಲಿ ನಿನಗೆ ಸಕಲ ಸ್ವಾತಂತ್ರ್ಯವಿರುತ್ತದೆ. ಇಲ್ಲಿ, ನೀನು ನನ್ನ ಸ್ನೇಹಿತೆ."

ಮೇರಿಗೆ ಏನು ಮಾತನಾಡಬೇಕೆಂದು ತಿಳಿಯದೆ ನಿಂತುಬಿಟ್ಟಳು. ಮೇಜಿನ ಮೇಲಿದ್ದ ಎಕ್ಸ್‌ರೇ ಫಿಲಂಗಳನ್ನು ಅವಳು ತನ್ನ ಕೈಯಲ್ಲೆತ್ತಿಕೊಂಡಳು.

"ಏನು ಇದರ ಜೊತೆಗೇ ಹೊರಟುಹೋಗೋಣವೆಂದು ನೀನು ಅಂದು ಕೊಳ್ಳುತ್ತಿದ್ದೀಯಾ?" ತಮ್ಮ ನರೆತ ತಲೆಯನ್ನು ಸವರಿಕೊಳ್ಳುತ್ತಾ ಆಚಾರಿ ಹೇಳಿದರು: "ಅದನ್ನು ಆ ಮೇಜಿನ ಮೇಲೆ ಇಟ್ಟು ಇಲ್ಲಿ ಬಾ. ಸ್ವಲ್ಪ ಹೊತ್ತು ನನ್ನೊಂದಿಗೆ, ನನ್ನ ಬಳಿ ಕುಳಿತುಕೊ."

ಆಚಾರಿ ಎದ್ದು ಬಂದು ಮೇರಿಯ ಕೈ ಹಿಡಿದರು. ಹೇಳಿದ ಮಾತನ್ನು ಮರುಮಾತನಾಡದೆ ಅನುಸರಿಸುವ ಒಂದು ಮಗುವಿನಂತೆ ಆಚಾರಿಯವರು ಹಿಡಿದು ಎಳೆದ ಕಡೆಗೇ ಮೇರಿ ಚಲಿಸಿ ಸೋಫಾದ ಮೇಲೆ ಕುಳಿತಳು.

ಮೇರಿಯ ಮೂಗಿನ ತುದಿಯಲ್ಲೂ ಗದ್ದದ ಕೆಳಗೂ ತಮ್ಮ ತೋರು ಬೆರಳಿನಿಂದ ತಡವುತ್ತಾ ಆಚಾರಿ ಹೇಳಿದರು.

"ನಿನಗೆ ನನ್ನ ಮಗಳ ವಯಸ್ಸಷ್ಟೆ. ಆದರೆ ಅದೇ ಪ್ರೇಮವೆಂದರೆ ಎಷ್ಟೋ ಹುಡುಗಿಯರಿಗೆ ತಲೆ ನರೆಯಲು ತೊಡಗಿರುವ ಗಂಡಸರೊಂದಿಗೇ ಇಷ್ಟವು. ಮೇರೀ ನಿಜತಾನೇ ಇದು."

ಮೇರಿಯ ತಲೆಗೂದಲು ಗಂಟಿನಿಂದ ಹೇರ್‌ಪಿನ್ ತೆಗೆದು ಮಿಸ್ಟರ್ ಆಚಾರಿ ಅವಳ ಕ್ಯಾಪನ್ನು ತೆಗೆದು ಮೇಜಿನ ಮೇಲಿಟ್ಟರು. ಅವಳ ತಲೆಯಿಂದ ಕ್ಯಾಪನ್ನು ತೆಗೆದಾಗ ಮೇರಿಯ ಮುಖದ ಬಣ್ಣವೇ ಬದಲಾಯಿತು. ಅವಳು ಹೆಚ್ಚು ತಲೆಬಾಗುತ್ತಿರುವಂತೆ ಆಚಾರಿಗನ್ನಿಸಿತು. ಮೇರಿ ಕೆಳಗೆ ನೋಡುತ್ತಾ ತನ್ನ ಎರಡು ಕೈಗಳನ್ನು ಮೊಣಕಾಲುಗಳ ಮೇಲೆ ಸಂಕೋಚದಿಂದ ಇಟ್ಟುಕೊಂಡು ಸೋಫಾದಲ್ಲೇ ಅಡಗಿ ಕುಳಿತಳು. ಅರ್ಹತೆಯಿಲ್ಲದ ಒಂದು ಸ್ಥಾನದಲ್ಲಿ ತಾನು ಕುಳಿತುಕೊಂಡಾಗ ಉಂಟಾಗುವ ಅಸ್ವಸ್ಥತೆಯು ಅವಳನ್ನು ಬಾಧಿಸುತ್ತಿತ್ತು. ಆಚಾರಿ ಅವಳ ಮುಂದೆ ಅವಳು ಒಂದು ಸ್ತೂಪದಂತೆ ನಿಂತಿದ್ದರು. ಅವರು ತಮ್ಮ ಎರಡು ಕೈಗಳನ್ನು ಸೇರಿಸಿಕೊಂಡು ಮೇರಿಯ ತಲೆ ಹಿಡಿದುಕೊಂಡು ತಮ್ಮ ತಲೆ ಬಗ್ಗಿಸಿ ಅವಳ ನೆತ್ತಿಗೆ ತಮ್ಮ ಮುಖವನ್ನೊತ್ತಿದರು. ಅನಂತರ ತನ್ನ ಮೊಣಕಾಲುಗಳ ಮೇಲೆ ಸೇರಿಸಿಟ್ಟಿದ್ದ ಅವಳ ಎರಡು ಕೈಗಳನ್ನು ಹಿಡಿದುಕೊಂಡು ಅವಳನ್ನು ಮೇಲಕ್ಕೆತ್ತಿದಾಗ ಮೇರಿಯ ಮುಖ ಮೇಲೆದ್ದಿತು. ಆಚಾರಿಯ ಒರಟು ಕೈಗಳಲ್ಲಿ ಮೇರಿಯ ಮೃದುವಾದ ಕರಕಮಲಗಳು ನಲುಗಿದವು.

"ನನ್ನೊಂದಿಗೆ ನಿನಗೆ ಪ್ರೀತಿಯಿದೆಯೇ ?" ಆಚಾರಿ ಕೇಳಿದರು. "ಹೇಳು, ನಾನು ನಿನಗೆ ಇಷ್ಟವೇ ?"

ಮೇರಿಯ ಕಣ್ಣುಗಳು ಬಿರಿದವು. ಆಳವಾದ ಭಾವಿಯಲ್ಲಿನ ಚಿಲುಮೆಯಂತ ಕಣ್ಣಿನಲ್ಲಿನ ಅಂತರಾಳದಲ್ಲಿ ಎಲ್ಲೋ ತೇವವು ಸಣ್ಣ ಸಣ್ಣ ಕಣಗಳಾಗಿ ಕಾಣಿಸಿಕೊಂಡವು.

ಆಚಾರಿ ಮೇರಿಯನ್ನು ಹಾಗೆ ಎತ್ತಿದಾಗ ಅವಳು ಅಳತೊಡಗಿದಳು.

"ನನಗೆ ಅವಮಾನ ಮಾಡಬೇಡಿ. ನನಗೆ ಅವಮಾನ ಮಾಡಬೇಡಿ...." ಬಿಕ್ಕಿ ಬಿಕ್ಕಿ ಅಳುತ್ತಾ ಮೇರಿ ಪ್ರತಿಭಟಿಸಿದಳು. ಅವಳು ಕೊಠಡಿಯ ಒಂದು ಮೂಲೆಗೆ ಸರಿದು ನಿಂತಳು. ಅವಳು ಬಿಕ್ಕಿ ಬಿಕ್ಕಿ ಅಳುವ ಧ್ವನಿ ಆ ಕೋಣೆಯನ್ನೇ ನಡುಗಿಸಿತು.

ಆಚಾರಿ ಒಂದು ನಿಮಿಷ ಸ್ವಲ್ಪ ಕಳವಳಪಟ್ಟರು. ಆಮೇಲೇ ಏನು ಮಾಡಬೇಕೆಂದು ತಿಳಿಯದೆ ಸೋಫಾದಲ್ಲಿ ಬಂದು ಕುಳಿತರು. ಅವರು ಅವಳ ವಿರೋಧವನ್ನು ಆ ಸಮಯದಲ್ಲಿ ನಿರೀಕ್ಷಿಸಿರಲಿಲ್ಲ.

"ಮೇರಿ, ನನ್ನ ಹುಡುಗಿ, ನಾನು ಸ್ತ್ರೀಯರ ಅಪಮಾನ ಮಾಡುವುದಿಲ್ಲ. ಅವರನ್ನು ಕಂಡರೆ ನನಗೆ ಬಹಳ ಮರ್ಯಾದೆಯಿದೆ. ಪ್ರೀತಿಗಿಂತ ಹೆಚ್ಚಾಗಿ ಮರ್ಯಾದೆಯಿದೆ."

ಆಚಾರಿ ಎದ್ದು ಆ ಕೋಣೆಯಲ್ಲಿಯೇ ಅಲ್ಲಿಂದಿಲ್ಲಿಗೆ ಶತಪಥ ನಡೆಯತೊಡಗಿದರು. ಅನಂತರ ಮನಸ್ಸಿನಲ್ಲಿ ಏನನ್ನೊ ನಿರ್ಧರಿಸಿಕೊಂಡವರೆ ಮುಚ್ಚಿ ಬೋಲ್ಟ್ ಹಾಕಿದ್ದ ತಮ್ಮ ಪ್ರೈವೇಟ್ ಕೋಣೆಯ ಬಾಗಿಲನ್ನು ದೊಡ್ಡದಾಗಿ ತೆರೆದರು.

ಅನಂತರ ಅವರು ಮತ್ತೆ ಸೋಫಾದಲ್ಲಿ ಹೋಗಿ ಕುಳಿತರು. ತೆರೆದಿಟ್ಟಿದ್ದ ಬಾಗಿಲ ಕಡೆಗೆ ಕೈ ತೋರಿಸುತ್ತಾ ಹೇಳಿದರು:

"ಮೇರಿ, ಇನ್ನು ನೀನು ಹೋಗಬಹುದು."

ಮೇರಿ ತನ್ನ ಕ್ಯಾಪನ್ನು ತಲೆಯ ಮೇಲೆ ಸಿಕ್ಕಿಸಿಕೊಂಡು ಯೂನಿಫಾರಂ ಅನ್ನು ಅಲ್ಲಿ ಇಲ್ಲಿ ಹಿಡಿದು ಕೆಳಕ್ಕೆಳೆದು, ಸರಿಪಡಿಸಿಕೊಂಡು ಬಾಗಿಲತ್ತ ಚಲಿಸಿದಳು.

ಆಗ ಆಚಾರಿ ಹೇಳಿದರು:

"ನನ್ನೊಂದಿಗೆ ಅರ್ಧ ಗಂಟೆ ಕಳೆಯಲು ಬಯಸುವ ಅನೇಕಾನೇಕ ಹೆಣ್ಣು ಮಕ್ಕಳು ಈ ಆಸ್ಪತ್ರೆಯಲ್ಲಿದ್ದಾರೆ."

ಅವರು ಎದ್ದು ಮೇರಿಯ ಬಳಿ ಬಂದು ನಿಂತುಕೊಂಡು ಹೇಳಿದರು. "ನನ್ನ ಬಾಹುಬಂಧನದಿಂದ ತಪ್ಪಿಸಿಕೊಂಡ ಪ್ರಥಮ ಬೇಟೆಯು ನೀನು. ಆದರೆ ನನ್ನ ನಿರೀಕ್ಷೆ ಇನ್ನೂ ಕಮ್ಮಿಯಾಗಿಲ್ಲ. ನಿನಗೆ ಇಷ್ಟವೆನಿಸಿದಾಗ ನನ್ನೊಂದಿಗೆ ಹೇಳು. ನಿನ್ನ ಒಪ್ಪಿಗೆಯಿಲ್ಲದೆ ನಾನು ನಿನಗೇನೂ ಮಾಡುವುದಿಲ್ಲ."

ಮೇರಿ ಬಾಗಿಲನ್ನು ದಾಟಿ ದೊಡ್ಡ ಕೋಣೆಗೆ ಬಂದಾಗ ಡಾಕ್ಟರ್ ಆಚಾರಿ ಜೋರಾಗಿ ಕೂಗಿ ಹೇಳಿದರು.

"ಕೇಸ್ ರಿಪೋರ್ಟ್‌ಗಳನ್ನೂ ಎಕ್ಸ್‌ರೇ ಫಿಲಂಗಳನ್ನೂ ತೆಗೆದುಕೊಂಡು ಹೋಗು. ನಾನು ಇಂದು ಯಾವ ಆಪರೇಷನ್ನೂ ಮಾಡುವುದಿಲ್ಲ."

ಸ್ವಲ್ಪ ಹೊತ್ತಾದ ನಂತರ ಆಚಾರಿಯವರ ಹಿಂಬಾಲಕರೆನಿಸಿದ ಲೆಕ್ಚರರ್‌ಗಳೂ ರೆಸಿಡೆಂಟೂ ಅವರ ಕೋಣೆಯನ್ನು ಪ್ರವೇಶಿಸಿದರು. ಆಗ ಆಚಾರಿ ಹೇಳಿದರು.

"ನಾನಿಂದು ಥಿಯೇಟರ್‌ಗೆ ಬರುವುದಿಲ್ಲ. ನನಗೆ ಆರೋಗ್ಯ ಸರಿಯಿಲ್ಲ. ಮಿಕ್ಕವರು ಪ್ರಾರಂಭಿಸಲಿ. ನನ್ನ ಕೇಸುಗಳನ್ನು ಎರಡಕ್ಕೂ ಮೂರಕ್ಕೂ ಕೊಟ್ಟುಬಿಡಿ."

ಅಂದು ಸರ್ಜರಿ ಡಿಪಾರ್ಟ್‌ಮೆಂಟಿನಲ್ಲಿ ಎಲ್ಲರಿಗೂ ಅತ್ಯಾಶ್ಚರ್ಯವನ್ನುಂಟು ಮಾಡಿದ ದಿನವಾಗಿತ್ತು. ಮಿಸ್ಟರ್ ಆಚಾರಿ ತಮ್ಮ ಚರಿತ್ರೆಯಲ್ಲಿ ಒಂದು ತಿದ್ದುಪಡಿ ಮಾಡಿದ್ದರು.

ತಮ್ಮ ಮಗುವಿಗೆ ರೋಗ ಬಂದರೂ, ತಮ್ಮ ಹೆಂಡತಿಯ ತಂಗಿಯ ಮದುವೆಗೆ ಹೋಗಬೇಕಿದ್ದರೂ ಸಹ ಮಿಸ್ಟರ್ ಆಚಾರಿ ಆಪರೇಷನ್ ಥಿಯೇಟರ್‌ಗೆ ಬರದೆ ಇರುತ್ತಿರಲಿಲ್ಲ. ವೈರಸ್ ಫೀವರ್ ಬಂದು ನಿಶ್ಯಕ್ತರಾಗಿದ್ದ ಒಂದು ದಿನ ನಾಲ್ಕು ಗಂಟೆಗಳ ಕಾಲ ನಿಂತು ಒಂದು ಆಪರೇಷನ್ ಮಾಡಿದ ನಂತರ ಆಚಾರಿಯವರು ಆಪರೇಷನ್ ಟೇಬಲ್ ಬಳಿಯೇ ತಲೆ ತಿರುಗಿಬೀಳಬೇಕಾಗಿ ಬಂದುದುಂಟು. ಅವರ ತಂದೆಯವರು ಸತ್ತ ದಿನ ಸಹ ಅವರು ಥಿಯೇಟರಿಗೆ ಬಂದು ತಮ್ಮ ಕರ್ತವ್ಯವನ್ನು ನಿರ್ವಹಿಸಿದ್ದರು. ಪ್ರಪಂಚದಲ್ಲಿ ಏನು ಸಂಭವಿಸಿದರೂ ಮಿಸ್ಟರ್ ಆಚಾರಿ ಆಪರೇಷನ್ ಮಾಡುವುದಿಲ್ಲ ಎನ್ನುತ್ತಿರಲಿಲ್ಲ. ಅಂತಹ ಒಂದು ದಿನ ಆಚಾರಿಯ ಬಾಳಿನಲ್ಲಿ ಬಂದಿರಲಿಲ್ಲ.

ಒಂದೊಂದು ಸರ್ಜರಿಯೂ ಮಿಸ್ಟರ್ ಆಚಾರಿಗೆ ಒಂದು ಹೊಸ ಕ್ರಿಯೆಯಂತೆ. ಆಪರೇಷನ್ ಮಾಡಿದ ರೋಗಿಯು ಹುಷಾರಾಗುವವರೆಗೆ ಆಚಾರಿ ಅಸ್ವಸ್ಥರಾಗಿರುತ್ತಿದ್ದರು. ಬಹು ಕಷ್ಟವಾದ ಆಪರೇಷನ್ ಮಾಡುವ ದಿವಸಗಳಲ್ಲಿ ಆಚಾರಿ ರಾತ್ರಿ ನಿದ್ದೆಯೇ ಮಾಡುತ್ತಿರಲಿಲ್ಲ. ಅರ್ಧರಾತ್ರಿಯಲ್ಲಿ ಅವರು ಎಚ್ಚೆತ್ತು ಆಸ್ಪತ್ರೆಗೆ ಫೋನ್ ಮಾಡಿ ರೋಗಿಯ ವಿವರಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಹೊಟ್ಟೆಯದೋ ಹೃದಯದ್ದೋ ಆಪರೇಷನ್ ಮಾಡಿದ ರೋಗಿ ಎಚ್ಚೆತ್ತು ಮೊದಲ ಬಾರಿ ಉಸಿರಾಡುವವರೆಗೂ ಆಚಾರಿ ಸರಾಗವಾಗಿ ಉಸಿರಾಡಲಾರರು. ಮಧ್ಯೆ ತಮಾಷೆಯೆಂಬಂತೆ ಅವರು ಹೇಳುವರು.

"ಅವನು ಉಸಿರಾಡದಿದ್ದಲ್ಲಿ ನನ್ನ ಉಸಿರು ನಿಂತು ಹೋಗುತ್ತೆ."

ಆಚಾರಿ ಅಂದು ರಾತ್ರಿಯಾಗುವವರೆಗೂ ತಮ್ಮ ಪ್ರೈವೇಟ್ ಕೋಣೆಯಲ್ಲಿ ಬಾಗಿಲನ್ನು ಹಾಕಿಕೊಂಡು ಮಲಗಿದ್ದರು. ಆಹಾರವನ್ನಾಗಲಿ ಪಾನೀಯಗಳನ್ನಾಗಲಿ ಅವರು ಸ್ವಲ್ಪವೂ ಅಂದು ತೆಗೆದುಕೊಳ್ಳಲಿಲ್ಲ. ಕೋಣೆಯೊಳಗೆ ಅವರೇನು ಮಾಡುತ್ತಿರುವರೋ ಎಂದು ಎಲ್ಲರೂ ಭಯಪಟ್ಟರು.

ಬಾಗಿಲು ಭದ್ರವಾಗಿ ಹಾಕಿಕೊಂಡಿದ್ದ ಆ ಕೋಣೆಯೊಳಗೆ ಅರ್ಧ ಎಚ್ಚರ ಅರ್ಧ ಮಂಪರಿನಲ್ಲಿ ಮಲಗಿ ಆಚಾರಿ ಸಮಯ ಕಳೆದರು. ಹೊರಗಿನಿಂದ ಕೇಳಿಸುವ ಯಂತ್ರಗಳ ಶಬ್ದ, ಮನುಷ್ಯರ ನವುರಾದ ಅಳು ಮಾತ್ರ ಅವರಿಗೆ ಜೊತೆಯಾಗಿತ್ತು. ಏನಾದರೂ ಓದಲಾಗಲಿ, ಯಾವುದರ ಬಗ್ಗೆಯಾದರೂ ಚಿಂತಿಸಲಾಗಲಿ ಅವರಿಗೆ ಸಾಧ್ಯವಾಗಲಿಲ್ಲ. ಹಸಿವು ಅಥವಾ ಬಾಯಾರಿಕೆ ಅವರನ್ನು ಕಾಡಲಿಲ್ಲ. ತಮ್ಮ ತಲೆ

ಬರಿದಾಗುತ್ತಿರುವಂತೆ ಅವರಿಗೆ ತೋರಿತು. ನೆನಪುಗಳು ಒಂದೊಂದಾಗಿ ಮಾಸಿ ದೂರವಾಗುತ್ತಿದ್ದವು.

ರಾತ್ರಿ ಬಹಳ ಹೊತ್ತಾದಮೇಲೆ ಆಚಾರಿ ಕೋಣೆಯ ಬಾಗಿಲನ್ನು ಒಬ್ಬ ಕಳ್ಳನಂತೆ ತೆರೆದು ಸುತ್ತಲೂ ಕಣ್ಣೋಡಿಸಿದ ನಂತರ ಹೊರಬಂದರು. ಕಾರಿಡಾರ್‌ನಲ್ಲಿ ನಡೆದು ಹೋಗುವಾಗ ಎದುರಿನಲ್ಲಿ ಬರುವವರನ್ನು ಅವರು ಗಮನಿಸಿ ನೋಡುತ್ತಿದ್ದರು. ಒಂದು ಅಪರಿಚಿತ ಸ್ಥಳದಲ್ಲಿ ನಡೆಯುತ್ತಿರುವಂತೆ ಅವರಿಗೆ ತೋರಿತು. ಅಲ್ಲಿಂದ ತಪ್ಪಿಸಿಕೊಂಡು ಹೋಗಬೇಕೆಂದು ತೋರಿದ್ದರಿಂದ ಅವರು ಅವಸರವಸರವಾಗಿ ನಡೆದು ಪಾರ್ಕ್ ಮಾಡಿದ್ದ ತಮ್ಮ ಕಾರ್ ಬಳಿ ಹೋದರು.

ಬಹಳ ವೇಗವಾಗಿ ಕಾರನ್ನೋಡಿಸಿಕೊಂಡು ಆಚಾರಿ ಮನೆಯನ್ನು ತಲುಪಿದರು. ಆ ವೇಳೆಗೆಲ್ಲಾ ಮನೆಯಲ್ಲಿರುವವರು ನಿದ್ದೆ ಮಾಡಿಬಿಟ್ಟಿದ್ದರು.

ಮಿಸ್ಟರ್ ಆಚಾರಿಯ ಪರಿಚಾರಕನು ಮಾತ್ರ ಅವರಿಗೆ ಕಾದು ಕುಳಿತಿದ್ದನು. ಅವನು ಎಷ್ಟೋ ವರ್ಷಗಳಿಂದ ಆಚಾರಿಯ ಸೇವೆಯಲ್ಲಿ ನಿರತನಾಗಿದ್ದನು. ಆಚಾರಿಯವರ ಎಲ್ಲಾ ಕೆಲಸ ಕಾರ್ಯಗಳನ್ನು ಗಮನಿಸುತ್ತಿರುವವನೇ ಅವನು. ಅವರ ಬಟ್ಟೆಗಳನ್ನು ಇಸ್ತ್ರಿ ಮಾಡಿ ಅವುಗಳನ್ನು ವಿಂಗಡಿಸಿಡುವುದು, ಅಡಿಗೆ ಮಾಡಿ ಅದನ್ನು ಅವರಿಗೆ ಬಡಿಸುವುದು ಎಲ್ಲಾ ಕೆಲಸವೂ ಅವನದೇ. ಆಚಾರಿಯವರ ಇಷ್ಟ ಅನಿಷ್ಟಗಳು ಅವು ಚಿಕ್ಕದೇ ಆಗಿರಲಿ ದೊಡ್ಡದೇ ಆಗಿರಲಿ ಅವನಿಗೆ ಗೊತ್ತಿರುತ್ತಿದ್ದವು.

"ವಿಸ್ಕಿ ತರಲೇ?" ಪರಿಚಾರಕನು ಕೇಳಿದನು.

ಸಾಧಾರಣವಾಗಿ ಮಿಸ್ಟರ್ ಆಚಾರಿ ನಿತ್ಯವೂ ರಾತ್ರಿ ಊಟಕ್ಕಿಂತ ಮುಂಚೆ ಎರಡೂವರೆ ಪೆಗ್ ಸ್ಕಾಚ್ ವಿಸ್ಕಿ ಕುಡಿಯುತ್ತಾರೆ. ಪೆಗ್ ಮೆಷರ್‌ನಲ್ಲಿ ವಿಸ್ಕಿಯನ್ನು ಅಳೆದು ಸೂಕ್ಷ್ಮವಾದ ಸ್ಫಟಿಕದ ಗ್ಲಾಸ್‌ನಲ್ಲಿ ಸುರಿದು ಐಸ್ ಕ್ಯೂಬುಗಳನ್ನು ಅದರಲ್ಲಿ ಹಾಕಿದ ನಂತರ ಪರಿಚಾರಕನು ಅದನ್ನು ಆಚಾರಿಯ ಕೈಯಲ್ಲಿ ಕೊಟ್ಟನಂತರ ಅವರ ಅಂದಿನ ದಿನವು ಕೊನೆಯಾಗುತ್ತಿತ್ತು. ಅದವರ ದಿನಚರಿಯಾಗಿತ್ತು.

ಆಗ ಅವರ ಕೋಣೆಯಲ್ಲಿ ಹೆಂಡತಿಗೋ, ಮಕ್ಕಳಿಗೋ ಪ್ರವೇಶವಿರುತ್ತಿರಲಿಲ್ಲ. ಅದಕ್ಕೆ ಅವರಿಗ ಅನುಮತಿ ಇರಲಿಲ್ಲ. ಒಂದು ಗಂಟೆಯ ನಂತರ ಧ್ಯಾನನಿರತರಾಗಿದ್ದು, ದೇವರಿಗೆ ಮಾತ್ರ ತಿಳಿಯುವ ವಿಷಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಕರಗಿ ನೀರಾಗುತ್ತಿರುವ ಚಿಕ್ಕ ಚಿಕ್ಕ ಐಸ್ ಕ್ಯೂಬ್‌ಗಳ ಮಧ್ಯೆ ಸ್ಪಷ್ಟವಾಗಿ ಏಳುತ್ತಿರುವ ವಿಸ್ಕಿಯ ಕಣಕಣಗಳಾಗಿ ಮೇಲಕ್ಕೇಳುವ ಚಿಲುಮೆಯನ್ನು ಮುತ್ತಿಡುತ್ತಾ ಆಚಾರಿ ಅದನ್ನು ಕುಡಿಯುತ್ತಾರೆ.

ಅನಂತರ ಊಟ ಮಾಡಲು ಕುಳಿತುಕೊಳ್ಳುತ್ತಾರೆ.

ಹಸಿದ ಒಂದು ತೋಳದಂತೆ, ಅತ್ಯಾಸೆಯಿಂದ ಅವರು ಊಟಮಾಡಲು ಪ್ರಾರಂಭಿಸುತ್ತಾರೆ. ಮಾಂಸವೋ, ಮೀನೋ, ಮೊಟ್ಟೆಯೋ, ಗೆಣಸೋ, ಮುರುಳಿಯೋ ಏನನ್ನಾದರೂ, ಅಥವಾ ಎಲ್ಲವನ್ನಾದರೂ ಅವರು ಲಪಟಾಯಿಸು ತ್ತಾರೆ. ಚಪಾತಿಯನ್ನು, ಅನ್ನವನ್ನು, ಮೊಸರನ್ನು, ತರಕಾರಿಗಳನ್ನು ಸಿಹಿ ತಿಂಡಿ ತಿನಿಸುಗಳನ್ನು, ಡೈನಿಂಗ್ ಟೇಬಲ್ ಮೇಲೆ ಕೈಗೆ ಎಟುಕುವ ಯಾವುದನ್ನೂ ಅವರು ಬಾಚಿ ತೆಗೆದುಕೊಂಡು ತಿನ್ನುವರು.

ಕೈ ತೊಳೆದ ನಂತರ ಸಕ್ಕರೆ ಇಲ್ಲದ ಒಂದು ಕಪ್ ಸ್ಟ್ರಾಂಗ್ ಆಗಿರುವ ಕಾಫಿ ಕುಡಿದ ನಂತರ ಅವರ ಊಟ ಮುಗಿಯುತ್ತಿತ್ತು.

ಅನಂತರ ಮನೆಯಿಂದ ಹೊರಕ್ಕಿಳಿದು ತಮ್ಮ ಮನೆಯ ಗಾರ್ಡನ್‌ನಲ್ಲಿ ಅರ್ಧ ಘಂಟೆಯವರೆಗೂ ಅವರು ಅಡ್ಡಾಡುತ್ತಿದ್ದರು. ಮೈಯೆಲ್ಲಾ ಬೆವರಿ ಅದರ ಕಣಗಳು ಹೊರಬರಲು ಪ್ರಾರಂಭಿಸುವಾಗ ಮಲಗುವ ಕೋಣೆಯನ್ನು ಪ್ರವೇಶಿಸಿ ನಿದ್ದೆ ಬರುವವರೆಗೂ ಮಲಗಿ ಓದುತ್ತಿದ್ದರು. ರಾತ್ರಿಯ ಸಮಯದಲ್ಲಿ ಅವರು ಥ್ರಿಲ್ಲರ್‌ಗಳನ್ನು, ಹಗಲಿನ ಸಮಯದಲ್ಲಿ ಮೆಡಿಕಲ್ ಬುಕ್‌ಗಳನ್ನು ಅವರು ಓದುತ್ತಿದ್ದರು. ಆಪರೇಷನ್ ಮಾಡಿಯಾದ ಮೇಲೆ ದೊರಕುವ ಸಮಯದಲ್ಲಿ ಗಜಲ್‌ಗಳನ್ನು ಓದುತ್ತಿದ್ದರು.

ಆದರೆ ಅಂದು ಇದೆಲ್ಲಾ ಏನೂ ನಡೆಯಲಿಲ್ಲ.

"ನೀನು ಹೋಗಿ ಮಲಗಿಕೋ. ನನಗೇನೂ ಬೇಡ." ಆಚಾರಿ ಪರಿಚಾರಕನಿಗೆ ಹೇಳಿದರು. ನಂತರ ಆಚಾರಿ ದೀಪವಾರಿಸಿ ಹಾಸಿಗೆಯಲ್ಲುರುಳಿದರು.

ಅವರಿಗೆ ನಿದ್ದೆ ಬರುತ್ತಿರಲಿಲ್ಲ. ಅವರ ಮನಃಪಟಲದಲ್ಲಿ ಆಪರೇಷನ್ ಥಿಯೇಟರ್ ಕಾಣಿಸಿಕೊಂಡಿತು. ಆಪರೇಷನ್ ಟೇಬಲ್ ಮೇಲೆ ರೋಗಿ ಮಲಗಿದ್ದಾನೆ. ರೋಗಿಗೆ ಮತ್ತು ಬರಿಸುವ ಡಾಕ್ಟರ್, ಬೋಯಿಲ್‌ಸ್ ಯಂತ್ರವನ್ನು ಹಿಡಿದುಕೊಂಡು ನಿಂತಿದ್ದಾನೆ. ಥಿಯೇಟರ್‌ನಲ್ಲಿರುವ ಎಲ್ಲಾ ಮನುಷ್ಯರಿಗೂ ಅನಸ್ತೇಷಿಯಾ ಕೊಟ್ಟು ಪ್ರಜ್ಞೆ ತಪ್ಪಿಸುತ್ತಿರುವ ಒಂದು ವಿಭ್ರಾಂತಿಯಿಂದ ಡಾಕ್ಟರ್ ನಿಂತಿದ್ದಾನೆ.

ಮಿಸ್ಟರ್ ಆಚಾರಿಯ ಕೈಗಳು ನಡುಗುತ್ತಿವೆ. ಅಂಗೈಗಳೆರಡನ್ನೂ ಸೇರಿಸಿ ಹಿಡಿದುಕೊಂಡು ಅವರು ಹಲ್ಲುಗಳನ್ನು ಅದುಮಿ ಕಚ್ಚಿ ಹಿಡಿದಿದ್ದಾರೆ.

ಅಸ್ವಸ್ಥರಾದ ಆಚಾರಿ ಮಂಚದಿಂದೆದ್ದು ಲೈಟ್ ಹಾಕಿದರು. ಏನನ್ನೋ ನೆನೆಸಿಕೊಂಡಂತೆ ಅವರು ಕೆಳಕ್ಕಿಳಿದು ಹೋದರು. ಬೀರು ಒಂದನ್ನು ತೆರೆದು ಈಥರ್‌ನ ಒಂದು ಬಾಟಲ್ ಅನ್ನು ಡಾಕ್ಟರ್ಸ್ ಕಿಟ್ ಅನ್ನು ತೆಗೆದುಕೊಂಡು ಅವರು ಡೈನಿಂಗ್ ರೂಮಿಗೆ ನಡೆದರು.

ಡೈನಿಂಗ್ ಟೇಬಲ್ ಮೇಲೆ ಕಿಟ್‌ನಿಂದ ತೆಗೆದ ಚಾಕುವನ್ನೂ, ಫೋರ್‌ಸೆಪ್ಸ್ ಅನ್ನು ಕತ್ತರಿಗಳನ್ನು ಸಾಲಾಗಿಡಲಾರಂಭಿಸಿದರು. ಅನಂತರ ಕೈ ತೊಳೆದುಕೊಂಡು ಗ್ಲೌಸ್‌ಗಳನ್ನು ಹಾಕಿಕೊಂಡರು.

ಮಿಸ್ಟರ್ ಆಚಾರಿ ಪ್ಯಾಂಟ್ರಿಗೆ ನಡೆದರು. ಅಲ್ಲಿ ನೆಲದಲ್ಲಿ ಹಾಕಿದ್ದ ಚಿಕ್ಕ ಹಾಸಿಗೆಯಲ್ಲಿ ಮಿಸೆಸ್ ಆಚಾರಿಯ ಮುದ್ದಾದ ಸಾಕು ನಾಯಿಯು ಮಲಗಿ ವಿಶ್ರಮಿಸುತ್ತಿತ್ತು. ಆಚಾರಿಯ ಕಾಲಿನ ಸಪ್ಪಳವನ್ನು ಕೇಳಿದಾಗ ಪೊಮೇರಿಯನ್ ನಾಯಿಯು ಗಾಬರಿಗೊಂಡು ಎದ್ದಿತು. ದೇಹವನ್ನು ಒದರಿ ಕುಲುಕಿ ಓಡಿ ಬಂದು ಆಚಾರಿಯವರ ಕಾಲಿನ ಕೆಳಗೆ ನಿಂತುಕೊಂಡಿತು. ಅವರನ್ನು ಮೂಸುತ್ತಲೂ ಅವರ ಮೇಲೆಲ್ಲಾ ಎಗರಾಡುತ್ತಲೂ ಇತ್ತು.

ಆಚಾರಿ ಬಗ್ಗಿ ನಾಯಿಯನ್ನೆತ್ತಿಕೊಂಡು ಡೈನಿಂಗ್ ರೂಮ್‌ಗೆ ಬಂದರು. ಪೊಮೇರಿಯನ್‌ನನ್ನು ಮಡಿಲಲ್ಲಿ ಮಲಗಿಸಿಕೊಂಡು ಕಾಲುಗಳ ನಡುವೆ ಅದನ್ನು

ಬಲವಾಗಿ ಅದುಮಿ ಹಿಡಿದುಕೊಂಡು ಈಥರ್‌ನಲ್ಲಿ ಅದ್ದಿದ್ದ ಕಾಟನ್ ಸ್ಪಾಂಜ್ ಅನ್ನು ನಾಯಿಯ ಮುಖದ ಮೇಲೆ ಅದುಮಿ ಹಿಡಿದರು. ಮುದ್ದಾದ ಆ ಪೊಮೇರಿಯನ್ ನಾಯಿ ಸ್ವಲ್ಪ ಹೊತ್ತು ಒದ್ದಾಡಲು ಶ್ರಮಿಸಿತಾದರೂ ನಿಸ್ಸಹಾಯಕತೆಯಿಂದ ಕೊನೆಗೆ ಅರೆಪ್ರಜ್ಞೆಯಲ್ಲಿ ಮಲಗಿಬಿಟ್ಟಿತ್ತು. ಆಚಾರಿಯವರ ಮಡಿಲಲ್ಲೇ ಉಚ್ಚೆ ಹೊಯ್ದಿತ್ತು.

ಮೈಯೆಲ್ಲಾ ಬಿಳಿಕೂದಲುಗಳಿದ್ದ ಪೊಮೇರಿಯನ್ ಅನ್ನು ಮಿಸ್ಟರ್ ಆಚಾರಿ ಡೈನಿಂಗ್ ಟೇಬಲ್ ಮೇಲೆ ಮಲಗಿಸಿದರು. ಅರೆ ನಿದ್ರೆಯಲ್ಲಾದರೂ, ಮೇಜಿನ ಮೇಲೆ ಆ ನಾಯಿ ಒಂದು ಅಲಂಕಾರವಾಗಿ ಆಗಲೂ ಶೋಭಿಸುತ್ತಾ ಮಲಗಿತ್ತು.

ಮಿಸ್ಟರ್ ಆಚಾರಿ ಚಾಕುವನ್ನು ತೆಗೆದುಕೊಂಡರು. ಪೊಮೇರಿಯನ್‌ನ್ನು ಅಂಗಾತವಾಗಿ ಮಲಗಿಸಿ, ಅದರ ರೋಮ ತುಂಬಿದ್ದ ಮೃದುವಾದ ಹೊಟ್ಟೆಯ ಮೇಲೆ ಆಚಾರಿ ತಮ್ಮ ಚಾಕುವನ್ನು ಓಡಿಸಲಾರಂಭಿಸಿದರು.

# ಇಪ್ಪತ್ತೊಂದು

ತನ್ನ ಪಾಪಗಳನ್ನು ನಿವೇದಿಸಿಕೊಳ್ಳಲೆಂದು ನಿತ್ಯವೂ ಪಾದ್ರಿಯ ಬಗ್ಗೆ ವಿಚಾರಿಸುತ್ತಿದ್ದ ರೋಗಿಯ ಹೆಸರು ಜಾನ್ ಬಲ್‌ದೇವ್ ಮಿರ್ಜಾ ಎಂದಾಗಿತ್ತು. ಅವನು ಕ್ರಿಶ್ಚಿಯನ್ನೋ, ಹಿಂದುವೋ, ಮುಸಲ್ಮಾನನೋ ಯಾರೆಂದು ಯಾರಿಗೂ ತಿಳಿಯದು. ಅವನು ಜಾನ್ ಹೌದು. ಬಲ್‌ದೇವ್ ಹೌದು, ಮಿರ್ಜಾನೂ ಹೌದು. ಆದರೆ ಆ ಆಸ್ಪತ್ರೆಯಲ್ಲಿ ಅವನೊಬ್ಬ ಪರಮರೋಗಿ.

"ನಾನು ಪಾಪ ನಿವೇದನೆ ಮಾಡಿಕೊಳ್ಳಬೇಕು." ಒಂದಿನ ದಿನ ರಾತ್ರಿ ಮಲಗುವ ಸಮಯದಲ್ಲಿ ಜಾನ್ ಬಲ್‌ದೇವ್ ಮಿರ್ಜಾ ಹೇಳಿದನು.

"ನಾನು ಸಾಯಬೇಕು."

"ಅದಾದ ಮೇಲೆ ನಾನು ಮತ್ತೆ ಜೀವಂತನಾಗಬೇಕು ?"

ಇದನ್ನೆಲ್ಲಾ ಕೇಳಿದ ಸಿಸ್ಟರ್ ಅವನಿಗೆ ಒಂದು ಚಾಕೋಲೇಟ್ ಕೊಟ್ಟಳು. ಅದನ್ನು ತೆಗೆದುಕೊಂಡ ಅವನು ಅದನ್ನೇ ಒಮ್ಮೆ ದಿಟ್ಟಿಸಿ ನೋಡಿದ ನಂತರ, ಚಾಕೊಲೇಟನ್ನು ಸುತ್ತಿದ್ದ ಅಲ್ಯೂಮಿನಿಯಂ ಫಾಯಿಲ್ ಅನ್ನು ಬಾಯಿಯಲ್ಲಿ ಹಾಕಿಕೊಂಡು ಚಾಕೊಲೇಟ್ ಅನ್ನು ಕಸದ ಬುಟ್ಟಿಗೆ ಮೆಲ್ಲನೆ ಎಸೆದನು. ಆ ಅಲ್ಯೂಮಿನಿಯಂ ಫಾಯಿಲ್ ಅನ್ನು ಮೆಲ್ಲಮಲ್ಲನೆ ವಸಡಿನಲ್ಲಿಟ್ಟುಕೊಂಡು ಜಗಿಯುತ್ತಾ ಸಿಸ್ಟರ್‌ಗೆ ಹೇಳಿದನು:

"ಗುಡ್‌ನೈಟ್"

ಅನಂತರ ಅವನು ಮಾತುಕತೆಯನ್ನಾಡಲು ಬಾಯಿ ತೆರೆಯಲೇ ಇಲ್ಲ. ಆದರೂ ಕೊನೆಯದಾಗಿ ತಾನು ಒಂದು ಒಳ್ಳೆಯ ಮಾತನ್ನಾಡಿದೆನೆಂಬ ಒಂದು ಮನಃತೃಪ್ತಿ ಅವನಿಗಿತ್ತು.

ಮಾರನೆಯ ದಿವಸ ಅವನು ಏಳುವಾಗ ಅವನ ಕೈಕಾಲುಗಳಿಗೆ ಲಕ್ವ ಬಡಿದು ನಿಷ್ಕ್ರಿಯವಾಗಿದ್ದವು.

ಆಲಸ್ಯಮಯವಾದ ಒಂದು ಬೆಳಗು ಅವನನ್ನು ಎದುರುಗೊಂಡಿತು. ಗರ್ಭಸ್ಥ ಶಿಶುವಿನ ನೆನಪುಗಳಂತೆ ಅವ್ಯಕ್ತವಾದ ಸ್ವಪ್ನಗಳು ಅವನ ಮದುಳಿನಲ್ಲಿ ತೋರತೊಡಗಿದವು.

ಅವನು ಏನನ್ನೋ ಹೇಳಲೆಂದು ಬಾಯನ್ನು ತೆರೆದನು. ಮೊಳೆಗಳೆಲ್ಲಾ ಬಿದ್ದುಹೋದ ಒಂದು ಕಿರುಗಣೆಯಂತೆ ಕೆಳಗಿನ ದವಡೆಯೂ ಮೇಲಿನ ದವಡೆಯೂ ಕೀಲುಗಳಿಂದ ಬಂಧಿಸಲ್ಪಟ್ಟಂತೆ ಇದ್ದವು. ನಾಲಿಗೆಯು ಒಂದು ಸತ್ತ ಕಪ್ಪೆಯಂತೆ ಬಾಯಲ್ಲಿ ಸಿಕ್ಕಿಬಿದ್ದು ನೇತಾಡುತ್ತಿತ್ತು.

ಸುತ್ತಲಿದ್ದ ಎಲ್ಲರ ಮುಖಗಳಲ್ಲೂ ಮ್ಲಾನತೆಯು ಪಸರಿಸಿತ್ತು. ಪರಿತಾಪದಿಂದ

ಆರ್ದ್ರವಾದ ಕಣ್ಣುಗಳೊಂದಿಗೆ ಸಿಸ್ಟರ್ ಅವನನ್ನು ನೋಡಿದಳು.

ಲಕ್ಷ್ಮಿಯೂ ದೇವದಾಸ್‌ನೂ ಸೇರಿದಂತೆ ಒಂದು ಮೆಡಿಕೋ ಗುಂಪು ಒಂದು ಬೇಟೆ ಸಿಕ್ಕಿದಂತೆ ಅವನ ಸುತ್ತಲೂ ನಿಂತಿತ್ತು. ರಕ್ತದ ಒತ್ತಡವನ್ನು ನೋಡುವ ಉಪಕರಣದ ರಬ್ಬರ್ ಕಫ್ ಅನ್ನು ಅವನ ಕ್ಷೀಣಗೊಂಡ ಕೈಯ ಮೇಲ್ಭಾಗದಲ್ಲಿ ಅವರು ಕಟ್ಟಿದರು. ಅವರು ಬ್ಲಡ್ ಪ್ರೆಷರ್ ಅಳೆದರು. ಗ್ಲಾಸ್ ಟ್ಯೂಬ್‌ನಲ್ಲಿನ ಮರ್ಕ್ಯುರಿ ಮೇಲೆ ಹೋಗುವುದನ್ನು ಕೆಳಕ್ಕೆ ಬರುವುದನ್ನು ಅವರು ನೋಡುತ್ತಾ ನಿಂತರು.

ನೋವಿನಿಂದ ಅವನು ಕ್ಷೀಣನಾಗುತ್ತಿದ್ದನು. ತನ್ನನ್ನು ಹಿಂಸೆ ಮಾಡಬೇಡಿ ಎಂಬಂತೆ ಅವನ ಕಣ್ಣುಗಳು ಕೂಗಿ ಹೇಳುತ್ತಿರುವುದನ್ನು ಯಾರೂ ಗಮನಿಸುತ್ತಿರಲಿಲ್ಲ.

ಮೆಡಿಕೋಗಳು ಒಬ್ಬೊಬ್ಬರೂ ಕುರುಡರು ಆನೆಯನ್ನು ಮುಟ್ಟಿ ನೋಡುವಂತೆ ಅವನನ್ನು ಪರಿಶೋಧಿಸುತ್ತಿದ್ದರು.

ಕೆಲವರು ಕಾಲನ್ನು ಮುಟ್ಟಿ ಪರೀಕ್ಷಿಸುತ್ತಿದ್ದರು. ಕೆಲವರು ಕೈಯನ್ನು ಪರಿಶೋಧಿಸುತ್ತಿದ್ದರು. ಕೆಲವರು ಕಣ್ಣುಗಳನ್ನು ಬಲವಂತವಾಗಿ ಬಿಡಿಸಿ ಪರಿಶೋಧಿಸುತ್ತಿದ್ದರು. ಕೆಲವರು ನಾಡಿಯ ಬಡಿತವನ್ನು ಎಣಿಸುತ್ತಿದ್ದರು. ಕೆಲವರು ಹೃದಯದ ಸಂಗೀತವನ್ನು ಶ್ರದ್ಧಿಸುತ್ತಿದ್ದರು.

ಆ ವೇಳೆಗೆ ತನ್ನ ಬ್ರೀಫ್‌ಕೇಸಿನೊಂದಿಗೆ ಡಾಕ್ಟರ್ ಕ್ವಾಜ ಅಲ್ಲಿಗೆ ಬಂದರು. ಜಾನ್ ಬಲ್‌ದೇವ್ ಮಿರ್ಜಾನ ಮಂಚದ ಬಳಿ ಕೆಲ ನಿಮಿಷಗಳು ಅವರು ಪರಿಭ್ರಾಂತರಂತೆ ನಿಂತರು.

"ರೋಗವೆನ್ನುವುದು ಒಬ್ಬ ಕಳ್ಳನಂತೆ ಯಾವ ರಾತ್ರಿಯಲ್ಲಿ ಯಾರ ಸಮಯದಲ್ಲಿ ಅವನು ಪ್ರವೇಶಿಸುತ್ತಾನೆಂದು ಯಾರಿಗೂ ತಿಳಿಯದು." ಡಾಕ್ಟರ್ ಕ್ವಾಜ ಹೇಳಿದರು. "ನಿನ್ನೆಯವರೆಗೂ ಸದಾ ಭಾಷಣ ಮಾಡುತ್ತಲಿದ್ದ ಈ ಮಿತ್ರನು ಥಟ್ಟನೆ ನಿಶ್ಶಬ್ದನಾಗಿದ್ದಾನೆ. ಆದರೂ ನಾವು ಅವನನ್ನು ಎಚ್ಚರಗೊಳ್ಳುವಂತೆ ಮಾಡಲು ಪ್ರಯತ್ನಿಸೋಣ."

ಡಾಕ್ಟರ್ ಕ್ವಾಜಾ ರೋಗಿಯನ್ನು ವಿವರವಾಗಿ ಪರೀಕ್ಷಿಸತೊಡಗಿದರು. ಜೀವ ಮಾತ್ರವಿರುವ ಒಂದು ಬೊಂಬೆಯಂತೆ ಜಾನ್ ಬಲ್‌ದೇವ್ ಮಿರ್ಜಾ ಡಾಕ್ಟರ್ ಕ್ವಾಜರನ್ನು ದಿಟ್ಟಿಸಿ ನೋಡುತ್ತಿದ್ದನು.

"ಈ ಮಿತ್ರನು ಈಗ ಜೀವನದ ಎರಡು ಕೊನೆಗಳನ್ನು ಕಾಣಲಾರದ ಒಂದು ರಸ್ತೆಯಲ್ಲಿದ್ದಾನೆ. ಈತನನ್ನು ನಾವು ಒಂದು ದಡ ಮುಟ್ಟಿಸಬೇಕು " ಡಾಕ್ಟರ್ ಕ್ವಾಜ ಹೇಳಿದರು.

ಅನಂತರ ಅವರು ಪಾರ್ಶ್ವವಾಯುವಿನ ಬಗ್ಗೆ ಹೇಳಿಕೊಡಲು ಪ್ರಾರಂಭಿಸಿದರು. ಅವರ ಪ್ರೀತಿಪಾತ್ರರಾದ ಶಿಷ್ಯರು ಅವರು ಹೇಳುವುದನ್ನೇ ಕೇಳುತ್ತಲಿದ್ದರು. ದೇವದಾಸನೂ, ಲಕ್ಷ್ಮಿಯೂ ಅಕ್ಕಪಕ್ಕದಲ್ಲೇ ನಿಂತುಕೊಂಡು ಅವರು ಹೇಳುವುದನ್ನು ಕೇಳಿಸಿಕೊಳ್ಳುತ್ತಲಿದ್ದರು. ಅವರಿಬ್ಬರ ಮನಸ್ಸುಗಳೂ ಪೂರ್ಣವಾಗಿ ಡಾಕ್ಟರ್

ಕ್ವಾಜರಲ್ಲಿ ಕೇಂದ್ರೀಕರಿಸಿದ್ದರಿಂದ ಅವರ ಶರೀರಗಳು ಭುಜಕ್ಕೆ ಭುಜ ಸೇರಿ ನಿಂತಿರುವ ಸತ್ಯವನ್ನು ಅವರೇ ತಿಳಿದಿರಲಿಲ್ಲ.

"ಈ ಮಿತ್ರನ ಮೆದುಳಿನಲ್ಲಿ ಎಲ್ಲೋ ರಕ್ತವು ಹೆಪ್ಪುಗಟ್ಟಿದೆ. ಎಲ್ಲೆಂದು ನಾವು ಕಂಡುಹಿಡಿಯೋಣ." ಡಾಕ್ಟರ್ ಕ್ವಾಜ ಹೇಳಲಾರಂಭಿಸಿದರು. "ಇವನ ರೋಗವು ಬಹಳವಾಗಿ ಹೆಚ್ಚಿ, ಹಾಳಾಗುವ ಸಾಧ್ಯತೆಯೇ ಹೆಚ್ಚಿದೆ."

ಹಿಂದೆಯೇ ನಿಂತಿದ್ದ ಹೌಸ್ ಸರ್ಜನ್‌ನ ಭುಜ ತಟ್ಟುತ್ತಾ ಡಾಕ್ಟರ್ ಕ್ವಾಜ ಹೇಳಿದರು. "ಡಾಕ್ಟರ್, ನಿಮ್ಮ ಜವಾಬ್ದಾರಿಯೇ ಇಲ್ಲಿ ಹೆಚ್ಚು. ನಿಮ್ಮ ತಂದೆಯನ್ನು ಉಪಚರಿಸುವಂತೆ ನೀವು ಈ ಮಿತ್ರನನ್ನು ಉಪಚರಿಸಬೇಕು."

ಸಿಸ್ಟರ್ ಅನ್ನು ನೋಡುತ್ತಾ ಡಾಕ್ಟರ್ ಕ್ವಾಜ ಕೇಳಿದರು.

"ಆಮ್ ಐ ರೈಟ್ ಸಿಸ್ಟರ್?"

ಈ ಪ್ರಶ್ನೆಯನ್ನು ನಿರೀಕ್ಷಿಸಿದಂತೆ ಆ ಸಿಸ್ಟರ್ ಎಂದಳು.

"ಎಸ್ ಸಾರ್."

ಹೀಗೆಲ್ಲಾ ಹೇಳುತ್ತಿರುವುದನ್ನು ಜಾನ್ ಬಲ್‌ದೇವ್ ಮಿರ್ಜಾ ಕೇಳಿಸಿ ಕೊಳ್ಳುತ್ತಿದ್ದಾನೋ ಏನೋ?

ಅವನು ತನ್ನ ಕಣ್ಣಾಲಿಗಳನ್ನು ವಾರ್ಡ್‌ನ ಸುತ್ತ ಓಡಿಸುತ್ತಿದ್ದನು. ಅಲ್ಲಿ ಒಟ್ಟು ಆರು ಬೆಡ್‌ಗಳಿದ್ದವು. ಐದು ಜನ ಅವನನ್ನೇ ದಿಟ್ಟಿಸಿ ನೋಡುತ್ತಿದ್ದರು. ನಿನ್ನೆಯ ರಾತ್ರಿಯವರೆಗೂ ಬಾಯಿ ಮುಚ್ಚದೆ ಮಾತನಾಡುತ್ತಲಿದ್ದ ಮಿತ್ರನಿಗೆ ಏನಾಗಿದೆಯೆಂಬ ಅವರ ಉತ್ಕಂಟತೆಯು ಅವರ ಸ್ವಂತ ರೋಗಗಳನ್ನೂ ಸಹ ಚಿಕ್ಕದನ್ನಾಗಿ ಮಾಡಿದ್ದವು.

ಡಾಕ್ಟರ್ ಕ್ವಾಜರೂ ಅವರ ಗುಂಪೂ ಅಲ್ಲಿಂದ ಹೊರಬಂದಾಗ ವಾರ್ಡ್ ಶೂನ್ಯವಾಯಿತು. ಅಲ್ಲಿಯವರೆಗೂ ವಾರ್ಡ್ ಡಾಕ್ಟರ್ ಕ್ವಾಜರ ಶಬ್ದ ಕೋಲಾಹಲಗಳಿಂದ ನಡುಗುತ್ತಿತ್ತು. ವಾರ್ಡ್ ಥಟ್ಟನೆ ಥಣ್ಣಗಾಯಿತು. ಒಂದು ಗಾಳಿ ಬೀಸಿ ಹೋದಂತೆ ಅಲ್ಲಿ ನಿಶ್ಶಬ್ದವುಂಟಾಯಿತು.

ಜಾನ್ ಬಲ್‌ದೇವ್ ಮಿರ್ಜಾಗೆ ಏನೋ ಹೇಳಬೇಕೆಂದಿತ್ತು. ಏನೋ ಒಂದು ಬಹಳ ಆವಶ್ಯವಾದ ವಿಷಯವಾಗಿತ್ತದು. ಬಾಯಿ ತೆರೆಯಲು ಶ್ರಮಿಸಿದನಾದರೂ ಅವನ ತುಟಿಗಳು ಒಂದು ಭಾಗಕ್ಕೆ ವಕ್ರವಾಗಿ ಸರಿಯುತ್ತಿದ್ದುವಲ್ಲದೆ ಮಾತುಗಳು ಹೊರಕ್ಕೆ ಬರುತ್ತಿರಲಿಲ್ಲ. ಅವನ ಕಣ್ಣುಗಳಲ್ಲಿ ಅಸಹಾಯಕತೆಯು ತಾಂಡವ ವಾಡುತ್ತಿತ್ತು.

ಅವನಿಗೇ ತಿಳಿಯದಂತೆ ಅವನು ಹಾಸಿಗೆಯನ್ನು ಒದ್ದೆ ಮಾಡಿಕೊಳ್ಳುತ್ತಲಿದ್ದನು. ಚಿಕ್ಕ ಮಗುವಾಗಿದ್ದಾಗ ನಿದ್ದೆಯಲ್ಲೇ ಮಾಡಿಕೊಳ್ಳುತ್ತಿದ್ದಂತೆ. ಆದರೆ ಆ ಕಾಲದಲ್ಲೆಲ್ಲಾ ಅವನಿಗೆ ಸಹಾಯ ಮಾಡುತ್ತಿದ್ದುದು ಸೈತಾನನು. ಅವನು ಕಕ್ಕಸ್ಸುಗಳನ್ನೂ, ನಿರ್ಜನವಾದ ಗದ್ದೆ ಬಯಲುಗಳನ್ನು ಸ್ವಪ್ನದಲ್ಲಿ ತೋರಿಸುತ್ತಾ ಅಲ್ಲಿ ಮೂತ್ರ ಮಾಡುವಂತೆ ಪ್ರೇರೇಪಿಸುತ್ತಿದ್ದನು. ಅನಂತರ ಬೆಳಗಿನ ಜಾವ ಅವನನ್ನು ಎಬ್ಬಿಸಲು ಬರುವ ತಾಯಿ ಅವನಿಗೆ ಏಟು ಕೊಡುವಾಗ ಅವನಿಗೆ ತಾನು ಮೂತ್ರ ಮಾಡಿದ್ದು ಕಕ್ಕಸ್ಸಿನಲ್ಲೋ, ನಿರ್ಜನವಾದ ಗದ್ದೆ ಬಯಲುಗಳಲ್ಲೋ ಅಲ್ಲವೆಂದು ಅವನಿಗೆ

ಅರ್ಥವಾಗುತ್ತಿತ್ತು. ತಾಯಿ ಅವನನ್ನು ಹೊಡೆಯುವುದರೊಂದಿಗೆ, ರಾತ್ರಿಯ ಸಮಯಗಳಲ್ಲಿ ಕೊಠಡಿಯನ್ನು ಪ್ರವೇಶಿಸಿ ಮಗುವನ್ನು ದಾರಿಗೆಡಿಸುತ್ತಿದ್ದ ಸೈತಾನನನ್ನು ಬೈಯುತ್ತಿದ್ದಳು. ಇಲ್ಲಿ ಈಗ ಅವನ ತಾಯಿಯೋ, ಅವನ ಊಹೆಯಲ್ಲಿನ ಸೈತಾನನೋ ಇರಲಿಲ್ಲ.

ಉಗುರುಬೆಚ್ಚಗಿನ ಬಿಸಿನೀರಿನ ಮೇಲ್ಭಾಗದಲ್ಲಿ ಬಿದ್ದುಕೊಂಡಿರುವಂತೆ ಮೊದಲು ಅವನಿಗೆ ತೋರಿತು. ಅನಂತರ ಆ ಬಿಸಿಯು ಕಡಿಮೆಯಾಗುತ್ತಾ ಬರುತ್ತಿರುವಂತೆ, ಸೂಕ್ಷ್ಮವಾದ ತಂಪು ಕೆಳಗಿನಿಂದ ಮೇಲಕ್ಕೆ ಬಂದಂತೆ ಅವನಿಗೆ ತೋರಿತು.

ಪಕ್ಕದ ಬೆಡ್‌ನಲ್ಲಿರುವ ರೋಗಿಯು ಜಾನ್ ಬಲ್‌ದೇವ್ ಮಿರ್ಜಾನ ಮಂಚದ ಬಳಿ ಬಂದನು. ಅವನು ಒಬ್ಬ ಉದರರೋಗಿ. ಯಾವಾಗಲೂ ತನ್ನ ಹೊಟ್ಟೆಯ ಮೇಲೆ ಕೈಯಿಟ್ಟುಕೊಂಡು ಬಗ್ಗಿ ನಡೆಯುತ್ತಿದ್ದನು. ಅವನ ಮುಖದಲ್ಲಿ ಯಾವಾಗಲೂ ವೈರಾಗ್ಯವನ್ನೇ ಕಾಣಬಹುದಿತ್ತು. ಒಂದು ಮುಗುಳ್ನಗೆಯೋ, ಸೌಮ್ಯಭಾವವೋ ಆ ಮುಖದಲ್ಲಿ ಒಮ್ಮೆಯೂ ಪ್ರತ್ಯಕ್ಷವಾಗಿರಲಿಲ್ಲ. ಪ್ರಪಂಚವನ್ನೆಲ್ಲಾ ಶಪಿಸುತ್ತಲೇ ಅವನು ತನ್ನ ದಿವಸಗಳನ್ನು ಕಳೆಯುತ್ತಿದ್ದುದು. ಮಧ್ಯೆ ಮಧ್ಯೆ ಮಂಚದಲ್ಲಿ ಮಲಗಿಯೂ, ಹೊಟ್ಟೆಯನ್ನು ಹಿಡಿದುಕೊಂಡೂ, ಅವನು ರೋದಿಸುವುದನ್ನು ಕೇಳಬಹುದಿತ್ತು. ಆಗಲೆಲ್ಲಾ ಸಿಸ್ಟರ್ ಮಾತ್ರೆಯನ್ನೋ, ಇಂಜೆಕ್ಷನ್ ಅನ್ನೋ ಕೊಡುವಳು. ಆಹಾರವನ್ನು ಸೇವಿಸಿ ಹತ್ತು ನಿಮಿಷಗಳಾಗುವಾಗ ಅವನು ವಾಂತಿ ಮಾಡಿಕೊಳ್ಳುವನು. ಈ ಎಲ್ಲಾ ಯಾತನೆಗಳೂ ಅವನ ದಿನಚರಿಯಾಗಿ ಮಾರ್ಪಟ್ಟಿದ್ದುವು. ನೋವು ಬಂದಾಗ ಅಳುವುದು, ವಾಂತಿ ಬರುವಾಗ ಬಗ್ಗಿ ಮಂಚದ ಕೆಳಗಿರುವ ಟ್ರೇಯನ್ನು ತೆಗೆದುಕೊಂಡು ಅದರಲ್ಲಿ ವಾಂತಿ ಮಾಡುವುದು, ಮಧ್ಯೆ ಮಧ್ಯೆ ಕಕ್ಕಸ್‌ಗೆ ಹೋಗಿಬರುವುದು ಇದೆಲ್ಲಾ ಒಂದು ಪುಸ್ತಕದಲ್ಲಿ ಬರೆದಿಟ್ಟಂತೆ ಆಗಿತ್ತು.

ಅವನು ಜಾನ್ ಬಲ್‌ದೇವ್ ಮಿರ್ಜಾನನ್ನು ಕನಿಕರದಿಂದ ನೋಡುತ್ತಾ ನಿಂತನು. ಏನಾದರೂ ಸಮಾಧಾನದ ಮಾತುಗಳನ್ನು ಹೇಳಲೋ, ಸ್ವಲ್ಪ ಹೊತ್ತು ಅಲ್ಲಿ ನಿಲ್ಲಲೋ ಅವನಿಗೆ ಸಾಧ್ಯವಾಗಲಿಲ್ಲ. ಅಷ್ಟು ಹೊತ್ತಿಗೆ ಹೊಟ್ಟೆನೋವು ಅವನನ್ನು ಕಿತ್ತು ತಿನ್ನತೊಡಗಿತು. ಹೊಟ್ಟೆಯನ್ನು ಅವನು ತನ್ನ ಎರಡೂ ಕೈಗಳಿಂದ ಬಗ್ಗಿ ಹಿಡಿದುಕೊಂಡು ಓಡಿಹೋಗಿ ತನ್ನ ಮಂಚದ ಮೇಲೆ ಮಲಗಿದ ನಂತರ ಅವನು ಬಿಕ್ಕಿಬಿಕ್ಕಿ ಅಳತೊಡಗಿದನು.

ತನ್ನ ಶರೀರದ ಬಲಭಾಗವು ದೇಹದಿಂದ ಬೇರ್ಪಟ್ಟಂತೆ ಜಾನ್ ಬಲ್‌ದೇವ್ ಮಿರ್ಜಾಗೆ ಅನ್ನಿಸಿತು. ಹಾಗೆ ಕೆಲವು ವಸ್ತುಗಳು ಅಲ್ಲಿರುವಂತೆ ಅವನಿಗೆ ತೋರುತ್ತಿಲ್ಲ. ಎಡದ ಕೈಕಾಲುಗಳು ಮೊದಲಿದ್ದಂತೆ ಶಕ್ತಿಯುತವಾಗಿ ಚಲಿಸಲು ಸಾಧ್ಯವಾಗುತ್ತಿಲ್ಲವಾದರೂ ಚೈತನ್ಯವು ಅಲ್ಲಿ ಸ್ವಲ್ಪ ಸ್ವಲ್ಪ ಉಳಿದುಕೊಂಡಿತ್ತು. ಪ್ರಯಾಸದಿಂದಲಾದರೂ ಕಾಲನ್ನು ಕದಲಿಸಲು ಅವನಿಗೆ ಸಾಧ್ಯವಿತ್ತು.

ಚಿಕ್ಕ ಚಿಕ್ಕ ವಿಷಯಗಳನ್ನು ಸಹ ಉತ್ಪ್ರೇಕ್ಷಿಸಿ ಬಣ್ಣ ಕಟ್ಟಿ ಮಾತನಾಡುವ ಅವನಿಗೆ ಕಠಿಣವಾದ ತನ್ನ ರೋಗದ ಬಗ್ಗೆ, ತನ್ನ ಪರಾಧೀನತೆಗಳ ಬಗ್ಗೆ ಏನನ್ನು ಹೇಳಲು ಸಾಧ್ಯವಾಗದ ಸಂಕಟವು ಅವನನ್ನು ಕಾಡಿತು.

ಬೆಡ್‌ಷೀಟ್ ಮೂತ್ರದಲ್ಲಿ ಚೆನ್ನಾಗಿ ನೆಂದಿತ್ತು. ತಲೆಯ ಬಳಿಯಿರುವ ಸ್ವಿಚ್ ಒಂದು ಸಲ ಅದುಮಿದರೆ ಸಾಕು ಡ್ಯೂಟಿ ರೂಮ್‌ನ ಬಳಿ ಇರುವ, ಅವನ ಹಾಸಿಗೆಗೆ ಘಟಿಸಿರುವ ಕೆಂಪು ಬಲ್ಬ್ ಹತ್ತುತ್ತದೆ. ಆಗ ಆಯಾನೋ, ಅಟೆಂಡರೋ, ಓಡಿ ಬರುತ್ತಾರೆ. ಇನ್ನು ಆ ಬಲ್ಬ್ ಹತ್ತುತ್ತದೆಯೋ ? ದುಃಖದಿಂದ ಜಾನ್ ಬಲ್‌ದೇವ್ ಮಿರ್ಜಾ ಕುಗ್ಗಿದನು.

ಜೀವನದಲ್ಲಿ ಮೊದಲ ಬಾರಿಗೆ ಜಾನ್ ಬಲ್‌ದೇವ್ ಮಿರ್ಜಾಗೆ ಏಕಾಂತತೆಯು ಅನುಭವವಾಯಿತು. ಈ ಲೋಕದೊಂದಿಗಿನ ಬಂಧನವು ಬೇರ್ಪಡುತ್ತಿರುವಂತೆ ಅವನಿಗನ್ನಿಸಿತು. ಈ ಆಸ್ಪತ್ರೆಯಲ್ಲಿ ಅವನು ಬಂದು ಸೇರಿ ಎಷ್ಟೋ ತಿಂಗಳುಗಳಾಗಿದ್ದವು. ಬಂಧುಬಳಗದವರ್‍ಯಾರನ್ನೂ ಅವನು ಇರುವವರೆಗೆ ತನ್ನ ಬೆಡ್ ಬಳಿ ಕಂಡಿರಲಿಲ್ಲ. ಅದರಲ್ಲಿ ಅವನಿಗೆ ಸಂಕಟವೇನಿರಲಿಲ್ಲ. ಅದಕ್ಕೆ ಕಾರಣವೆಂದರೆ ಅವನು ಯಾವಾಗಲೂ ಮಾತುಗಳನ್ನಾಡುವುದು, ಘೊಳ್ಳೆಂದು ನಗುವುದು, ದೇವರ ಮಹಿಮೆಯ ಗಾನ ಹಾಡುವುದು ಇವುಗಳೆಲ್ಲದರಿಂದಲೇ ಸಮಯ ಕಳೆಯುತ್ತಿದ್ದುದು. ತನ್ನ ಜನರಿಲ್ಲದ ದುಃಖವನ್ನು ಅವನು ಒಮ್ಮೆಯೂ ಇದುವರೆಗೆ ಅನುಭವಿಸಿಲ್ಲ. ತಾಯಿಯೆಂದೋ, ಸಹೋದರಿಯೆಂದೋ, ಹೆಂಡತಿಯೆಂದೋ - ಅಂತಹ ಪದಗಳನ್ನು ಅವನು ಒಮ್ಮೆಯೂ ಉಚ್ಚರಿಸಿಲ್ಲ. ಅವನಿಗೆ ಅದರ ಅಭಾವವೂ ತೋರಿಲ್ಲ.

ಜಾನ್ ಬಲ್‌ದೇವ್ ಮಿರ್ಜಾ ಈಗಲೂ ಯಾರನ್ನೋ ನೆನೆಸಿಕೊಳ್ಳುತ್ತಿರ ಬಹುದು ? ಅದು ದೇವರನ್ನು ಮಾತ್ರ ಇರಬಹುದು. ಅವನ ಕಣ್ಣಿನ ದೃಷ್ಟಿ ಕೆಲವೊಮ್ಮೆ ಪರಿಸರಗಳಲ್ಲೂ, ಕೆಲವೊಮ್ಮೆ ಶೂನ್ಯದಲ್ಲೂ ಹಾರಾಡುತ್ತಲಿತ್ತು. ನಿಶ್ಚಯವಾಗಿಯೂ ಅವನ ನೋಟದಲ್ಲಿ ಏನೇನೋ ಅರ್ಥಗಳಿದ್ದವು.

ಸಿಸ್ಟರ್ ಅವನ ಮಂಚದ ಬಳಿ ಬಂದಳು. ಸಿಸ್ಟರನ್ನು ಕಂಡಾಗ ಜಾನ್ ಬಲ್‌ದೇವ್ ಮಿರ್ಜಾ ತಲೆ ಕೆರೆದುಕೊಳ್ಳುತ್ತಾ ಅವಳನ್ನು ನೋಡಿದನು. ಆ ನೋಟದ ಅರ್ಥವು ಸಿಸ್ಟರ್‌ಗೆ ತಿಳಿಯಿತೆಂಬಂತೆ ಅವಳು ಬೆಡ್‌ಷಿಟ್ ಮೇಲೆ ಕೈ ಇಟ್ಟು ನೋಡಿದಳು. ಅನಂತರ ಸ್ವಲ್ಪವೂ ತಡಮಾಡಲಿಲ್ಲ. ವಾರ್ಡ್‌ಬಾಯನ್ನು ಕರೆದಳು. ಅವರಿಬ್ಬರೂ ಸೇರಿ ಜಾನ್ ಬಲ್‌ದೇವ್ ಮಿರ್ಜಾನನ್ನು ಪಕ್ಕಕ್ಕೆ ಹೊರಳಿಸಿ ಬೆಡ್‌ಷೀಟ್ ಬದಲಾಯಿಸಿದರು. ಸಾಯಂಕಾಲವಾಗುವ ಹೊತ್ತಿಗೆ ಹಾಗೆ ನಾಲ್ಕೈದು ಸಲ ಬದಲಾಯಿಸಬೇಕಾಗಿ ಬಂತು. ತನ್ನನ್ನು ಉಪಚರಿಸಲು ಬರುವವರನ್ನು ಅವನು ಕೃತಜ್ಞತೆಯಿಂದ ನೋಡುತ್ತಿದ್ದನು.

ವಾರ್ಡ್‌ನಲ್ಲಿ ಸಂದರ್ಶಕರ ಸಮಯವಾಯಿತು. ವಾರ್ಡಿನೊಳಗೆ ಮಾತುಕತೆಗಳ ಶಬ್ದವು ವರ್ಧಿಸತೊಡಗಿತು. ಒಂದೊಂದು ಮಂಚದ ಸುತ್ತಲೂ ಜನರು ಗುಂಪು ಗುಂಪಾಗಿ ಸೇರತೊಡಗಿದರು.

ಸಂದರ್ಶಕರು ಬರುತ್ತಿದ್ದುದು ಅವರ ರೋಗಿಗಳ ಆರೋಗ್ಯದ ವಿವರಗಳನ್ನು ವಿಚಾರಿಸಲಾಗಿತ್ತು. ಸಮಾಧಾನದ ಮಾತುಗಳನ್ನಾಡುವುದು. ಸಾಂತ್ವನ ಪಡಿಸುವುದು. ಮೆಲ್ಲಮೆಲ್ಲನೆ ಅಳುವುದು. ಸಣ್ಣಪುಟ್ಟ ನಗು - ಇವು ಅಡೆತಡೆ ಇಲ್ಲದೆ ಕೇಳಿಸುತ್ತಿತ್ತು.

ಇದ್ದಕ್ಕಿದ್ದಂತೆ ಕಿತ್ತಳೆ ಹಣ್ಣಿನ ವಾಸನೆಯು ಸರ್ವತ್ರ ವ್ಯಾಪಿಸತೊಡಗಿತು. ಬಹುಮಟ್ಟಿಗಿನ ಜನರ ಕೈಗಳಲ್ಲಿ ಕಿತ್ತಳೆ ಹಣ್ಣುಗಳಿದ್ದವು. ನಾಗ್‌ಪುರದಲ್ಲಿರುವ ತೋಟಗಳಲ್ಲಿ ಕಿತ್ತಳೆಹಣ್ಣಿನ ಕಾಲವಾಗಿರಬೇಕು. ಕೆಲ ರೋಗಿಗಳು ಕಿತ್ತಳೆ ಹಣ್ಣನ್ನು ಸುಲಿದು ತಿನ್ನಲು ತೊಡಗಿದರು. ಕೆಲವರು ಅದನ್ನು ಸುಮ್ಮನೆ ಕೈಯಲ್ಲಿ ಹಿಡಿದಿದ್ದರು.

ಜಾನ್ ಬಲ್‌ದೇವ್ ಮಿರ್ಜಾನ ವಾರ್ಡ್‌ನಲ್ಲಿ ಆರನೆಯ ನಂಬರ್ ಮಂಚದಲ್ಲಿ ಒಬ್ಬ ಯುವಕನು ಮಲಗಿದ್ದನು. ಅವನು ಗಡ್ಡ ಬೆಳೆಸಿಕೊಂಡಿದ್ದನು. ಅವನು ಹೆಚ್ಚಾಗಿ ಯಾರೊಂದಿಗೂ 'ಮಾತನಾಡುತ್ತಲೇ ಇರಲಿಲ್ಲ. ಸಾಮಾನ್ಯವಾಗಿ ಅವನ ಕೈಯಲ್ಲಿ ಒಂದು ಪುಸ್ತಕವನ್ನು ನೋಡಬಹುದು. ಓದದ ಸಮಯಗಳಲ್ಲಿ ಅವನು ಅಲ್ಲಿ ಇಲ್ಲಿ ತೀಕ್ಷ್ಣವಾಗಿ ನೋಡುತ್ತಾ ಮಲಗಿರುತ್ತಿದ್ದನು. ದಿನವೂ ಸಾಯಂಕಾಲದ ಸಮಯದಲ್ಲಿ ಒಬ್ಬ ಸುಂದರಿ ಹುಡುಗಿ ಅವನನ್ನು ನೋಡಲು ಬರುತ್ತಿದ್ದಳು. ಅವಳು ಬಂದು ಅವನನ್ನು ನೋಡಿ ಹಿಂದಿರುಗಿ ಹೋಗುವವರೆಗೆ ಅವನು ಬಲು ಸಂತೋಷದಿಂದಿರುತ್ತಿದ್ದನು. ಇಂದು ಆ ಹುಡುಗಿಯ ಜೊತೆ ಒಬ್ಬ ಸ್ತ್ರೀ ಬಂದಿದ್ದಳು. ಹುಡುಗಿ ಪುಷ್ಪಗುಚ್ಛದೊಂದಿಗೆ ಬಂದಿದ್ದಳು. ಆ ಸ್ತ್ರೀಯ ಕೈಯಲ್ಲಿ ಕಿತ್ತಳೆಹಣ್ಣಿನ ಒಂದು ಕುಕ್ಕೆಯೇ ಇತ್ತು. ಆಕೆಯನ್ನು ಕಂಡಾಗ ಯುವಕನು ನಿರುತ್ಸಾಹಗೊಂಡವನಂತೆ ತೋರಿತು. ಅವನು ಹುಡುಗಿಯೊಂದಿಗೆ ಬಹಳ ಹೊತ್ತು ಮಾತುಗಳನ್ನೇನೂ ಆಡಲಿಲ್ಲ. ಮಿತ್ರ, ನಿನ್ನ ಜೊತೆಗಾತಿಯೊಂದಿಗೆ ಬಾಯಿ ಮುಚ್ಚದೆ ಮಾತನಾಡುತ್ತಿರು ಎಂದು ಕೂಗಿ ಹೇಳಲು ಜಾನ್ ಬಲ್‌ದೇವ್ ಮಿರ್ಜಾ ಇಚ್ಛಿಸಿದನು. ಸ್ವಲ್ಪ ಹೊತ್ತು ಕಳೆದನಂತರ ಹುಡುಗಿಯೂ, ಸ್ತ್ರೀಯೂ ಹೊರಟುಹೋದರು. ಯುವಕನು ವಿಷಣ್ಣವದನನಾಗಿ ಮತ್ತೆ ಮಂಚದ ಮೇಲೆ ಮಲಗಿ ಪುಸ್ತಕವನ್ನು ತೆರೆದು ಹಿಡಿದನು.

ಯುವಕನ ಏಕಾಂತತೆಗೆ ಪುಸ್ತಕವಾದರೂ ಜೊತೆಗಿತ್ತು. ಜಾನ್ ಬಲ್‌ದೇವ್ ಮಿರ್ಜಾಗೆ ಯಾರೂ ಇರಲಿಲ್ಲ. ಯಾವನಾದರೊಬ್ಬನು ಕಿತ್ತಳೆಹಣ್ಣಿನ ಪೊಟ್ಟಣ ದೊಂದಿಗೆ ತನ್ನ ಬಳಿಗೆ ಬಂದರೆ ಎಂದು ಆ ಸಮಯದಲ್ಲಿ ಅವನಿಗೊಂದು ಮೋಹ ತೋರಿತು. ಅವನ ಕಣ್ಣುಗಳ ಅಂಚಿನಲ್ಲಿ ಒಂದೊಂದು ಹನಿ ಕಣ್ಣೀರು ಒಸರುತ್ತಿತ್ತು.

ಒಂದುಕಪ್ ಕಿತ್ತಳೆಹಣ್ಣಿನ ರಸದೊಂದಿಗೆ ಸಿಸ್ಟರ್ ಜಾನ್ ಬಲ್‌ದೇವ್ ಮಿರ್ಜಾನ ಬಳಿ ಬಂದಳು. ಅವನಿಗೆ ಬೆಡ್ ರೆಸ್ಟ್ ಒದಗಿಸಿ ಮಲಗಿಸಿ ಕಿತ್ತಳೆ ಹಣ್ಣಿನ ನೀರಿನ ಗ್ಲಾಸನ್ನು ಅವನ ತುಟಿಗಳಿಗೆ ಅಂಟಿಸಿದಳು. ಆದರೆ ಅವನಿಗೆ ಅದನ್ನು ಕುಡಿಯಲು ಸಾಧ್ಯವಾಗಲಿಲ್ಲ. ತನ್ನ ಬಾಯಿಯೊಳಕ್ಕೆ ಹಾಕಿದ ಒಂದು ಗುಟುಕು ರಸವನ್ನು ಅವನು ಸ್ವಲ್ಪ ಹೊತ್ತು ಹಾಗೇ ಇಟ್ಟುಕೊಂಡನು. ಅದನ್ನು ಒಳಕ್ಕಿಳಿಸಲು ನೋಡಿದಾಗ ಅದು ಸ್ವಲ್ಪ ಮಾತ್ರವೇ ಗಂಟಲೊಳಕ್ಕೆ ಹೋಗಿ ಮಿಕ್ಕಿದ್ದೆಲ್ಲಾ ಹೊರಗೆ ಸುರಿದು ಹೋಯಿತು. ಬೆಡ್ ಷೀಟೂ ಹೊದಿಕೆಯೂ ಕಿತ್ತಳೆಹಣ್ಣಿನ ರಸದಿಂದ ಅಭಿಷೇಕಗೊಂಡವು.

ಸಂದರ್ಶಕರು ಒಬ್ಬೊಬ್ಬರಾಗಿ ವಾಪಸ್ ಹೊರಟುಹೋಗಲಾರಂಭಿಸಿದರು. ಸಮಯ ಮುಗಿಯಿತು ಎಂದು ಗಂಟೆಯೂ ಬಾರಿಸಿತು. ವಾರ್ಡ್ ಮತ್ತೆ ನಿಶ್ಶಬ್ದತೆಯಲ್ಲಿ ಮುಳುಗಿತು.

ಜಾನ್ ಬಲ್‌ದೇವ್ ಮಿರ್ಜಾಗೆ ತನ್ನ ತಲೆಯಿಂದ ಏನೋ ಖಾಲಿಯಾಗಿ ಹೋಗುತ್ತಿರುವಂತೆ ತೋರಿತು. ಬೆಳಕು ಮಂಕುಮಂಕಾಗುತ್ತಿದೆ. ಎಲ್ಲೋ ಕತ್ತಲೆ ಹತ್ತುತ್ತಿದೆ. ಎಲೆಕ್ಟ್ರಿಕ್ ಬಲ್ಬ್‌ಗಳು ಶಾಂತವಾಗುತ್ತಿದೆ. ಕತ್ತಲೆಯೂ ಬೆಳಕೂ ಜಾರಿ ಜಾರಿ ಮಾಯವಾಗುತ್ತಿವೆ. ಮರೆಯಾಗುತ್ತಿವೆ. ಅವನ ಕಿವಿ ಮುಚ್ಚಿಹೋಗುತ್ತಿತ್ತು. ಶಬ್ದಗಳೂ, ಕೋಲಾಹಲಗಳೂ, ಕಡಿಮೆಯಾಗತೊಡಗಿ ಕ್ರಮೇಣ ಇಲ್ಲದಂತಾಗುತ್ತಿದೆ. ಸೂಕ್ಷ್ಮವಾದ ಒಂದು ಸೈರನ್ ಶಬ್ದವು ಎಲ್ಲೋ ಕೇಳಿಬರುತ್ತಿದೆ.

ಜಾನ್ ಬಲ್‌ದೇವ್ ಮಿರ್ಜಾ ಪ್ರಜ್ಞೆ ಇಲ್ಲದ ಅವಸ್ಥೆಗೆ ಜಾರುತ್ತಿದ್ದಾನೆ.

ರಾತ್ರಿ ಡಾಕ್ಟರ್ ಕ್ವಾಜ ವಾರ್ಡ್‌ಗೆ ಬಂದರು. ರೆಸಿಡೆಂಟ್ ಹೌಸ್ ಸರ್ಜನ್, ಅವರ ಹಿಂದೆ ನಿಂತರು.

"ಗೋಯಿಂಗ್ ವರ್ಸ್" ಜಾನ್ ಬಲ್‌ದೇವ್ ಮಿರ್ಜಾನನ್ನು ಪರೀಕ್ಷಿಸಿದ ನಂತರ ಡಾಕ್ಟರ್ ಕ್ವಾಜ ಹೇಳಿದರು. "ಬಹುಶಃ ಶ್ವಾಸಕ್ಕೆ ತಡೆಯುಂಟಾಗಬಹುದು."

ಲೋಷನ್‌ನಲ್ಲಿ ಕೈ ತೊಳೆಯುವಾಗ ಡಾಕ್ಟರ್ ಕ್ವಾಜ ಹೇಳಿದರು "ಆರ್ಟಿಫಿಷಿಯಲ್ ರೆಸ್ಪಿರೇಷನ್‌ಗಿರುವ ಸಿದ್ಧತೆಗಳು ಬಹುಶಃ ಬೇಕಾಗಬಹುದು."

"ನೋ ಪ್ರಾಬ್ಲಂ ಸರ್" ಹೌಸ್ ಸರ್ಜನ್ ಹೇಳಿದನು.

ಡಾ. ಕ್ವಾಜ ನಡೆದು ಹೋದರು. ಕಾರಿಡಾರ್‌ನಲ್ಲಿ ಮರೆಯಾದರು. ಹೌಸ್ ಸರ್ಜನ್ ರೋಗಿಯ ಮಂಚದ ಬಳಿ ಇದ್ದ ಸ್ಟೂಲ್ ಮೇಲೆ ಕುಳಿತಿದ್ದನು.

ಅವನು ರೋಗಿಯ ಮೂಗಿನಲ್ಲೂ, ಮೂತ್ರ ವಿಸರ್ಜಿಸುವ ನಾಳದಲ್ಲೂ ರಬ್ಬರ್ ಟ್ಯೂಬ್‌ಗಳನ್ನು ಸಿಗಿಸಿದನು.

ಸಿಸ್ಟರ್ ಒಂದು ಲೋಟ ಹಾಲಿನೊಂದಿಗೆ ಬಂದಳು. ದೊಡ್ಡ ಸಿರಿಂಜ್‌ನಲ್ಲಿ ಹಾಲನ್ನು ತೆಗೆದುಕೊಂಡು ಮೂಗಿನಲ್ಲಿನ ರಬ್ಬರ್ ಟ್ಯೂಬಿನ ಮೂಲಕ ಅವರು ಜಾನ್ ಬಲ್‌ದೇವ್ ಮಿರ್ಜಾನನ್ನು ಫೀಡ್ ಮಾಡತೊಡಗಿದರು.

ವಾರ್ಡ್‌ನಲ್ಲಿ ಒಂದು ಅಳು ಥಟ್ಟನೆ ಕೇಳಿಬಂತು. ಪಕ್ಕದ ಮಂಚದಲ್ಲಿ ಉದರ ರೋಗಿ ವೇದನೆಯಿಂದ ನರಳುತ್ತಿದ್ದನು.

# ಇಪ್ಪತ್ತೆರಡು

ಮಿಸೆಸ್ ತಿವಾರಿ ಹಾಸ್ಟೆಲ್‌ಗೆ ಬಂದು ಗಲಾಟೆ ಮಾಡಿದ ಮೇಲೆ ಹೆಲೆನ್ ಸಿಂಗ್‌ರ ಸ್ವಭಾವದಲ್ಲಿ ಗಮನಾರ್ಹ ಮಾರ್ಪಾಡುಗಳುಂಟಾದವು. ಆಕೆಯ ಮುಖಭಾವವು ಈಗ ಪ್ರಸನ್ನವಾಗಿತ್ತು. ಸ್ವತಃ ಠೀವಿಯನ್ನು ಪ್ರತಿಬಿಂಬಿಸುತ್ತಿದ್ದ ಹೆಲೆನ್ ಸಿಂಗ್‌ರ ಮುಖದಲ್ಲಿ ಮಧ್ಯೆ ಮಧ್ಯೆ ಸ್ಪಷ್ಟವಾಗುತ್ತಿದ್ದ ಒಂದು ವಕ್ರತೆಯು ಇತ್ತೀಚೆಗೆ ಕಾಣುತ್ತಲೇ ಇರಲಿಲ್ಲ. ಆಕೆಯ ವರ್ತನೆಯಲ್ಲಿ ಸೌಮ್ಯತೆ ತೋರಿಬರುತ್ತಿತ್ತು.

ಆಫೀಸಿನಲ್ಲಿ ಆ ಹಳೆಯ ಕಟ್ಟುನಿಟ್ಟಿನ ಸ್ವಭಾವವನ್ನು ಈಗ ಆಕೆ ತೋರಿಸುವುದಿಲ್ಲ. ಕೆಲಸದವರನ್ನೂ ಚಪ್ರಾಸಿಗಳನ್ನು ಬಯ್ಯುವುದಿಲ್ಲ. ನರ್ಸ್‌ಗಳಿಗೂ, ಸಿಸ್ಟರ್‌ಗಳಿಗೂ, ಅವರು ಕೇಳಿದ ದಿನಗಳ ರಜೆ ಕೊಡುತ್ತಾರೆ. ಗಂಡಸರನ್ನು ವಿನಾಕಾರಣ ದೂಷಿಸುವ ರೂಢಿಯನ್ನು ಹಾಗೇ ನಿಲ್ಲಿಸಿಬಿಟ್ಟಿದ್ದಾರೆ. ಹಾಸ್ಟೆಲ್‌ನಲ್ಲಿ ಹುಡುಗಿಯರನ್ನು ಹುಡುಕಿಕೊಂಡು ಬರುವ ಬಾಯ್ ಫ್ರೆಂಡ್‌ಗಳು ಹಾಗೆ ಬರುವುದರಲ್ಲಿ ಈಗ ಆಕೆಗೆ ಯಾವ ಆಕ್ಷೇಪಣೆಯೂ ಇಲ್ಲ. ಅವರಿಗಿಷ್ಟ ಬಂದ ಜೊತೆಗಾತಿಯರೊಂದಿಗೆ ಅವರು ಹೊರಕ್ಕೆ ಹೋಗಲೂಬಹುದು. ಆದರೆ ರಿಜಿಸ್ಟರ್‌ನಲ್ಲಿ ಬರೆದಿಡಬೇಕಷ್ಟೆ. ರಾತ್ರಿ ಹತ್ತುಗಂಟೆಗೆ ಮುಂಚೆಯೇ ಹಾಸ್ಟೆಲ್‌ಗೆ ವಾಪಸ್ ಬಂದುಬಿಡಬೇಕು. ಅಮಿತವಾದ ಆನಂದವನ್ನಾವುದನ್ನೂ ಅನುಭವಿಸಲು ಆಕೆ ಬಿಡುತ್ತಿರಲಿಲ್ಲ.

ಭಾನುವಾರದ ದಿವಸಗಳಲ್ಲಿ ಹಾಸ್ಟೆಲ್‌ನಲ್ಲಿನ ಹುಡುಗಿಯರು ಹುಡುಗರೊಂದಿಗೆ ಲಾನ್‌ನಲ್ಲಿ ಕುಳಿತು ಸರಸಸಲ್ಲಾಪ ಮಾಡುವ ದೃಶ್ಯವನ್ನು ಟೆರೆಸ್ಸಿನಲ್ಲಿ ನಿಂತು ಮೇಟ್ರನ್ ಹೆಲೆನ್ ಸಿಂಗ್ ಕುತೂಹಲ ಆಸಕ್ತಿಗಳಿಂದ ನೋಡುತ್ತಾ ನಿಲ್ಲುವರು. ಹಾಗಿರುವಾಗ ಒಂದು ದಿವಸ ಆಕೆ ಮೇರಿಯನ್ನು ಕೇಳಿದರು:

"ಮೇರಿ, ನಿನಗ್ಯಾರೂ ಜೊತೆಗಾರರಿಲ್ಲವೇ ?"

"ಇದಾರಲ್ಲಾ, ಮೇಟ್ರನ್."

"ಯಾರದು ?" ಕೌತುಕದಿಂದ ಆಕೆ ಕೇಳಿದರು.

"ಕುಞ್ಞಮ್ಮನ್ನೇ" ಒಂದು ಚಾಕೋಲೇಟ್ ತಿನ್ನುತ್ತಾ ಮೇರಿ ಹೇಳಿದಳು.

"ಛೆ !" ಏನೋ ಕೊಳಕನ್ನು ಕಂಡವರಂತೆ ಆಕೆ ಹೇಳಿದರು "ಆ ಕೆಟ್ಟ ಹೆಂಗಸೇ ? ಅವಳು ಯಾವ ರೀತಿಯಲ್ಲಿದ್ದರೂ ನನಗಿಷ್ಟವಿಲ್ಲ."

ಆದರೆ ಹೆಲೆನ್ ಸಿಂಗ್ ಮೇರಿಯ ಉತ್ತರವನ್ನು ನಿರೀಕ್ಷಿಸಿದ್ದ್ದೇ ಬೇರೆ ಅರ್ಥದಲ್ಲಿ. ಆಕೆ ಬಾಯ್ ಫ್ರೆಂಡ್‌ನ ವಿಷಯ ಕೇಳಿದ್ದರು.

ಡಾ. ರವೀಂದ್ರನಾಥ್ ಬಲು ಒಳ್ಳೆಯ ಮನುಷ್ಯ. ಆತನ ಫ್ರೆಂಡ್‌ಷಿಪ್ ಚೆನ್ನಾಗಿರುತ್ತೆ." ಯಾರೊಂದಿಗೂ ಅಲ್ಲವೆಂಬಂತೆ ಮೇಟ್ರನ್ ಹೇಳಿದರು.

ಮೇರಿ ಒಮ್ಮೆ ಹೂಂಗುಟ್ಟಿದಳಷ್ಟೆ.

ಅಂದಿನ ಪ್ರಸಂಗ ನಡೆದನಂತರ ಒಂದು ದಿನ ಪ್ರೊಫೆಸರ್ ತಿವಾರಿ ಹೆಲೆನ್ ಸಿಂಗ್‌ರನ್ನು ಹುಡುಕಿಕೊಂಡು ಹಾಸ್ಟೆಲ್‌ಗೆ ಬಂದನು. ಆದರೆ ಹೆಲೆನ್ ಸಿಂಗ್ ಬಾಗಿಲು ತೆರೆದೋ, ಆತನನ್ನು ಸ್ವೀಕರಿಸಿ ಕುಳ್ಳಿರಿಸಿಯೋ ಮಾತನಾಡಲಿಲ್ಲ. ತಮಗೆ ಆರೋಗ್ಯವಿಲ್ಲವೆಂದೂ, ಈಗ ನೋಡಲು ಸಾಧ್ಯವಿಲ್ಲವೆಂದೂ ಆಕೆ ತಿಳಿಸಿದರು. ನಿರಾಶನಾದ ತಿವಾರಿ ಮೋಟಾರ್ ಸೈಕಲ್ ಹತ್ತಿ ಶಬ್ದ ಕೋಲಾಹಲವನ್ನು ಮಾಡುತ್ತಾ ವಾಪಸ್ ಹೊರಟುಹೋದನು.

ಆತನೊಂದಿಗೆ ಪರಿಚಯವಾಗಿದ್ದು, ಪರಿಚಯದ ನಂತರ ರೂಪುಗೊಂಡ ಪ್ರೀತಿಯ ಬಂಧನ ಇವುಗಳು ಅಪಮಾನದಲ್ಲಿ ಕೊನೆಗೊಂಡಿದ್ದರಲ್ಲಿ ಹೆಲೆನ್ ಸಿಂಗ್‌ಗೆ ಅತಿಯಾದ ಸಂಕಟವಿತ್ತು. ಯಥಾರ್ಥವಾಗಿ ತಿವಾರಿಬಾಬುವನ್ನು ಕಂಡರೆ ಆಕೆಗೆ ಈಗಲೂ ಬಲು ಪ್ರೀತಿಯಿತ್ತು. ಆದರೆ ಅಂದಿನ ಸಂಭವದಲ್ಲಿ ಪೌರುಷ ತೋರದೆ ತಿವಾರಿ ಬಾಬು ಕಳವಳಪಟ್ಟು ನಿಂತುಬಿಟ್ಟಿದ್ದರಿಂದ ಆಕೆಗೆ ಆತನ ಮೇಲಿದ್ದ ಗೌರವ ಕಡಿಮೆಯಾಗಿ ಹೋಗಿತ್ತು. ಅಂದು ಮಿಸೆಸ್ ತಿವಾರಿಯ ಉರಿಯುತ್ತಿದ್ದ ಕ್ರೋಧದ ಮುಂದೆ ಆತನು ಕುಬ್ಜನಾಗಿ ಬಿಟ್ಟಿದ್ದನು. ಅಂದು ಒಬ್ಬ ಪುಟ್ಟ ಹುಡುಗನಂತೆ ಆತನಿಗೆ ಹೆಂಡತಿ ಹೇಳಿದ್ದು ಕೇಳಬೇಕಿರಲಿಲ್ಲ. ಆದರೆ ಅದಕ್ಕೆ ಬೇರೊಂದು ಭಾಗವೂ ಇತ್ತು. ತಿವಾರಿ ಬಾಬು ಅವಳನ್ನು ಎದುರಿಸಿ ನಿಂತಿದ್ದರೆ ವಾತಾವರಣ ಬಹಳವಾಗಿ ಹಾಳಾಗಿ ಹೋಗುತ್ತಿತ್ತು. ಆತನು ಆದ್ದರಿಂದಲೇ ಹಾಗೆ ವರ್ತಿಸಿದನೇ? ಆದರೂ ಅವಳ ಮುಖಕ್ಕೆ ಒಂದು ಬಿಗಿಯಬಹುದಿತ್ತು. ಒಬ್ಬ ಗಂಡಸೆಂದರೆ ಹಾಗೆಯೇ ಮಾಡಬೇಕು. ಬೇರೊಂದರ್ಥದಲ್ಲಿ ಇಬ್ಬರ ವರ್ತನೆಯೂ ತನ್ನನ್ನೇ ನಿಂದಿಸುವ ವಿಧದಲ್ಲಾಗಿತ್ತು. ಹೆಲೆನ್ ಸಿಂಗ್ ಹೀಗೆ ಬಗೆಬಗೆಯಾಗಿ ಚಿಂತಿಸಲು ಪ್ರಾರಂಭಿಸಿದರು.

ಜೀವನದಲ್ಲಿನ ಎರಡು ಅವಸ್ಥೆಗಳನ್ನು ತಾವು ಕಳೆದಾಗಿದೆ. ನಿರೀಕ್ಷೆಗೆ ದಾರಿಯಿಲ್ಲದ ಭವಿಷ್ಯವು ಮಾತ್ರ ಇನ್ನೂ ಉಳಿದಿದೆಯಷ್ಟೆ. ಇನ್ನು ಬೇರೆಯೊಬ್ಬ ಗಂಡಸಿನೊಂದಿಗೆ ತಮಗೆ ಬಂಧನವು ಈ ಜೀವನದಲ್ಲೇ ಬೇಡವೆಂದು ಆಕೆ ತೀರ್ಮಾನಿಸಿ ದೃಢ ಮಾಡಿಕೊಂಡಿದ್ದಾಗಿತ್ತು. ಆಕೆ ತಮ್ಮ ಕೋಪವನ್ನು ಅಡಗಿಸಿಕೊಂಡು ವರ್ಷಗಳನ್ನೇ ಕಳೆದಿದ್ದರು. ಆ ಸಮಯದಲ್ಲೇ ಗುಡ್ಡದ ಇಳಿಜಾರಿನಲ್ಲಿ ಚಿಮ್ಮಿದ ಒಂದು ಚಿಲುಮೆಯಂತೆ ತಿವಾರಿ ಬಾಬು ಹೆಲೆನ್ ಸಿಂಗ್‌ರ ಜೀವನದಲ್ಲಿ ಕಾಲಿಟ್ಟಿದ್ದನು.

ಹಾಸ್ಟೆಲ್‌ಗೆ ಮತ್ತೆ ತಮ್ಮನ್ನು ಕಾಣಲೆಂದು ಬಂದ ತಿವಾರಿ ಬಾಬುವನ್ನು ನಿರ್ದಾಕ್ಷಿಣ್ಯವಾಗಿ ಕಳುಹಿಸಿದ್ದರಿಂದ ಉಂಟಾದ ದುಃಖವು ಹೆಲೆನ್ ಸಿಂಗ್‌ರನ್ನು ಕಾಡುತ್ತಿತ್ತು. ಅನಂತರ ಆತನ ಒಂದು ಫೋನ್ ಕರೆಯನ್ನಾದರೂ ಹೆಲೆನ್ ಸಿಂಗ್ ನಿರೀಕ್ಷಿಸುತ್ತಿದ್ದರು. ಹಾಸ್ಟೆಲ್‌ಗೆ ಬರುವುದಕ್ಕಿಂತ ಮುಂಚೆ ತಿವಾರಿ ಮೂರು ನಾಲ್ಕು ಸಲ ಫೋನ್ ಮೂಲಕ ಸಂಪರ್ಕಿಸಲು ಶ್ರಮಿಸಿದ್ದನು. ಆದರೆ ಹೆಲೆನ್ ಸಿಂಗ್ ಅವನ ಕರೆ ಕೇಳಿಸಿಕೊಂಡಿರಲಿಲ್ಲ. ಒಂದೊಂದು ಸಲವೂ ಒಂದೊಂದು ಸುಳ್ಳನ್ನು ಹೇಳಿ ಆಕೆ ತಪ್ಪಿಸಿಕೊಂಡಿದ್ದರು.

ತಿವಾರಿ ಬಲು ಪ್ರೀತಿಯನ್ನು ನೀಡಬಲ್ಲ ಒಬ್ಬ ಪುರುಷನಾಗಿದ್ದನು. ಅಳೆದಷ್ಟೂ

ಮುಗಿಯದ ಪ್ರೀತಿ ಆತನ ಉಗ್ರಾಣದಲ್ಲಿತ್ತು. ಆ ಬಗೆಯ ಜನರಿಗೆ ಸಹಜವಾಗಿ ಸಾಮರ್ಥ್ಯವು ಕಡಿಮೆ ಇರುತ್ತದೆ. ಅವರು ದುರ್ಬಲರಾಗಿರುತ್ತಾರೆ.

ತಿವಾರಿ ಬಾಬುವನ್ನು ಕಂಡ ದಿನದಿಂದ ಆತನನ್ನು ಒಮ್ಮೆ ಮುಟ್ಟಲು ಹೆಲೆನ್ ಸಿಂಗ್ ಆಸೆಪಟ್ಟಿದ್ದರು. ಆತನ ನೋಟದಲ್ಲೇ ಏನೋ ಒಂದು ಮೋಡಿ ಮಾಡುವ ಶಕ್ತಿಯಿತ್ತು. ಆತನ ಶರೀರದಲ್ಲೆಲ್ಲಾ ಪ್ರೀತಿಯ ಮಂತ್ರವು ಹರಿಯುತ್ತಿರುವುದಾಗಿ ಹೆಲೆನ್ ಸಿಂಗ್‌ಗೆ ಅನ್ನಿಸಿತು. ಆದರೆ ಏನೂ ನಡೆದಿರಲಿಲ್ಲ. ಎಲ್ಲವೂ ಭಾವಿಯ ಅಂಚಿಗೆ ಬಂದು ನಿಂತ ಬಕೆಟ್ ಕಿತ್ತುಕೊಂಡು ನೀರಿಗೆ ಬೀಳುವಂತೆ ನಡೆದಿತ್ತು.

ಬಹಳ ದಿನಗಳವರೆಗೂ ತಿವಾರಿ ಬಾಬುವಿನ ಬಗ್ಗೆ ಯಾವುದೇ ವಿವರಗಳು ತಿಳಿಯದಿರಲು ಒಂದು ದಿನ ಹೆಲೆನ್ ಸಿಂಗ್ ಮೇರಿಯನ್ನು ಕುಞ್ಞಮ್ಮನನ್ನು ತನ್ನ ರೂಮಿಗೆ ಕರೆಸಿದರು. ರೂಢಿಯಲ್ಲಿಲ್ಲದ ಈ ಭೇಟಿಯ ಬಗ್ಗೆ ಕುಞ್ಞಮ್ಮ ಗಾಬರಿಗೊಂಡಳು. ಏನಾದರೂ ಅವಸರದ ಕೆಲಸವಿದ್ದರೂ ಸಹ ತಾನು ಹೆಲೆನ್‌ಸಿಂಗ್‌ರ ಕೊಠಡಿಯನ್ನು ಪ್ರವೇಶಿಸುವುದು ಆಕೆಗೆ ಇಷ್ಟವಾಗಿರಲಿಲ್ಲ.

ಹೆಲೆನ್ ಸಿಂಗ್ ಅವರಿಬ್ಬರಿಗೂ ಚಾಕೋಲೇಟ್ ಅನ್ನೂ, ಬೀಜ ತೆಗೆದು ಹಾಕಿದ ಖರ್ಜೂರದಲ್ಲಿ ಕಂಡೆನ್ಸ್ಡ್ ಮಿಲ್ಕ್ ತುಂಬಿಸಿದ್ದನ್ನೂ ಕುಡಿಯಲು ಫಲೂಡವನ್ನು ಕೊಟ್ಟರು. ಎಲ್ಲವೂ ಸಿಹಿ ತಿಂಡಿಗಳಾಗಿದ್ದುವು. ಸ್ವಲ್ಪ ಖಾರದ ವಸ್ತುವಿಗೋಸ್ಕರ ಮೇರಿಯ ನಾಲಿಗೆ ಕಾತರಿಸಿತು.

"ಕುಞ್ಞಮ್ಮ ನೀನು ತೆಳ್ಳಗಾಗುತ್ತಿದ್ದೀ ?" ಇದ್ದಕ್ಕಿದಂತೆ ಹೆಲೆನ್ ಸಿಂಗ್ ಕೇಳಿದರು. "ನಿನ್ನ ದೇಹವು ತೆಳ್ಳಗಾಗುತ್ತಲೂ ಹೊಟ್ಟೆಯು ದಪ್ಪಗಾಗುತ್ತಲೂ ಇದೆಯಲ್ಲಾ ?"

ಕುಞ್ಞಮ್ಮ ತನ್ನ ಹೊಟ್ಟೆಯನ್ನು ಅದುಮಿ ಹಿಡಿಯಲು ಶ್ರಮಿಸಿದಳು.

ಹೆಲೆನ್ ಸಿಂಗ್ ಗೊಳ್ಳೆಂದು ನಕ್ಕರು. ಆಕೆಯ ತೋಳೂ ಎದೆಯೂ ಕುಣಿದಾಡಿದುವು. ಆಕೆ ಹೇಳಿದರು.

"ಮೇರಿಯದೇ ಐಡಿಯಲ್ ಸ್ಲಿಂ ಬ್ಯೂಟಿ."

ಅನಂತರ ಹೆಲೆನ್ ಸಿಂಗ್ ಅರ್ಥವಿಲ್ಲದ ಅನೇಕ ಸುದ್ದಿಗಳನ್ನು ಹೇಳ ತೊಡಗಿದರು. ಸಿನೆಮಾ ಥಿಯೇಟರ್‌ನಲ್ಲಿ ಹಿಂದೆ ಕುಳಿತಿರುವ ಗಂಡಸರು ಆಕೆಯ ಹಿಂಭಾಗವನ್ನು ಚಿಗುಟಿದ್ದು, ಮೀನಿನ ಮಾರುಕಟ್ಟೆಯಲ್ಲಿ ಗಡ್ಡ ಬಿಟ್ಟಿದ್ದ ಯುವಕರು ಆಕೆಯನ್ನು ಕಂಡಾಗ ಕಣ್ಣು ಮಿಟುಕಿಸಿದ್ದು, ಮೊದಲನೆಯ ಹೆಂಡತಿಯನ್ನು ಕೊಲೆ ಮಾಡಿ ಎರಡನೆಯ ಮದುವೆ ಮಾಡಿಕೊಂಡಿದ್ದ ಒಬ್ಬ ಪರಿಚಿತನು ಅರೆಸ್ಟ್ ಆಗಿದ್ದು, ಹೊಟ್ಟೆ ನೋವಿನಿಂದಾಗಿ ಬಂದಿದ್ದ ಹದಿನೆಂಟು ವಯಸ್ಸಿನ ಅವಿವಾಹಿತೆಯಾದ ಒಬ್ಬ ಹುಡುಗಿಯ ನಾಭಿ ಪ್ರದೇಶದಿಂದ ಮಿಸ್ಟರ್ ಗೋವರ್ಧನ್ ಆಚಾರಿ ಜೋಳದ ತೆನೆಯನ್ನು ಆಪರೇಷನ್ ಮಾಡಿ ತೆಗೆದದ್ದು, ಕೋಪ ಬಂದಾಗ ತನ್ನ ಹಾಗೂ ಇತರರ ತಲೆಗೂದಲನ್ನು ಹಿಡಿದು ತಿನ್ನುವ ಒಬ್ಬ ಮನೋರೋಗಿಯ ಬಗ್ಗೆ, ಯಮುನಾ ನದೀ ತೀರದಲ್ಲಿ ಒಬ್ಬರನ್ನೊಬ್ಬರು ತಬ್ಬಿ ಹಿಡಿದುಕೊಂಡಿದ್ದ ಒಬ್ಬ ಸ್ತ್ರೀ ಮತ್ತು ಪುರುಷನೊಬ್ಬನ ಶವಗಳನ್ನು ಕಂಡದ್ದು, ದನದ ಹಿಂಡಿಗೆ ಬೆಲೆ ಜಾಸ್ತಿಯಾಗಿರುವುದು, ತಲೆಬಾಚುವಾಗ ತಲೆಯಲ್ಲಿರುವ ನರೆತ ಕೂದಲುಗಳು

ಮಾಯವಾಗುವಂತೆ ಮಾಡುವ ಚೈನೀಸ್ ಬಾಚಣಿಗೆಯ ಬಗ್ಗೆ, ಉತ್ತರ ಪ್ರದೇಶದ ಜಲ ಪ್ರವಾಹದಲ್ಲಿ ನಿರ್ಗತಿಕರಾದವರಿಗೆ ಹೆಲೆನ್ ಸಿಂಗ್ ಹಳೆಯ ಬಟ್ಟೆಗಳನ್ನು ಕೊಟ್ಟು ಕಳುಹಿಸಿದ್ದು, ಮೀನಿನ ಪಲ್ಯವನ್ನು ಒಂದು ತಿಂಗಳವರೆಗೂ ಕೆಡದಂತೆ ಜೋಪಾನವಾಗಿಡುವ ಹೊಸ ಪಾಚಕಕಲೆಯ ಬಗ್ಗೆ ಮಹಾತ್ಮಾಗಾಂಧಿಯ ಮಕ್ಕಳು ಗುಜರಾತ್‌ನಲ್ಲಿ ಬ್ಯಾಂಕ್‌ಗಳನ್ನು ಪ್ರಾರಂಭಿಸಿದ್ದು, ಮಾಣಿಕ್ಯವೊಂದನ್ನು ಬಾಯಲ್ಲಿಟ್ಟುಕೊಂಡು ಆಕಾಶದ ಮೂಲಕ ಹಾರಿದ ಒಂದು ಸರ್ಪವನ್ನು ತಾವು ಹಾಸ್ಟೆಲ್‌ನ ಟೆರೆಸ್ಸಿನಲ್ಲಿ ಮಲಗಿರುವಾಗ ಒಂದು ಬೆಳದಿಂಗಳ ರಾತ್ರಿಯಲ್ಲಿ ಕಂಡದ್ದು, ಕಣ್ಣೀರಿನಿಂದ ಕಾರನ್ನು ಓಡಿಸಲು ಸಾಧ್ಯವೆಂದು ಅಮೆರಿಕನ್ ವಿಜ್ಞಾನಿಗಳು ಕಂಡುಹಿಡಿಯಲು ಪ್ರಯತ್ನಿಸುತ್ತಿರುವರೆಂಬ ಸುದ್ದಿ ಇವುಗಳೆಲ್ಲದರ ಬಗ್ಗೆ ಬಗೆಬಗೆಯಾಗಿ ವರ್ಣಿಸುತ್ತಾ ಹೆಲೆನ್ ಸಿಂಗ್ ಬಹಳವಾಗಿ ಮಾತನಾಡಿದರು.

ಸ್ವಲ್ಪ ಹೊತ್ತಿನ ಮೌನದ ನಂತರ ಇದ್ದಕ್ಕಿದ್ದಂತೆ ಏನನ್ನೋ ಜ್ಞಾಪಿಸಿಕೊಂಡಂತೆ ಆಕೆ ಕೇಳಿದರು.

"ಮಿಸೆಸ್ ತಿವಾರಿಯನ್ನು ಇತ್ತೀಚೆಗೆ ಹಾಸ್ಟೆಲ್‌ನಲ್ಲೇನಾದರೂ ನೋಡಿದ್ದೀರಾ ?"

"ಇಲ್ಲ" ಮೇರಿ ಹೇಳಿದಳು.

"ಆಕೆಯ ತಾಯಿಗೆ ಹೇಗಿದೆ ? ಬದುಕಿದ್ದಾರೆಯೇ ?"

"ಏನೇನೂ ಗೊತ್ತಿಲ್ಲ ಮೇಡಂ" ಮೇರಿ ಹೇಳಿದಳು.

ತಾವು ಕೇಳಬೇಕೆಂದು ಯೋಚಿಸಿದ್ದ ವಿಷಯವನ್ನು ಕೇಳಲು ಹೆಲೆನ್ ಸಿಂಗ್‌ರಿಂದ ಸಾಧ್ಯವಾಗಲಿಲ್ಲ.

ಆ ವೇಳೆಗೆ ಸುಮಾರು ಹೊತ್ತಾಗಿತ್ತು.

ಹೆಲೆನ್ ಸಿಂಗ್‌ಗೆ ಗುಡ್‌ನೈಟ್ ಹೇಳಿ ಮೇರಿಯೂ ಕುಞ್ಞಮ್ಮಳೂ ಕೋಣೆಯಿಂದ ಹೊರಕ್ಕೆ ಹೋದರು.

ಅವರು ಹೋದಾದ ಮೇಲೆ ಹೆಲೆನ್ ಸಿಂಗ್ ಟೆರೇಸ್ಸಿನ ಮೇಲೆ ಹತ್ತಿ ಹೋದರು. ಅಲ್ಲಿ ತಂಗಾಳಿ ಬೀಸುತ್ತಿತ್ತು. ಬೆಳ್ಳಗಿದ್ದ ಆಕಾಶದಲ್ಲಿ ಕಾರ್ಮೋಡಗಳು ಸರಿದು ಹೋಗುತ್ತಿದ್ದವು.

ಟೆರೇಸ್ಸಿನಿಂದ ನೋಡಿದರೆ ಆಸ್ಪತ್ರೆಯ ನಗರದ ಒಂದು ವಿಹಂಗಮ ನೋಟ ಸಿಗುತ್ತಿತ್ತು. ನರ್ಸ್‌ಗಳ ಹಾಸ್ಟೆಲನ್ನು ಬಲು ಎತ್ತರದ ಸ್ಥಳದಲ್ಲಿ ಕಟ್ಟಲಾಗಿತ್ತು. ಟೆರೆಸ್‌ನ ಮೇಲೆಲ್ಲಾ ನಡೆದಾಡುತ್ತಾ ಹೆಲೆನ್ ಸಿಂಗ್ ಆಸ್ಪತ್ರೆ ನಗರವನ್ನು ನೋಡುತ್ತಿದ್ದರು. ಸಿನೆಮಾ ಥಿಯೇಟರ್‌ನಿಂದ ನವಿರಾದ ಗಾನವು ಹರಿದು ಬರುತ್ತಿತ್ತು. ವಾರ್ಡುಗಳ ದೀಪಗಳು ಬಹುಮಟ್ಟಿಗೆ ಆರಿದ್ದವು. ಕಾರ್ಡಿಯಾಲಜಿಯಲ್ಲಿ ಮಾತ್ರ ಬೆಳಕಿನ ಒಂದು ಪ್ರವಾಹವು ಕಾಣುತ್ತಿತ್ತು. ಇನ್‌ಟೆನ್ಸಿವ್ ಕೇರ್ ಯೂನಿಟ್‌ನಲ್ಲಿ ಸಾವು ಸಮೀಪಿಸುತ್ತಿರುವ ಸ್ಥಿತಿಯಲ್ಲಿ ಯಾರೋ ಮಲಗಿರಬೇಕು.

ಬಹಳ ಹೊತ್ತು ಹೆಲೆನ್ ಸಿಂಗ್ ಟೆರೇಸ್ಸಿನಲ್ಲೇ ನಡೆಯುತ್ತಿದ್ದರು. ಕಳೆದುಹೋದ ಕಾಲವನ್ನು, ವರ್ತಮಾನಕಾಲವನ್ನು ಆಕೆ ಮನಸ್ಸಿನಲ್ಲೇ ಹೋಲಿಸಿ ನೋಡಿಕೊಂಡರು. ಅದರಲ್ಲಿ ಎಷ್ಟೋ ಕಥಾಪಾತ್ರಗಳು ಜನಿಸಿದ್ದವು.

ಬಹುಹೊತ್ತಾದ ಮೇಲೆ ಹೆಲೆನ್ ಸಿಂಗ್ ಕಬ್ಬಿಣದ ಏಣಿಯನ್ನಿಳಿದು ಬಂದು

ವರಾಂಡವನ್ನು ದಾಟಿ ತಮ್ಮ ಕೊಠಡಿಯನ್ನು ಪ್ರವೇಶಿಸಿದರು. ಹಾಸ್ಟೆಲ್ ಶಾಂತವಾಗಿದೆ. ಎಲ್ಲರೂ ತಮ್ಮ ತಮ್ಮ ಕೋಣೆಗಳಲ್ಲಿದ್ದರು. ಬಹುಮಟ್ಟಿಗೆ ಎಲ್ಲರೂ ನಿದ್ದೆ ಮಾಡಿರಬೇಕೆಂದು ತೋರಿತು.

ಹೊರಗೆ ಮತ್ತೆ ಗಾಳಿ ಬೀಸಿತು. ಸಣ್ಣನೆ ಮಳೆ ಬರತೊಡಗಿತ್ತು. ಯಾವಾಗ ಅವರಿಗೆ ನಿದ್ದೆ ಹತ್ತಿದ್ದೆಂದು ನೆನಪಿಲ್ಲ. ನಿದ್ದೆ ಬರುವವರೆಗೂ ಟೆರೆಸ್ಸಿನಲ್ಲಿ ಮಳೆ ಹನಿಗಳು ಬೀಳುವುದನ್ನು ಹೆಲೆನ್ ಸಿಂಗ್ ಕೇಳುತ್ತಲಿದ್ದರು.

ಇದ್ದಕ್ಕಿದ್ದಂತೆ ಹೆಲೆನ್ ಸಿಂಗ್‌ಗೆ ಮೋಟಾರ್ ಬೈಕ್‌ನ ಸದ್ದು ಕೇಳಿತು. ಬೈಕ್ ಹಾಸ್ಟೆಲ್‌ನ ಗೇಟ್ ಬಳಿ ಬಂದು ನಿಂತಿತು. ಒಂದೆರಡು ಸಲ ರೈಸ್ ಆದ ನಂತರ ಎಂಜಿನ್ ನಿಶ್ಶಬ್ದವಾಯಿತು. ಒಂದೇ ಎರಡೋ ಸಲ ಎಂಜಿನ್ ಬುಸುಗುಟ್ಟಿದ್ದನ್ನು ಆಕೆ ಮತ್ತೆ ಕೇಳಿಸಿಕೊಂಡರು.

ಕಿವಿಗೊಟ್ಟು ಕೇಳಿದಾಗ ಬಾಗಿಲನ್ನು ಯಾರೋ ತಟ್ಟಿದ ಶಬ್ದ ಕೇಳಿಸಿತು. ಹೆಲೆನ್ ಸಿಂಗ್ ಎದ್ದು ಲೈಟ್ ಹಾಕಿದರು. ಒಂದು ಗಂಟೆಯಾಗಿತ್ತು. ಈ ಅರ್ಧರಾತ್ರಿಯಲ್ಲಿ ಯಾರು ಬಂದಿರಬಹುದು ?

ನೈಟ್ ಗೌನ್‌ನ ಬಟನ್ ಹಾಕಿಕೊಂಡು ತಲೆಗೂದಲನ್ನು ಬಾಚಿ ಸರಿ ಮಾಡಿಕೊಂಡು ಮುಖವನ್ನು ಒರೆಸಿಕೊಂಡು ಆಕೆ ಬಾಗಿಲು ತೆರೆದರು. ಕೊಠಡಿಯಿಂದ ಹೊರಕ್ಕೆ ಸಾಗುತ್ತಿದ್ದ ಬೆಳಕಿನಲ್ಲಿ ಒಂದು ಸವಾರಿಯ ಕುದುರೆಯಂತೆ ತಿವಾರಿ ಬಾಗಿಲಲ್ಲಿ ನಿಂತಿದ್ದನು.

"ನನ್ನನ್ನು ಕ್ಷಮಿಸಬೇಕು. ಬೇರೆ ಯಾವ ದಾರಿಯೂ ಇಲ್ಲದ್ದರಿಂದ ನಾನು ಈ ಅರ್ಧರಾತ್ರಿಯಲ್ಲಿ ಬಂದೆ" ತಿವಾರಿ ತನ್ನ ತಲೆಯಿಂದ ನೀರನ್ನು ಕೊಡವುತ್ತಾ ಹೇಳಿದನು.

ಸಂತೋಷವೋ, ಅಶಂಕೆಯೋ, ಸಂಕಟವೋ ಹೆಲೆನ್ ಸಿಂಗ್‌ರಲ್ಲಿ ಏನು ಉಂಟಾಯಿತೆಂದು ಹೇಳಲಾಗುವುದಿಲ್ಲ. ಆಕೆ ಹೊರಕ್ಕೆ ನೋಡಿದರು. ಇಲ್ಲ. ಯಾರೂ ಎದ್ದಿಲ್ಲ.

"ಬನ್ನಿ, ಒಳಕ್ಕೆ ಬನ್ನಿ" ಹೆಲೆನ್ ಸಿಂಗ್ ಹಾರ್ದಿಕವಾಗಿ ಸ್ವಾಗತ ಬಯಸಿದರು.

"ಇಲ್ಲ, ನಾನು ಒಳಬರುವುದಿಲ್ಲ. ನನಗೆ ಸ್ವಲ್ಪವಾದರೂ ಸಮಯವಿಲ್ಲ. ಬಹಳ ತುರ್ತಾದ ಒಂದು ವಿಷಯ ಹೇಳಲೆಂದು ಬಂದೆ ಅಷ್ಟೆ."

"ತಿವಾರಿ ಬಾಬು, ತಾವು ಒಂದು ನಿಮಿಷ ಒಳಕ್ಕೆ ಬಂದು ಕುಳಿತುಕೊಳ್ಳಿ. ಈ ಅರ್ಧರಾತ್ರಿಯಲ್ಲಿ ನಾವು ಹೀಗೆ ನಿಲ್ಲುವುದು ಸರಿಯಲ್ಲ." ಹೊರಕ್ಕೆ ನೋಡುತ್ತಾ ಹೆಲೆನ್ ಸಿಂಗ್ ಹೇಳಿದರು.

"ಅಯ್ಯೋ ನನಗೆ ಸಮಯವಿಲ್ಲ. ಬಹಳ ಅತ್ಯವಶ್ಯಕವಾದ ಒಂದು ವಿಷಯವನ್ನು ಹೇಳಿ ನಾನು ಬೇಗನೇ ಹೋಗಬೇಕು. ಮತ್ತೆ, ನನಗೆ" ತಿವಾರಿ ಬಾಬುವಿಗೆ ತನ್ನ ಮಾತನ್ನು ಪೂರ್ತಿ ಮಾಡಲು ಹೆಲೆನ್ ಸಿಂಗ್ ಬಿಡಲಿಲ್ಲ. ಆಕೆ ಆತನ ಕೈಹಿಡಿದು ಒಳಕ್ಕೆಳೆದರು. ಮನಸ್ಸಿಲ್ಲದ ಮನಸ್ಸಿನಿಂದ ತಿವಾರಿ ಬಾಬು ಒಳಕ್ಕೆ ಬಂದನು. ಆದರೂ ಆತನ ನಡೆಯಲ್ಲಿ ಅವಸರವಿತ್ತು.

"ಕುಳಿತುಕೊಳ್ಳಿ" ಹೆಲೆನ್ ಸಿಂಗ್ ನಮ್ರತೆಯಿಂದ ಮುಗುಳ್ನಗುತ್ತಾ ಹೇಳಿದರು.

"ಒಂದು ನಿಮಿಷ ಕುಳಿತುಕೊಳ್ಳಿ ತಾವು ಕುಳಿತು ಆ ವಿಷಯ ಹೇಳಿ. ಒಂದು ವಿಷಯವಲ್ಲ, ಸಾವಿರ ವಿಷಯಗಳನ್ನು ಬೇಕಾದರೂ ಹೇಳಬಹುದು."

ತಿವಾರಿ ಬಾಬು ಸೋಫಾದಲ್ಲಿ ಕುಳಿತನು.

"ನಾನು ಈ ಊರಿನಿಂದ ಎಂದೆಂದಿಗೂ ಎನ್ನುವಂತೆ ಹೋಗುತ್ತಿದ್ದೇನೆ. ತಿವಾರಿ ಬಾಬು ತಕ್ಷಣವೇ ಹೇಳಿದನು. ನನಗೆ ಟ್ರಾನ್ಸ್‌ಫರ್ ಆಗಿದೆ. ಟೆಲಿಗ್ರಾಫಿಕ್ ಟ್ರಾನ್ಸ್‌ಫರ್."

"ಅಯ್ಯೋ....." ಹೆಲೆನ್‌ಸಿಂಗ್‌ರ ಬಾಯಿಯಿಂದ ಆ ಉದ್ಗಾರ ಅಪ್ರಯತ್ನವಾಗಿ ಹೊರಟಿತ್ತು. ಆದರೆ ಮನಸ್ಸನ್ನು ನಿಯಂತ್ರಿಸಿಕೊಂಡು ಆಕೆ ಹೇಳಿದರು.

"ಅದಕ್ಕೇನು ? ಕುಳಿತುಕೊಳ್ಳಿ. ನಾವು ಎಲ್ಲವನ್ನೂ ನಿಧಾನವಾಗಿ ಮಾತನಾಡೋಣ. ನಾನೀಗ ಸ್ವಲ್ಪ ಮುಖವನ್ನು ತೊಳೆದುಕೊಂಡು ಬೇಗ ಬಂದುಬಿಡುತ್ತೇನೆ."

ಹೆಲೆನ್ ಸಿಂಗ್ ಬಾತ್ ರೂಮಿಗೆ ಹೋದರು.

ಬಲು ನವಿರಾದ ಪರಿಮಳವನ್ನು ಬೀರುತ್ತಾ ಹೆಲೆನ್ ಸಿಂಗ್ ಹಿಂದಿರುಗಿದಳು. ತಿವಾರಿಗೆದುರಾಗಿ ಕುಳಿತರು. ಅವರನ್ನು ಆಪಾದಮಸ್ತಕ ದಿಟ್ಟಿಸುತ್ತಾ ಹೆಲೆನ್ ಸಿಂಗ್ ಹೇಳಿದರು.

"ಷೂಸ್‌ನಲ್ಲಿ ಎಷ್ಟೊಂದು ಕೊಚ್ಚೆ ಅಂಟಿಕೊಂಡಿದೆ, ಅದನ್ನು ಬಿಚ್ಚಿಡಿ. ಕೋಟೂ ನೆನೆದು ಬಿಟ್ಟಿದೆ. ಅದನ್ನು ಬಿಚ್ಚಿ ಹ್ಯಾಂಗರ್‌ನಲ್ಲಿ ಹಾಕಿಡಿ.

"ನನಗೆ ಏನೇನೂ ಟೈಮಿಲ್ಲ. ಬೇಗ ಹೋಗಬೇಕು. ನಾಳೆಯೇ ಹೊರಡಬೇಕು. ಹೊಸ ಸ್ಥಳದಲ್ಲಿ ನಾಡಿದ್ದು ಜಾಯಿನ್ ಆಗಬೇಕು." ತಿವಾರಿ ಅಸ್ವಸ್ಥನಾಗಿ ಹೇಳಿದನು.

"ಏನೇ ಆದರೂ ಬೆಳಗಾದ ನಂತರವಲ್ಲವೇ ನೀವು ಹೋಗುವುದು. ಸ್ವಲ್ಪ ಹೊತ್ತು ಕುಳಿತುಕೊಳ್ಳಿ" ಹೆಲೆನ್ ಸಿಂಗ್ ಹೇಳಿದರು.

ತಿವಾರಿ ಷೂಸ್ ಬಿಚ್ಚಿ ಮೂಲೆಯಲ್ಲಿ ತೆಗೆದುಕೊಂಡು ಹೋಗಿ ಇಟ್ಟನು. ಕೋಟನ್ನು ಬಿಚ್ಚಿ ಹ್ಯಾಂಗರ್‌ನಲ್ಲಿ ಹಾಕಿದನು.

"ಅದೇನಿದು ? ಇದ್ದಕ್ಕಿದ್ದ ಹಾಗೇ ಟ್ರಾನ್ಸ್‌ಫರ್ ಆಯಿತು ?" ಹೆಲೆನ್ ಸಿಂಗ್ ಕೇಳಿದರು.

"ನನಗೆ ಈ ಊರು ಬಿಡಬೇಕೆಂದೆನ್ನಿಸಿತು. ಮನಃಪೂರ್ವಕವಾಗಿ ನಾನೇ ಕೆಲ ತೊಂದರೆಗಳನ್ನುಂಟು ಮಾಡಿಕೊಂಡೆ."

"ಅದು ಬೇಡವಾಗಿತ್ತು, ತಿವಾರಿ ಬಾಬು" ಸಂಕೋಚದಿಂದ ಹೆಲೆನ್ ಸಿಂಗ್ ಹೇಳಿದರು. "ನಿಮಗೆ ಇಲ್ಲೇ ಚೆನ್ನಾಗಿತ್ತು."

ತಿವಾರಿ ಏನೂ ಹೇಳಲಿಲ್ಲ. ಆತನ ಆತುರವು ಏನೇ ಆದರೂ ಈಗ ಮಾಯವೇ ಆಗಿತ್ತು. ಜೋರಾಗಿ ಉಸಿರಾಡುತ್ತಿದ್ದುದೂ ಈಗ ಮಂದಗತಿಯಲ್ಲಾಗಿತ್ತು.

"ನನ್ನನ್ನು ಕಂಡರೆ ತಿರಸ್ಕಾರವೇ ?" ಹೆಲೆನ್ ಸಿಂಗ್ ಕೇಳಿದರು.

"ನಿಮ್ಮನ್ನು ಕಂಡರೇನೇ ? ನನಗೆ ತಿರಸ್ಕಾರವೇ ? ಅದು ಈ ಜನ್ಮದಲ್ಲುಂಟಾಗುವುದಿಲ್ಲ. ನನ್ನನ್ನು ಮತ್ತೆ ಕಾಣುವುದು ನಿಮಗಿಷ್ಟವಿಲ್ಲವೆಂದು ಅರ್ಥವಾಯಿತು. ಆದುದರಿಂದ ನನಗೆ ಈ ಊರು ಬಿಟ್ಟು ಹೋಗೋಣವೆಂದೆನ್ನಿಸಿತು."

"ಕ್ಷಮಿಸಿ ತಿವಾರಿ ಬಾಬು. ಎಲ್ಲಾ ಹಾಗೆ ನಡೆದುಬಿಟ್ಟಿತು." ಕ್ಷಮಾಪಣೆಯೊಂದಿಗೆ ಹೆಲೆನ್ ಸಿಂಗ್ ಹೇಳಿದರು. ಅನಂತರ ಆಕೆ ಮತ್ತೆ ಹೇಳಿದರು: "ನಾವು ಮತ್ತೆ ಒಂದಾಗಬಾರದೇಕೆ ?"

ತಿವಾರಿ ಮಾತೇ ಆಡಲಿಲ್ಲ.

"ಹೇಳಿ, ತಿವಾರಿ ಬಾಬು, ನಾವು ನಮ್ಮ ಪ್ರೀತಿಯ ಬಂಧನವನ್ನು ಹಳೆಯದರ ಹಾಗೆ ಮುಂದುವರೆಸಬಾರದೇಕೆ ? ನಿಮಗೆ ಇದರಲ್ಲಿ ಏನಾದರೂ ಆಕ್ಷೇಪಣೆ ಯಿದೆಯೇ ?"

"ಇಲ್ಲ, ನನಗೆ ಯಾವ ಆಕ್ಷೇಪಣೆಯೂ ಇಲ್ಲ.... ಆದರೆ ನಾನು ಹೋಗುತ್ತಿದ್ದೇನಲ್ಲಾ ?" ಸ್ವಲ್ಪ ಸಂಕಟದಿಂದ ತಿವಾರಿ ಹೇಳಿದನು.

"ಅದರಲ್ಲೇನು ಪರವಾಗಿಲ್ಲ. ಅದಕ್ಕೆ ನಿವಾರಣೋಪಾಯವನ್ನು ಕಂಡು ಹಿಡಿಯೋಣ."

ಸ್ವಲ್ಪ ಹೊತ್ತಿನ ಮೌನದ ನಂತರ ಹೆಲೆನ್ ಸಿಂಗ್ ಏಳುತ್ತಾ ಹೇಳಿದರು.

"ನಾನು ಸ್ವಲ್ಪ ಟೀ ಮಾಡುತ್ತೇನೆ. ಇನ್ನೇನೇ ಆದರೂ ನೀವು ಬೆಳಿಗ್ಗೆದ್ದು ಹೋದರೆ ಸಾಕು."

ಹೆಲೆನ್ ಸಿಂಗ್ ಅಡಿಗೆ ಕೋಣೆಗೆ ಹೋದರು.

ಹಳೆಯ ಒಂದು ಪ್ರಣಯ ಗೀತೆಯನ್ನು ಗುಂಯ್ ಗುಟ್ಟುತ್ತಾ ಆಕೆ ಟೀಯನ್ನು ಮಾಡಲು ಪ್ರಾರಂಭಿಸಿದರು.

ಟೀ ಕುಡಿಯುತ್ತಿರುವಾಗ ಹೆಲೆನ್ ಕೇಳಿದರು.

"ಆಗ, ನಾವು ಮತ್ತೆ ಪ್ರೀತಿಸಲು ಪ್ರಾರಂಭಿಸುತ್ತೇವೆ ಅಲ್ಲವೇ ?"

"ಖಂಡಿತವಾಗಿಯೂ" ಬಿಸಿಯಾದ ಟೀಯನ್ನು ಕುಡಿಯುತ್ತಾ ತಿವಾರಿ ಬಾಬು ಹೇಳಿದನು.

ಹೆಲೆನ್ ಸಿಂಗ್ ಸ್ವಲ್ಪ ಹೊತ್ತು ಏನನ್ನೊ ಯೋಚಿಸಿದರು. ಅನಂತರ ತಮ್ಮದೇ ಆದ ವಾಗ್ಧಾಟಿಯಲ್ಲಿ ಆಕೆ ಮಾತನಾಡತೊಡಗಿದರು.

"ತಿವಾರಿ ಬಾಬು, ನಿಮ್ಮನ್ನು ಭೇಟಿಯಾಗಿದ್ದೇ ನನಗೆ ಕಷ್ಟಕ್ಕಿಟ್ಟುಕೊಂಡಿತು. ಜೀವನದಲ್ಲಿ ಪುರುಷರ ಲೋಕವೆಂಬುದನ್ನೇ ನಾನು ಸಂಪೂರ್ಣವಾಗಿ ಮರೆತು ಹೋಗಿದ್ದೆ. ಆ ಲೋಕವನ್ನು ನಾನು ಶಪಿಸಿದ್ದೆ. ಆಗ ನೀವು ನನ್ನ ಬಾಳಲ್ಲಿ ಇಣುಕಿ ನೋಡಿ ಪ್ರವೇಶಿಸಿದಿರಿ. ಮತ್ತೆ ನನ್ನ ಬಾಳಿನ ಹಣತೆ ಬೆಳಗತೊಡಗಿತು. ನನಗೆ ಏನೋ ಕೆಲ ನಿರೀಕ್ಷೆಗಳುಂಟಾದವು. ತಮ್ಮ ಪರಿಚಯವಾದಂದಿನಿಂದ ನನ್ನ ಸ್ವಭಾವದಲ್ಲೇ ಬದಲಾವಣೆಗಳುಂಟಾದವು. ಒಬ್ಬ ಪುರುಷನೊಂದಿಗೆ ನನ್ನ ಬಾಳನ್ನು ಹಂಚಿಕೊಳ್ಳಬೇಕೆಂಬ ಇಚ್ಛೆ ನನಗೆ ಉಂಟಾಗಿದೆ." ಹೆಲೆನ್ ಸಿಂಗ್ ಮಾತನ್ನು ನಿಲ್ಲಿಸಿದರು. ಆಕೆಗೆ ದುಃಖ ಉಕ್ಕಿ ಬಂದು ಬಿಕ್ಕತೊಡಗಿದರು.

"ಅದಕ್ಕಿನ್ನೂ ಸಮಯವಿದೆಯಲ್ಲಾ ?" ತಿವಾರಿ ಹೇಳಿದರು.

"ಆದರೆ ಜೊತೆಗಾರನೆಲ್ಲಿ ?" ಗದ್ಗದಳಾಗಿ ಹೆಲೆನ್ ಸಿಂಗ್ ಕೇಳಿದರು.

"ಇದೋ, ಇಲ್ಲಿ" ತನ್ನ ಎದೆಯ ಮೇಲೆ ಕೈ ಇಟ್ಟುಕೊಂಡು ತಿವಾರಿ ಹೇಳಿದನು.

ಏನೋ ಯೋಚಿಸಿದಂತೆ ಹೆಲೆನ್ ಹೇಳಿದರು.

"ಇಬ್ಬರು ಸ್ತ್ರೀಯರನ್ನಿಟ್ಟುಕೊಂಡು ಹೇಗೆ ಗೇಮ್ ಆರಂಭಿಸುತ್ತೀರಿ ? ಆಕೆ ನಿಮ್ಮ ಜೀವನವನ್ನು ತಾರುಮಾರು ಮಾಡುತ್ತಾರಲ್ಲವೇ ?"

ತಿವಾರಿ ಘೊಳ್ಳೆಂದು ನಕ್ಕನು. ಒಬ್ಬ ಹುಚ್ಚನಂತೆ ಗಹಗಹಿಸಿ ನಕ್ಕನು.

ವಿಸ್ಮಯದಿಂದ ಹೆಲೆನ್ ಸಿಂಗ್ ಕೇಳಿದರು.

"ಅಲ್ಲ, ನಿಮಗೇನಾಯಿತು ?"

"ನಾವು ಡೈವೋರ್ಸ್ ಮಾಡಿಕೊಂಡಾಯಿತು. ಎರಡು ದಿನಗಳ ಹಿಂದೆ ಅದು ನಡೆಯಿತು. ಕೋರ್ಟಿನಲ್ಲಿ ಡೈವೋರ್ಸ್ ತೆಗೆದುಕೊಂಡೆವು." ತಿವಾರಿ ಹಗೆಯಿಂದೆಂಬಂತೆ ಹೇಳಿದನು.

"ಈಗ ಅವಳಿಗೂ ನನಗೂ ಯಾವ ಸಂಬಂಧವೂ ಇಲ್ಲ."

"ಅಬ್ಬ ಎಂಥ ಶಕ್ತಿಶಾಲಿಗಳು ನೀವು ?" ಎಂದು ಕೂಗಿ ಹೇಳಲು ಹೆಲೆನ್ ಸಿಂಗ್‌ಗೆ ಅನ್ನಿಸಿತಾದರೂ ಸ್ವಲ್ಪ ಹೊತ್ತಿನವರೆಗೂ ಆಕೆಗೇನೂ ಮಾತನಾಡಲಾಗಲಿಲ್ಲ. ಕಣ್ಣೆವೆಯಿಕ್ಕದೆ ಆಕೆ ತಿವಾರಿಯನ್ನು ನೋಡುತ್ತಿದ್ದರು.

"ಹೆಲೆನ್, ನಿಮಗಿಷ್ಟವಿದ್ದರೆ, ನಾವು ಸಮಾಧಾನದಿಂದ ಜೀವಿಸೋಣ." ತಿವಾರಿ ಹೆಲೆನ್‌ನ ಕಣ್ಣುಗಳನ್ನು ದಿಟ್ಟಿಸಿ ನೋಡುತ್ತಾ ಹೇಳಿದನು.

"ಆದರೆ ನೀವು ಇಲ್ಲಿಂದ ಹೊರಟುಹೋಗುತ್ತೇನೆಂದು ಹೇಳಿದಿರಲ್ಲಾ ?"

"ಆದರೇನು, ಹೆಲೆನ್? ನೀವು ನನ್ನ ಜೊತೆ ಬರಬಹುದಲ್ಲ? ಮೊದಲ ಅಧ್ಯಾಯದಿಂದ ಜೀವನ ಮತ್ತೆ ಆರಂಭಿಸೋಣ."

"ನಾನು ಕೇಳುತ್ತಿರುವುದೆಲ್ಲಾ ನಿಜವೇ ?"

"ನಿಜ ನಿಜ.... ಖಂಡಿತ ನಿಜ" ಕೋರ್ಟಿನಲ್ಲಿ ಪ್ರಮಾಣ ಮಾಡುವಂತೆ ತಿವಾರಿ ಹೇಳಿದನು.

ಹೆಲೆನ್ ಸಿಂಗ್ ಏನನ್ನೋ ಯೋಚಿಸುತ್ತಿದ್ದರು. ನೆಲವನ್ನು ಇದಿರು ನೋಡುತ್ತಾ ಸೋಫಾದಲ್ಲಿನ ಕುಷನ್ ಅನ್ನು ಕಿವುಚುತ್ತಿದ್ದರು.

"ಏನು ಮಾಡಲಿ ಈಗ ?" ನಿಶ್ಶಬ್ದವನ್ನು ಭೇದಿಸಿಕೊಂಡು ತಿವಾರಿ ಕೇಳಿದರು. "ಮದುವೆಯಾದ ನಂತರ ಸಹಬಾಳ್ವೆ ನಡೆಸೋಣವೇ? ಅಥವಾ ಒಟ್ಟಿಗೆ ಜೀವಿಸುತ್ತಲೇ ಮದುವೆ ಮಾಡಿಕೊಂಡರೆ ಸಾಕೇ ?"

ಒಂದು ಬಾಳಿನ ಆರಂಭವನ್ನೂ ಅಂತ್ಯವನ್ನೂ ನಿಶ್ಚಯಿಸಿ ದೃಢಮಾಡಿದಂತೆ ಖಚಿತಧ್ವನಿಯಲ್ಲಿ ತಿವಾರಿ ಕೇಳಿದನು.

"ಹೇಗಾದರೂ ಆಕ್ಷೇಪಣೆ ಇಲ್ಲ" ಹೆಲೆನ್ ಸಿಂಗ್‌ರ ಬಾಯಲ್ಲಿ ಅಪ್ರಯತ್ನವಾಗಿ ಆ ಮಾತು ಹೊರಟಿತು.

"ಮದುವೆ ಹೇಗೆ ಮಾಡಿಕೊಳ್ಳೋಣ ?" ತಿವಾರಿ ಸ್ವಲ್ಪ ಯೋಚಿಸಿದ ನಂತರ ಕೇಳಿದನು. "ದೇವಸ್ಥಾನದಲ್ಲಿ ಕುಟುಂಬದ ಸದಸ್ಯರ ಸಮ್ಮುಖದಲ್ಲಿ ಮಾಡಿಕೊಳ್ಳೋಣವೇ? ರಿಜಿಸ್ಟ್ರಾರ್ ಆಫೀಸಿನಲ್ಲಿ ಸಾಕೇ? ಅಥವಾ ಒಂದು ಕೋಣೆಯಲ್ಲಿ ಸುಮ್ಮನೆ ಹಾರ ಬದಲಾಯಿಸಿಕೊಂಡರೆ ಸಾಕೋ ?"

"ನಿಮ್ಮಿಷ್ಟದಂತೆ, ತಿವಾರಿ ಬಾಬು"

ತಣ್ಣನೆಯ ಗಾಳಿ ಹೊರಗೆ ಬೀಸುತ್ತಿತ್ತಾದರೂ ಹೆಲೆನ್ ಸಿಂಗ್ ಬೆವರುತ್ತಿದ್ದರು.

ಸಂತೋಷದ, ಹೆಸರು ಸಹ ತಿಳಿಯದ ಒಂದು ಸಾವಿರ ಗಿಳಿಗಳು ಆಕೆಯ ಮಾನಸಾಕಾಶದಲ್ಲಿ ಹಾರಾಡುತ್ತಿದ್ದವು.

"ಚರ್ಚ್‌ನಲ್ಲಿ ಪಾದ್ರಿಯ ಆಶೀರ್ವಾದದೊಂದಿಗೆ ಬೇಕೇ! ಹೇಗಾದರೂ ನನಗಿಷ್ಟವೇ ?" ತಿವಾರಿ ಒಂದು ತಿದ್ದುಪಡಿ ಎಂಬಂತೆ ಹೇಳಿದನು.

"ಎಲ್ಲಾ ನಿಮ್ಮ ಇಷ್ಟ."

ಬಹಳ ಹೊತ್ತು ಅವರು ಮಾತುಕತೆಯಾಡಿದರು. ಬಹಳ ಹೊತ್ತಾಯಿತೆನಿಸಿದಾಗ ತಿವಾರಿ ಬಾಬು ಎದ್ದನು.

"ನಾನಿನ್ನು ಬರಲೇ ?"

ಹೆಲೆನ್ ಬಹಳ ಸಂತೋಷದಿಂದಿದ್ದರು. ಆಕೆ ಹೇಳಿದರು.

"ತಿವಾರಿ ಬಾಬು ಇವತ್ತು ನೀವು ಹೋಗಬೇಡಿ. ಇವತ್ತು ನೀವು ನನ್ನನ್ನು ಸ್ವೀಕರಿಸಿದ ದಿನವು. ಇಂದು ನಮ್ಮ ಪ್ರಥಮ ರಾತ್ರಿಯಾಗಲಿ. ಇಲ್ಲೇ ವಿಶ್ರಾಂತಿ ತೆಗೆದುಕೊಳ್ಳಿ. ಮುಂಜಾನೆ ನಾನು ನಿಮ್ಮನ್ನು ಕೂಗಿ ಎಬ್ಬಿಸುತ್ತೇನೆ."

"ಅದು ಹೇಗೆ ಪ್ರಥಮ ರಾತ್ರಿಯಾಗುತ್ತೆ ?" ಸಂಶಯದಿಂದ ತಿವಾರಿ ಕೇಳಿದನು.

"ನಾನು ಹಾಗೆಂದೇ ಭಾವಿಸಿದ್ದೇನೆ."

ಇಬ್ಬರೂ ತಕ್ಷಣ ತಣ್ಣಗಾದರು. ಇಬ್ಬರ ಮಧ್ಯೆ ವಿದ್ಯುದಾಘಾತವಾದಂತೆ ತೋರಿತು.

"ಕುಳಿತುಕೊಳ್ಳಿ" ಸ್ವಲ್ಪ ಅಧಿಕಾರ, ಹೆಚ್ಚಿನ ಪ್ರೀತಿ ಬೆರೆಸಿ ಹೆಲೆನ್ ಹೇಳಿದರು.

ಒಬ್ಬ ಪುಟ್ಟ ಹುಡುಗನಂತೆ ತಿವಾರಿ ಬಾಬು ಕುಳಿತನು.

ಹೆಲೆನ್ ಬೆಡ್ ರೂಮನ್ನು ಪ್ರವೇಶಿಸಿದರು. ಟ್ರೈನ್ ಬರುವ ಹೊತ್ತಾದಾಗ ಪೆಟ್ಟಿಗೆಯನ್ನು ಹಾಸಿಗೆಯನ್ನು ಕಟ್ಟಿಡುವ ಅವಸರದಿಂದ, ಒಂದು ನವವಧುವಿನ ಕೋಣೆಯನ್ನು ಆಕೆ ಅಣಿಮಾಡತೊಡಗಿದರು. ಹಳೆಯ ಬೆಡ್‌ಷೀಟುಗಳನ್ನೂ, ತಲೆದಿಂಬಿನ ಕವರನ್ನೂ ತೆಗೆದು ಹಾಕಿ ಒಗೆಯುವ ಬಟ್ಟೆಗಳ ಕುಕ್ಕೆಯಲ್ಲಿ ಹಾಕಿದರು. ಬೀರುವಿನಿಂದ ಕೆಂಪು ಹೂಗಳಿರುವ ಹೊಸ ಬೆಡ್‌ಷೀಟುಗಳನ್ನು ತೆಗೆದು ಹಾಸಿಗೆಗಳನ್ನು ಸಿದ್ಧ ಮಾಡಿದರು. ಹಾಸಿಗೆಯ ಮೇಲೆ ಪನ್ನೀರು ಚಿಮುಕಿಸಿದರು.

ಹೆಲೆನ್ ಸಿಂಗ್ ಸ್ನಾನದ ಮನೆಯನ್ನು ಪ್ರವೇಶಿಸಿ ಬಾಗಿಲನ್ನು ಹಾಕಿಕೊಂಡರು. ಆಕೆ ಸ್ನಾನ ಮಾಡಿ ಹೊಸ ವಸ್ತ್ರಗಳನ್ನು ಧರಿಸಿದರು. ದೇವಸ್ಥಾನದಿಂದ ತಂದ ಕಳಭ*ವನ್ನು ಹಚ್ಚಿಕೊಂಡರು. ಕೃಷ್ಣನ ವಿಗ್ರಹದ ಎದುರಿಗೆ ಊದುಕಡ್ಡಿ ಹಚ್ಚಿ ಇಟ್ಟರು. ಕೃಷ್ಣನನ್ನು ಒಂದು ನಿಮಿಷ ಧ್ಯಾನಿಸಿದರು.

"ಬನ್ನಿ ತಿವಾರಿ ಬಾಬು. ನಾನು ಮದುವಣಗಿತ್ತಿಯ ಕೋಣೆಯನ್ನು ಸಿದ್ಧ ಮಾಡಿದ್ದೇನೆ."

ಎಲ್ಲವನ್ನೂ ಅರ್ಥಮಾಡಿಕೊಂಡವನಂತೆ ತಿವಾರಿ ಮದುವಣಗಿತ್ತಿಯ ಕೋಣೆಯನ್ನು ಪ್ರವೇಶಿಸಿದನು. ಬಟ್ಟೆಗಳನ್ನು ಬಿಚ್ಚಿಟ್ಟು ಸ್ನಾನ ಮಾಡಲು ಹೋದನು.

ಒಂದು ಬಾತ್ ಟವಲನ್ನು ಸುತ್ತಿಕೊಂಡು ತಿವಾರಿ ಹೊರಕ್ಕೆ ಬಂದನು. ಆತನ ಮಾಂಸಖಂಡಗಳಲ್ಲಿ ಹೊಳಪು ಪ್ರತಿಫಲಿಸಿತು.

ಈಗ ತಿವಾರಿಯೂ ಪರಿಶುದ್ಧನು.

ಹೆಲೆನ್ ಎರಡು ಲೋಟಗಳಲ್ಲಿ ಹಾಲಿನೊಂದಿಗೆ ಬಂದರು. ಒಂದೊಂದು ಚಿಟಕಿ ಕಳಭ*ವನ್ನು ಹಾಲಿನಲ್ಲಿ ಸೇರಿಸಿದನಂತರ ಆಕೆ ಹಾಲಿನ ಗ್ಲಾಸನ್ನು ತಿವಾರಿಗೆ ನೀಡಿದರು.

ಪುಟ್ಟ ಮಕ್ಕಳಂತೆ ಅವರು ಹಾಲು ಕುಡಿದರು.

ಅನಂತರ ಅವರಿಬ್ಬರೂ ಮಂಚದಲ್ಲಿ ಮಲಗಿದರು.

ದೀಪವನ್ನರಿಸಿದರು.

ಮದುವಣಗಿತ್ತಿಯ ಕೋಣೆಯಲ್ಲಿ ಕೃಷ್ಣನನ್ನು ಸಾಕ್ಷಿಮಾಡಿ ಅವರಿಬ್ಬರೂ ಪ್ರಥಮ ರಾತ್ರಿಯನ್ನಾರಂಭಿಸಿದರು.

ಅವರಿಗೆ ನಿದ್ದೆ ಯಾವಾಗ ಬಂತೆಂದು ನೆನಪಿಲ್ಲ. ಇದ್ದಕ್ಕಿದ್ದಂತೆ ಹೆಲೆನ್ ಸಿಂಗ್ ಬೆಚ್ಚಿ ಬಿದ್ದೆದ್ದರು. ಬೆಳಗಿನ ಜಾವ ಕಳೆದಿತ್ತು.

ಹೆಲೆನ್ ಸಿಂಗ್ ನಡುಗಿದರು. "ದೇವರೆ ಕೃಷ್ಣ ? ನನ್ನನ್ನು ಕಾಪಾಡು" ಆಕೆ ನೊಂದ ಮನಸ್ಸಿನೊಂದಿಗೆ ಪ್ರಾರ್ಥಿಸಿದರು. ಗಂಟೆ ಏಳು ಹೊಡೆಯಿತು.

ತಮ್ಮ ಪರಮರಹಸ್ಯ ಊರೆಲ್ಲಾ ರಟ್ಟಾಗಿಹೋಗುತ್ತೆ.

ಹೊರಗೆ ಬಾಗಿಲಿನ ಮೇಲೆ ಬಲವಾಗಿ ಯಾರೋ ತಟ್ಟಲು ಆರಂಭಿಸಿದರು. "ಮೇಟ್ರನ್, ಮೇಟ್ರನ್" ಎಂದು ಯಾರೋ ಜೋರಾಗಿ ಕೂಗುತ್ತಿದ್ದರು. ಹೊರಗೇನೋ ಗಲಾಟೆ ನಡೆಯುವಂತೆ ತೋರುತ್ತಿತ್ತು.

"ದೇವರೆ, ನೀನೂ ನನ್ನ ಕೈಬಿಟ್ಟೆಯಾ, ಎಲ್ಲಾ ನಾಶವಾಗಿ ಹೋಯಿತು."

ಹೆಲೆನ್ ಸಿಂಗ್ ಬೆಡ್ ರೂಮಿನ ಕರ್ಟನ್ ಎಳೆದಿಟ್ಟು ಡ್ರಾಯಿಂಗ್ ರೂಮಿಗೆ ಬಂದು ಹೊರಗಿನ ಬಾಗಿಲನ್ನು ತೆರೆದರು.

ಏದುಸಿರು ಬಿಡುತ್ತಾ ಮೇರಿ ಹೊರಗೆ ನಿಂತಿದ್ದಳು. ಲಾನ್‌ನಲ್ಲೂ ವರಾಂಡದಲ್ಲೂ ನಾಲ್ಕೈದು ಸ್ಟಾಫ್ ನರ್ಸ್‌ಗಳು ಗಾಬರಿಯಿಂದ ನಿಂತಿದ್ದರು. ವರಾಂಡದ ಮೂಲಕ ಕುಞ್ಞಮ್ಮ ಓಡಿ ಬರುತ್ತಿದ್ದಳು.

"ಮಿಸೆಸ್ ತಿವಾರಿ...." ಏದುಸಿರು ಬಿಡುತ್ತಲೇ ಮಧ್ಯೆ ಮೇರಿ ಹೇಳಿದಳು. ಅವಳಿಗೆ ಮಾತು ಪೂರ್ಣ ಮಾಡಲು ಸಾಧ್ಯವಾಗಲಿಲ್ಲ.

"ಆಕೆ ಎಲ್ಲಿ ?" ತಕ್ಷಣವೇ ಆಕೆಯನ್ನು ಕ್ಷೀಣಗೊಳ್ಳುವಂತೆ ಮಾಡಿದ ಭಯವನ್ನು ಹತ್ತಿಕ್ಕಿಕೊಂಡು ಹೊರಗೆ ನಿಧಾನವಾಗಿ ಹೆಲೆನ್ ಸಿಂಗ್ ಮಾತನಾಡಿದರು.

"ಎಮರ್ಜೆನ್ಸಿಯಲ್ಲಿದ್ದಾರೆ. ವಿಷ ಕುಡಿದರಂತೆ. ಮರಣದ ಅಂಚಿನಲ್ಲಿದ್ದಾರಂತೆ."

"ಏನು ? ಏನೆನ್ನುತ್ತಿದ್ದೀ ನೀನು ? ನಿನಗೆ ಹೀಗೇಕೆನ್ನಿಸಿತು ?"

"ತಿವಾರಿಬಾಬುವಿನ ಶವವನ್ನು ಮೋರ್ಚರಿಯಲ್ಲಿ ತಂದು ಹಾಕಿದ್ದಾರಂತೆ" ಮೇರಿ ಹೇಳಿದಳು.

ಹೆಲೆನ್ ಸಿಂಗ್‌ರ ತಲೆಯು ಸಿಡಿದು ಚೂರಾಗುತ್ತಿರುವಂತೆ ಆಕೆಗನ್ನಿಸಿತು.

"ಏನಿದು ಪುಚ್ಚುಪುಚ್ಚಾಗಿ ಏನೇನೋ ಮಾತನಾಡುತ್ತಿದ್ದೀಯ ?"

"ಹೌದು ಮೇಟ್ರನ್ ಹೌದು."

ಅದು ನಡೆದದ್ದು ಹೀಗಿತ್ತು. ಹಿಂದಿನ ದಿನರಾತ್ರಿ ಜೋರಾದ ಮಳೆಯೂ

---

*ಕಳಭ: ಸುಗಂಧ ದ್ರವ್ಯಗಳ ಮಿಶ್ರಣ

ಗಾಳಿಯೂ ಬಂದಿತ್ತು. ಆ ಗಾಳಿಯಲ್ಲೂ ಮಳೆಯಲ್ಲೂ ಸುಮಾರು ರಾತ್ರಿ ಹನ್ನೆರಡು ಗಂಟೆಯಾಗಿರಬೇಕು, ಯಾವುದೋ ಮಿತ್ರನೊಬ್ಬನ ಮನೆಯಲ್ಲಿ ಪಾರ್ಟಿ ಮುಗಿಸಿಕೊಂಡು ತಿವಾರಿ ತಮ್ಮ ಸ್ವಭಾವಸಿದ್ಧವಾದ ಮರಣವೇಗದಲ್ಲಿ ಮೋಟಾರ್ ಬೈಕನ್ನು ಓಡಿಸಿಕೊಂಡು ಮನೆಗೆ ಬರುತ್ತಿದ್ದನು. ಓವರ್ ಬ್ರಿಡ್ಜ್ ಇಳಿಯುವಾಗ ಬೈಕ್ ಸ್ಕಿಡ್ ಆಗಿತ್ತು. ಹಾಳಾದ ಆ ಬೈಕೂ, ತಿವಾರಿಯೂ ಕಂದಕದ ಕೆಳಗೆ ಸಿಕ್ಕಿಕೊಂಡು ಅಪ್ಪಚ್ಚಿಯಾಗಿದ್ದರು. ಅಲ್ಲೇ ಸ್ಥಳದಲ್ಲೇ ತಿವಾರಿ ತೀರಿಕೊಂಡಿದ್ದನು. ಸಬ್ ಇನ್‌ಸ್ಪೆಕ್ಟರ್ ಶರ್ಮನೂ ಅವರ ಪಾರ್ಟಿಯೂ ಆ ಬಾಡಿಯನ್ನು ತೆಗೆದುಕೊಂಡು ಆಸ್ಪತ್ರೆಗೆ ಬಂದಿದ್ದರು. ಅನಿರೀಕ್ಷಿತವಾದ ಆ ದುರ್ಘಟನೆಯಿಂದಾಗಿ ಆಘಾತಗೊಂಡ ಮಿಸೆಸ್ ತಿವಾರಿ ವಿಷ ತೆಗೆದು ಕುಡಿದಿದ್ದಳು.

ಹೆಲೆನ್ ಸಿಂಗ್‌ಗೆ ಆಶ್ಚರ್ಯವೂ, ಆವೇಶವೂ, ಸಂಕಟವೂ, ಕೋಪವೂ, ದುಃಖವೂ ಸಮಾಧಾನವೂ ಎಲ್ಲಾ ಒಟ್ಟಿಗೇ ಅನ್ನಿಸಿತು.

"ಸರಿ ನೀವು ಹೋಗಿ, ನಾನಿದೋ ಬಂದುಬಿಟ್ಟೆ" ಹೆಲೆನ್ ಸಿಂಗ್ ಮೇರಿಯೊಂದಿಗೂ ಅವಳೊಂದಿಗೆ ಬಂದವರೊಂದಿಗೂ ಹೇಳಿದರು.

ಈ ಕೌತುಕವೆನಿಸುವ ವಾರ್ತೆಯನ್ನು ತಿವಾರಿಗೆ ತಿಳಿಸಲೆಂದು ಹೆಲೆನ್ ಸಿಂಗ್ ಏದುಸಿರುಬಿಡುತ್ತಾ ಒಳಕ್ಕೆ ಓಡಿದರು.

ಆಗಲೇ ಹೆಲೆನ್ ಸಿಂಗ್ ಸ್ತಂಭೀಭೂತರಾಗಿದ್ದು.

ತಿವಾರಿಬಾಬು ಅಲ್ಲಿಲ್ಲ. ಆತನ ಒಂದು ಕಣವೂ ಅಲ್ಲಿಲ್ಲ.

ಹಾಸಿದ್ದ ಬೆಡ್‌ಷೀಟ್‌ಗಳಲ್ಲಿ ಒಂದು ಸುಕ್ಕು ಸಹ ಇಲ್ಲ. ಹಿಂದಿನ ದಿನ ರಾತ್ರಿ ಅಲ್ಲಿ ಯಾರಾದರೂ ಮಲಗಿದ್ದ ಚಿಹ್ನೆ ಸಹ ಇಲ್ಲ. ಮಲಗುವ ಕೋಣೆ ಶೈತ್ಯದಿಂದ ಹೆಪ್ಪುಗಟ್ಟಿದಂತಿತ್ತು.

ಆಗ.... ಆಗ..... ಆಗ....?

ತಲೆ ಸುತ್ತತೊಡಗಿದ ಹೆಲೆನ್ ಸಿಂಗ್ ಆ ಮದುವಣಗಿತ್ತಿಯ ಕೋಣೆಯಲ್ಲಿ ದುಃಖದಿಂದ ಜ್ಞಾನಶೂನ್ಯಳಾಗಿ ಬಿದ್ದಳು.

# ಇಪ್ಪತ್ತಮೂರು

ಕಾರ್ಡಿಯಾಲಜಿ, ಮೋರ್ಚರಿ ಕಟ್ಟಡಗಳ ಹಿಂದೆ ಯಮುನಾ ನದಿಯು ಹರಿಯುತ್ತಿತ್ತು.

ಮಧ್ಯೆ ಮಧ್ಯೆ ನದಿಯಲ್ಲಿ ನೀರು ಏರುತ್ತದೆ. ಆಗ ನದಿಯ ದಡದ ಮೇಲೆಲ್ಲಾ ನೀರು ತುಂಬಿ ಹರಿಯುತ್ತದೆ. ಆ ಸಮಯದಲ್ಲಿ ನದಿಯ ನೀರು ಕಟ್ಟಡಗಳನ್ನು ಎತ್ತಿ ನಿಲ್ಲಿಸಿರುವ ಭಾರೀ ಕಪ್ಪು ಕಲ್ಲುಗಳವರೆಗೆ ಬರುತ್ತದೆ.

ಯಮುನಾನದಿಯಲ್ಲಿ ಈಗ ನೀರು ಕಡಿಮೆಯೇ. ಪ್ರಶಾಂತವೂ ಸುಂದರವೂ ಆಗಿ ನಿಂತಿದೆ ನದಿ. ನೀರಿನ ಮೇಲ್ಮೈಯಲ್ಲಿ ಪಕ್ಷಿಗಳು ಆಯಾಸದಿಂದ ಬಂದು ಕುಳಿತಿರುತ್ತವೆ. ಕೆಲವು ತಕ್ಷಣವೇ ಎದ್ದು ಹಾಲಿ ಮೀನನ್ನು ಕುಕ್ಕುತ್ತವೆ. ಚಳಿಗಾಲದಲ್ಲಿ ಬಿಸಿಲು ಹೊಳೆಯುತ್ತಿರುವಾಗ ನೀರು ಸ್ಪಷ್ಟವಾಗಿ ಬೆಳಗುತ್ತಿರುತ್ತದೆ. ಸ್ವಲ್ಪ ದೂರದಲ್ಲಿ ಎತ್ತರವಿರುವ ಒಬ್ಬ ವೃದ್ಧ ಸನ್ಯಾಸಿಯು ಸೂರ್ಯ ನಮಸ್ಕಾರ ಮಾಡುತ್ತಿದ್ದಾನೆ. ದೂರದಲ್ಲಿ ಸ್ತ್ರೀಯರೂ ಮಕ್ಕಳೂ ಆಟವಾಡುತ್ತಿದ್ದಾರೆ. ತರಕಾರಿಗಳನ್ನು ಹೇರಿಕೊಂಡ ಒಂದು ದೊಡ್ಡ ದೋಣಿಯು ಮುಂದೆ ಮುಂದೆ ಸಾಗುತ್ತಿದೆ. ಅದರ ಹಿಂದಿನಿಂದ ಒಬ್ಬ ಮೀನು ಹಿಡಿಯುವವನು ತನ್ನ ಚಿಕ್ಕ ದೋಣಿಯನ್ನು ನಡೆಸಿಕೊಂಡು ಬಂದು ಆ ದೊಡ್ಡ ದೋಣಿಯನ್ನು ದಾಟಿ ಹೋದನು. ಆ ದೋಣಿ ನಡೆಸುವವನು ಹಾಡುತ್ತಿದ್ದನು. ಅವನ ಹಾಡು ಅಷ್ಟೇನೂ ಚೆನ್ನಾಗಿಲ್ಲವಾದರೂ ಚಿಕ್ಕಂದಿನಲ್ಲಿ ಕೇಳಿದ ಯಾವುದೋ ಒಂದು ಹಾಡನ್ನು ಅದು ಜ್ಞಾಪಿಸಿತು.

ಅಲೆಗಳ ಸುಳಿವು ಕೂಡ ಇಲ್ಲದ ನದಿ ನೀರಿನಲ್ಲಿ ಸೂರ್ಯನು ಹರಡಿ ಬಿದ್ದಿರುವ ನೋಟವನ್ನು ನೋಡುತ್ತಾ ಒಣಗಿ ಬರಡಾದ ಮರಳ ಹರವಿನಲ್ಲಿ ದೇವದಾಸ್ ಕುಳಿತಿದ್ದನು. ಅವನ ಪಕ್ಕದಲ್ಲಿ ಲಕ್ಷ್ಮಿಯೂ ಇದ್ದಳು.

"ಈ ಸಮಯದಲ್ಲಿ ಬೆಳದಿಂಗಳ ಒಂದು ರಾತ್ರಿಯನ್ನೇ ನಾನು ಇಷ್ಟಪಡುವುದು. ಆಗ ನದಿ ನೀರಿನಲ್ಲಿ ಚಂದ್ರನ ಬೆಳಕು ಪಸರಿಸಿರುತ್ತದೆ." ದೇವದಾಸ್ ಹೇಳಿದನು.

"ಹಾಗೇ ಅಂದುಕೊಳ್ಳುತ್ತಾ ಇರಿ. ನಾವು ಏನೇನೂ ಕನಸಿನ ಮನೆಗಳನ್ನು ಕಟ್ಟಿ ಎಬ್ಬಿಸುತ್ತಿದ್ದೇವೆ ?" ಮರಳನ್ನು ತಟ್ಟುತ್ತಾ ಲಕ್ಷ್ಮಿ ಹೇಳಿದಳು.

"ಹಾಗೇ ಆಗಲಿ. ಅಂತಹ ಒಂದು ರಾತ್ರಿಯಲ್ಲಿ ಇಂತಹ ಒಂದು ದೋಣಿಯನ್ನು ಹತ್ತಿ ನಾನು ಲೋಕಪ್ರವಾಹದ ಮೂಲಕ ಮುಂದೆ ಸಾಗುತ್ತೇನೆ. ಹಾಡನ್ನು ಹಾಡಿ ಜನರನ್ನು ವಶಪಡಿಸಿಕೊಳ್ಳುತ್ತೇನೆ. ಪ್ರಪಂಚದಲ್ಲಿ ಏನೇನು ಇದೆಯೆಂದು ನೋಡಿ ತಿಳಿದುಕೊಳ್ಳುತ್ತೇನೆ. ಲೋಕವನ್ನೇ ನಾನು ಪರಿಚಯ ಮಾಡಿಕೊಳ್ಳುತ್ತೇನೆ. ನನ್ನನ್ನೇ ಪ್ರಪಂಚಕ್ಕೆ ಪರಿಚಯ ಮಾಡಿಕೊಡುತ್ತೇನೆ."

ಯಮುನಾನದಿಯಲ್ಲಿ ಹೋಗುತ್ತಿದ್ದ ಪುಟ್ಟ ದೋಣಿಯನ್ನು ತೋರಿಸುತ್ತಾ ದೇವದಾಸ್ ಹೇಳಿದನು.

"ಒಳ್ಳೆಯ ಕಲ್ಪನೆ ನೀವು ಕವಿಯಾಗಿ ಹುಟ್ಟಬೇಕಿತ್ತು" ಲಕ್ಷ್ಮಿ ಹೇಳಿದಳು.

"ಇನ್ನೊಂದು ಜನ್ಮ ಎತ್ತಿ ಬರೋಣವೆಂದೆನ್ನಿಸುತ್ತೆ. ಜೀವನವನ್ನು ಮತ್ತೆ ಪರೀಕ್ಷಿಸಿ ನೋಡಬೇಕೆಂದೆನ್ನಿಸುತ್ತೆ. ಅಂತಹ ಅದೃಷ್ಟ ನನಗೆ ಸಿಕ್ಕುವುದೇ ಆದರೆ ಅದನ್ನು ನಾನು ಈಗಿನದಂತೆ ಅತೃಪ್ತಕರವನ್ನಾಗಿ ಮಾಡುವುದಿಲ್ಲ" ದೇವದಾಸ್ ಸ್ವಲ್ಪ ದುಃಖದಿಂದ ಹೇಳುತ್ತಿದ್ದನು.

ಆಗ ಒಂದು ಸೈರನ್‌ನ ಕೂಗು ಕೇಳಿಸಿತು. ನದಿಯ ಆಚೆಯ ದಡದ ಬೃಹದಾಕಾರದಲ್ಲಿ ಕಟ್ಟಲಾಗಿದ್ದ ಒಂದು ಫ್ಯಾಕ್ಟರಿಯಿಂದ ಅದು ಬಂದಿತ್ತು.

ಲಕ್ಷ್ಮಿ ತನ್ನ ವಾಚನ್ನು ನೋಡಿ ಹೇಳಿದಳು:

"ಅಯ್ಯೋ ಹೊತ್ತಾಯಿತು. ನಾವು ಹೊರಡೋಣ".

"ನೀನು ಯಾವಾಗಲೂ ವಾಚನ್ನೇ ನೋಡುತ್ತಿರುವೆ. ವಾಚನ್ನು ನೋಡುತ್ತಲೇ ನಿನ್ನ ಸಮಯವನ್ನು ನೀನು ಕೊಲ್ಲುತ್ತಿರುವೆ."

"ನಾನು ಮಾತ್ರವಲ್ಲ. ಬಹುಮಟ್ಟಿಗೆ ಎಲ್ಲರೂ ಆಗಾಗ್ಗೆ ವಾಚ್ ನೋಡುವುದುಂಟು." ಲಕ್ಷ್ಮಿ ಒಂದು ಸತ್ಯವನ್ನು ಹೇಳಿದಳು.

"ನಾನು ಅದನ್ನು ಒಪ್ಪುತ್ತೇನೆ. ಆದರೆ ಈ ವಾಚನ್ನು ನೋಡುವವರಿಗೆ ಅಂತಹ ಅವಸರದ ಕೆಲಸವೇನೂ ಇರುವುದಿಲ್ಲ. ಮಾಡಲು ಕೆಲಸವೂ ಇರುವುದಿಲ್ಲ. ಅವರೆಲ್ಲರೂ ಸುಮ್ಮನೆ ವಾಚನ್ನೇ ನೋಡುತ್ತಾ ಇರುತ್ತಾರೆ ಅಷ್ಟೆ" ದೇವದಾಸ್ ಹೇಳಿದನು.

"ಬನ್ನಿ ಹೊರಡೋಣ" ಲಕ್ಷ್ಮಿ ಎದ್ದಳು.

ಮರಳಿನ ಹರವನ್ನು ನಡೆದು ದಾಟಿ ಕಪ್ಪು ಕಲ್ಲಿನ ಗೋಡೆಗಳಿಂದ ಕಟ್ಟಲಾಗಿದ್ದ ಭಾರೀ ಏಣಿಯನ್ನು ಹತ್ತಿ ಅವರು ಕಾಂಪೌಂಡ್‌ನೊಳಕ್ಕೆ ಪ್ರವೇಶಿಸಿದರು.

ಅವರು ಮತ್ತೆ ಆಸ್ಪತ್ರೆ ನಗರವನ್ನು ಪ್ರವೇಶಿಸಿದರು. ಹತ್ತು ನಿಮಿಷದ ಸಮಯವೇ ಈ ಗ್ರಾಮವನ್ನೂ ಆಸ್ಪತ್ರೆ ನಗರವನ್ನೂ ಬಂಧಿಸಿರುವುದು.

"ಪೊಲೀಸ್ ಸರ್ಜನ್ ಬಂದಿದ್ದಾರೆಂದು ಕಾಣುತ್ತದೆ. ಬೇಗ ಬೇಗ ನಡೆಯಿರಿ." ಲಕ್ಷ್ಮಿ ಆಲಸ್ಯದಿಂದ ನಡೆಯುತ್ತಿರುವ ದೇವದಾಸ್‌ನನ್ನು ನೋಡಿ ಹೇಳಿದಳು. ದೇವದಾಸ್ ಆಗಲೂ ನದೀ ತೀರವು ಅವನಿಗಿತ್ತ ಲಹರಿಯಲ್ಲೇ ಇದ್ದನು. ಅವರು ಮೋರ್ಚರಿಯಿಂದ ಮುಂದಕ್ಕೆ ಬಂದರು.

ಕಾರ್ಡಿಯಾಲಜಿ ಡಿಪಾರ್ಟ್‌ಮೆಂಟ್‌ನ ಸನಿಹದಲ್ಲೇ ಮೋರ್ಚರಿ ಇರುವುದು. ಮೋರ್ಚರಿಯ ಬಳಿ ಯಾರೂ ಹೋಗುವುದಿಲ್ಲ. ಅದರ ಕಡೆಗೆ ನೋಡಿದ ಶಾಸ್ತ್ರ ಸಹ ಮಾಡುವುದಿಲ್ಲ. ಶವಗಳನ್ನು ಜೋಪಾನವಾಗಿಡುವ ಸ್ಥಳ ಅದು ಎಂದು ಗೊತ್ತಾಗುವಾಗಲೇ ನಾಭಿಯಿಂದ ಒಂದು ಚಳುಕು ಅನುಭವವಾಗುತ್ತದೆ.

ಇದೊಂದು ದೊಡ್ಡ ಮೋರ್ಚರಿಯು. ಹತ್ತಿಪ್ಪತ್ತು ಶವಗಳನ್ನು ಜೋಪಾನವಾಗಿಡಬಹುದಿತ್ತು. ಮೂರು ಅಂತಸ್ತುಗಳಲ್ಲಿ ಕಟ್ಟಿದ್ದ ಬರ್ತ್‌ಗಳಲ್ಲಿ ಶವಗಳು

ವಿಶ್ರಮಿಸುತ್ತಿದ್ದವು. ಟ್ರೈನ್‌ನಲ್ಲಿನ ಸೆಕೆಂಡ್ ಕ್ಲಾಸ್ ಸ್ಲೀಪರ್‌ನಲ್ಲಿರುವಂತೆ ಅವು ವಿಶ್ರಮಿಸುತ್ತಿದ್ದವು.

ಶವವನ್ನು ಜೋಪಾನವಾಗಿಡಲೋ, ಅಲ್ಲಿಂದ ಅವುಗಳನ್ನು ತೆಗೆದುಕೊಂಡು ಬರಲೋ ಅದರೊಳಕ್ಕೆ ಯಾರಾದರೂ ಪ್ರವೇಶಿಸುವುದೇ ಆದಲ್ಲಿ ಅಲ್ಲಿ ಬಹಳ ಹೊತ್ತು ನಿಲ್ಲಲು ಸಾಧ್ಯವಾಗುವುದಿಲ್ಲ. ಆ ಸ್ಥಳದಲ್ಲಿ ಅಷ್ಟು ತಂಪಿರುತ್ತದೆ. ಅದರೊಳಗೆ ಮೈನಸ್ ಡಿಗ್ರಿ ತಂಪಲ್ಲವೇ ಇರುವುದು. ಶವಗಳು ಮರಗಟ್ಟಿ ಬಿದ್ದಿರುವ ದೃಶ್ಯವು ಸ್ವಲ್ಪ ಭಯವನ್ನು ಹುಟ್ಟಿಸುತ್ತವೆ. ಮೋರ್ಚರಿಯ ಪುಟ್ಟ ಕಾರಿಡಾರ್‌ನೊಂದಿಗೆ ಸೇರಿದಂತೆ ಒಂದು ವಿಶಾಲವಾದ ಹಾಲ್ ಇದೆ. ಅಲ್ಲೇ ಪೋಸ್ಟ್ ಮಾರ್ಟಂ ನಡೆಯುವುದು. ಅಲ್ಲಿ ಪೊಲೀಸ್ ಸರ್ಜನ್ ಚಟರ್ಜಿ ಶವಗಳನ್ನೂ, ವಿದ್ಯಾರ್ಥಿಗಳನ್ನು ಕಾದು ಕುಳಿತಿದ್ದಾರೆ.

ದೇವದಾಸ್ ಮತ್ತು ಗುಂಪು ಪೊಲೀಸ್ ಸರ್ಜನ್‌ರ ಕೋಣೆಯನ್ನು ಪ್ರವೇಶಿಸಿದರು. ಮುವ್ವತ್ತು ಪೋಸ್ಟ್ ಮಾರ್ಟಂಗಳನ್ನು ಮಾಡುವ ರೀತಿಯನ್ನು ಆ ಮೆಡಿಕೋಗಳು ಪ್ರತ್ಯಕ್ಷವಾಗಿ ನೋಡಿ ಕಲಿಯಬೇಕು. ಅದರ ಯಥಾರ್ಥ ಕಾರ್ಡ್‌ಗಳನ್ನು ಬರೆಯಬೇಕು. ಅದೇನೇ ಅವರ ಸಿಲೆಬಸ್‌ನಲ್ಲಿರುವ ನಿಯಮವು.

ಪೊಲೀಸ್ ಸರ್ಜನ್ ತನ್ನ ಮರದ ಕುರ್ಚಿಯಲ್ಲಿ ಕುಳಿತು ಪೈಪ್ ಎಳೆಯುತ್ತಿದ್ದರು. ಆತನ ರೂಮಿನಲ್ಲಿ ಸಾಧನ ಸಾಮಗ್ರಿಗಳು ಬಿದ್ದಿರುವುದು ನೋಡಿದರೆ ಆ ಕೊಠಡಿಯಲ್ಲಿರುವವರು ಸತ್ತು ಎಷ್ಟೋ ವರ್ಷಗಳಾದುವೆಂದು ತೋರುತ್ತದೆ. ಟೇಬಲ್ ಕ್ಲಾತ್ ಸಹ ಇಲ್ಲದ ಒರಟಾದ ಮೇಜು. ಒಂದು ಪುಸ್ತಕವೋ, ಪೆನ್ನೋ, ಆಷ್ ಟ್ರೇಯೋ ಆ ಮೇಜಿನ ಮೇಲಿಲ್ಲ. ಕುಂಬಾರನ ಜೇಡಿ ಮಣ್ಣಿನಿಂದ ಮಾಡಿದ ಎರಡು ಮೂರು ಪೈಪ್‌ಗಳನ್ನು ಮೇಜಿನ ಮೇಲೆ ಕಾಣಬಹುದಿತ್ತು. ಒಂದು ಟಿನ್ ಸಿಲೋನ್ ಹೊಗೆಸೊಪ್ಪನ್ನು, ಅದರೊಳಗೆ ಶವದ ದುರ್ಗಂಧವು ಪ್ರವೇಶಿಸಿರುವಂತೆ ಭದ್ರವಾಗಿ ಮುಚ್ಚಿಟ್ಟಿದ್ದಾರೆ. ಕೋಣೆಯ ಬಳಿಯಲ್ಲಿ ಮೂರು ನಾಲ್ಕು ಬೆಂಚುಗಳಿದ್ದವು. ಕಿಟಕಿಗೆ ಕೈ ಮಗ್ಗದ ಬಟ್ಟೆಯಿಂದ ತಯಾರಿಸಲಾದ ಒರಟಾದ ಕರ್ಟನ್‌ಗಳನ್ನು ಹಾಕಲಾಗಿತ್ತು. ಗೋಡೆಯಲ್ಲಿ ಮಾರ್ಕ್ಸನ, ಟಾಗೋರ್‌ನ, ಸತ್ಯ ಜಿತ್‌ರೇನ ಫೋಟೋಗಳನ್ನು ನೇತು ಹಾಕಲಾಗಿತ್ತು. ಆ ಫೋಟೋಗಳ ಮೇಲೆ ಧೂಳೂ, ಜೇಡರ ಬಲೆಗಳೂ ಧಾರಾಳವಾಗಿದ್ದವು. ಇಷ್ಟು ಮನೋಹರವಾದ ಒಂದು ಆಸ್ಪತ್ರೆಯ ಕಟ್ಟಡದೊಳಗೆ ಇಂತಹ ಒಂದು ಜಟಿಲವಾದ ಕೋಣೆಯೋ? ಹತ್ತೊಂಭತ್ತನೆಯ ಶತಮಾನವನ್ನೇ ಜ್ಞಾಪಿಸುವ ಒಂದು ದೃಶ್ಯವು.

ಚಟರ್ಜಿ ಆರಿಹೋದ ತಮ್ಮ ಪೈಪನ್ನು ಕಸದ ಬುಟ್ಟಿಯಲ್ಲಿ ತಟ್ಟಿ ಬೂದಿ ಉದುರಿಸಿದ ನಂತರ ಸಿಲೋನ್ ಹೊಗೆಸೊಪ್ಪಿನ ಟಿನ್‌ಅನ್ನು ತೆರೆದು, ಹೊಗೆಸೊಪ್ಪು ಹೊರತೆಗೆದು ಮೇಜಿನ ಮೇಲೆ ಇರುವ ಮತ್ತೊಂದು ಪೈಪನ್ನು ತುಂಬಿಸಿ ಅದಕ್ಕೆ ಬೆಂಕಿ ತಗುಲಿಸಿದನು. ಹೊಗೆ ಸೇದಲಾರಂಭಿಸಿದನು. ಆತನನ್ನು ಯಾವಾಗ ನೋಡಿದರೂ, ಆತನ ಪೈಪ್ ಸೇದುವುದನ್ನು ಕಾಣಬಹುದು. ಅಥವಾ ವಯಲಿನ್ ಬಾರಿಸುವುದನ್ನು ಕೇಳಬಹುದು.

ಚಟರ್ಜಿಯಂತೆ ಸಂಗೀತದಲ್ಲಿ ಇಷ್ಟು ಹೆಚ್ಚು ಜ್ಞಾನ, ಉತ್ಸುಕತೆ ಇರುವ ಒಬ್ಬ

ಮನುಷ್ಯನನ್ನು ನಿಮಗೆ ನೋಡಲು ಸಿಗುವುದು ಕಷ್ಟ. ಆತನ ಮಾತುಕತೆಗಳೂ, ನಡೆನುಡಿಗಳೂ, ಕೆಲಸಕಾರ್ಯಗಳೂ ಎಲ್ಲ ತಾಳಬದ್ಧವಾಗಿರುತ್ತಿದ್ದವು. ಯಾವುದೇ ಸಮಯದಲ್ಲೂ ಅಜ್ಞಾತವಾದ ಏನೋ ಒಂದು ಹಾಡಿನ ತರಂಗಗಳು ಆತನ ಶರೀರದಿಂದ ಹೊರಬರುತ್ತಿದ್ದವು. ಆತನ ಬಯ್ಯುವುದರಲ್ಲೂ, ಕಲ್ಲು ತೆಗೆದು ಬಿಸಾಡುವುದರಲ್ಲೂ ಸಣ್ಣ ಗರಗಸ ತೆಗೆದುಕೊಂಡು, ಕತ್ತರಿಸುವುದರಲ್ಲೂ, ಚಾಕುವಿನಿಂದ ಕುಯ್ಯುವುದರಲ್ಲೂ ಒಂದು ತಾಳವಿರುತ್ತಿತ್ತು. ಎಂದೆಂದಿಗೂ ತಪ್ಪದ ಒಂದು ತಾಳ.

ಪೋಲೀಸ್ ಸರ್ಜನ್ ಚಟರ್ಜಿಯನ್ನು ಅನಾಟಮಿಕಲ್ ಸ್ಟ್ರಕ್ಚರ್‌ನಲ್ಲಿ ವರ್ಣಿಸಲು ಸಾಧ್ಯವಿಲ್ಲ. ಆತನು ಯಾರ ಹಾಗಿದ್ದಾನೆ? ಎಂದು ಕೇಳಿದರೆ ಮಹಮ್ಮದಾಲಿ ಜಿನ್ನನಂತಿದ್ದಾನೆ ಎಂದು ಹೇಳಬಹುದಷ್ಟೆ.

ಚಟರ್ಜಿಯ ಕುಟುಂಬವನ್ನು 'ಮ್ಯೂಸಿಕಲ್ ಕ್ಲಬ್' ಎಂಬ ಹೆಸರಿನಲ್ಲಿ ಕರೆಯಬಹುದಿತ್ತು. ಆತನ ಹೆಂಡತಿ ಒಬ್ಬ ಗಾಯಕಿಯಾಗಿದ್ದಳು. ಮಗಳು ಹಾರ್ಮೋನಿಯಮ್ ಬಾರಿಸುತ್ತಿದ್ದಳು. ಕಿರಿಯ ಮಗಳು ತಬಲ ಬಾರಿಸುತ್ತಾಳೆ. ಮೈದುನನು ಶ್ರೀಕೃಷ್ಣನ ಕೊಳಲು ಬಾರಿಸುತ್ತಿದ್ದನು.

ಪೋಸ್ಟ್ ಮಾರ್ಟಂ ಮುಗಿಸಿ ಮನೆಗೆ ಬಂದರೆ ಅಲ್ಲಿ ಯಾವತ್ತೂ ಕಛೇರಿಯೇ. ಅನೇಕ ಸಾರ್ವಜನಿಕ ಕಾರ್ಯಕ್ರಮಗಳಲ್ಲೂ ಈ 'ಮ್ಯೂಸಿಕ್ ಕ್ಲಬ್' ಭಾಗವಹಿಸುತ್ತಿತ್ತು. ಪೋಸ್ಟ್ ಮಾರ್ಟಂ ಅನ್ನು ಗೀತಮೇಳಗಳನ್ನು ಜೊತೆ ಜೊತೆಯಾಗಿ ಆತನು ನಡೆಸುತ್ತಿದ್ದನು.

"ನನ್ನ ಮಕ್ಕಳೇ, ನಾನು ಈ ಪೈಪನ್ನು ಸೇರಿ ಮುಗಿಸುತ್ತೇನೆ. ನೀವು ಸ್ವಲ್ಪ ಹೊರಗೆ ಹೋಗಿ ಸುತ್ತಾಡಿಕೊಂಡು ಬನ್ನಿ." ವಿದ್ಯಾರ್ಥಿಗಳನ್ನು ನೋಡಿ ಆತನು ಹೇಳಿದನು.

"ಸರ್, ನಮ್ಮ ಪೋಸ್ಟಿಂಗ್‌ಗೆ ಇನ್ನು ಹೆಚ್ಚು ದಿನಗಳಿಲ್ಲ. ಇಲ್ಲಿಯವರೆಗೂ ಒಂದು ಕೇಸನ್ನೂ ನಾವು ನೋಡಿಲ್ಲ." ಯಾವನೋ ಒಬ್ಬ ಮೆಡಿಕೋ ತನ್ನ ಸಂಕಟವನ್ನು ಹೇಳಿಕೊಂಡನು.

"ಅದಕ್ಕೇನು ಮುವ್ವತ್ತು ಕೇಸುಗಳನ್ನು ತೆಗೆದುಕೊಳ್ಳಬೇಕು ಅಲ್ಲವೇ? ಮೂರು ಕೇಸುಗಳನ್ನು ನೋಡಿದರೆ ಸಾಕು. ಅದನ್ನು ಮುವ್ವತ್ತಾಗಿ ಬರೆಯಿರಿ. ಪೋಸ್ಟ್ ಮಾರ್ಟಂನಲ್ಲಿ ಕಲಿಯಲು ಏನೂ ಇಲ್ಲ. ಅದು ಕೇವಲ ಒಂದು ಬುಚರಿಯಷ್ಟೆ. ಒಬ್ಬ ಕಟುಕನ ಕೆಲಸ." ಪೈಪ್ ಸೇದುತ್ತಾ ಹೊಗೆಯನ್ನೆಳೆದುಕೊಂಡು ಆನಂದದಿಂದ ಚಟರ್ಜಿ ಹೇಳಿದರು. "ನಾನು ಓದುತ್ತಿದ್ದ ಕಾಲದಲ್ಲಿ ಒಂದೇ ಕೇಸ್ ಸಹ ನಾನು ನೋಡಿರಲಿಲ್ಲ. ಆದರೆ ನಾನಿಲ್ಲಿಗೆ ಬಂದು ಸೇರಿದೆ. ಇದೇ ಒಂದು ಕೆಲಸವಾಗಿ ಬದಲಾದಾಗ ನಾನು ಕಲಿಯಲು ಪ್ರಾರಂಭಿಸಿದೆ. ಶವದ ತಲೆಗೂದಲಿನಿಂದಲೇ ಘಾತುಕನನ್ನೇ ಕಂಡುಹಿಡಿಯಲು ಈಗ ನನಗೆ ಸಾಧ್ಯ. ನಾನು ಕೆಲಸಕ್ಕೆ ಸೇರಿದ ನಂತರವೇ ಕಲಿಯಲು ಪ್ರಾರಂಭಿಸಿದ್ದು."

ಮೆಡಿಕೋಗಳು ಚಟರ್ಜಿಯು ಹೇಳುವುದನ್ನೆಲ್ಲಾ ಕೇಳಲೆಂದು ಕಾದು ನಿಂತಿರಬೇಕಾದರೆ ಆತನೆಂದನು.

"ಮಕ್ಕಳೇ ಹೊರಕ್ಕೆ ಹೋಗಿ ಶುದ್ಧ ವಾಯುವನ್ನು ಸೇವಿಸಿ ಬನ್ನಿ. ಒಂದೊಂದು

ಕಪ್ ಟೀ ಕುಡಿದು ಒಂದೊಂದು ಸಿಗರೇಟ್ ಸೇದಿ ಹಿಂದಿರುಗಿ ಬನ್ನಿ. ಅದಾದ ನಂತರವೇ ನಾನು ಪ್ರಾರಂಭಿಸುವುದು."

ಮೆಡಿಕೋಗಳು ಹೊರಟುಹೋದರು.

ಪೋಸ್ಟ್ ಮಾರ್ಟಂ ಹಾಲ್‌ನ ವರಾಂಡದಲ್ಲೂ, ಲಾನ್‌ನಲ್ಲೂ ಶವಗಳೊಂದಿಗೆ ಪೊಲೀಸರೂ, ಬಂಧುಗಳೂ ಕಾದು ನಿಂತಿದ್ದರು. ಚಾಪೆಯಲ್ಲೂ, ಬಟ್ಟೆಯಲ್ಲೂ ಕಟ್ಟಿದ ಶವಗಳು ತಮ್ಮ ಹಣೆಯ ಬರಹವನ್ನು ತಿಳಿಯಲೋಸುಗ ಕಷ್ಟಪಟ್ಟು ಬಿದ್ದಿರುವಂತೆ ತೋರಿತು. ಬಿಸಿಲು ವಿಶಾಲವಾಗಿ ಹರಡಿರುವ ಲಾನ್‌ನಲ್ಲಿ ಮಧ್ಯೆ ಮಧ್ಯೆ ಹದ್ದಿನ ನೆರಳುಗಳು ಪ್ರತ್ಯಕ್ಷವಾಗುತ್ತಿದ್ದವು.

"ಬನ್ನಿ, ಇಲ್ಲಿಗೆ ಬನ್ನಿ."

ಲಾನ್‌ನಲ್ಲಿ ಅಲೆದಾಡುತ್ತಿರುವ ಮೆಡಿಕೋಗಳನ್ನು ಚಟರ್ಜಿ ಕರೆದರು. ಅವರೆಲ್ಲಾ ಪೋಸ್ಟ್ ಮಾರ್ಟಂ ಹಾಲ್‌ಗೆ ಬಂದರು. ನೋಡಿದರೆ ನೀಗ್ರೊಗಳೆಂದು ತೋರುವ, ನೀಲಿ ಬಣ್ಣದ ಉದ್ದನೆಯ ಷರ್ಟನ್ನು ಧರಿಸಿದ ಅಟೆಂಡರ್‌ಗಳು ಪೊಲೀಸ್ ಸರ್ಜನ್ ಅನ್ನು ಕಂಡಾಗ ನಾಲ್ಕು ದಿಕ್ಕುಗಳಿಗೂ ಧಾವಿಸಲು ಆರಂಭಿಸಿದರು. ಇಬ್ಬರು ಮೂವರು ಕ್ಲರ್ಕ್‌ಗಳು ಒಂದು ಮೇಜಿನ ಸುತ್ತ ಕುಳಿತಿದ್ದರು. ಅವರು ಪೋಸ್ಟ್ ಮಾರ್ಟಂ ರಿಪೋರ್ಟ್ ಬಗ್ಗೆ ಟಿಪ್ಪಣಿ ಹಾಕಲೂ, ಬರೆದಿಡಲೂ ಫೈಲ್‌ಗಳನ್ನೂ ಸಿದ್ಧ ಮಾಡುತ್ತಿದ್ದಾರೆ.

ಶವವನ್ನು ಮಲಗಿಸುವ ಉದ್ದನೆಯ ಅಗಲವಾದ ಮೇಜಿನ ಮೇಲೆ ಅವುಗಳನ್ನು ಕತ್ತರಿಸಿ ತುಂಡು ಮಾಡಲಿರುವ ಉಪಕರಣಗಳನ್ನು ಅಣಿಯಾಗಿಡುತ್ತಿದ್ದರು. ಹೊಳೆಯುವ ಕಪ್ಪಗಿನ ಹಿಡಿಯಿರುವ ಚಾಕುಗಳು, ಉಳಿಗಳು, ಸಣ್ಣ ಗರಗಸಗಳು, ಮ್ಯಾಗ್ನಿ ಫೈಯಿಂಗ್ ಗ್ಲಾಸ್, ಲಾಠಿಯಷ್ಟು ದಪ್ಪವಿರುವ ಟಾರ್ಚ್, ಶವದ ಒಳಗಿನ ಅವಯವಗಳನ್ನು ಜೋಪಾನವಾಗಿಡಲು ಗ್ಲಾಸ್ ಜಾರ್‌ಗಳು ಎಲ್ಲಾ ಅಣಿಯಾಗಿವೆ.

"ಇಂದು ಎಷ್ಟಿರಬಹುದು ?" ಪೈಪ್ ಎಳೆದು ಹೊಗೆ ಬಿಟ್ಟನಂತರ ಚಟರ್ಜಿ ಕೇಳಿದನು.

"ಸರ್" ಕ್ಲರ್ಕ್ ಕುರ್ಚಿಯಿಂದೆದ್ದು ಚಟರ್ಜಿಯ ಬಳಿ ಬಂದು "ಇಂದು ಬೇಕಾದಷ್ಟು ಕೆಲಸವಿದೆ. ಈಗಲೇ ಅದು ಬಂದಾಗಿದೆ" ಎಂದು ಹೇಳಿದನು.

"ಸರಿ, ಸರಿ, ಬೇಗ ನೋಡಿ" ಕೊನೆಯದಾಗಿ ಹೊಗೆಯನ್ನೆಳೆದು ಅದನ್ನು ಉಗುಳಿ, ಪೈಪ್ ಅನ್ನು ಮೇಜಿನ ಮೇಲಿಟ್ಟು ಚಟರ್ಜಿ ತನ್ನ ಕೈಗಳನ್ನು ಪರಸ್ಪರ ಉಜ್ಜಿ ಬಿಸಿ ಮಾಡಿಕೊಂಡನು.

"ಮಕ್ಕಳೇ ನಾಟಕವು ಪ್ರಾರಂಭವಾಗಲಿದೆ " ಮೆಡಿಕೋಗಳನ್ನು ನೋಡಿ ನಗುತ್ತಾ ಚಟರ್ಜಿ ಹೇಳಿದನು. ಅವರೆಲ್ಲಾ ಆತನಿಗೆ ಅಭಿಮುಖವಾಗಿ ಒಂದು ಲೈನ್‌ನಲ್ಲಿ ನಿಂತಿದ್ದರು.

"ಎಷ್ಟು ದೂರವಿರುತ್ತೀರೋ ಅಷ್ಟೂ ಒಳ್ಳೆಯದು" ಹಿಂದಕ್ಕೆ ಹರಿಯುತ್ತಿದ್ದ ಒಬ್ಬ ಮೆಡಿಕೋವನ್ನು ನೋಡಿ ಚಟರ್ಜಿ ಹೇಳಿದನು.

"ಅಲ್ಲದಿದ್ದರೂ ಇದರಲ್ಲಿ ನೋಡುವುದಕ್ಕೇನಿದೆ ? ಶರೀರದಲ್ಲಿನ ಉಸಿರು ಹೋದರೆ ಅದು ಶವವು. ದುರ್ಮರಣವಾದರೆ ಅನಂತರ ಅದನ್ನು ಕತ್ತರಿಸಿ ತುಂಡು

ಮಾಡುವುದು ಬೇರೆ. ಇದರಲ್ಲೇನೂ ಅರ್ಥವಿಲ್ಲ. ಆದರೆ ಚೆನ್ನಾಗಿ ನೋಡಿರಿ. ನಿಮ್ಮಲ್ಲಿ ಯಾರಾದರೂ ಒಬ್ಬನು ಪೊಲೀಸ್ ಸರ್ಜನ್ ಆಗಬಹುದು. ನಾನೂ ಒಮ್ಮೆ ಶವವಾಗುತ್ತೇನಲ್ಲವೇ ?"

ಅಟೆಂಡರ್ ಒಂದು ಕಟ್ಟು ಊದುಬತ್ತಿ ಹತ್ತಿಸಿಟ್ಟನು. ಒಂದು ಸಣ್ಣಪಾತ್ರೆಯಲ್ಲಿ ಕುನಿರಿಕ್ಕಂ ಹೊಗೆ ಹಾಕಿದನು. ಊದುಬತ್ತಿಯು ಮತ್ತು ಕುನಿರಿಕ್ಕಂ ಹೊಗೆಯು ಪೋಸ್ಟ್ ಮಾರ್ಟಂ ಹಾಲಿನಲ್ಲಿ ಮೇಲಕ್ಕೇರಿತು. ಸುಗಂಧವು ನಾಲ್ಕು ದಿಕ್ಕಿಗೂ ಹರಡಿತು.

ಮೊದಲನೆಯ ಶವವು ಬಂತು. ಅದೊಂದು ವಿಚಿತ್ರ ಶವವಾಗಿತ್ತು. ಅದನ್ನು ತೆಗೆದುಕೊಂಡು ಬಂದ ಪೊಲೀಸರು ಬಾಗಿಲಿನ ಹೊರಕ್ಕೆ ನಿಂತಿದ್ದರು. ಬಟ್ಟೆಯಲ್ಲಿ ಸುತ್ತಿದ್ದ ಶವವನ್ನು ಮೇಜಿನ ಮೇಲಿಟ್ಟು ಅದರ ಗಂಟು ಬಿಚ್ಚಿದರು.

ಶವವು ನಗ್ನವಾಯಿತು.

ಶವಕ್ಕೆ ತಲೆಯೇ ಇರಲಿಲ್ಲ. ಕೊಲೆ ಮಾಡಿದ ಘಾತುಕರು ತಲೆಯನ್ನು ಕಡಿದು ಬೇರೆಲ್ಲೋ ಹೂತಿಟ್ಟಿರಬೇಕು. ಈಗ ಪೊಲೀಸಿನವರು ಅದನ್ನು ಹುಡುಕುತ್ತಾ ನಡೆಯುತ್ತಿರಬೇಕು. ಇನ್ನು ನಾಲ್ಕೈದು ದಿವಸಗಳಾಗುವಾಗ ಕೊಳೆತು ನಾರುತ್ತಿರುವ ಒಂದು ತಲೆ ಮಾತ್ರ ಪೋಸ್ಟ್ ಮಾರ್ಟಂಗೆ ಬರುತ್ತದೆ.

ಶವದ ಕಾಲುಗಳನ್ನು ದಪ್ಪಗಿನ ಹಗ್ಗದಿಂದ ಕಟ್ಟಲಾಗಿತ್ತು. ಈ ಸತ್ತವನು ಬದುಕಿದ್ದ ಕಾಲದಲ್ಲಿ ಒಳ್ಳೆಯ ಆರೋಗ್ಯವಂತನೂ, ದೃಢಗಾತ್ರನೂ ಆಗಿದ್ದಿರಬೇಕು. ಅವನ ದೃಢವಾದ ಮಾಂಸಖಂಡಗಳು ಈಗಲೂ ಹಾಗೇ ಇವೆ. ಸತ್ತವನ ದೇಹವೆಲ್ಲಾ ಮಣ್ಣು ಮೆತ್ತಿಕೊಂಡಿತ್ತು. ಬಲದ ಕೈ ಬೆರಳುಗಳಲ್ಲಿ ಎರಡು ಕತ್ತರಿಸಿ ಹೋಗಿದ್ದವು. ಹೋರಾಟದ ಕೊನೆಯ ಹಂತದಲ್ಲಿ ಇವನ ಪ್ರತಿಭಟನೆ ನಷ್ಟವಾಗಿ ಹೋಗಿರಬೇಕು. ಘಾತುಕನೊಂದಿಗೆ ಈ ಸತ್ತವನು ಚೆನ್ನಾಗಿಯೇ ಹೋರಾಡಿರಬೇಕು. ಭುಜದ ಮೇಲೆ ಆಳವಾಗಿರುವ ಎರಡುಮೂರು ಗಾಯಗಳು ಬೇರೆ ಆಗಿದ್ದವು.

ಅವನ ಜನನೇಂದ್ರಿಯವನ್ನು ಕತ್ತರಿಸಲಾಗಿತ್ತು.

ಆ ಭಾಗವನ್ನು ಪರಿಶೋಧಿಸುವಾಗ ಚಟರ್ಜಿ ಹೇಳಿದನು "ಇವನು ಏನೋ ಅಸಭ್ಯವಾಗಿ ನಡೆದುಕೊಂಡಿರಬೇಕು. ಇವನು ಒಬ್ಬ ರೋಡ್ ರೋಮಿಯೋ ಆಗಿರಬೇಕು."

ಹುಡುಗಿಯರ ಹಿಂದೆ ಯಾವಾಗಲೂ ನಡೆಯುವ ಒಬ್ಬ ಮಡಿಕೋವನ್ನು ಆತನು ತಲೆಯೆತ್ತಿ ದಿಟ್ಟಿಸಿ ನೋಡಿ ಅನಂತರ ಹೇಳಿದನು "ಇಂತಹ ದುರ್ಮರಣವು ಯಾರಿಗೂ ಬರದಿರಲಿ."

ಪೋಸ್ಟ್‌ಮಾರ್ಟಂ ರೂಮ್‌ನಲ್ಲಿ ಒಮ್ಮೆ ಜೋರಾಗಿ ನಗುವಿನ ಅಲೆಗಳೆದ್ದವು.

ಪೊಲೀಸ್ ಸರ್ಜನ್‌ನ ಕೈಗಳು ಸಮರ್ಥವಾಗಿ ಚಲಿಸಿದವು. ಅಟೆಂಡರ್‌ಗಳು ಸಹಾಯ ಮಾಡಲು ಸುತ್ತಲೂ ನಿಂತರು. ಒಬ್ಬ ಕಟುಕನ ಕೈಚಳಕವೇ ಪೋಸ್ಟ್ ಮಾರ್ಟಂಗೆ ಬೇಕಿರುವುದು. ಅಲ್ಲಿ ಸಾಮರ್ಥ್ಯವನ್ನು ತೋರಿಸುವುದು ಕೈಗಳಲ್ಲ ಬುದ್ಧಿ.

ಶವದ ಮಡಿಸಿಕೊಂಡಿರುವ ಎರಡೂ ಕೈಗಳನ್ನು ಚಟರ್ಜಿ ಬಲವಾಗಿ ಬಿಡಿಸಿದನು.

ಬಹು ತಣ್ಣಗಾಗಿದ್ದ ಮಾಂಸಖಂಡಗಳು ಹಾಗೆ ಬಿಡಿಸಿದಾಗ ಸೂಕ್ಷ್ಮವಾಗಿ ಸೆಟೆದದ್ದನ್ನು ಚಟರ್ಜಿ ಕೇಳಿಸಿಕೊಂಡನು. ಆತನು ಚಾಕುವನ್ನು ತೆಗೆದುಕೊಂಡು, ಏನೋ ಕಾಣಲು ಸಾಧ್ಯವಾಗದ ಒಂದು ಮಗುವಿನಂತೆ ಶೂನ್ಯವಾದ ಕಣ್ಣುಗಳಿಂದ ಕೆಲ ನಿಮಿಷಗಳು ಸ್ತಬ್ಧವಾಗಿ ನಿಂತನು. ಮೊದಲನೆಯ ಸಲ ಕತ್ತರಿಸುವುದು ಗಲ್ಲದಿಂದ ನಾಭಿಯವರೆಗೆ ಆದರ ತಲೆಯೇ ಇಲ್ಲದ ಶವಕ್ಕೆ ಗಲ್ಲವೆಲ್ಲಿಂದ ತರುವುದು ? ಹಾಗಾಗಿಯೇ ಆತನು ದಿಗ್ಭ್ರಮೆಗೊಂಡು ನಿಂತದ್ದು. ಪರವಾಗಿಲ್ಲ. ಇರುವ ವಸ್ತುಗಳೇ ಸಾಕು. ಪ್ರಾರಂಭಿಸೋಣ. ಕತ್ತಿನ ಕೆಳಭಾಗದಿಂದ ಕತ್ತರಿಸಿ ತೆಗೆದ ಜನನೇಂದ್ರಿಯದವರೆಗೂ ಆತನು ಒಂದು ಸೀಳನ್ನುಂಟು ಮಾಡಿದನು. ಸೂಕ್ಷ್ಮತೆಯೋ, ಭಯವೋ ಅಲ್ಲಿ ಆವಶ್ಯವಿಲ್ಲ. ಆದರೂ ಸತ್ತವನೊಂದಿಗೆ ಒಂದು ಆದರವು ಆತನ ಮನಸ್ಸಿನಲ್ಲಿತ್ತು. ಮಾಂಸವನ್ನು ಪೂರ್ಣವಾಗಿ ಕತ್ತರಿಸಿದನು. ಚಾಕುವನ್ನು ಮೇಜಿನ ಮೇಲಿಟ್ಟು ಆತನು ತನ್ನ ಎರಡು ಕೈಗಳನ್ನು ಸ್ವತಂತ್ರಗೊಳಿಸಿಕೊಂಡನು. ಗುಂಡಿಗಳು ಬಿಚ್ಚಿದ ಕೋಟನ್ನು ಅಂಗಾತವಾಗಿ ತೆಗೆದು ಹಾಕುವಂತೆ ತೆರೆದು ಬಿದ್ದಿರುವ ಚರ್ಮವನ್ನೂ ಮಾಂಸವನ್ನೂ ಆತನು ಎರಡು ಭಾಗಗಳಾಗಿ ಕಿತ್ತು ಬೇರ್ಪಡಿಸಿದನು. ತೆಂಗಿನ ಗರಿಯಿಂದ ಕಾಂಡವನ್ನು ತುಂಡು ಮಾಡಿ ತೆಗೆಯುವಾಗ ಹೊರಬರುವ ಶಬ್ದದಂತೆ ಒಂದು ಶಬ್ದವು ಆಗ ಹೊರಬಂದಿತು. ನಡುವಿನಲ್ಲಿ ಬೇರ್ಪಟ್ಟ ಈರುಳ್ಳಿಯ ಬಣ್ಣವುಳ್ಳ, ಮಿಂಚಿ ಪ್ರಕಾಶಿಸುವ ಬೆನ್ನೆಲುಬು ಮೂಳೆಗಳು ಹೊರಬಂದವು. ದೊಡ್ಡ ಚಾಕುವನ್ನೇ ತೆಗೆದುಕೊಂಡು ಬೆನ್ನೆಲುಬಿನ ಕಾರ್ಟಲೇಜುಗಳನ್ನು ಎರಡು ಭಾಗದಲ್ಲೂ ಒಡೆದು ಎದೆಯಲ್ಲಿನ ನಡುವಿನ ಮೂಳೆಯನ್ನು ಟೈಯನ್ನು ಮೇಲಕ್ಕೆತ್ತುವ ಕೌಶಲದಿಂದ ಮೇಲಕ್ಕೆತ್ತಿದನು. ಯಾವಾಗಲೂ ಮಿಡಿಯುತ್ತಿದ್ದ ಹೃದಯವೂ, ಎಚ್ಚೆತ್ತಾಗಲೂ ಮಲಗಿರುವಾಗಲೂ ಸಹ ಉಬ್ಬಿಯೂ, ಸಂಕುಚಿಸಿಯೂ ಆಗುತ್ತಿದ್ದ ಶ್ವಾಸಕೋಶಗಳೂ, ಜೀವದ ಬಯೋಕೆಮಿಸ್ಟ್ರಿಯಾದ ಪಿತ್ತಜನಕಾಂಗವೂ, ಸರ್ವಸ್ವವನ್ನೂ ದಹಿಸುವ ಹೊಟ್ಟೆ, ಕರುಳಿನ ಮೂಲೆಯೂ ಪ್ರತ್ಯಕ್ಷವಾದವು.

ಸತ್ತ ಮನುಷ್ಯನ ಒಳಗಿನ ಅವಯವಗಳೆಲ್ಲವನ್ನೂ ಹೊರಕ್ಕೆ ತೆಗೆದು ಒಂದೊಂದರ ತೂಕವನ್ನೂ, ಗಾತ್ರವನ್ನೂ, ಅಟೆಂಡರ್ ನೋಟ್ ಮಾಡಿಕೊಂಡನು.

ಇಪ್ಪತ್ತು ನಿಮಿಷಗಳಲ್ಲಿ ಎಲ್ಲವೂ ಮುಗಿಯಿತು.

ಅನಂತರ ತೆಗೆದುಕೊಂಡು ಬಂದದ್ದು ಗಂಡನಿಂದ ಕೊಲೆ ಮಾಡಲ್ಪಟ್ಟ ಒಬ್ಬ ಯುವತಿಯ ಶವವನ್ನು ಅವಳ ಕರುಳು ಮೂಲೆಯು ಚೆದುರಿ ಹೊರಕ್ಕೆ ಬಿದ್ದಿತ್ತು. ಜನನೇಂದ್ರಿಯಗಳು ಒಟ್ಟಿನಲ್ಲಿ ವಿಕಾರವಾಗಿದ್ದವು.

ಕೊಠಡಿಯಲ್ಲಿ ದುರ್ಗಂಧವು ಎದ್ದಿತು.

"ಕುನಿರಿಕ್ಕಂ" ಚಟರ್ಜಿ ಕೂಗಿ ಹೇಳಿದನು.

ಕುನಿರಿಕ್ಕಂನ ಧೂಮಪಟಲಗಳು ಕೊನೆಯಲ್ಲೆದ್ದವು. ಶವದ ದುರ್ಗಂಧವೂ ಕುನಿರಿಕ್ಕಂನ ಸುಗಂಧವೂ ಬೆರೆತುಕೊಂಡು ಒಂದು ಪ್ರತ್ಯೇಕ ವಾಸನೆಯು ಕೋಣೆಯಲ್ಲುಂಟಾಯಿತು.

"ಜಾರ ಸಂಸರ್ಗ - ಕುಟುಂಬ ಕಲಹ" ಚಾಕುವನ್ನು ತೆಗೆದುಕೊಳ್ಳುವಾಗ ಚಟರ್ಜಿ ಹೇಳಿದನು.

ಶವಗಳು ಒಂದಾದ ಮೇಲೆ ಒಂದರಂತೆ ಬರುತ್ತಲೇ ಇದ್ದವು.

ಪೊಲೀಸ್ ಸರ್ಜನ್‌ನ ಕೈಗಳು ಸೋಲತೊಡಗಿದವು.

"ಬನ್ನಿ"

ಮೆಡಿಕೋಗಳನ್ನು ಕೈ ಬೀಸಿ ಆಹ್ವಾನಿಸುತ್ತಾ ಆತನು ಹೊರಕ್ಕಿಳಿದನು.

ಲಾನ್‌ನಲ್ಲಿ ಕಾಂಕ್ರೀಟ್ ಬೆಂಚ್‌ನಲ್ಲಿ ಕುಳಿತು ತಾಳವನ್ನು ಹಾಕುತ್ತಾ ಚಟರ್ಜಿ ಪೈಪ್ ಸೇದಲು ಪ್ರಾರಂಭಿಸಿದನು. ಮೋರ್ಚರಿಯ ಎದುರಿಗೇ ಒಂದು ಮನೋಹರವಾದ ಲಾನ್ ಇತ್ತು. ತಮ್ಮ ಡಿಪಾರ್ಟ್‌ಮೆಂಟ್‌ನಲ್ಲಿನ ಎಲ್ಲಾ ಕೆಲಸದವರನ್ನೂ ಅಲ್ಲಿ ಗಿಡಗಳನ್ನು ನೆಟ್ಟು ಬೆಳೆಸಲೂ, ಅವುಗಳಿಗೆ ನೀರು ಹಾಕಿ ಬೆಳೆಸಲೂ ಚಟರ್ಜಿ ನಿಯಮಿಸಿದ್ದನು. ಒಂದೊಂದು ಪೋಸ್ಟ್ ಮಾರ್ಟಂ ಮುಗಿಯುವಾಗಲೂ ಚಟರ್ಜಿ ಕಿಟಕಿಯ ಬಳಿಯಿದ್ದ ಕರ್ಟನ್ ಎತ್ತಿ ಲಾನ್ ನೋಡುತ್ತಾ ನಿಲ್ಲುವನು. ಅಲ್ಲಿ ಹೂಗಳನ್ನು ಗಿಡಗಳನ್ನು ಮರಗಳನ್ನೂ ನೋಡುವಾಗ, ಕೆಲಸದ ಬೇಸರವನ್ನು ಆತನು ಮರೆಯುವನು.

ಒಂದು ಗುಲಾಬಿ ಹೂವನ್ನು ಮೃದುವಾಗಿ ಸವರುತ್ತಾ ನಿಧಾನವಾಗಿ ಚಟರ್ಜಿ ಹೇಳಿದನು. "ಇವು ಇಲ್ಲದಿದ್ದಲ್ಲಿ, ಈ ವೇಳೆಗಾಗಲೇ ನಾನು ಸತ್ತು ಹೋಗುತ್ತಿದ್ದೆನಷ್ಟೆ."

ಅಟೆಂಡರ್ ವರಾಂಡದಲ್ಲಿ ಪ್ರತ್ಯಕ್ಷನಾದಾಗ ಪೊಲೀಸ್ ಸರ್ಜನ್ ಎದ್ದನು. ಸ್ವಗತವೆಂಬಂತೆ ಆತನೆಂದನು.

"ಓ ಹೊಸ ಹೆಣ ಬಂದಿರಬೇಕು. ಅದೃಷ್ಟ ಚೆನ್ನಾಗಿರಬೇಕು."

ಚಟರ್ಜಿ ವರಾಂಡವನ್ನು ಪ್ರವೇಶಿಸಿದನು. ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿಯೂ, ಪೊಲೀಸರೂ ಮೋಟಾರ್ ಬೈಕ್‌ನ ಅಪಘಾತದಲ್ಲಿ ಸತ್ತ ಪ್ರೊಫೆಸರ್ ತಿವಾರಿ ಹೆಣದೊಂದಿಗೆ ಅಲ್ಲಿ ನಿಂತಿದ್ದರು.

ಬಟ್ಟೆಯಲ್ಲಿ ಸುತ್ತಿಟ್ಟಿದ್ದ ತಿವಾರಿ ಬಾಬುವಿನ ಹೆಣವನ್ನು ನೋಡುತ್ತಾ ಚಟರ್ಜಿ ಸ್ವಲ್ಪ ಹೊತ್ತು ಮೌನವನ್ನವಲಂಬಿಸಿದನು. ಅವರಿಬ್ಬರು ಅನ್ಯೋನ್ಯ ಮಿತ್ರರಾಗಿದ್ದರೋ ಏನೋ! ಚಟರ್ಜಿಯ ಕಣ್ಣುಗಳಲ್ಲಿ ನೀರು ಜಿನುಗಿತೋ ಏನೋ ?

"ಶರ್ಮಾಜಿ, ನಿಮ್ಮನ್ನು ನಾನು ಬೇಗ ಕಳಿಸುತ್ತೇನೆ" ಮೆಲ್ಲಗಿನ ದನಿಯಲ್ಲಿ ಹೇಳುತ್ತಾ ಚಟರ್ಜಿ ಪೋಸ್ಟ್‌ಮಾರ್ಟಂ ಹಾಲನ್ನು ಪ್ರವೇಶಿಸಿದನು.

ಪೋಸ್ಟ್‌ಮಾರ್ಟಂ ರಿಪೋರ್ಟಿನೊಂದಿಗೆ ಮೆಡಿಕೋಗಳು ಹೊರಕ್ಕಿಳಿದರು. ಅವರು ಎಂಟು ಜನರಿದ್ದರು. ನೋಟ್ಸ್‌ಗಳನ್ನು ರೆಕಾರ್ಡ್‌ಗಳನ್ನು ಬರೆದು ಬರೆದು ರಾತ್ರಿಯೇ ಹಗಲಾಗಲೆಂದು ಅವರು ಅವಸರವಸರವಾಗಿ ದಿಕ್ಕಿಗೊಬ್ಬರಂತೆ ಚೆದುರಿದರು.

ದೇವದಾಸನೂ ಲಕ್ಷ್ಮಿಯೂ ಯಾರಿಗೂ ಗೊತ್ತಾಗದಂತೆ ಕಪ್ಪು ಕಲ್ಲಿನ ಮೆಟ್ಟಿಲುಗಳನ್ನಿಳಿದು ಮತ್ತೆ ನದೀತೀರಕ್ಕೆ ಹೋದರು.

ಪ್ರವಾಹದ ದಿನಗಳಾದ್ದರಿಂದ ನದಿಯ ನೀರು ಏರಿಳಿಯುತ್ತಾ ದಡಕ್ಕೆ ಏರಿಬರುತ್ತಿದೆ. ವಾಲುತ್ತಾ ಬಿದ್ದಿರುವ ಸೂರ್ಯನು ಮೋಡದ ಬದಿಗಳೊಳಗಿದ್ದನು.

ಮರಳು ದಿಬ್ಬದ ಮೇಲೆ ತುಂಬಿ ಬೆಳೆದಿರುವ ಅರಳಲು ಪ್ರಾರಂಭಿಸಿದ 'ಕುದಿರವಾಲನ್'* ಹುಲ್ಲಿನ ಮೂಲಕ ಗಾಳಿ ಬೀಸಲಾರಂಭಿಸಿತು. ತಿಳಿಯಾದ ಗಹನವಾದ ಸಂಗೀತವು ಮೊಳಗುತ್ತಾ ಗಾಳಿಯ ಲಯಗತಿಗನುಸಾರವಾಗಿ ಅವು ಒಟ್ಟಿಗೆ ಸೇರಿ ನೃತ್ಯ ಮಾಡುವ ದೃಶ್ಯವನ್ನು ನೋಡಲು ಬಲು ಚೆನ್ನಾಗಿರುತ್ತದೆ.

ಅಲ್ಲಲ್ಲಿ ಒಂದೆರಡಂತೆ ದೋಣಿಗಳು ಸ್ವಲ್ಪ ದೂರದಲ್ಲಿರುವ ಸ್ನಾನಘಟ್ಟದ ಹತ್ತಿರ ಹತ್ತಿರ ಬರುತ್ತಿದವು. ಪೆಟ್ಟಿಗೆಗಳ ತುಂಬ ಸಾಮಾನುಗಳೊಂದಿಗೆ ದುರ್ಗಾ ಪೂಜೆಯ ರಜೆಯಲ್ಲಿ ಪ್ರವಾಸಿಗಳು ಬಂದು ಇಳಿಯುತ್ತಿದ್ದಾರೆ.

"ಮನುಷ್ಯರೆಂದರೆ ಒಂದು ಪ್ರತ್ಯೇಕ ನಿಯಮದ ಪ್ರಕಾರ ಕೆಲಸ ಮಾಡುವ ಯಂತ್ರಗಳಿದ್ದಂತೆ" ದೇವದಾಸ್ ಹೇಳಿದನು.

"ನನಗೆ ಹಾಗೆನ್ನಿಸುವುದಿಲ್ಲ. ಮನುಷ್ಯನು ತನ್ನಿಷ್ಟದಂತೆ ನಡೆದಾಡುವ ಒಂದು ಪ್ರಾಣಿಯು."

"ಅದೆಲ್ಲರೂ ಆಗ್ರಹಿಸುವುದೇ" ದೇವದಾಸ್ ಹೇಳಿದನು.

"ಪೊಲೀಸ್ ಸರ್ಜನ್‌ರ ಜೀವನವೇ ನಾನು ಹೇಳಿದ್ದಕ್ಕೆ ಒಂದು ಮುಖ್ಯ ಉದಾಹರಣೆ."

"ಆದರೂ ಆತನು ಹಾಡಿಕೊಳ್ಳುತ್ತಾ ತನ್ನ ಬೇಸರವನ್ನು ಹೋಗಲಾಡಿಸಿಕೊಳ್ಳುತ್ತಾರಲ್ಲಾ" ಲಕ್ಷ್ಮಿ ಹೇಳಿದಳು.

"ಹೌದು, ಅದೇನೋ ಸರಿ. ನಮ್ಮ ಕಸುಬು ನಮ್ಮನ್ನು ಎಲ್ಲಿಗೆ ಕರೆದುಕೊಂಡು ಹೋಗುತ್ತೋ ಅಲ್ಲೇ ನಾವು ನಮ್ಮ ಆ ಕಸುಬನ್ನು ಉಪೇಕ್ಷಿಸಬೇಕು. ಹಾಗೆ ಉಪೇಕ್ಷಿಸುವುದೇ ಚಟರ್ಜಿಯ ಸಂಗೀತ."

"ಅಯ್ಯೋ ಹೊತ್ತು ಬಹಳವಾಗುತ್ತಿದೆ. ನಾವು ಹೋಗೋಣ" ಲಕ್ಷ್ಮಿ ಆತುರದಿಂದ ಹೇಳಿದಳು.

"ನೀನು ಮತ್ತೆ ವಾಚ್ ನೋಡುತ್ತಿದ್ದೀ" ದೇವದಾಸ್ ನಗುತ್ತಾ ಹೇಳಿದನು.

"ಮಾನವ ಸಂಸ್ಕಾರದಿಂದ ರಕ್ಷಣೆ ಪಡೆಯಲು ಹಾಕುಹಿವಗೆ* ಪ್ರಯಾಣ ಮಾಡಲೆಂದು ಹಡಗು ಹತ್ತುವ ಮುಂಚೆ ತೋರ್‌ಹಯಲ್‌ದಾರ್* ತನ್ನ ವಾಚನ್ನು ಹೊಡೆದು ಚಚ್ಚಿಪುಡಿ ಮಾಡಿದನಂತೆ. ಅದರಂತೆ ನೀನೂ ನಿನ್ನ ವಾಚನ್ನು ಪುಡಿ ಪುಡಿ ಮಾಡಬೇಕು."

"ಬನ್ನಿ ಹೋಗೋಣ" ಲಕ್ಷ್ಮಿ ಹೇಳಿದಳು.

ಅವರಿಬ್ಬರು ಮೆಟ್ಟಲುಗಳನ್ನು ಹತ್ತಿ ಹೋಗತೊಡಗಿದರು.

ಸಂಧ್ಯಾಪ್ರಕಾಶವು ಕ್ಷೀಣಗೊಂಡ ಒಂದು ನಗುವಿನಂತೆ ನದೀ ನೀರಿನಲ್ಲಿ ಪ್ರತಿಬಿಂಬಿಸಿತು.

---

*ಕುದಿರವಾಲನ್: ಒಂದು ಬಗೆಯ ಜೊಂಡುಹುಲ್ಲು

*ಹಾಕುಹಿವ: ಒಂದು ಸ್ಥಳದ ಹೆಸರು

*ತೋರ್ ಹಯಲ್‌ದಾರ್: ಒಬ್ಬ ವ್ಯಕ್ತಿಯ ಹೆಸರು.

# ಇಪ್ಪತ್ತನಾಲ್ಕು

ರಾತ್ರಿ ಸುಮಾರು ಎರಡು ಗಂಟೆಯ ವೇಳೆಗೆ ಕುಞ್ಞಮ್ಮಳಿಗೆ ನೋವು ಆರಂಭವಾಯಿತು. ಅಂದು ರಾತ್ರಿ ಕಿಬ್ಬೊಟ್ಟೆಯಲ್ಲಿ ನೋವು ಆರಂಭವಾದಾಗಲೇ ಕುಞ್ಞಮ್ಮ ವಿಷಯವೇನೆಂದು ಗ್ರಹಿಸಿದಳು. ಹಗಲೆಲ್ಲಾ ಕುಞ್ಞಮ್ಮ ಕುಳಿತೂ ಮಲಗಿಯೂ ಕಾಲ ಕಳೆದಿದ್ದಳು.

ಮಧ್ಯಾಹ್ನದ ವಿರಾಮ ವೇಳೆಯಲ್ಲಿ ಮೇರಿ ತನ್ನ ಕೋಣೆಗೆ ಬಂದಾಗ ಕುಞ್ಞಮ್ಮಳು ಬೆವೆತು ಹೋಗಿದ್ದ ಹಣೆಯೊಂದಿಗೆ ಮಲಗಿದ್ದಳು.

"ಹೊಟ್ಟೆನೋವು ಗುಣವಾಯಿತೇ ಅಕ್ಕಾ?" ಮೇರಿ ಅವಳನ್ನು ಕೇಳಿದಳು.

"ಇಲ್ಲ ತಂಗಿ, ಅದು ಹಾಗೇ ಹೋಗುತ್ತೆ ಬಿಡು." ಕಿಬ್ಬೊಟ್ಟೆಯನ್ನು ಎತ್ತಿ ಹಿಡಿದುಕೊಂಡು ಕುಞ್ಞಮ್ಮ ಗೋಡೆಗಭಿಮುಖವಾಗಿ ತಿರುಗಿ ಮಲಗಿದಳು.

"ಏನಾದರೂ ಔಷಧಿ ತೆಗೆದುಕೊಂಡೆಯಾ ಅಕ್ಕಾ?"

"ಏನೂ ಬೇಡ ತಂಗಿ. ಹಾಗೆ ಅದು ಹೋಗುತ್ತೆ" ಮಂತ್ರವನ್ನು ಜಪಿಸುವಂತೆ ಕುಞ್ಞಮ್ಮ ಹೇಳಿದಳು.

ಆದರೂ ಅವಳ ಉಬ್ಬಿದಹೊಟ್ಟೆಯನ್ನು ಮೇರಿ ಸ್ವಲ್ಪ ಹೊತ್ತು ಎಡಗಣ್ಣಿನಿಂದ ನೋಡುತ್ತಾ ನಿಂತಳು. ಆದರೂ ಸಹ ಏನಾದರೂ ಆತಂಕವೋ, ಸಂಶಯವೋ ಮೇರಿಗೆ ತೋರಲಿಲ್ಲ. ಹೈಪರ್ ಅಸಿಡಿಟಿ ಆಗಿರಬೇಕು. ಹೊಟ್ಟೆಯಲ್ಲಿ ಆಸಿಡ್‌ನ ಪ್ರಮಾಣ ಎಲ್ಲೋ ಹೆಚ್ಚಿರಬೇಕು.

ವಾಸ್ತವದಲ್ಲಿ ಕಳೆದ ಒಂಭತ್ತು ತಿಂಗಳುಗಳಿಂದ ಕುಞ್ಞಮ್ಮ ತನ್ನ ಕೆಳಹೊಟ್ಟೆಯಲ್ಲಿ ಒಂದು ಪುಟ್ಟಗರ್ಭವನ್ನು ಧರಿಸಿ, ಅದನ್ನು ಹೊತ್ತುಕೊಂಡೇ ತಿರುಗಾಡುತ್ತಿದ್ದಳು. ಕುಞ್ಞಮ್ಮ ಗರ್ಭಿಣಿಯೆಂಬ ಸತ್ಯವು ಅವಳಿಗಲ್ಲದೆ ಹಾಸ್ಟೆಲಿನಲ್ಲೋ, ಆಸ್ಪತ್ರೆಯಲ್ಲೋ ಒಂದು ಮಗುವಿಗೂ ತಿಳಿದಿರಲಾರದು.

ಕಾಡಿನಲ್ಲಿನ ಕೋಗಿಲೆಯ ಗೂಡಲ್ಲಿ
ಕಾಗೆ ಒಂದೊಮ್ಮೆ ಮೊಟ್ಟೆ ಇಟ್ಟಿತು
ಕಾಡಿಗೆ ತಿಳಿಯದು ಗೂಡಿಗೆ ತಿಳಿಯದು
ಕೋಗಿಲೆಗೂ ತಿಳಿಯದು

ಎಂದೂ ಯಾರೋ ಹಾಡಿದಂತೆ.

ಸ್ವತಃ ಸ್ವಲ್ಪ ಕೊಬ್ಬಿರುವ ಶರೀರ ಪ್ರಕೃತಿಯಿರುವುದರಿಂದ ಕುಞ್ಞಮ್ಮಳ ಹೊಟ್ಟೆಯು ಬೆಳೆದು ಬರುತ್ತಿರುವುದು ಯಾರ ಗಮನದಲ್ಲೂ ಬಿದ್ದಿರಲಿಲ್ಲ. ಅಷ್ಟೇ ಅಲ್ಲ, ಸ್ವಲ್ಪಮಟ್ಟಿಗೆ ವಸ್ತ್ರಧಾರಣೆಯ ರೀತಿಯಿಂದಲೂ ಕುಞ್ಞಮ್ಮ ಅದನ್ನು ಮರೆಮಾಚಿದ್ದಳು.

ತನ್ನ ಪತಿಯಾದ ಸೈನಿಕನೂ, ಪ್ರಣಯಿಯಾದ ಸಬ್‌ಇನ್‌ಸ್ಪೆಕ್ಟರ್ ಶರ್ಮಾಜಿಯೂ ಕುಞ್ಞಮ್ಮಳ ಕೈಬಿಟ್ಟರಾದರೂ ಸ್ವತಃ ಆತ್ಮಸ್ಥೈರ್ಯವನ್ನೇ ಮೂಲಧನವನ್ನಾಗಿ ಮಾಡಿ ತನ್ನ ಭವಿಷತ್ತನ್ನು ಕಳೆಯುವೆನೆಂದೇ ಕುಞ್ಞಮ್ಮ ತೀರ್ಮಾನಿಸಿದ್ದಳು. ಎರಡೇ ಎರಡು ಪಂಕ್ತಿಗಳು ಮಾತ್ರವಿರುವ ಒಂದು ಕಾಗದವನ್ನು ಬರೆದು ಹಾಕಿದರೆ ಸಾಕು. ಸೈನಿಕನು ಹಿಂದಿರುಗುವನೆಂದು ಕುಞ್ಞಮ್ಮಳಿಗೆ ಚೆನ್ನಾಗಿ ತಿಳಿದಿತ್ತು. ಆದರೆ ಬಹುಧೈರ್ಯಶಾಲಿ ಯಾದ ಮನುಷ್ಯನನ್ನೇ ಕುಞ್ಞಮ್ಮ ಇಷ್ಟಪಡುತ್ತಿದ್ದಳು. ಬದನೆಕಾಯಿಯಂತೆ ಜೀವಿಸುವ ಗಂಡಸರನ್ನು ಕಂಡರೆ ಕುಞ್ಞಮ್ಮಳಿಗೆ ಸ್ವಲ್ಪವೂ ಇಷ್ಟವಿರಲಿಲ್ಲ.

ಗರ್ಭವನ್ನು ಧರಿಸಿ ಹೆರಿಗೆಯಾಗುವವರೆಗೂ ಏನೇನು ಪರಿಭ್ರಮೆಗಳೂ, ವ್ಯಾಕುಲತೆಗಳೂ ಉಂಟಾಗುತ್ತವೋ ಅದೊಂದೂ ಕುಞ್ಞಮ್ಮಳನ್ನು ಬಾಧಿಸಲಿಲ್ಲ. ಬಹುಶಃ ಕುಞ್ಞಮ್ಮ ಅದೆಲ್ಲವನ್ನೂ ತಾನೇ ಸಹಿಸಿ ಯಾರಿಗೂ ತಿಳಿಯದಂತೆ ಮನಸ್ಸಿನಲ್ಲೇ ಅಡಗಿಸಿಕೊಂಡದ್ದಾಗಿರಬೇಕು. ಅಬ್ಬಾ, ಒಂದು ಹೆಂಗಸೇ ಎಂದು ಎದೆಯ ಮೇಲೆ ಕೈಯಿಟ್ಟು ಕೇಳಬೇಕಾದ ಒಬ್ಬ ಸ್ತ್ರೀಯಾಗಿದ್ದಳು ಕುಞ್ಞಮ್ಮ.

ಕುಞ್ಞಮ್ಮ ಸ್ವಲ್ಪವೂ ಹೆದರಿದವಳಾಗಿರಲಿಲ್ಲ. ಎಲ್ಲಿ ಹೆರಬೇಕು, ಹೇಗೆ ಹೆರಬೇಕು ಎಂಬುವುದನ್ನೆಲ್ಲಾ ದೃಢನಿಶ್ಚಯ ಮಾಡಿಕೊಂಡ ಮಟ್ಟದಲ್ಲಿ ಅವಳು ನಡೆದು ಕೊಳ್ಳುತ್ತಿದ್ದಳು. ಹೆರಿಗೆಯ ಅನಂತರದ ಘಟನೆಗಳು ಹೇಗೆ ಇರುತ್ತವೆ ? ಬಹುಶಃ ಅಜ್ಞಾತವಾದ ಯಾವುದಾದರೊಂದು ಚರ್ಚ್‌ನಲ್ಲಿ ತನ್ನ ಮಗುವನ್ನು ಪೋಷಿಸಿ ಬೆಳೆಸಿ ಒಂದು ಸುಪ್ರಭಾತದಲ್ಲಿ ಅದರ ಕೈಯನ್ನು ಹಿಡಿದು ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿಯ ಎದುರು ಹೋಗಿ ನಿಂತು ತನ್ನ ಹಗೆ ತೀರಿಸಿಕೊಳ್ಳಲು ಕುಞ್ಞಮ್ಮ ತೀರ್ಮಾನಿಸಿದ್ದಳೋ ಏನೋ!

ಅನೇಕ ರಾತ್ರಿಗಳಲ್ಲಿ ತನ್ನ ಗರ್ಭಸ್ಥ ಶಿಶುವೊಂದಿಗೆ ಕುಞ್ಞಮ್ಮ ಸಂಭಾಷಣೆಯಲ್ಲಿ ತೊಡಗುವುದುಂಟು. ಮಧ್ಯೆ ಗಾಬರಿಯಿಂದ ಮೇರಿ ಎದ್ದು ಅಕ್ಕ ಯಾರೊಂದಿಗೆ ಮಾತನಾಡುತ್ತಿದ್ದೀ ? ಎಂದು ಕೇಳುವುದುಂಟು. ಆಗ ಕುಞ್ಞಮ್ಮ ಅದು, ತಂಗಿ, ನಾನು ಸ್ವಪ್ನವೊಂದನ್ನು ನೋಡಿದೆ. ಅದರಲ್ಲಿ ಮಾತನಾಡಿರಬೇಕು ಎಂದು ದಬಾಯಿಸಿ ಬಿಡುತ್ತಿದ್ದಳು. ಮಧ್ಯೆ ಕುಞ್ಞಮ್ಮ ನಗುತ್ತಲೂ ಇದ್ದಳು. ಮಧ್ಯೆ ಮಧ್ಯೆ ಬಿಕ್ಕಿ ಬಿಕ್ಕಿ ಅಳುತ್ತಲೂ ಇದ್ದಳು. ಮಧ್ಯೆ ಮಧ್ಯೆ ಹುಚ್ಚಿಯಂತೆ ಏನೋ ಬಡಬಡಿಸಿದ್ದೂ ಉಂಟು.

ಕಳೆದ ಒಂಭತ್ತು ತಿಂಗಳುಗಳು ಕುಞ್ಞಮ್ಮಳಿಗೆ ಬಹುಶಃ ಒಂಭತ್ತು ಕಲ್ಪಾಂತರಗಳಾಗಿರಬಹುದು. ಒಂದೊಂದು ನಿಮಿಷವೂ ಒಂದೊಂದು ಯುಗದಂತೆ ಅವಳು ಕಳೆಯುತ್ತಿದ್ದಳು. ಮಾತೃತ್ವದ ಭಾರವು ಇಂತಹ ಕ್ಷಣಗಳಲ್ಲಿ ಆನಂದ ಸಾಗರದಲ್ಲಿ ಮುಳುಗಿಸಿ ಸ್ನಾನ ಮಾಡಿಸುತ್ತೇನು ? ಅಥವಾ ಆ ಭಾರವು ಹೊರಲಾಗದ ವಿಧದಲ್ಲಿ ಕುಞ್ಞಮ್ಮಳನ್ನು ಶಕ್ತಿಗುಂದಿಸುತ್ತದೆಯೇ ?

ಗರ್ಭಕಾಲದ ಶರೀರಮಾಂದ್ಯವನ್ನೂ ರೂಪದಲ್ಲುಂಟಾಗುವ ಬದಲಾವಣೆಯನ್ನೂ ಯಾರಿಗೂ ತೋರಿಸದೆ, ತಿಳಿಸದೆ ಕುಞ್ಞಮ್ಮ ಶಿಶುವನ್ನು ಹೊತ್ತು ಕಾಲ ಕಳೆದದ್ದು ಒಂದು ಅದ್ಭುತವೇ. ಪ್ರಪಂಚದಲ್ಲಿ ಇಂತಹ ಏನೇನು ಅದ್ಭುತಗಳು ನಡೆಯುತ್ತವೆಯೋ ?

ಬೆನ್ನು ಹುರಿಯಿಂದ ಆರಂಭವಾಗಿ ಕಿಬ್ಬೊಟ್ಟೆಯಲ್ಲಿ ಕೊನೆಗೊಳ್ಳುವ ನೋವನ್ನು ಸ್ವಲ್ಪ ಹೊತ್ತು ಹಲ್ಲು ಕಚ್ಚಿ ಅದುಮಿಕೊಂಡು ಶಬ್ದವಿಲ್ಲದೆ ನರಳುತ್ತಿದ್ದ ಕುಞ್ಞಮ್ಮ ಇನ್ನು ಸಹಿಸಲು ಸಾಧ್ಯವಿಲ್ಲವೆಂದಾದಾಗ ಕುಞ್ಞಮ್ಮ ಮೆಲ್ಲನೆ ಎದ್ದಳು.

ನೈಟ್‌ಗೌನಿನ ಮೇಲೆ ಒಂದು ಕಪ್ಪು ಹೊದಿಕೆಯನ್ನು ಕುಞ್ಞಮ್ಮ ಹೊದ್ದು ಕೊಂಡಳು. ಅನಂತರ ಮೆಲ್ಲಮೆಲ್ಲನೆ ತನ್ನ ಕೋಣೆಯಿಂದ ಹೊರಬಿದ್ದಳು. ಕೋಣೆಯ ಬಾಗಿಲನ್ನು ಮುಚ್ಚುವಾಗ ಒಂದು ನಿಮಿಷ ಮಲಗಿದ್ದ ಮೇರಿಯನ್ನು ನೋಡಿದಳು. ತಲೆದಿಂಬಿನ ಮೇಲೆ ತಲೆಯನ್ನು ಓರೆಯಾಗಿಟ್ಟುಕೊಂಡು ಕೈಕಾಲು ಗಳು ಸೇದಿಹೋದಂತೆ ಅವಳು ಗಾಢನಿದ್ದೆಯಲ್ಲಿ ಮುಳುಗಿದ್ದಳು. ಒಂದು ಬಿಳಿ ಪಾರಿವಾಳವು ನಿದ್ರಿಸುವಂತೆ ಅವಳು ನಿದ್ರಿಸುತ್ತಿದ್ದಳು.

ಹಾಸ್ಟಲ್ ಸಂಪೂರ್ಣವಾಗಿ ನಿದ್ದೆಯಲ್ಲಿ ಮುಳುಗಿತ್ತು. ಒಳಗಿನ ವರಾಂಡದಲ್ಲಿ ಪ್ರಕಾಶವು ಕಡಿಮೆಯಾಗಿದ್ದ ಒಂದು ಬಲ್ಬ್ ಮಾತ್ರ ಉರಿಯುತ್ತಿತ್ತು. ವರಾಂಡವನ್ನು, ಲಾನನ್ನು ಮೇಟ್ರನ್ ಹೆಲೆನ್ ಸಿಂಗ್‌ರ ಕ್ವಾರ್ಟರ್ಸ್ ಅನ್ನು ಸುತ್ತುವರಿದು ಕುಞ್ಞಮ್ಮ ವಿಕೆಟ್ ಗೇಟ್‌ನ ಬಳಿ ಬಂದಳು. ಅಲ್ಲಿ ಒಂದು ನಿಮಿಷ ನಿಂತು ವೇಗವಾಗಿ ಬರುತ್ತಿದ್ದ ಉಸಿರನ್ನು ಸರಿಪಡಿಸಿಕೊಂಡು ಸುತ್ತಲೂ ನೋಡಿದಳು. ಕಾವಲುಗಾರನು ಗೇಟ್‌ನ ಬಾಗಿಲ ಬಳಿಯ ದಿಣ್ಣೆಯಲ್ಲಿ ಮಲಗಿ ನಿದ್ರಿಸುತ್ತಿದ್ದನು. ಹೆಲೆನ್ ಸಿಂಗ್‌ರ ಕ್ವಾರ್ಟರ್ಸ್‌ನ ಕಿಟಕಿ ಬಾಗಿಲುಗಳಲ್ಲಿ ಒಂದನ್ನು ತೆರೆದೇ ಇಟ್ಟಿತ್ತು. ಲೋಕದ ಆಗುಹೋಗುಗಳನ್ನು ತಿಳಿಯಲೋಸುಗವೆಂಬಂತೆ ಆಕೆ ಅದನ್ನು ಯಾವಾಗಲೂ ತೆರೆದಿಟ್ಟಿರುತ್ತಿದ್ದರು. ಅಲ್ಲಿ ವಿಶೇಷವಾಗಿ ಯಾರೂ ಇರಲಿಲ್ಲ.

ವಿಕೆಟ್ ಗೇಟ್ ತೆರೆದು ಕುಞ್ಞಮ್ಮ ಹೊರಕ್ಕಿಳಿದಳು. ಅರ್ಧ ರಾತ್ರಿಯಲ್ಲಿ ನೋವು ತಿನ್ನುತ್ತಾ ಒಂದು ಕಪ್ಪಗಿನ ಹೊದಿಕೆಯನ್ನು ಹೊದ್ದುಕೊಂಡು ಆಸ್ಪತ್ರೆಯ ರಸ್ತೆಯಲ್ಲಿ ಅವಳು ಒಂದು ಭೂತದಂತೆ ನಡೆದಳು. ಸ್ವಲ್ಪ ಹೊತ್ತು ನಡೆಯುತ್ತಲೇ ಇದ್ದಳು. ಯಾರೋ ಒಬ್ಬನು ಎದುರಿಗೆ ನಡೆದು ಬಂದನು. ಅದೊಂದನ್ನು ಕುಞ್ಞಮ್ಮ ಗಮನಿಸಲಿಲ್ಲ. ನರ್ಸ್ ಕ್ವಾರ್ಟರ್ಸ್‌ಗಳು, ಡಾಕ್ಟರ್‌ಗಳ ಮನೆಗಳು, ಸಿನಿಮೆ ಥಿಯೇಟರ್‌ಗಳನ್ನೂ ದಾಟಿ ಆಸ್ಪತ್ರೆಯ ಕಟ್ಟಡದ ತೆಂಕಣ ಮೂಲೆಯಲ್ಲಿರುವ ಮೋರ್ಚರಿಯ ಎದುರಿಗೆ ಕುಞ್ಞಮ್ಮ ಬಂದು ನಿಂತಳು. ಅದಕ್ಕೆ ಬಹು ಹತ್ತಿರದಲ್ಲಿರುವ ಕಾರ್ಡಿಯಾಲಜಿಯಲ್ಲಿ ಒಳ್ಳೆಯ ಬೆಳಕನ್ನೂ, ಅತ್ತಿತ್ತ ಚಲಿಸುವ ನೆರಳುಗಳನ್ನೂ ಕಂಡಳು. ಮೋರ್ಚರಿಯಲ್ಲಿದ್ದ ವಾಚ್‌ಮನ್ ಬಾಗಿಲನ್ನೊರಗಿ ಕುಳಿತುಕೊಂಡೇ ನಿದ್ದೆ ಮಾಡುತ್ತಿದ್ದನು.

ಎಲ್ಲಾ ಕಾವಲುಗಾರರೂ ನಿದ್ರಿಸುತ್ತಿದ್ದರು.

ಮೋರ್ಚರಿಯ ಹಿಂಭಾಗದಿಂದ ಮೆಲ್ಲಮೆಲ್ಲನೆ ನಡೆದು ನಿರ್ಜನವಾದ ಮರಳು ಪ್ರದೇಶವನ್ನು ದಾಟಿ ಕಪ್ಪು ಕಲ್ಲಿನ ಮೆಟ್ಟಿಲುಗಳನ್ನು ತೊಳೆದು ಕುಞ್ಞಮ್ಮ ಯಮುನಾ ನದಿಯ ತೀರವನ್ನು ತಲುಪಿದಳು.

ವಿಶಾಲವಾದ ನದಿಯ ತೀರವನ್ನು ತಲುಪಿದಾಗ ಕುಞ್ಞಮ್ಮಳಿಗೆ ತಾನು ಸ್ವತಂತ್ರಳಾದಳೆನ್ನಿಸಿತು. ಬೆವರಿನಲ್ಲಿ ಮಿಂದ ಕುಞ್ಞಮ್ಮಳನ್ನು ನದಿಯ ನೀರಿನ ಮೇಲೆ ಹಾದು ಬರುತ್ತಿದ್ದ ಗಾಳಿಯು ತಂಪು ಮಾಡಿತು.

ಆಕಾಶವು ಮೇಘಾವೃತವಾಗಿತ್ತು. ಮಧ್ಯೆ ಮಧ್ಯೆ ನಕ್ಷತ್ರಗಳು ಮಿಂಚುತ್ತಿದ್ದವು. ನೀರಿನ ಮೇಲ್ಮೈ ಅದರದೇ ಆದ ಪ್ರಕಾಶವನ್ನು ಚೆಲ್ಲಿತ್ತು. ನದಿಯ ಆಚೆಯ ದಡವು ಕಾಣುತ್ತಿರಲಿಲ್ಲ. ಆದರೂ ಆಕಾಶದ ಕೆಳಗೆ ಅದರ ಕಾಲುಗಳನ್ನು ಹಿಡಿದು ನಿಂತಿರುವಂತೆ ನದಿಯು ನಿಶ್ಶಬ್ದವಾಗಿ ಹರಡಿ ಹರಿಯುತ್ತಿತ್ತು.

ಒಂದು ಸಣ್ಣದೋಣಿಯೋ ಅಥವಾ ದೊಡ್ಡದೋಣಿಯೋ ಅಸ್ಪಷ್ಟವಾಗಿಯಾದರೂ ನದಿಯಲ್ಲಿ ಕಾಣಿಸಲಿಲ್ಲ. ಒಬ್ಬ ಮನುಷ್ಯ ಜೀವಿಯ ಧ್ವನಿಯೂ ಕೇಳಿಸಲಿಲ್ಲ. ಒಂದು ಪಕ್ಷಿಯ ಕೂಗನ್ನೂ ಸಹ ಅಲ್ಲಿ ಕೇಳಲಾಗುತ್ತಿರಲಿಲ್ಲ.

ಕುಞ್ಞಮ್ಮ ಅಲ್ಲಿಯವರೆಗೂ ಹೊದ್ದುಕೊಂಡು ಬಂದು ಕಪ್ಪಗಿನ ಹೊದಿಕೆಯನ್ನು ಯಮುನಾ ನದಿಯ ಮರಳಿನ ಹರವಿನ ಮೇಲೆ ಹಾಕಿದಳು. ಅನಂತರ ಏನನ್ನೂ ಯೋಚಿಸದೆ ನಕ್ಷತ್ರಗಳನ್ನು ದಿಟ್ಟಿಸಿ ನೋಡುತ್ತಾ ಆ ಹಾಸಿನಲ್ಲಿ ಅಂಗಾತವಾಗಿ ಮಲಗಿದಳು.

ಅಸಹನೀಯವಾದ ನೋವು ಮತ್ತೆ ಆರಂಭವಾಯಿತು. ತೊಡೆಯಲ್ಲಿನ ಮಾಂಸಖಂಡಗಳೆಲ್ಲವೂ ಹಿಡಿದೆಳೆದಂತಾಗಿ, ಮೇಲಕ್ಕೆ ಕೊಂಡೊಯ್ದಂತಾಗಿ ಕಿಬ್ಬೊಟ್ಟೆಗೆ ಬಂದಂತೆ ಕುಞ್ಞಮ್ಮಳಿಗನಿಸಿತು. ಮೆದುಳೂ, ಹೃದಯವೂ, ಪಿತ್ತಜನಕಾಂಗಗಳೂ, ಕರುಳೂ, ಎಲ್ಲವೂ ಸೇರಿ ಕಿಬ್ಬೊಟ್ಟೆಯ ಆಳಕ್ಕೆ ಇಳಿದುಬರುತ್ತಿದೆ. ಬೆನ್ನು ಮೂಳೆಯೂ ಪೃಷ್ಠಭಾಗವೂ ಮುಂದಕ್ಕೆ ತಳ್ಳಿದಂತಾಗುತ್ತಿದೆ. ಕಣ್ಣಿನಲ್ಲಿ ಕತ್ತಲೆ ಕವಿಯುತ್ತಿದೆ. ತಲೆ ಸಿಡಿಯುವಂತಹ ನೋವಿನಿಂದ, ತಲೆ ಸುತ್ತಿದಂತಾಗುತ್ತಿತ್ತು.

ನೋವು ತಡೆಯಲಸಾಧ್ಯವಾದಾಗ ಕುಞ್ಞಮ್ಮ ಅಳತೊಡಗಿದಳು. ಅವಳ ರೋದನವೋ, ನಿಶ್ಶಬ್ದ ರೋದನವಾಗಿತ್ತು. ಮಾಂಸಖಂಡಗಳು ಎಳೆದು ಹಿಡಿದು ತೆರೆದಿದ್ದ ಬಾಯಿಂದ ಗಾಳಿ ಮಾತ್ರ ಹೊರಕ್ಕೆ ಬಂತು.

ಆರೋಹಣ ಅವರೋಹಣ ಕ್ರಮದಲ್ಲಿ ನೋವು ಹೆಚ್ಚಿಯೂ ಕಡಿಮೆಯಾಗಿಯೂ ಏರಿಳಿಯುತ್ತಿತ್ತು.

ಬೃಹತ್ತಾದ ಸರ್ವಗ್ರಾಹಿಯಾದ ನದಿಯು ತನ್ನ ದಡದಲ್ಲಿನ ಅಗಲವಾದ ವಕ್ಷಸ್ಥಳದಲ್ಲಿ ವಿಶ್ವ ಪರಿಷತ್ ಅನ್ನು ಸೋಲಿಸುವಂತಹ ಮಾತೃತ್ವದ ಆಕ್ರಂದನಗಳನ್ನು ವೀಕ್ಷಿಸುತ್ತಾ ನಿಂತಿತ್ತು. ಅಲೆಗಳನ್ನು ತನ್ನ ಕಿಬ್ಬೊಟ್ಟೆಯಲ್ಲಿ ಅಡಗಿಸಿ ಹಿಡಿದುಕೊಂಡು ಬ್ರಹ್ಮಮುಹೂರ್ತದ ಎಚ್ಚರದಲ್ಲಿ ನದಿಯು ಧ್ಯಾನನಿರತವಾಗಿತ್ತು. ಅಂಧಕಾರದ ಸೂಕ್ಷ್ಮವಾದ ಆವರಣಗಳನ್ನು ತಟ್ಟಿ ಹೋಗಲಾಡಿಸುತ್ತಾ ತನ್ನ ಒಳಕಣ್ಣುಗಳನ್ನು ತೆರೆದು ಹಿಡಿದುಕೊಂಡು ನದಿಯು ಅಲ್ಲಿ ನಡೆಯಲಿರುವ ಒಂದು ಶಿಶು ಜನನದ ಕೋಲಾಹಲವನ್ನು ನಿಸ್ಸಂಗತ್ವದಿಂದ ನೋಡುತ್ತಾ ನಿಂತಿತ್ತು.

ಪೂರ್ವದಲ್ಲಿ - ಅಲ್ಲಿ ದೂರದ ಪೂರ್ವದಲ್ಲಿ, ಕತ್ತಲೆಯನ್ನು ಭೇದಿಸಿಕೊಂಡು ಬೆಳಕಿನ ಪ್ರಥಮ ಕಿರಣಗಳು ಆಕಾಶದಲ್ಲಿ ಮೂಡಿ ಚೆದುರತೊಡಗಿದವು. ಒಂದು ಬೆಂಕಿಯ ನಾಲಗೆಯಂತೆ ಆ ಪ್ರಥಮ ಕಿರಣವು ನದಿಯ ವಿಶಾಲವಾದ ವಕ್ಷಸ್ಥಳದ ಮೇಲೆ ಒಂದು ಆಘಾತವೆಸಗಿದಂತೆ ಅದುಮಲ್ಪಟ್ಟಿತು. ಹೀಗೆ ಬಿದ್ದದ್ದು ಬೆಳಕಿನ ಕಿರಣಗಳಾದರೂ ನದಿಯು ಒಮ್ಮೆ ಗಾಬರಿಗೊಂಡಿತು. ಸೂಕ್ಷ್ಮವಾದ ಒಂದು ನಡುಕವೂ, ತಂಪೂ ನದಿಯಲ್ಲಿ ಅತ್ತಿತ್ತ ಉದ್ಭವಿಸಿತು. ಯಮುನಾನದಿಯ ಮರಳಿನ

ಹರವಿನಲ್ಲಿ ಆಗ ತಾನೆ ಹುಟ್ಟಿದ ಮಗುವಿನ ರೋದನವೆದ್ದಿತು. ಮಗುವಿನ ರೋದನವೇ ಆದರೂ ಸ್ತ್ರೀತ್ವದ ಆ ಪ್ರಥಮ ಧ್ವನಿಯು ಆಕಾಶದವರೆಗೆ ಹೋಯಿತು.

ಯಮುನಾನದಿಯಲ್ಲಿ ಅಲೆಗಳೆದ್ದವು. ಆ ಅಲೆಗಳು ಪರಸ್ಪರ ತಲೆಯ ಮೇಲೆ ಹೊಡೆಯುತ್ತಾ ನೂರೆನೂರೆಯಾಗಿ ಆನಂದ ನರ್ತನವಾಡತೊಡಗಿದವು.

ಬೆಳಗಿನ ಹೊತ್ತು ಮೇರಿಯು ನಿದ್ದೆಯಿಂದ ಎಚ್ಚೆತ್ತಾಗ ಕುಞ್ಞಮ್ಮ ಮಂಚದ ಮೇಲೆ ಮಲಗಿ ನಿದ್ದೆ ಮಾಡುತ್ತಿದ್ದಳು. ಬಾತ್‌ರೂಮಿಗೆ ಹೋಗಿ ಹಲ್ಲುಜ್ಜಿ ಸ್ನಾನ ಮುಗಿಸಿ ಕೋಣೆಗೆ ಹಿಂತಿರುಗಿ ಬಂದಾಗ ಕುಞ್ಞಮ್ಮ ಇನ್ನೂ ಏಳದಿದ್ದುದನ್ನು ಕಂಡಾಗ ಮೇರಿಯು ಅವಳನ್ನು ಅಲುಗಿಸಿ ಎಬ್ಬಿಸಲು ಯತ್ನಿಸಿದಳು. ಎರಡು ಮೂರು ಸಲ ಅಲುಗಿಸಿದರೂ ಅವಳು ಎಚ್ಚರಗೊಳ್ಳದ್ದನ್ನು ಕಂಡ ಮೇರಿ ಗೋಡೆಗೆ ಸೇರಿದಂತೆ ಮಲಗಿದ್ದ ಕುಞ್ಞಮ್ಮಳನ್ನು ತನ್ನ ಎರಡೂ ಕೈಗಳಿಂದ ಹಿಡಿದು ತಿರುಗಿಸಿ ಬೋರಲಾಗಿ ಮಲಗಿಸಿ ಹೊದಿಕೆಯನ್ನು ಎಳೆದು ಸರಿಸಿದಳು.

"ಅಯ್ಯೋ!" ಮೇರಿಯಿಂದ ಚೀತ್ಕಾರವೊಂದು ಹೊರಬಂದಿತು.

ಹಾಸಿಗೆಯ ಮೇಲಿನ ಬೆಡ್‌ಷೀಟ್ ರಕ್ತಸಿಕ್ತವಾಗಿತ್ತು. ಕುಞ್ಞಮ್ಮಳ ಬಟ್ಟೆಯೂ ರಕ್ತದಿಂದ ತೋಯ್ದಿದ್ದವು.

ಕುಞ್ಞಮ್ಮಳಿಗೆ ಮೈಮೇಲೆ ಜ್ಞಾನವಿರಲಿಲ್ಲ.

ನರ್ಸ್‌ಗಳ ಹಾಸ್ಟೆಲ್‌ನಲ್ಲಿ ಗಲಾಟೆಯಾಗಲಾರಂಭಿಸಿತು. ಕೋಣೆಗಳ ಮುಂದೆಲ್ಲಾ ಅಲ್ಲಿ ವಾಸವಾಗಿರುವವರು ಗುಂಪು ಗುಂಪಾಗಿ ಬಂದು ನಿಂತಿದ್ದರು. ಅವರು ಪರಸ್ಪರ ಗುಸುಗುಸು ಮಾತನಾಡುತ್ತಲೂ, ಗೊಗುಟ್ಟುತ್ತಲೂ ಇದ್ದರು. ಅಷ್ಟು ಹೊತ್ತಿಗೆ ಮೇಟ್ರನ್ ಹೆಲೆನ್ ಸಿಂಗ್ ಏದುಸಿರು ಬಿಡುತ್ತಾ ಓಡಿ ಬಂದರು. ಕೋಣೆಯಲ್ಲಿ ಗುಂಪಾಗಿ. ನಿಂತಿದ್ದವರನ್ನು ಅತ್ತಿತ್ತ ಸರಿಸಿ ಕುಞ್ಞಮ್ಮಳನ್ನು ಆಪಾದಮಸ್ತಕ ದಿಟ್ಟಿಸಿದರು. ಕುಞ್ಞಮ್ಮಳ ನಾಡಿ ಹಿಡಿದು ನೋಡಿದರು. ಅನೀಮಿಯಾ ಇದೆಯೋ ಎಂದು ನೋಡಿದರು. ಅನಂತರ ರಕ್ತಸ್ರಾವವಾಗಿದ್ದ ವಸ್ತ್ರಗಳಲ್ಲಿ ತಮ್ಮ ತೋರುಬೆರಳನ್ನು ಒತ್ತಿದರು.

ಮೇಟ್ರನ್ ಹೆಲೆನ್ ಸಿಂಗ್ ಏನನ್ನೋ ಯೋಚಿಸಿದರು. ತೋರು ಬೆರಳೆತ್ತಿ ಹಿಡಿದು ಒಂದು ನಾಯಿಯಂತೆ ಆಕೆ ಅದರ ವಾಸನೆ ನೋಡಲಾರಂಭಿಸಿದರು.

ಆಂಬುಲೆನ್ಸ್ ಕೂಗುತ್ತಾ ಹಾಸ್ಟೆಲ್‌ಗೆ ಧಾವಿಸಿ ಬಂತು. ಯಾರ್‍ಯಾರೋ ಸೇರಿ ಕುಞ್ಞಮ್ಮಳನ್ನು ಎತ್ತಿಹಿಡಿದು ಆಂಬುಲೆನ್ಸ್‌ನಲ್ಲಿ ಹಾಕಿಕೊಂಡು ಎಮರ್‌ಜೆನ್ಸಿಗೆ ಕರೆದೊಯ್ದರು.

ಡಾಕ್ಟರ್ ತನುಜ ಕುಞ್ಞಮ್ಮಳಿಗೆ ಚಿಕಿತ್ಸೆ ನೀಡಬೇಕೆಂದು ಎಮರ್ಜೆನ್ಸಿಗೆ ಬಂದರು. ತುರ್ತು ಶುಶ್ರೂಷೆಗಳನ್ನು ನೀಡಲಾರಂಭಿಸಿದರು. ಕುಞ್ಞಮ್ಮಳ ಮಂಚದ ಎರಡೂ ಬದಿಗಳಲ್ಲಿ ರಕ್ತದ, ಗ್ಲೂಕೋಸ್‌ನ ಬಾಟಲ್‌ಗಳು ನೇತಾಡುತ್ತಿದ್ದವು.

ಮಧ್ಯಾಹ್ನವಾಗುವ ವೇಳೆಗೆ ಕುಞ್ಞಮ್ಮಳಿಗೆ ಪ್ರಜ್ಞೆ ಬಂತು. ಸಾಯಂಕಾಲವಾಗುವ ವೇಳೆಗೆ ಕುಞ್ಞಮ್ಮ ಮಾತುಕತೆಗಳನ್ನಾಡಲೂ, ಪಾನೀಯಗಳನ್ನು ಕುಡಿಯಲೂ ಪ್ರಾರಂಭಿಸಿದಳು.

ಮಾರನೆಯ ದಿನ ಮುಂಜಾನೆ ಕುಞ್ಞಮ್ಮ ಪರಿಪೂರ್ಣವಾದ ಆರೋಗ್ಯ

ವಂತೆಯಾದಂತೆ ತೋರತೊಡಗಿತು. ಏನೂ ನಡದೇ ಇಲ್ಲವೆಂಬಂತೆ ಕುಙ್ಞಮ್ಮ ಜೊತೆಗಾರರೊಂದಿಗೆ ಮಾತುಕತೆಗಳನ್ನಾಡುತ್ತಿರಬೇಕಾದರೆ, ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿಯೂ ಇಬ್ಬರೂ ಪೊಲೀಸರೂ ಅವಳು ಮಲಗಿದ್ದ ಎಮರ್ಜೆನ್ಸಿಯಲ್ಲಿನ ಸ್ಪೆಷಲ್ ರೂಮನ್ನು ಪ್ರವೇಶಿಸಿದರು.

ಅವರು ಕುಙ್ಞಮ್ಮಳನ್ನು ಪ್ರಶ್ನಿಸಲು ಬಂದಿದ್ದರು.

ಹೆರಿಗೆಯ ನಂತರ ಉಂಟಾಗುವ ರಕ್ತಸ್ರಾವವೇ ಕುಙ್ಞಮ್ಮಳಿಗೆ ಬಂದ ರೋಗವಾಗಿತ್ತು. ಆದರೆ ಕುಙ್ಞಮ್ಮ ಹೆತ್ತಿದ್ದಾದರೂ ಎಲ್ಲಿ ? ಹೇಗೆ ಹೆತ್ತಳು ? ಹೆತ್ತ ಮಗು ಏನಾಯಿತು ? ಕಾನೂನನ್ನು ಪಾಲಿಸುವವರಿಗೆ ಇದು ತಿಳಿಯಬೇಕಷ್ಟೆ. ಅದೆಲ್ಲಾ ತಿಳಿಯಲೆಂದೇ ಅವರೆಲ್ಲಾ ಬಂದಿದ್ದರು.

ಮುಚ್ಚಿದ್ದ ಕೋಣೆಯಲ್ಲಿ ಸುಮಾರು ಎರಡು ಗಂಟೆಗಳ ಕಾಲ ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿಯೂ, ಇಬ್ಬರು ಪೊಲೀಸರೂ ಕುಙ್ಞಮ್ಮಳನ್ನು ಪ್ರಶ್ನಿಸಿದರು. ಕೊನೆಗೆ ಆಸ್ಪತ್ರೆಯ ಸೂಪರಿಂಟೆಂಡೆಂಟ್ ಒಪ್ಪಿಗೆಯಿಂದ ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿ ಕುಙ್ಞಮ್ಮಳನ್ನು ಅರೆಸ್ಟ್ ಮಾಡಿ ಪೊಲೀಸ್ ಬಂದೋಬಸ್ತಿನಲ್ಲಿ ಕರೆದುಕೊಂಡು ಹೋದನು. ಮಾರನೆಯ ದಿನ ಸಾಯಂಕಾಲ ಯಮುನಾ ನದೀ ತೀರದಲ್ಲಿ ಒಂದು ನಾಟಕ ರಂಗಕ್ಕೇರಲಿತ್ತು.

ಒಬ್ಬ ಪೊಲೀಸ್ ಸಬ್ ಇನ್‌ಸ್ಪೆಕ್ಟರೂ ಇಬ್ಬರೂ ಪೊಲೀಸಿನವರೂ ಸೇರಿ ಒಬ್ಬ ಹೆಂಗಸನ್ನು ಹಿಡಿದೆಳೆದುಕೊಂಡು ಯಮುನಾ ನದಿಯ ಮರಳು ಹರವಿನ ಮೂಲಕ ಸಾಗುತ್ತಲಿದ್ದರು. ಒಂದು ದೊಡ್ಡ ಜನರ ಗುಂಪು ಅದನ್ನು ನೋಡಲೆಂದೇ ಯಮುನಾ ನದೀ ತೀರದಲ್ಲಿ ಸೇರಿತ್ತು. ಆ ಜನರ ಗುಂಪಿನಲ್ಲಿ ಬಗೆ ಬಗೆಯ ವರ್ಗಗಳ ಜನರಿದ್ದರು. ಅದರಲ್ಲಿ ತಪ್ಪು ಮಾಡಿದವರೂ, ಮಾಡಲಿರುವವರೂ ಇದ್ದರು. ಡಾಕ್ಟರ್‌ಗಳೂ, ನರ್ಸ್‌ಗಳೂ ಇದ್ದರು. ಮೇಟ್ರನ್ ಸಹ ಇದ್ದರು. ವ್ಯಾಪಾರಿಗಳೂ, ಕಲಾವಿದರೂ ಇದ್ದರು. ಮುದಿಕೋಗಳ ಒಂದು ಗುಂಪೇ ಇತ್ತು. ದೊಡ್ಡ ದೋಣಿಯನ್ನೋಡಿಸುವವನೂ ಬೋಟ್ ನಡೆಸುವವನೂ ಇದ್ದನು. ಸೂರ್ಯ ನಮಸ್ಕಾರ ಮಾಡಲು ಬಂದ ಸನ್ಯಾಸಿಗಳೂ ಇದ್ದರು. ಪಿಂಡ ಹಾಕಲು ಬಂದ ಬಂಧುಜನಗಳೂ ಇದ್ದರು. ಕಥೆ ಹೇಳುತ್ತಾ ಮಾತನಾಡುತ್ತಾ ಅಲ್ಲಿ ಕಾಲ ಕಳೆಯಲು ಬಂದಿದ್ದ ಪ್ರಣಯಿಗಳೂ ಇದ್ದರು. ಇದೊಂದನ್ನೂ ತಿಳಿಯದೆ ನದಿಯಲ್ಲಿ ಸ್ನಾನ ಮಾಡಲೆಂದು ಬಂದಿದ್ದ ಡಾಕ್ಟರ್ ಡಿ. ಕುಮಾರ್ ಇದ್ದಾರೆ. ದೇವದಾಸ್, ಲಕ್ಷ್ಮಿಯೂ ಇದ್ದರು.

ನದಿಯ ನೀರಿನಲ್ಲಿ ಸೂರ್ಯ ಪ್ರಕಾಶವು ಪ್ರತಿಬಿಂಬಿಸುತ್ತಿತ್ತು. ಅಲೆಗಳು ಅತಿಕ್ರಮಿಸುತ್ತಿವೆ ಎಂದು ಅನ್ನಿಸಿತು. ಪೂರ್ವ ದಿಕ್ಕಿನಿಂದ ಗಾಳಿ ಬೀಸುತ್ತಿತ್ತು. ಚಲಿಸುತ್ತಿರುವ ದೊಡ್ಡ ದೋಣಿಗಳೂ, ಬೋಟುಗಳೂ ನಿಶ್ಚಲವಾದವು. ಪಕ್ಷಿಗಳು ಮೀನನ್ನು ಕುಕ್ಕಲು ಪ್ರಯತ್ನಿಸದೆ ನೀರಿನ ಮೇಲೆಯೇ ಕುಳಿತು ಸುಮ್ಮನೆ ಎದ್ದು ಹಾರಾಡುತ್ತಾ ಆಟವಾಡುತ್ತಿದ್ದವು.

ಪೊಲೀಸರು ಓಡಿದೆಳೆದುಕೊಂಡು ಬರುತ್ತಿದ್ದ ಸ್ತ್ರೀ ಇದ್ದಕ್ಕಿದ್ದಂತೆ ನಿಂತಳು. ಅವಳು ನಡೆಯದೆ ಮೊಂಡು ಹಿಡಿಯುತ್ತಿದ್ದಾಳೆಂದು ತೋರಿತು. ಪೊಲೀಸರು

ಅವಳನ್ನು ಬಲವಾಗಿ ಹಿಡಿದೆಳೆದರು. ಒಬ್ಬನು ಲಾಠಿಯಿಂದ ಅವಳ ಮೊಣಕಾಲಿನ ಮೇಲೆ ಹೊಡೆದನು. ಅವಳು ನೋವಿನಿಂದ ನರಳಿದಳು.

ಅವಳು ಎದ್ದೇಳಲು ಒಪ್ಪದಿದ್ದಾಗ, ಪೊಲೀಸರಿಬ್ಬರೂ ಅವಳ ಒಂದೊಂದು ಕೈಯನ್ನು ಹಿಡಿದು ಅವಳನ್ನು ಎಳೆಯಲಾರಂಭಿಸಿದರು. ಅವಳ ತಲೆಗೂದಲು ಗಂಟು ಬಿಚ್ಚಿ ಹೋಗಿ ಕೂದಲುಗಳು ಗಾಳಿಯಲ್ಲಿ ಹಾರಾಡಲಾರಂಭಿಸಿದವು. ಅವಳ ವಸ್ತ್ರಗಳು ಸಡಿಲವಾದವು. ಅವಳ ಪಾದರಕ್ಷೆಗಳು ಅವಳ ಕಾಲಿನಿಂದ ಜಾರಿಬಿದ್ದವು. ಮರಳು ಹರವಿನಲ್ಲಿ ಅವಳ ಕ್ಷೀಣಗೊಂಡ ದೇಹದಿಂದ ಉಂಟಾದ ಕಾಲುವೆಯಂತಹ ಗುರುತು ಉದ್ದುದ್ದಕ್ಕೆ ಕಾಣಿಸತೊಡಗಿತು.

ಸ್ವಲ್ಪ ಹೊತ್ತಾಗುವ ವೇಳೆಗೆ ಅವಳ ಬಾಯಿಂದ ಏನೋ ಧ್ವನಿ ಹೊರಬಂದಿತು. ಪೊಲೀಸರು ತಟ್ಟನೆ ತಮ್ಮ ಹಿಡಿತವನ್ನು ಬಿಟ್ಟರು.

ಆಗ ಆ ಸ್ತ್ರೀ ಮೆಲ್ಲನೆ ಎದ್ದು ನಡೆಯಲು ಆರಂಭಿಸಿದಳು. ಮೋರ್ಚರಿಯ ಬದಿಯಲ್ಲಿರುವ ಕಪ್ಪುಕಲ್ಲಿನ ಮೆಟ್ಟಲುಗಳ ಬಳಿಗೆ ಅವಳು ಸರಿದಳು. ಅವಳು ಒಂದು ಕಡೆಗೆ ಬೆರಳು ಮಾಡಿ ತೋರಿಸಿದಳು. ಪೊಲೀಸರು ಅವಳಿಗೆ ಏನೇನೋ ಹೇಳಿ ತಮ್ಮನ್ನು ಹಿಂಬಾಲಿಸಲು ಹೇಳಿ ಪ್ರಯತ್ನಿಸಿದರು. ಆದರೆ ಅವಳು ಒಪ್ಪಲಿಲ್ಲ.

ಸಬ್ ಇನ್ಸ್‌ಪೆಕ್ಟರ್ ಲಾಠಿ ತೆಗೆದುಕೊಂಡು ಅವಳ ಹೊಟ್ಟೆಯ ಮೇಲೊಂದು ಬಿಗಿದನು. ಅವಳು ಹೊಟ್ಟೆಯನ್ನು ಬಿಗಿಯಾಗಿ ಹಿಡಿದುಕೊಂಡು ಬಾಗಿ ನಿಂತಳು. ಅವಳಿಗೆ ಬಹಳ ನೋವಾಗಿರಬೇಕು. ಅನಂತರ ಅವನು ಅವಳ ಕತ್ತನ್ನು ಹಿಡಿದು ಅಮುಕಿ ತಲೆಗೂದಲನ್ನು ಹಿಡಿದು ಎಳೆದಾಗ ಅವಳು ಕುಳಿತುಕೊಂಡು ಯಮುನಾ ನದಿಯ ಮರಳ ಹರವಿನಲ್ಲಿ ಕೈಯಿಂದ ತೋಡತೊಡಗಿದಳು. ಸ್ವಲ್ಪ ಹೊತ್ತು ತೋಡಿದಾಗ ಒಂದು ಗುಳಿಯುಂಟಾಯಿತು. ಅವಳಿಗೆ ಬಲು ಸುಸ್ತಾಯಿತು. ಆದರೆ ಸಬ್ ಇನ್ಸ್‌ಪೆಕ್ಟರ್ ಬಿಡದೆ ಲಾಠಿಯಿಂದ ಅವಳ ಬೆನ್ನನ್ನು ಸವರಿದನು. ಅವಳು ಮತ್ತೆ ಬಾಗಿ ಮಣ್ಣು ತೋಡತೊಡಗಿದಳು. ಅನಂತರ ಎರಡೋ ಮೂರೋ ಹಿಡಿ ಮಣ್ಣು ತೋಡಿ ತೆಗೆದ ಮೇಲೆ ಅವಳು ಹಿಂದಕ್ಕೆ ಹೊರಳಿ ಬಿದ್ದುಬಿಟ್ಟಳು.

ಸಬ್ ಇನ್ಸ್‌ಪೆಕ್ಟರ್ ಅವಳನ್ನೆಳೆದು ದೂರ ಸರಿಸಿದನು. ಅನಂತರ ಅವನು ಅವಳು ತೋಡಿದ ಗುಂಡಿಯಲ್ಲಿ ಕೈಯಿಟ್ಟು ಸ್ವಲ್ಪ ಮಣ್ಣನ್ನು ತೋಡಿ ತೆಗೆದುಹಾಕಿದನಂತರ ಯಾವುದೋ ಒಂದು ವಸ್ತುವನ್ನು ಹೊರತೆಗೆದನು.

ಆಗತಾನೆ ಹುಟ್ಟಿದ್ದ ಒಂದು ಮಗು....

ಯಮುನಾ ನದಿಯ ಅಲೆಗಳು ನಿಶ್ಚಲವಾದವು. ಅಲ್ಲಿಯವರೆಗೂ ನಿಶ್ಚಲವಾಗಿದ್ದ ದೊಡ್ಡದೋಣಿ, ಬೋಟುಗಳು ಚಲಿಸಿದವು.

ಆ ಸಮಾರಂಭದಲ್ಲಿ ಪಾಲ್ಗೊಳ್ಳಲು ಬಂದಿದ್ದ ಜನರು ಚದುರಲು ಪ್ರಾರಂಭಿಸಿದರು. ನದಿಯನ್ನು ಅಲಕ್ಷಿಸಿ ಅವರು ದಡದ ಮೇಲೇರಿದರು.

ನದಿಯ ಆಚೆ ದಡದಲ್ಲಿದ್ದ ಫ್ಯಾಕ್ಟರಿಯಲ್ಲಿ ಸೈರನ್ ಮೊಳಗಿತು.

# ಇಪ್ಪತ್ತೈದು

ಕುಞ್ಞಮ್ಮಳ ಅವನತಿಯೊಂದಿಗೆ ನರ್ಸ್‌ಗಳ ಹಾಸ್ಟೆಲ್ ಒಂದು ಸ್ಮಶಾನ ಸದೃಶವಾಯಿತು. ಶಂಕೆ, ಪರಿಭ್ರಮೆಗಳಿಂದ ಅಲ್ಲಿನ ನಿವಾಸಿಗಳು ನಿಶ್ಶಬ್ದರಾದರು. ಸದಾ ಗಲಾಟೆಯಿಂದ ಕೂಡಿರುತ್ತಿದ್ದ ಹಾಸ್ಟೆಲ್‌ನ ವಾತಾವರಣವು ಮಂಜಿನಂತೆ ಘನೀಭವಿಸಿತು.

"ಲಂಗೂ ಲಗಾಮಿಲ್ಲದೆ ನಡೆದರೆ ಹೀಗೇ ಆಗೋದು - ಎಲ್ಲರಿಗೂ ಇದೊಂದು ಪಾಠವಾಗಿರಲಿ" ಮಂತ್ರವನ್ನುಚ್ಚರಿಸುವಂತೆ ಇದನ್ನು ಹೇಳುತ್ತಾ ಮೇಟ್ರನ್ ಹೆಲೆನ್ ಸಿಂಗ್ ಹಾಸ್ಟೆಲ್‌ನಲ್ಲೆಲ್ಲಾ ಸುತ್ತಾಡಿದರು.

"ಏನೇ ಆದರೂ ಅವಳು ಎಂತಹ ಭಯಂಕರೆಯಪ್ಪಾ ? ಹತ್ತು ತಿಂಗಳು ಒಂದು ಹುಳುವಿಗೂ ಸಹ ತಿಳಿಯದೆ ಹೊಟ್ಟೆಯಲ್ಲೇ ಅಡಗಿಸಿಕೊಂಡು ನಡೆಯುತ್ತಿದ್ದಳಲ್ಲಾ ?" ಸ್ವಲ್ಪ ವಯಸ್ಸಾದ ಸಿಸ್ಟರ್‌ಗಳು ಮೂಗಿನ ಮೇಲೆ ಬೆರಳಿಟ್ಟುಕೊಂಡು ಹೇಳಿದರು.

"ಇದಕ್ಕಿಂತ ದೊಡ್ಡ ವಿಷಯವನ್ನೂ ಅವಳು ಮರೆಮಾಚಬಲ್ಲಳು" ಹೆಲೆನ್ ಸಿಂಗ್ ನಿರ್ದಯೆಯಿಂದ ಹೇಳಿದರು.

ಇದೆಲ್ಲವನ್ನೂ ಕೇಳಿ ದುಃಖಿಸುತ್ತಿದ್ದ ಒಬ್ಬಳೇ ಒಬ್ಬಳು ಆ ಹಾಸ್ಟೆಲ್‌ನಲ್ಲಿದ್ದಳು. ಅವಳೇ ಮೇರಿ.

ಮೇರಿಗೆ ಕಳೆದ ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ. ನಿದ್ರಿಸಲು ಅವಳು ಅದೆಷ್ಟು ಪ್ರಯತ್ನ ಮಾಡಿದರೂ ಅದು ಅವಳಿಂದ ಸಾಧ್ಯವಾಗಲಿಲ್ಲ. ಆದರೆ ಖಾಲಿಯಾಗಿ ಬಿದ್ದಿರುವ, ಪಕ್ಕದಲ್ಲೇ ಇದ್ದ ಆ ಮಂಚವನ್ನು ನೋಡಿದಾಗೆಲ್ಲಾ ಮೇರಿಯು ಒಳಗೊಳಗೇ ಬಿಕ್ಕಳಿಸುತ್ತಿದ್ದಳು. ಕುಞ್ಞಮ್ಮ ಈಗ ಎಲ್ಲಿರಬಹುದು ? ಪೊಲೀಸ್ ಸ್ಟೇಷನ್‌ನಲ್ಲಿನ ನೆಲದ ಮೇಲೋ, ಅಥವಾ ಲಾಕಪ್ ಕೋಣೆಯಲ್ಲೋ ಕುಞ್ಞಮ್ಮಳ ಬಟ್ಟೆಬರೆಗಳು, ಆಭರಣಗಳು, ಪಾದರಕ್ಷೆಗಳು, ಕಾಸ್ಮೆಟಿಕ್ಸ್‌ಗಳು, ಕೋಣೆಯಲ್ಲೆಲ್ಲಾ ಚೆದುರಿ ಬಿದ್ದಿದ್ದುವು. ಅವುಗಳನ್ನು ಒಂದೊಂದಾಗಿ ನೋಡಿ ಮೇರಿಯು ಮೂಕವಾದ ಭಾಷೆಯಲ್ಲಿ ಕುಞ್ಞಮ್ಮಳೊಂದಿಗೆ ಮಾತಾಡುವಂತೆ ಮಾತಾಡುವಳು. ಪತಿತೆಯಾದ ಅವಳನ್ನು ಸಮಾಧಾನಪಡಿಸುವಳು. 'ನಿನಗೆ ಒಳ್ಳೆಯದಾಗುವುದು. ಆ ಯೇಸು ನಿನ್ನನ್ನು ರಕ್ಷಿಸುತ್ತಾನೆ' ಎಂದೂ ಇನ್ನೂ ಏನೇನೋ ಹೇಳುತ್ತಾ ಬೆಳಗಾಗುವವರೆಗೂ ಮೇರಿ ಕಳೆದಳು.

ಹೇಗೋ ಬೆಳಗಾದಾಗ ಮೇರಿ ಸ್ನಾನ ಮಾಡಿ ವಸ್ತ್ರಗಳನ್ನು ಬದಲಾಯಿಸಿ ಹೊರಕ್ಕೆ ಹೊರಟಳು. ಅವಳು ನೇರವಾಗಿ ಪೊಲೀಸ್ ಸರ್ಜನ್ ಚಟರ್ಜಿಯ ಕ್ವಾರ್ಟರ್ಸ್‌ಗೆ ಹೋದಳು.

ಚಟರ್ಜಿಯ ಕ್ವಾರ್ಟರ್ಸ್ ಒಂಟಿಯಾಗಿರುವ ಒಂದು ಕಟ್ಟಡ. ಫಿಸಿಯಾಲಜಿಯಲ್ಲೂ, ಫಾರ್ಮಕಾಲಜಿಯಲ್ಲೂ ಲ್ಯಾಬೊರೇಟರಿಗಳಿಗೋಸ್ಕರ ಜೀವಿಗಳನ್ನೂ ಮೃಗಗಳನ್ನು ಸಾಕುತ್ತಿದ್ದ ಒಂದು ಕಟ್ಟಡವಾಗಿತ್ತದು. ಅಲ್ಲಿಯ ಮರಗೆಲಸವು ನವೀನವಾಗಿತ್ತು. ಆದರೂ ಅವುಗಳನ್ನು ಅಲ್ಲಿ ಸಾಕಲಾಗುತ್ತಿತ್ತು ಎಂಬ ಒಂದೇ ಒಂದು ಕಾರಣದಿಂದ ಆ ಕಟ್ಟಡಕ್ಕೆ ವನಜೀವನದ ಒಂದು ವಾತಾವರಣವಿತ್ತು. ಸೈತಾನ್‌ನ ಕೋಟೆಯನ್ನು ನೋಡುವಂತೆ ಜನಳು ಹಿಂದಿನ ಕಾಲದಲ್ಲಿ ಅದನ್ನು ಕಾಣುತ್ತಿದ್ದರು. ಮೃಗಗಳನ್ನೂ, ಜೀವಿಗಳನ್ನೂ ಹೊಸ ಕಟ್ಟಡಕ್ಕೆ ಬದಲಾಯಿಸಿದಾಗ ಇದು ಖಾಲಿಯಾಯಿತು. ಆಗ ಚಟರ್ಜಿ ತಾನು ಅಲ್ಲಿರುತ್ತೇನೆಂದು ಹೇಳಿದಾಗ ಎಲ್ಲರಿಗೂ ಆಶ್ಚರ್ಯವಾಯಿತು. ಎಷ್ಟೇ ಆದರೂ ಪೊಲೀಸ್ ಸರ್ಜನ್ ಅಲ್ಲವೇ ? ಒರಟ, ಶತಒರಟ. ಆದರೆ ಒರಟು ಮನುಷ್ಯನಲ್ಲಿ ಸುಷುಪ್ತಾವಸ್ಥೆಯಲ್ಲಿದ್ದ ಸೌಂದರ್ಯ ಪ್ರಜ್ಞೆಯು ಮೊದಮೊದಲು ಯಾರಿಗೂ ಅರ್ಥವಾಗಲಿಲ್ಲ. ಅಲ್ಲಿಂದ ಸಂಗೀತದ ಅಲೆಗಳು ಮೇಲೆದ್ದಾಗ ಎಲ್ಲರೂ ಎಚ್ಚೆತ್ತರು. ಬಟ್ಟೆ ಬದಲಾಯಿಸುವಂತೆ ಮನುಷ್ಯನು ಎಷ್ಟು ಬೇಗ ತನ್ನ ಅಭಿಪ್ರಾಯಗಳನ್ನು ಬದಲಾಯಿಸುತ್ತಾನೆ ?

ಮೇರಿಯು ಚಟರ್ಜಿಯ ಕ್ವಾರ್ಟರ್ಸ್ ಸಮೀಪಿಸುತ್ತಿದ್ದಂತೆಯೇ ವಯಲಿನ್‌ನ ನವಿರಾದ ಶಬ್ದವನ್ನು ಕೇಳಿದಳು. ಹಲವಾರು ವರ್ಷಗಳಿಂದಲೇ ಪೈಂಟ್ ಹೊಡೆಯದ ಗಡುಸಾದ ಗೇಟನ್ನು ಕರಕರ ಶಬ್ದ ಮಾಡುತ್ತಾ ತೆರೆದು ಮೇರಿ ಒಳಕ್ಕೆ ಬಂದಳು. ಆದರೆ ಆ ಕರಕರ ಶಬ್ದವು ಒಂದು ತಾಳದಂತಿತ್ತು.

ವರಾಂಡದಲ್ಲಿ ಸಿಮೆಂಟು ಹಾಕಿದ್ದ ನೆಲದ ಮೇಲೆ ಪದ್ಮಾಸನ ಹಾಕಿಕೊಂಡು ಕುಳಿತು ಚಟರ್ಜಿಯು ವಯೊಲಿನ್ ಬಾರಿಸುತ್ತಿದ್ದನು. ಯಮುನಾ ನದೀ ತೀರದಲ್ಲಿ ಸನ್ಯಾಸಿಗಳು ಧ್ಯಾನದಲ್ಲಿರುವಂತೆ ಆತನು ಕುಳಿತಂತಿತ್ತು. ಆತನು ಆ ರಾಗವನ್ನು ನುಡಿಸಿ ಮುಗಿಸಿದ ನಂತರ ತಲೆ ಎತ್ತಿ ನೋಡಿದರು.

ಅಪರಿಚಿತ ಹುಡುಗಿಯೊಬ್ಬಳನ್ನು ಕಂಡಾಗ ಆತ ಮುಗುಳ್ನಕ್ಕನು. ಆ ಮಂದಹಾಸವು ವ್ಯಕ್ತವಾಗಿರಲಿಲ್ಲ. ಅರ್ಧ ಬಾಯಿಯ ಒಳಗೂ, ಅರ್ಧ ಬಾಯಿಯ ಹೊರಗೂ ಆಗಿತ್ತು.

ವಯಲಿನ್ ಅನ್ನು ಮೇಜಿನ ಮೇಲಿಟ್ಟು ಚಟರ್ಜಿ ಹೇಳಿದನು.

"ಬನ್ನಿ, ಒಳಕ್ಕೆ ಬನ್ನಿ. ಎಲ್ಲಿಂದ ಬರುತ್ತಿದ್ದೀರಿ ? ಏನನ್ನು ಕಲಿಯ ಬೇಕೆಂದಿದ್ದೀರಿ ?"

ಎಲ್ಲವನ್ನು ಒಂದೇ ಉಸಿರಿನಲ್ಲಿ ಆತನು ಕೇಳಿ ಮುಗಿಸಿದ.

"ನನಗೆ-ನನಗೆ-ನನಗೆ ಒಂದು..." ನಿಂತಲ್ಲಿಂದಲೇ ಮೇರಿ ಹೇಳಿದಳು. ಮಾತುಗಳು ಹೊರಕ್ಕೇ ಬರಲಿಲ್ಲ.

ಒಂದು ಹಳೆಯ ಕುರ್ಚಿಯನ್ನು ಬೊಟ್ಟು ಮಾಡಿ ತೋರಿಸಿ ಚಟರ್ಜಿ ಹೇಳಿದನು.

"ಕುಳಿತುಕೊಳ್ಳಿ".

ಅದೊಂದು ಹಳೆಯ ಮುರುಕಲು ಕುರ್ಚಿಯಾಗಿತ್ತು.

ಕುಳಿತುಕೊಳ್ಳಲು ಅರ್ಹತೆಯಿಲ್ಲದವಳು ಒಂದು ಸ್ಥಳದಲ್ಲಿ ಕುಳಿತುಕೊಳ್ಳುವ

ಅಸ್ವಸ್ಥತೆಯಿಂದ ಮೇರಿಯು ತನ್ನ ಅರ್ಧ ಪೃಷ್ಠವನ್ನು ಮಾತ್ರ ಕುರ್ಚಿಯ ಮೇಲಿಟ್ಟು ಕುಳಿತಳು.

"ಶಾಸ್ತ್ರೀಯ ಸಂಗೀತವನ್ನು ಕಲಿತಿದ್ದೀರಾ ?" ಇದ್ದಕ್ಕಿದ್ದಂತೆ ಚಟರ್ಜಿ ಕೇಳಿದನು.

ಮೇರಿ ಅಸ್ವಸ್ಥಳಾದಳು. ತಾನು ಉದ್ದೇಶಿಸಿ ಬಂದಂತೆ ಮಾತುಗಳು ಮುಂದುವರಿಯುತ್ತಿಲ್ಲವೆಂದು ತೋರಿದಾಗ ಅವಳು ಬೆವರತೊಡಗಿದಳು.

"ಹೋಗಲಿ ಬಿಡಿ, ಇಲ್ಲದಿದ್ದರೆ ಪರವಾಗಿಲ್ಲ. ನಿಮ್ಮನ್ನು ನೋಡಿದಾಗ ನನಗೆ ಹಾಗೆನ್ನಿಸಿತಷ್ಟೆ. ಅಲ್ಲದೆ ನಿಮ್ಮ ನಡೆನುಡಿಯಲ್ಲೂ, ಕುಳಿತುಕೊಂಡ ರೀತಿಯಲ್ಲೂ ಒಂದು ತಳವಿಲ್ಲದಿಲ್ಲ."

ಮೇರಿ ಬಾಯಿ ತೆರೆದು ಏನೋ ಹೇಳಲು ಪ್ರಯತ್ನಿಸಿದಳು. ಹಣೆಯ ಮೇಲಿನ ಬೆವರನ್ನು ಅವಳು ಒರೆಸಿಕೊಂಡಳು.

"ವೀಣೆ ಕಲಿಯುತ್ತೀರೇನು ? ಚೆನ್ನಾಗಿರುತ್ತೆ. ನೀವು ವೀಣೆ ಹಿಡಿದು ಕುಳಿತರೆ ನೋಡಲೇ ಒಂದು ಅಂದ" ಚಟರ್ಜಿ ಮೇಜಿನ ಮೇಲೆ ತಾಳವನ್ನು ಹಾಕುತ್ತಾ ಹೇಳಿದನು.

"ಕ್ಷಮಿಸಬೇಕು " ಬಹಳ ಸಾವಕಾಶವಾಗಿ ಮೇರಿ ಹೇಳತೊಡಗಿದಳು. "ನಾನು ಬಂದಿದ್ದು ಅದಕ್ಕಲ್ಲ. ನಾನು ಬಂದಿದ್ದು ಬೇರೆ ಕೆಲಸಕ್ಕಾಗಿ."

"ಓಹೋ ಹಾಗೇನು ? ಹಾಗಾದರೆ ನಾನು ನನ್ನ ಹಿರಿಯ ಮಗನನ್ನು ಇಲ್ಲಿಗೆ ಕಳುಹಿಸಿತ್ತೇನೆ." ಚಟರ್ಜಿ ಹೇಳಿದನು. "ಅವನೇ ಈ ಮನೆಯಲ್ಲಿ ಇತರ ವಿಷಯಗಳನ್ನು ವಿಚಾರಿಸುವುದು. ನನಗೆ ಇದ್ಯಾವುದಕ್ಕೂ ಸಮಯವಿಲ್ಲ. ನನ್ನ ವಾಚ್ ಬಹಳ ವೇಗದಲ್ಲಿ ಮುಂದೆ ಹೋಗುತ್ತಿದೆ."

ಚಟರ್ಜಿ ಒಳಕ್ಕೆ ಹೋಗುವಾದ ಮೇರಿ ಹೇಳಿದಳು.

"ಸಾರ್ ನಾನು ತಮ್ಮೊಂದಿಗೇನೇ ನೇರವಾಗಿ ಹೇಳಬೇಕಾದ ವಿಷಯವಿದೆ."

"ಹಾಗಾದರ ನಾನಿದೋ ಬಂದ" ಎಂದು ಹೇಳಿ ಚಟರ್ಜಿ ವಯಲಿನ್‌ನೊಂದಿಗೆ ಒಳಕ್ಕೆ ಹೋದನು. ವರಾಂಡವು ನಿರ್ಜನವಾಗಿತ್ತು. ಒಳಗಿನಿಂದ ವಾದ್ಯ ಸಂಗೀತದ ಅಲೆಗಳೇಳುತ್ತಿದ್ದವು. ಏನಿಲ್ಲವೆಂದರೂ ಮೂರು ನಾಲ್ಕು ಜನವಾದರೂ ರಂಗದಲ್ಲಿದ್ದಾರೆ.

ಮೇರಿ ವರಾಂಡದಲ್ಲಿ ತನ್ನ ಕಣ್ಣನ್ನು ಉದ್ದಕ್ಕೂ ಓಡಿಸಿದಳು. ಒಂದು ಮೂಲೆಯಲ್ಲಿನ ಹಳೆಯ ಒಂದು ಮೇಜಿನ ಮೇಲಿನ ಸ್ಟೂಲ್ ಮೇಲಿಟ್ಟ ಪಂಜರದೊಳಗೆ ಎರಡು ಮೂರು ಗಿನಿಪಿಗ್‌ಗಳು ಓಡಿ ನೆಗೆದು ಹೆದರಿಕೊಂಡು ಆಟವಾಡುತ್ತಿವೆ. ಅದು ಇಲ್ಲಿಂದ ಹೊರಟುಹೋದ ಅಂತೇವಾಸಿಗಳ ಸ್ಮರಣೆಗಾಗಿ ಇಟ್ಟುಕೊಂಡಿದ್ದಾಗಿರಬೇಕು. ಗೋಡೆಯ ತುಂಬ ವಾದ್ಯೋಪಕರಣಗಳ ಚಿತ್ರಗಳು ನೇತಾಡುತ್ತಿದ್ದವು. ಚರ್ಮ ಹರಿದು ಹೋದ ಮದ್ದಳವೊಂದನ್ನು ನೆಲದ ಮೇಲೆ ಅಶ್ರದ್ಧೆಯಿಂದ ಇಟ್ಟಿದ್ದರು.

ಒಬ್ಬ ಯುವಕನು ವರಾಂಡವನ್ನು ಪ್ರವೇಶಿಸಿ ಮೇರಿಯನ್ನು ಸ್ವಲ್ಪ ಹೊತ್ತು ಕೂಲಂಕುಷವಾಗಿ ನೋಡಿದನಂತರ ಒಂದು ಮುಗುಳ್ನಗೆಯಿಂದ ಒಳಕ್ಕೇನೇ ಹಿಂದಿರುಗಿ ಹೋದನು. ಅವನು ಒಂದು ಮಾತನ್ನಾದರೂ ಆಡಲಿಲ್ಲ. ಆದರೂ ಆ

ಮುಗುಳ್ನಗೆಯು ಬಹಳ ಮನೋಹರವಾಗಿತ್ತು. ವಶೀಕರಿಸುವಂತಹುದಾಗಿತ್ತು.

ಚಟರ್ಜಿ ಹೊರಕ್ಕೆ ಬಂದರು.

"ಸರಿ, ನೀವೆಲ್ಲಿಂದ ಬರುತ್ತಿದ್ದೀರಿ ?"

ಮೇರಿ ಚಟರ್ಜಿಗೆ ತನ್ನ ಪರಿಚಯ ಮಾಡಿಕೊಟ್ಟಳು. ಅವಳ ಜೊತೆಗಾತಿಯಾದ ಕುಞ್ಞಮ್ಮಳಿಗೆ ಬಂದೊದಗಿದ ಆಪತ್ತನ್ನೂ, ಅವಳಿಗೆ ಉಂಟಾಗಲಿರುವ ದುರ್ವಿಧಿಯ ಬಗ್ಗೆಯೂ ಚಟರ್ಜಿಗೆ ತಿಳಿಸಿದಳು.

"ನನ್ನ ಕುಞ್ಞಮ್ಮಳನ್ನು ಕಾಪಾಡಬೇಕು." ಚಟರ್ಜಿಗೆ ವಿವರಿಸಿ ಹೇಳುತ್ತಿದ್ದ ಈ ದುರಂತ ಕಥೆಯನ್ನು ಮೇರಿ ಈ ವಾಕ್ಯದೊಂದಿಗೆ ಮುಗಿಸಿದಳು.

ಎಲ್ಲವನ್ನೂ ಗಮನವಿಟ್ಟು ಹೇಳಿದ ಚಟರ್ಜಿಯು ಕುರ್ಚಿಯಿಂದೆದ್ದು ಎರಡು ಕೈಗಳನ್ನು ಪರಸ್ಪರ ಉಜ್ಜಿ ಎರಡು ಅಂಗೈಗಳಿಂದಲೂ ಸ್ವಲ್ಪ ಹೊತ್ತು ತನ್ನ ಮುಖವನ್ನು ಮುಚ್ಚಿಕೊಂಡು ಏನನ್ನೋ ಆಲೋಚಿಸಿದನಂತರ ಅಂಗೈಗಳೆರಡನ್ನೂ ತೆರೆದು ಹಿಡಿದುಕೊಂಡು ಮೇರಿಯ ಮುಂದೆ ನಿಂತನು.

"ಮಗಳೇ, ನಿನ್ನನ್ನು ನಾನು ಹಾಗೆ ಕರೆಯುತ್ತೇನೆ - ಈ ಕೈಗಳು ಪರಿಶುದ್ಧವಾದವು. ಈ ಕೈಗಳು ವಾದ್ಯೋಪಕರಣಗಳನ್ನು ಹಿಡಿಯುವ ಕೈಗಳು. ಸತ್ಯವನ್ನು ತಿಳಿಸುವ ಚಾಕುವನ್ನು ಹಿಡಿಯುವ ಕೈಗಳು. ಈ ಕೈಗಳಿಗೆ ಇಲ್ಲಿಯವರೆಗೂ ಕಳಂಕ ಹತ್ತಿಲ್ಲ ಮಗಳೇ. ಹಣದ ಮೂಟೆಗಳು ಮನೆಯ ಹೊಸ್ತಿಲಿಗೆ ಬಂದು ಬಂದ ದಾರಿಯನ್ನೇ ಹಿಡಿದುಕೊಂಡು ಹೋಗಿವೆ. ನನಗೆ ಕಾರುಗಳನ್ನೂ ಬಂಗಲೆಗಳನ್ನೂ ಆಫರ್ ಮಾಡಿದ್ದಾರೆ. ಏನು ಮಾಡಲಿ ? ಈ ಆಮಿಷಗಳೊಂದಕ್ಕೂ ನಿರ್ಭಾಗ್ಯನಾದ ನಾನು ತಲೆಬಾಗಲು ಸಾಧ್ಯವಾಗಿಲ್ಲ. ಆದರೆ, ನನ್ನ ಮಗಳೆ, ನಿನ್ನ ಕಣ್ಣೀರು, ನಿನ್ನ ದುಃಖ ಇವುಗಳಿಗೆ ಆ ಆಮಿಷಗಳಿಗಿಂತ ಎಷ್ಟೋ ಬೆಲೆಯಿದೆ. ಆದರೆ ಈ ಚಟರ್ಜಿ ನಿನ್ನ ಬೆಲೆ ಬಾಳುವ ಕಣ್ಣೀರಿಗೂ ಸಹ ಒಂದು ಕುರುಡು ಕವಡೆಯ ಬೆಲೆ ಕೊಡಲು ತಯಾರಿಲ್ಲ, ಮಗಳೇ, ನನ್ನನ್ನು ಕ್ಷಮಿಸು. ಸ್ವಲ್ಪ ಹೊತ್ತು ಮಾತು ನಿಲ್ಲಿಸಿ ಆತನು ಹೇಳಿದನು. "ಆದರ್ಶಕ್ಕಾಗಿ ತನ್ನ ಮುದ್ದು ಸಂತಾನಗಳ ಸ್ವಪ್ನಗಳನ್ನು ಸಹ ನುಚ್ಚುನೂರು ಮಾಡಿದವನು ಈ ಚಟರ್ಜಿ."

ಕಣ್ಣುಗಳನ್ನೊರೆಸಿಕೊಳ್ಳುತ್ತಾ ಮೇರಿ ಎದ್ದಳು.

"ಸಾರ್, ಏನಾದರೂ ಮಾಡಲು ಸಾಧ್ಯವಾಗು...."

ತನ್ನ ಮಾತುಗಳನ್ನು ಪೂರ್ತಿ ಮಾಡಲು ಮೇರಿಗೆ ಅವಕಾಶವನ್ನೇ ನೀಡಲಿಲ್ಲ. ಅನಂತರ ಒಬ್ಬ ಕ್ರೂರಿಯಂತೆ ಅವನ ಬಾಯಿಯಿಂದ ಮಾತುಗಳು ಹೊರಟವು.

"ನದೀ ದಡದಲ್ಲಿ ಜನಿಸಿದ ಆ ಮಗು ಒಂದು ಸಲವಾದರೂ ಅತ್ತಿದ್ದರೆ, ನಿನ್ನ ಜೊತೆಗಾತಿಯ ಕೈಗಳಿಗೆ ಬೇಡಿ ಬಿದ್ದೇ ಬೀಳುತ್ತದೆ. ಅದು ಮಾತ್ರ ಖಂಡಿತ. ಈ ಚಟರ್ಜಿ ಇರುವಷ್ಟು ಕಾಲ ದೇವರೇ ಅಡ್ಡ ಬಂದರೂ ನಿನ್ನ ಕುಞ್ಞಮ್ಮನನ್ನು ಕಾಪಾಡಲಾಗುವುದಿಲ್ಲ."

ಮೇರಿ ಹೊರಟಳು.

"ಬರಲೇ ಸಾರ್."

"ಸರಿ."

ಈ ಎರಡು ಅಕ್ಷರಗಳನ್ನು ನುಡಿದನಂತರ ಚಟರ್ಜಿ ಮತ್ತೆ ವಯಲಿನ್ ತೆಗೆದುಕೊಂಡನು.

ಬೆಳಗಿನ ಜಾವವಾದ್ದರಿಂದ ರಸ್ತೆಗಳಲ್ಲಿ ಜನಸಂಚಾರ ಕಡಿಮೆಯಾಗಿತ್ತು. ಮೇರಿ ಎಲ್ಲಿಗೆ ಹೋಗಬೇಕೆಂಬ ಲಕ್ಷ್ಯವಿಲ್ಲದೆ ನಡೆದಳು. ನಿರ್ಜನವಾದ ಒಂದು ಸ್ಥಳದಲ್ಲಿ ಹೋಗಿ ಕುಳಿತು ಮನಸಾರೆ ಅಳಬೇಕು. ಮೇರಿಗೆ ಅತ್ಯವಶ್ಯಕವಾಗಿ ಹಾಗೆ ಅಳಬೇಕಿತ್ತು.

ಕಾರ್ಡಿಯಾಲಜಿಯನ್ನು, ಮೋರ್ಚರಿಯನ್ನು ದಾಟಿ ಬಯಲು ಪ್ರದೇಶ ಗಳಿಂದಾಚೆ ಕಪ್ಪು ಕಲ್ಲಿನ ಮೆಟ್ಟಲುಗಳನ್ನು ಇಳಿದು ಮೇರಿಯು ನದಿಯ ದಡವನ್ನು ಸಮೀಪಿಸಿದಳು.

ಹಿಂದಿನ ದಿನ ಅಲ್ಲಿ ಗುಂಪು ಸೇರಿದ್ದ ಜನರು ಓಡಾಡಿದ ಲಕ್ಷಣಗಳು ಮರಳಿನಿಂದ ಅಳಿಸಿ ಹೋಗಿರಲಿಲ್ಲ. ಅಸಂಖ್ಯಾತವಾದ ಕಾಲ ಹೆಜ್ಜೆ ಗುರುತುಗಳೂ ಒಬ್ಬ ಸ್ತ್ರೀಯನ್ನು ಎಳೆದುಕೊಂಡು ಹೋದಾಗ ಉಂಟಾದ ಕಾಲುವೆಯ ಗುರುತುಗಳೂ ಆಗ ತಾನೆ ಹುಟ್ಟಿದ ಒಂದು ಮಗುವನ್ನು ಹೂಳಿಟ್ಟಿದ್ದ ಗುಳಿಯ ಗುರುತೂ ಹಾಗೇ ಇದ್ದವು.

ನದೀ ತೀರದಲ್ಲಿನ ಅತಿ ಮನೋಹರವಾದ ಯಾವುದೇ ಬಗೆಯ ದೃಶ್ಯವನ್ನು ನೋಡಿ ಸಂತೋಷಪಡಲು ಮೇರಿಗೆ ಸಾಧ್ಯವಾಗಲಿಲ್ಲ. ಬಾಲ ಸೂರ್ಯನು ದಿಗಂತದಲ್ಲಿ ಉದಯಿಸಿ ಮೇಲಕ್ಕೇರುತ್ತಿದ್ದನು. ಆದರೆ ಅದೇಕೋ ಆ ದೃಶ್ಯವು ಬೇರೆ ತರಹ ಕಾಣಿಸಿತು ಮೇರಿಗೆ. ಅಸ್ತಮಿಸಿದ ಚಂದ್ರನು ಬೇರೆ ಯಾವುದೋ ಒಂದು ದೇಶದಲ್ಲಿದ್ದಾನೆ. ಸ್ವಲ್ಪ ದೂರದಲ್ಲಿ ಡಾಕ್ಟರ್ ಡಿ. ಕುಮಾರ್ ನದಿಯಲ್ಲಿ ಮುಳುಗು ಹಾಕಿ ಸ್ನಾನ ಮಾಡುತ್ತಿದ್ದರು. ಅವರು ಎರಡು ಕೈಗಳನ್ನೂ ಜೋಡಿಸಿಕೊಂಡು ನಮಸ್ಕರಿಸುತ್ತಾ ಮುಳುಗು ಹಾಕುತ್ತಿದ್ದರು. ನಗ್ನ ಸನ್ಯಾಸಿಗಳೀರ್ವರು ಸೂರ್ಯ ನಮಸ್ಕಾರ ಮಾಡುತ್ತಿದ್ದರು. ಸರಕು ಸಾಗಿಸುವ ಎರಡು ದೊಡ್ಡ ದೋಣಿಗಳು ನದಿಯ ವಕ್ಷಸ್ಥಳದಲ್ಲಿ ಹರಿಳಿದು ಚಲಿಸುತ್ತಿದ್ದವು. ಮೃಗಪಕ್ಷಿಗಳ ದೇಹಗಳು ನದಿಯಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದವು. ಕೆಲವು ದಡಕ್ಕೆ ಬಂದು ಬೀಳುತ್ತಿದ್ದವು.

ಈ ಮರಳಿನಲ್ಲಿ ಎಲ್ಲೋ ಮಲಗಿ ಕುಞ್ಞಮ್ಮ ಮನಸಾರೆ ಅತ್ತಿರಬೇಕು. ಕುಞ್ಞಮ್ಮಳ ಅಳು ನದಿಯ ಆಚೆ ದಡದಲ್ಲಿ ಪ್ರತಿಧ್ವನಿಸುವಂತೆ ಮೇರಿಗೆ ತೋರಿತು ಸ್ವಲ್ಪ ಹೊತ್ತು ಮೇರಿ ಮರಳಿನಲ್ಲಿ ಕುಳಿತಳು. ಸೂರ್ಯನು ಮೇಲೇರಿ ಬಂದು ನದೀ ತೀರದಲ್ಲಿ ಬೆಳಕನ್ನು ಪಸರಿಸಿದನು. ಸ್ಫಟಿಕದಂತೆ ನದಿಯ ನೀರು ಸ್ವಚ್ಛವಾಗಿ ಹೊಳೆಯಿತು.

ಮೇರಿ ಎದ್ದು ಕಪ್ಪು ಕಲ್ಲುಗಳ ಮೆಟ್ಟಲುಗಳನ್ನು ಹತ್ತಿದಳು.

ಮೋರ್ಚರಿಯ ಎದುರಿಗೆ ಜನರು ಗುಂಪುಗುಂಪಾಗಿ ನಿಲ್ಲಲಾರಂಭಿಸಿದ್ದರು. ಪೊಲೀಸಿನವರೂ, ಹತಾಶರೂ ನಿಶ್ಶಬ್ದರೂ ಆದ ಅಪಮೃತ್ಯುವಿಗೆ ತುತ್ತಾದವರ ಬಂಧುಗಳೂ, ಕತ್ತರಿಸಿ ತುಂಡು ಮಾಡಿದ ಶರೀರಗಳನ್ನು ಹಿಂದಿರುಗಿ ಪಡೆಯಲೆಂದೂ ಕಾದಿದ್ದರು. ಪೊಲೀಸ್ ಸರ್ಜನ್ ಚಟರ್ಜಿಯು ಇದ್ದಕ್ಕಿದ್ದಂತೆ ವರಾಂಡದಲ್ಲಿ ಪ್ರತ್ಯಕ್ಷನಾದನು. ಆತನು ಜೋರಾಗಿ ಏನನ್ನೋ, ಕೂಗಿ ಕೇಳುತ್ತಿದ್ದನು.

"ವಾರ್ಡ್‌ನಲ್ಲಿ ಚಿಕಿತ್ಸೆ ಮಾಡುತ್ತಿರುವಾಗ ತೀರಿಹೋದ ಈ ಯುವಕನನ್ನು ಚಿಕಿತ್ಸೆ ಮಾಡಿದ ಡಾಕ್ಟರೆಲ್ಲಿ ?"

ಆ ಡಾಕ್ಟರ್ ಓಡಿ ಬಂದನು.

"ಬನ್ನಿ, ಬನ್ನಿ, ನಿಮ್ಮೊಂದಿಗೆ ಕೆಲವು ವಿಷಯಗಳನ್ನು ಕೇಳಬೇಕು."

ಇಬ್ಬರೂ ಪೋಸ್ಟ್ ಮಾರ್ಟಂ ಕೋಣೆಗೆ ಹೋದರು.

ಮೇರಿ ಸೀರೆಯನ್ನು ತಲೆಯ ಮೇಲಕ್ಕೆಳೆದು ಹಾಕಿಕೊಂಡು ದೂರದಲ್ಲಿ ಸರಿದು ನಿಂತಳು. ಆಗ ಅಗೋ ಅಲ್ಲಿ ಸಬ್ ಇನ್ಸ್‌ಪೆಕ್ಟರ್ ಶರ್ಮಾಜಿಯೂ ಇಬ್ಬರು ಪೊಲೀಸರೂ ಬರುತ್ತಿರುವುದನ್ನು ಕಂಡಳು. ಪೊಲೀಸಿನವನ ಕೈಯಲ್ಲಿ ಬಟ್ಟೆಯಲ್ಲಿ ಸುತ್ತಿದ್ದ ತೆಳುವಾದ ಹಗ್ಗದಿಂದ ಕಟ್ಟಿದ್ದ ಒಂದು ಚಿಕ್ಕ ಕಟ್ಟು ಇತ್ತು. ಆಗ ತಾನೆ ಹುಟ್ಟಿದ ಮಗುವಿನ ದೇಹವಾಗಿತ್ತದು. ಪೊಲೀಸ್ ಒಂದು ಲಾಟೀನನ್ನು ಕೈಯಲ್ಲೆತ್ತಿದ ರೀತಿಯಲ್ಲೇ ಹಗ್ಗದಲ್ಲಿ ತೂಗಾಡಿಸುತ್ತಾ ನಡೆಯುತ್ತಿದ್ದನು.

ಸಬ್ ಇನ್ಸ್ಪೆಕ್ಟರ್ ಶರ್ಮಾಜಿ ಅಂದು ಎಂದಿಗಿಂತ ಹೆಚ್ಚು ಉತ್ಸಾಹಿತನಾಗಿದ್ದನು. ಆತನು ಪದೇ ಪದೇ ಸಿಗರೇಟ್‌ಗಳನ್ನು ಸೇದಿ ಎಸೆಯುತ್ತಿದ್ದನು.

ಶರ್ಮಾಜಿಯೂ ಪೊಲೀಸರೂ ಚಟರ್ಜಿ ಬಾಗಿಲು ತೆರೆಯುವುದನ್ನು ಕಾದು ವರಾಂಡದಲ್ಲಿದ್ದರು.

ಮೇರಿ ಸಂಜೆಯಾಗುವವರೆಗೂ ಮಲಗಿ ನಿದ್ರಿಸಿದಳು. ದುಃಖವೂ, ಉಪದ್ರವವೂ ಇಲ್ಲದ ಒಂದು ನಿದ್ದೆಯಾಗಿತ್ತದು. ಸುಖಮಯವಾದ ಸುಷುಪ್ತಿ, ಗಾಢನಿದ್ರೆ.

ಗಾಬರಿಯಿಂದೆದ್ದ ಮೇರಿ ಅವಸರವಸರವಾಗಿ ಸ್ನಾನದ ಕೋಣೆಗೆ ಹೋದಳು. ದಾರುಣವಾದ ಈ ಘಟನೆಗಳಿಗೂ, ದೃಶ್ಯಗಳಿಗೂ ಅತೀತವಾಗಿ ತನಗೆ ಹೇಗೆ ನಿದ್ರಿಸಲು ಸಾಧ್ಯವಾಯಿತೆಂಬ ವಿಷಯವು ಮೇರಿಯನ್ನು ಆಶ್ಚರ್ಯಪಡಿಸಿತು. ಕಾರಣವೇನೂ ಇಲ್ಲದೆ ಲೀವ್ ತೆಗೆದುಕೊಂಡಿದ್ದಕ್ಕೆ ನಿಜವಾಗಿಯೂ ಹೆಲೆನ್ ಸಿಂಗ್ ಇಂದು ಬಯ್ಯುತ್ತಾರೆ.

ಆ ಬೈಗಳನ್ನು ಮೊದಲೇ ಕೇಳಿಸಿಕೊಂಡು ಬಿಡೋಣವೆಂದುಕೊಂಡು ಮೇರಿ ಬಟ್ಟೆ ಬದಲಾಯಿಸಿಕೊಂಡು ಹೆಲೆನ್ ಸಿಂಗ್‌ರ ಕೋಣೆಗೆ ಹೋದಳು.

ಕೋಣೆಯ ಬಾಗಿಲು ಹಾಕಲ್ಪಟ್ಟಿತ್ತು. ಮೂರು ನಾಲ್ಕು ಸಲ ತಟ್ಟಿದ ಮೇಲೆ ಒಳಗಿನಿಂದ ಶಬ್ದ ಕೇಳಿಬಂತು.

ಮೇರಿ ಕೋಣೆಯೊಳಕ್ಕೆ ಹೋದಾಗ ಬೆಡ್ ರೂಮಿನಲ್ಲಿ ನಿಶ್ಶಕ್ತರಾದವರಂತೆ ಮೇಟ್ರನ್ ಹೆಲೆನ್ ಸಿಂಗ್ ಮಲಗಿರುವುದನ್ನು ಕಂಡಳು. ಆಕೆಯ ಕಣ್ಣೆವೆಗಳು ಅರ್ಧ ಮುಚ್ಚಲ್ಪಟ್ಟಿದ್ದವು. ಕೆನ್ನೆಗಳಲ್ಲಿ ಸಾಧಾರಣವಾಗಿ ಕಾಣುವ ಕೆಂಪು ಕಾಣುತ್ತಿರಲಿಲ್ಲ.

"ಮೇಟ್ರನ್ ಏನಾಯಿತು ? ಹುಷಾರಿಲ್ಲವೇ ?" ಮೇರಿ ಕೇಳಿದಳು.

"ಇಲ್ಲ, ಏನೂ ಇಲ್ಲ" ಒಂದು ಪಲ್ಲವಿಯಂತೆ ನುಣಚಿಕೊಳ್ಳುವ ಮಾತುಗಳಲ್ಲಿ ಅವರು ಉತ್ತರ ಕೊಟ್ಟರು. "ಮೇರಿ ನನಗೊಂದು ಇಂಜೆಕ್ಷನ್ ಕೊಡು."

"ಏನು ಇಂಜೆಕ್ಷನ್ನೇ ?" ಮೇರಿ ತಕ್ಷಣ ಕೇಳಿದಳು.

ಹೆಲೆನ್ ಸಿಂಗ್ ಏಳಲು ಪ್ರಯತ್ನಿಸಿದರಾದರೂ ಆಕೆಗೆ ತಲೆಯನ್ನೆತ್ತಲು ಸಾಧ್ಯವಾಗುತ್ತಿರಲಿಲ್ಲ. ಆಕೆ ಹಾಗೇ ಕೋಣೆಯ ಒಂದು ಮೂಲೆಯಲ್ಲಿ ಮೇಜಿನ

ಮೇಲಿರಿಸಿರುವ ಸ್ಟೀಲ್ ಪಾತ್ರೆಗೆ ಕೈ ಮಾಡಿ ತೋರಿಸಿದರು.

ಅಲ್ಲಿ ಸ್ಟೀಲ್ ಪಾತ್ರೆಯಲ್ಲಿ ಬಿಸಿನೀರಿನಲ್ಲಿದ್ದ ಇಂಜೆಕ್ಷನ್ ಸಿರಂಜನ್ನು ಸೂಜಿಗಳನ್ನು ಮೇರಿ ಕಂಡಳು. ಅದರ ಪಕ್ಕದಲ್ಲಿಯೇ ಎಷ್ಟೋ ಇಂಜೆಕ್ಷನ್ ಟ್ಯೂಬ್‌ಗಳಿದ್ದವು. ಮೇರಿ ನಿಶ್ಚಲಳಾದಳು.

ಪೆತಡಿನ್.

"ಒಂದನ್ನು ಬೇಗ ಲೋಡ್ ಮಾಡು."

ಅವರ ಮಾತುಗಳು ತೊದಲುತ್ತಿದ್ದವು. ಆದರೂ ಆ ಮಾತುಗಳಲ್ಲಿ ಒಂದು ಆಜ್ಞಾಶಕ್ತಿ ಇತ್ತು.

ತಿವಾರಿ ಬಾಬುವಿನ ಮರಣದ ನಂತರ ಮೇಟ್ರನ್ ಹೆಲೆನ್ ಸಿಂಗ್ ಒಟ್ಟಿನಲ್ಲಿ ಉಡುಗಿಹೋದುದರ ರಹಸ್ಯವು ಮೇರಿಗೆ ಅರ್ಥಮಾಡಿಕೊಳ್ಳಲು ಸಾಧ್ಯವಾಗಿರಲಿಲ್ಲ. ನಷ್ಟವಾಗಿ ಹೋಗಿದ್ದನ್ನು ಪುನಃ ಪಡೆಯಲೋ ಅಥವಾ ಅದನ್ನೆಲ್ಲಾ ಮರೆಯಲೋ, ಯಾತಕ್ಕೆಂದು ತಿಳಿಯದು, ಹೆಲೆನ್ ಸಿಂಗ್ ಮತ್ತಿನ ಔಷಧಿಗೆ ದಾಸಿಯಾಗಿಬಿಟ್ಟಿದ್ದರು.

"ಬೇಗ ಲೋಡ್ ಮಾಡು. ಏನು ನೋಡುತ್ತಿದ್ದೀ ?" ಕೋಪದಿಂದ ಹೆಲೆನ್ ಸಿಂಗ್ ಮಾತುಗಳನ್ನು ತೊದಲುತ್ತಾ ಹೇಳಿದರು. ಕಣ್ಣುಗಳನ್ನು ಅರ್ಧಮರ್ಧ ತೆರೆದಿದ್ದ ಆಕೆ, ಅವುಗಳನ್ನು ಮುಚ್ಚುವ ಅಥವಾ ತೆರೆಯುವ ಪ್ರಯತ್ನ ಮಾಡುತ್ತಿರಲಿಲ್ಲ. ಕಣ್ಣುಗಳೊಳಗೆ ರಕ್ತನಾಳಗಳು ಅರಳಿದ್ದವು. ಆಕೆಯ ತುಟಿಗಳು ಒಣಗಿ ಹೋಗಿದ್ದವು. ಸೈಡ್ ಟೇಬಲ್ ಮೇಲೆ ತುಂಬಿಸಿಟ್ಟಿದ್ದ ಲೋಟದಲ್ಲಿನ ನೀರನ್ನೆಲ್ಲ ಆಕೆ ಒಂದೇ ಉಸುರಿಗೆ ಕುಡಿದು ಮುಗಿಸಿದರು.

ಸಿರಿಂಜ್‌ನಲ್ಲಿ ತುಂಬಿಸಿಕೊಂಡ ಪೆತಡಿನ್ ಅನ್ನು ಹೆಲೆನ್ ಸಿಂಗ್‌ರ ತೋಳಿಗೆ ಚುಚ್ಚಲು ಮೇರಿ ಸಿದ್ಧಳಾದಾಗ ಆಕೆ ತೋಳನ್ನು ಚಾಚಿದರು. ಇಂಜೆಕ್ಷನ್ ಅನ್ನು ರಕ್ತನಾಳದಲ್ಲಿ ನೇರವಾಗಿ ಹತ್ತಿಸಲೇ ಆಕೆ ಇಚ್ಛಿಸಿದ್ದು. ನಿಶ್ಶಬ್ದವಾದರೂ ಆಕೆಗೆ ಅದು ಒಂದು ಆವಶ್ಯಕತೆಯಾಗಿತ್ತು.

ನೀಲಿಧಮನಿಯಲ್ಲಿ ಪೆತಡಿನ್ ಏರಿತು.

ಹೆಲೆನ್ ಸಿಂಗ್‌ರ ಕಣ್ಣುಗಳು ಮುಚ್ಚಿಕೊಂಡವು. ತುಟಿಗಳನ್ನಾಕೆ ಸೊಟ್ಟಸೊಟ್ಟಗೆ ಮಾಡಿದರು. ಮೂಗು ಕಂಪೇರಿತ್ತು. ಸ್ವಲ್ಪ ನಿಮಿಷಗಳವರೆಗೆ ರತಿ ಭಾವನೆಯಿಂದೆಂಬಂತೆ ತೀಕ್ಷ್ಣತೆಯಲ್ಲೆಂಬಂತೆ ಹೆಲೆನ್ ಸಿಂಗ್ ಆನಂದಸಾಗರದಲ್ಲಿ ಮುಳುಗಿ ಏಳತೊಡಗಿದರು.

ಅನಂತರ ಆಕೆ ಏನೂ ಮಾತನಾಡಲಿಲ್ಲ. ತುಟಿಗಳನ್ನು ಅಲ್ಲಾಡಿಸಿದರಷ್ಟೆ. ನೀರು ನೀರು ಎಂದು ಆ ತುಟಿಗಳು ಉಚ್ಚರಿಸುತ್ತಿದ್ದಂತಿತ್ತು.

ಭಯವನ್ನುಂಟುಮಾಡುವ ಸ್ವಪ್ನದಿಂದ ಗಾಬರಿಗೊಂಡು, ಅನಂತರ ಎಚ್ಚೆತ್ತಂತೆ ಮೇರಿ ಅಲ್ಲಿಂದ ಅವಸರವಸರವಾಗಿ ಹೊರ ನಡೆದಳು. ಹೇಗಾದರೂ ತನ್ನ ಕೋಣೆಗೆ ಹೋಗಿ ಹೊದಿಕೆಯನ್ನು ಕಾಲಿನಿಂದ ತಲೆಯ ಮೇಲಿನವರೆಗೂ ಎಳೆದುಕೊಂಡು ಮಲಗಬೇಕು.

ಮೇರಿಯೂ ಕುಞ್ಞಮ್ಮಳೂ ಎಷ್ಟೋ ಹಗಲುಗಳನ್ನೂ ರಾತ್ರಿಗಳನ್ನೂ ಎಚ್ಚರದಿಂದಲೂ, ನಿದ್ದೆ ಮಾಡುತ್ತಲೂ ಕಳೆದ ಅವಳ ಕೋಣೆಯ ಎದುರಿಗೆ ಒಂದು

ಪೆಟ್ಟಿಗೆ ಮತ್ತು ಹಾಸಿಗೆಯೊಂದಿಗೆ ಯುವತಿಯೊಬ್ಬಳು ನಿಂತಿದ್ದಳು.

ಯುವತಿ ತನ್ನ ಕೈಯಲ್ಲಿದ್ದ ಒಂದು ಕವರನ್ನು ನೀಡಿದಳು. ಮೇರಿ ಕವರನ್ನು ಒಡೆದು ಓದಿದಳು.

ಕುಞ್ಞಮ್ಮಳಿಗೆ ಬದಲಾಗಿ ತನ್ನ ಕೋಣೆಗೆ ನಿಯಮಿಸಲ್ಪಟ್ಟ ಹೊಸ ಸ್ಟಾಫ್‌ನರ್ಸ್ ಹೆಸರು ?

ಅಲ್‌ಫೋನ್‌ಸಾ.

# ಇಪ್ಪತ್ತಾರು

ಬ್ರಿಗೇಡಿಯರ್ ತಾಜುದ್ದೀನ್ ಜನರಲ್ ರೌಂಡ್‌ಗೆ ಹೊರಟಿದ್ದರು. ಅವರು ಮೆಡಿಕಲ್ ಕಾಲೇಜಿನ ಪ್ರಿನ್ಸಿಪಾಲರೂ, ಆಸ್ಪತ್ರೆಯ ಸೂಪರಿಂಟೆಂಡೆಂಟೂ, ಮೆಡಿಸಿನ್ ಡಿಪಾರ್ಟ್‌ಮೆಂಟಿನ ಮುಖ್ಯಸ್ಥರೂ ಆಗಿದ್ದರು. ಮೆಡಿಸಿನ್ ಡಿಪಾರ್ಟ್‌ಮೆಂಟಿನ ಮುಖ್ಯಸ್ಥರಾಗಿದ್ದರಿಂದ ಬಹುಮಟ್ಟಿಗೆ ಎಲ್ಲಾ ದಿವಸಗಳಲ್ಲೂ ಅವರು ಅಲ್ಲಿಗೆ ಬರುತ್ತಾರೆ.

ಅವರು ರೂಢಿಯಂತೆ ಮೆಡಿಕಲ್ ವಾರ್ಡಿಗೆ ಬಂದರು.

ವಾರ್ಡ್‌ನಲ್ಲಿ ಕೆಲಸಗಾರರಲ್ಲಿ ಬಹುಮಂದಿ ಸೂಪರಿಂಟೆಂಡೆಂಟರ ಹಿಂದೆ ಸಿದ್ಧರಾಗಿ ನಿಂತರು. ಅವರು ಹೊರಡುವುದೇ ಬಹು ವೈಭವದಿಂದ. ಅವರಿಗೆ ರಾಜೋಪಚಾರದಿಂದ ಕೂಡಿದ ಸ್ವಾಗತ ದೊರಕುತ್ತದೆ. ಅವರನ್ನು ಎಲ್ಲಾ ವಾರ್ಡ್‌ನಲ್ಲೂ ನಿರೀಕ್ಷಿಸಬಹುದು. ಒಂದು ಬೆಟಾಲಿಯನ್ ಚಲಿಸುವಂತೆ ಅವರೆಲ್ಲರೂ ಹೊರಟರು.

ಸೂಪರಿಂಟೆಂಡೆಂಟ್‌ರ ಈ ಇನ್‌ಸ್ಪೆಕ್ಷನ್ ಆಸ್ಪತ್ರೆಯ ಕೆಲಸಗಾರರಿಗೆ ಯಾವತ್ತಿಗೂ ಒಂದು ತಲೆನೋವೆ. ಒಂದು ಸಣ್ಣ ತಪ್ಪನ್ನೂ ಸಹ ಅವರು ಸಹಿಸುವುದಿಲ್ಲ. ಅಕಸ್ಮಾತ್ತಾಗಿ ಒಂದು ದೊಡ್ಡ ತಪ್ಪೇನಾದರೂ ಆಗಿ ಹೋದರೋ, ಅನಂತರ ಕೋರ್ಟ್ ಮಾರ್ಷಲ್ಲೇ.

ಮೆಡಿಕಲ್ ವಾರ್ಡ್‌ನಲ್ಲಿ ಬ್ರಿಗೇಡಿಯರ್ ತಾಜುದ್ದೀನ್‌ರಿಗೊಂದು ಯೂನಿಟ್ ಇದೆ. ಅಲ್ಲಿ ಅವರು ಎಲ್ಲಾ ರೋಗಿಗಳನ್ನೂ ಪರೀಕ್ಷಿಸುತ್ತಾರೆ. ಆದರೆ ಅವರು ಚಿಕಿತ್ಸೆ ನೀಡುವುದಿಲ್ಲ. ಯೂನಿಟ್‌ನಲ್ಲಿರುವ ಸೀನಿಯರ್ ಪ್ರೊಫೆಸರ್‌ರೇ ಕನ್‌ಸಲ್ಟೆಂಟ್. ಆದರೂ ಈ ತಾಜುದ್ದೀನ್ ತಮಗೆಲ್ಲಾ ಗೊತ್ತೆಂಬ ನಟನೆಯಲ್ಲಿ ಒಂದೊಂದೇ ಪ್ರಶ್ನೆ ಕೇಳುವರು. ತೋಚಿದ್ದನ್ನು ಹೇಳುವರು. ಒಂದೊಂದು ಸಲ ಒಂದು ಕೇಸ್‌ಷೀಟ್ ತೆಗೆದುಕೊಂಡು ಆವಶ್ಯವಿರುವುದೋ, ಅನಾವಶ್ಯವಿರುವುದೋ ಆದ ಒಂದು ಔಷಧಿಯ ಹೆಸರನ್ನು ಓದಿ, ಅವರು ಹೌಸ್ ಸರ್ಜನ್‌ನನ್ನು ಕೇಳುವರು.

"ವೈ ಆರು ಯು ಗಿವಿಂಗ್ ದಿಸ್ ಡ್ರಗ್ ?"

ಹೌಸ್ ಸರ್ಜನ್ ಅದರ ವಿಶದೀಕರಣವನ್ನು ಕೊಡುತ್ತಾನೆ. ಅವರಿಗೆ ಆ ವಿಶದೀಕರಣವು ಅರ್ಥವಾದರೂ ಸರಿ, ಆಗದಿದ್ದರೂ ಸರಿ, ಅವರು ಹೇಳುವರು.

ಒಂದು ರೋಗಿಗೆ ಸುಮ್ಮನೆ ಏನೇನೋ ಔಷಧಿಗಳನ್ನು ಕೊಡಬೇಡಿ. ಒಂದು ಔಷಧಿಯನ್ನು ನಿಮ್ಮ ರೋಗಿಗೆ ಕೊಡುವಾಗ, ಅದನ್ನು ಯಾತಕ್ಕೋಸ್ಕರ ಕೊಡುತ್ತಿರುವಿರೆಂದು ಹೇಳುವ ಕರ್ತವ್ಯ ನಿಮಗಿದೆ. ಸ್ವಲ್ಪ ನಿಲ್ಲಿಸಿ ಒಂದು ಲೋಕೋತ್ತರ ಉಪದೇಶವನ್ನು ಕೊಡುವರು. "ಒಂದೊಂದು ಔಷಧಿಯಿಂದ

ಉಂಟಾಗುವ ಫಲಾಫಲಗಳನ್ನು ನೀವು ಅರ್ಥ ಮಾಡಿಕೊಳ್ಳಬೇಕು. ಅಂದರೆ, ಅದರ ಸೈಡ್ ಎಫೆಕ್ಟ್ಸ್ ಅನ್ನು."

ಅವರುಗಳು ಜಾನ್ ಬಲ್‌ದೇವ್ ಮಿರ್ಜಾ ಮಲಗಿದ್ದ ಮಂಚದ ಬಳಿ ಬಂದರು. ಎಷ್ಟೋ ತಿಂಗಳುಗಳಿಂದ ಮಿರ್ಜಾ ಆ ಮಂಚದಲ್ಲೇ ಮಲಗಿದ್ದನು. ಆ ಮಂಚದ ಬಳಿಗೆ ಬಂದಾಗಲೆಲ್ಲಾ ಅವನನ್ನು ನೋಡಿದರೆ ಬ್ರಿಗೇಡಿಯರ್ ತಾಜುದ್ದೀನ್‌ರವರ ಕಣ್ಣುಗಳಲ್ಲಿ ಒಂದು ಅಪಹಾಸ್ಯದ ನಗು ಸಿಡಿದು ಬಿರಿಯುತ್ತೆ. ಒಂದು ನಿಮಿಷ ಮಿರ್ಜಾನ ಮಂಚದ ಬಳಿ ನಿಂತು ಅವನ ಮೂಗಿನಲ್ಲೂ, ಮೂತ್ರ ನಾಳದಲ್ಲೂ ಸಿಗಿಸಿರುವ ಟ್ಯೂಬ್‌ಗಳನ್ನು ಬೊಟ್ಟು ಮಾಡಿ ತೋರಿಸುತ್ತಾ ಅವರು ಹೇಳಿದರು:

"ಈ ಮನುಷ್ಯನು ಇಲ್ಲಿ ಕಾಣುತ್ತಿರುವ ಎರಡು ಟ್ಯೂಬ್‌ಗಳೊಂದಿಗೆ ಯಾವತ್ತಿಗೂ ಇಲ್ಲೇ ಮಲಗಿರುತ್ತಾನೆ. ಒಂದು ಟ್ಯೂಬಿನಿಂದ ಕೊಟ್ಟ ಪಾನೀಯ ಗಳನ್ನು ಇನ್ನೊಂದು ಟ್ಯೂಬ್‌ನಿಂದ ಮೂತ್ರವಾಗಿ ಮಾರ್ಪಡಿಸಿ ಕಳುಹಿಸುವ ಒಂದು ಯಂತ್ರವಾಗಿ ಈ ರೋಗಿಯು ಪರಿಣಾಮದ ದಶಾಸಂಧಿಕಾಲದಲ್ಲಾಗುತ್ತಾನೆ."

ಯಾವಾಗಲೂ ಡಾಕ್ಟರ್ ಕ್ವಾಜರ ಶತ್ರುವಾಗಿ ವರ್ತಿಸುವ ಸೂಪರಿಂಟೆಂಡೆಂಟ್ ಕ್ವಾಜರನ್ನು ನಿಂದಿಸಿ ಮಾತನಾಡತೊಡಗಿದರು. ತಮ್ಮ ಹಿಂಬಾಲಕನಾಗಿ ನಡೆಯುತ್ತಾ ಬರುತ್ತಿದ್ದ ಅಸಿಸ್ಟೆಂಟ್‌ನ ಕಿವಿಯಲ್ಲಿ ಬ್ರಿಗೇಡಿಯರ್ ಹೀಗೆ ಉಸುರಿದರು "ಡಾಕ್ಟರ್ ಕ್ವಾಜಾಗೆ ಅಟ್ಟಹಾಸದಿಂದ ಪಾಠವನ್ನು ಕಲಿಸುವುದೇ ಗೊತ್ತಿರುವುದು. ಚಿಕಿತ್ಸೆ ಮಾಡಲು ಏನೇನೂ ತಿಳಿಯದು."

ಬ್ರಿಗೇಡಿಯರ್ ಹೇಳಿದ್ದರಲ್ಲಿ ತಿಲಮಾತ್ರವಾದರೂ ನಿಜಾಂಶವಿಲ್ಲವೆಂದು ಅಸಿಸ್ಟೆಂಟ್‌ಗೆ ಗೊತ್ತು. ಆದರೂ ಅವನು ಹೇಳಿದನು:

"ತಾವು ಹೇಳಿದ್ದು ಸರಿ, ಸಾರ್."

ಸೂಪರಿಂಟೆಂಡೆಂಟ್ ತಾಜುದ್ದೀನ್ ಡಾಕ್ಟರ್ ಕ್ವಾಜರನ್ನು ನಿಂದಿಸಲು ಕಾರಣವಿತ್ತು. ಜನರಲ್ ಮೆಡಿಸನ್‌ನಲ್ಲಿ ಎಂ.ಡಿ. ಬಿರುದನ್ನು ಪಡೆದ ಒಡನೆಯೇ ಮಿಲಿಟರಿ ಸರ್ವೀಸ್‌ನಲ್ಲಿ ಸೇರಿದವರು ಬ್ರಿಗೇಡಿಯರ್ ತಾಜುದ್ದೀನ್. ಬೇಕಾದಷ್ಟು ರೋಗಿಗಳನ್ನು ಚಿಕಿತ್ಸೆ ಮಾಡುವ ಅವಕಾಶವು ಸೈನ್ಯದ ಆಸ್ಪತ್ರೆಯಲ್ಲಿ ಅವರಿಗೆ ಲಭಿಸಿರಲಿಲ್ಲ. ಆಫೀಸ್ ಕೆಲಸಗಳಲ್ಲೇ ಅವರು ಹೆಚ್ಚು ಹೆಚ್ಚಾಗಿ ಕಾರ್ಯ ಮಗ್ನರಾಗಿದ್ದದ್ದು. ಆಸ್ಪತ್ರೆಯ ಸಮಯವಾದ ಮೇಲೆ ತಾಜುದ್ದೀನ್ ನೇರವಾಗಿ ಆಫೀಸರ್ ಕ್ವಾರ್ಟರ್ಸ್‌ಗೇ ಹೋಗುತ್ತಿದ್ದರು. ಬ್ರಿಡ್ಜ್‌ನ, ವಿಸ್ಕಿಯ ಮಾಯಾಲೋಕದಲ್ಲಿ ಸಿಗಾರನ್ನು ಸೇದುತ್ತಾ ಬೆಳಗಾಗುವವರೆವಿಗೆ ಅವರು ಸಮಯ ಕಳೆಯುತ್ತಿದ್ದರು. ಆದ್ದರಿಂದ ವೈದ್ಯಶಾಸ್ತ್ರ ಪುಸ್ತಕಗಳೊಂದಿಗಿನ ಬಂಧನವನ್ನು ತಾಜುದ್ದೀನ್‌ರು ಹಾಗೇ ವಿಚ್ಛೇದಿಸಿಬಿಟ್ಟರು. ಆದರೆ ಅವರು ಒಬ್ಬ ಬಹುದೊಡ್ಡ ಆಡಳಿತ ಅಧಿಕಾರಿಯೆಂಬ ಹೊಗಳುವಿಕೆಗೆ ಪಾತ್ರರಾಗಿದ್ದರು.

ಡೆಪ್ಯುಟೇಷನ್‌ನಲ್ಲಿ ಮೆಡಿಕಲ್ ಕಾಲೇಜಿನ ಮುಖ್ಯಸ್ಥರಾಗಿ ಬರುವ ಹೊತ್ತಿಗೆ ಬ್ರಿಗೇಡಿಯರ್ ತಾಜುದ್ದೀನ್ ಚಿಕಿತ್ಸೆಯನ್ನೂ ಥಿಯರಿಯನ್ನೂ ಎರಡನ್ನೂ ಮರೆತುಬಿಟ್ಟಿದ್ದರು. ಮೆಡಿಕಲ್ ಕಾಲೇಜ್‌ನಲ್ಲಾದರೋ, ವ್ಯಾಸಂಗಕ್ಕೂ, ಸಂಶೋಧನೆಗೂ ಹೆಚ್ಚು ಪ್ರಾಧಾನ್ಯವಿತ್ತು. ವಿದ್ಯಾರ್ಥಿಗಳ ಆದರವನ್ನು ಪಟ್ಟಾಗಿ

ಗಳಿಸಬೇಕಾದಲ್ಲಿ ಬಹು ಸರಳವಾಗಿ ವಿಷಯಗಳನ್ನು ಹೇಳಿಕೊಟ್ಟು ಅವರಿಗೆ ಅರ್ಥ ಮಾಡಿಸಲು ತಕ್ಕ ಸಾಮರ್ಥ್ಯವುಳ್ಳ ಒಬ್ಬ ಒಳ್ಳೆಯ ಅಧ್ಯಾಪಕನಾಗಿರಬೇಕು. ಒಬ್ಬೊಬ್ಬ ವಿದ್ಯಾರ್ಥಿಯು ಎಂತಹವನೆಂದು ತಿಳಿದುಕೊಳ್ಳುವ ಚಾತುರ್ಯವೇ ಒಬ್ಬನನ್ನು ಮಾದರಿ ಅಧ್ಯಾಪಕನನ್ನಾಗಿ ಮಾಡುವುದು. ಆ ವಿಷಯದಲ್ಲಿ ಡಾಕ್ಟರ್ ಕ್ವಾಜ ಗೆಲುವಿನ ಪೀಠವನ್ನು ಹತ್ತಿಬಿಟ್ಟಿದ್ದರು. ವಿದ್ಯಾರ್ಥಿಗಳ ಮನಸ್ಸನ್ನು ಗಟ್ಟಿಯಾಗಿ ಹಿಡಿದು ಕೊಳ್ಳಲು ಅವಿವಾಹಿತನಾದ ಬ್ರಿಗೇಡಿಯರ್ ತಾಜುದ್ದೀನ್‌ಗೆ ಒಬ್ಬ ಅಧ್ಯಾಪಕನೆಂಬ ನೆಲೆಯಲ್ಲಿ ಇನ್ನು ಸಾಧ್ಯವಾಗುವುದಿಲ್ಲ. ಮೆಡಿಸಿನ್‌ನ ಪ್ರಾಥಮಿಕ ಪಾಠಗಳನ್ನು ಸಹ ಅವರು ಮರೆತುಬಿಟ್ಟಿದ್ದರು. ತಮ್ಮ ಪಾಠ ಮಾಡಲು ಸಾಮರ್ಥ್ಯವಿಲ್ಲದಿರುವಿಕೆಯನ್ನು ಹೊರಕ್ಕೆ ತೋರಿಸಿಕೊಳ್ಳದಿರಲು ಅವರು ಆದಷ್ಟು ಶ್ರಮಿಸುತ್ತಿದ್ದರಾದರೂ, ಅವರ ಅವಿವೇಕತನವು ಒಮ್ಮೊಮ್ಮೆ ಹೊರಕ್ಕೆ ಕಾಣಿಸಿಕೊಳ್ಳುತ್ತಿತ್ತು. ಅದು ಬ್ರಿಗೇಡಿ ಯರ್‌ಗೂ ಸಹ ಅರ್ಥವಾಗುತ್ತಿತ್ತು.

ಆದರೆ ಬ್ರಿಗೇಡಿಯರ್ ತಾಜುದ್ದೀನ್ ತಮ್ಮ ಕೆಲಸದಲ್ಲಿನ ಅಸಮರ್ಥತೆಯನ್ನು ತಮ್ಮ ಅಧಿಕಾರಶಕ್ತಿಯಿಂದ ಮರೆಸಿಡಲು ಪ್ರಯತ್ನಿಸುತ್ತಿದ್ದರು. ಬೇಕಾದ ಸ್ಥಳದಲ್ಲೂ, ಬೇಡದಿರುವ ಸ್ಥಳದಲ್ಲೂ ಅವರು ತಮ್ಮ ಅಧಿಕಾರವನ್ನು ಚಲಾಯಿಸುತ್ತಿದ್ದರು. ಹಾಗೆ ಯಥೇಚ್ಛವಾಗಿ ಅಧಿಕಾರವನ್ನು ಪ್ರಯೋಗಿಸಲೆಂದು ಪ್ರಿನ್ಸಿಪಾಲ್ ಆಗಿದ್ದ ಅವರು ಆಸ್ಪತ್ರೆಯ ಸೂಪರಿಂಟೆಂಡೆಂಟ್ ಮತ್ತು ಮೆಡಿಸಿನ್ ಡಿಪಾರ್ಟ್‌ಮೆಂಟ್‌ನ ಡೈರೆಕ್ಟರ್ ಎಂಬೀ ಪದವಿಗಳನ್ನೂ ಕಾಲೇಜ್ ಪ್ರಿನ್ಸಿಪಾಲ್‌ರಲ್ಲೇನೇ ಲೀನಗೊಳಿಸಿ, ಅವುಗಳನ್ನು ವಶಪಡಿಸಿಕೊಂಡಿದ್ದರು. ಇನ್ನು ಯಾವ ಕ್ಷೇತ್ರದಲ್ಲಾದರೂ ಅವರು ಮುಳುಗಿ ತೇಲಬಹುದು.

ಬ್ರಿಗೇಡಿಯರ್ ತಾಜುದ್ದೀನ್‌ರೊಂದಿಗೆ ಯಾರಾದರೂ ಮಾತಾಡುವಾಗ ಅವರು ಎಲ್ಲಕ್ಕೂ ಒಪ್ಪಿಬಿಡುವ ಒಬ್ಬರೆಂದು ಭಾವಿಸಿಬಿಡುತ್ತಾರೆ. ಅವರ ನಡೆನುಡಿಗಳು ಅಷ್ಟರಮಟ್ಟಿಗೆ ಸರಳವಾಗಿರುತ್ತೆ. ಆದರೆ ಅವರ ಬಳಿ ತಮಗಾಗಿ ಏನಾದರೂ ಕೇಳುವಾಗ, ಅವರು ಒಂದು ಸಾಸುವೆ ಕಾಳಿನಷ್ಟಾದರೂ ಬಾಗುವವರಲ್ಲವೆಂದು, ಕೇಳುವವರಿಗೆ ಅರ್ಥವಾಗುತ್ತಿತ್ತು.

ಕಾಲೇಜಿನಲ್ಲೋ, ಆಸ್ಪತ್ರೆಯಲ್ಲೋ, ಮೆಡಿಸಿನ್ ಡಿಪಾರ್ಟ್‌ಮೆಂಟಿನಲ್ಲೋ ಏನಾದರೂ ಸಮಸ್ಯೆಗಳುಂಟಾದರೆ ಅದನ್ನು ಪರಿಹರಿಸಲು ಬ್ರಿಗೇಡಿಯರ್ ಕೇವಲ ಕಾನೂನಿನ ಮೊರೆಹೋಗುವರು. ಮಾನವ ಮೌಲ್ಯಗಳಿಗೋ, ಮಿತ್ರನೆಂಬ ವಾತ್ಸಲ್ಯಕ್ಕೋ ಅವರು ಬೆಲೆ ಕಟ್ಟುತ್ತಿರಲಿಲ್ಲ. ಮೆಡಿಸಿನ್ ಡಿಪಾರ್ಟ್‌ಮೆಂಟಿನಲ್ಲಿ ಬ್ರಿಗೇಡಿಯರ್ ಅನಧಿಕೃತವಾಗಿ ಅತಿಕ್ರಮ ಪ್ರವೇಶ ಮಾಡಿದಾಗಲೆಲ್ಲಾ ಡಾಕ್ಟರ್ ಕ್ವಾಜ ಅದನ್ನು ವಿರೋಧಿಸುತ್ತಿದ್ದರು. ಸೈನಿಕನೆಂದೋ, ಹೆಡ್ ಗುಮಾಸ್ತನೆಂದೋ ಕರೆದು ಬ್ರಿಗೇಡಿಯರನ್ನು ಡಾಕ್ಟರ್ ಕ್ವಾಜ ಆಗಾಗ ನಿಂದಿಸುವರು.

ಅದರಿಂದಲೇ ಡಿಪಾರ್ಟ್‌ಮೆಂಟಿನಲ್ಲಿ ವಿಶೇಷ ತಜ್ಞರೆನಿಸಿದ ಡಾಕ್ಟರ್. ಕ್ವಾಜರ ಬಗ್ಗೆ ಸೂಪರಿಂಟೆಂಡೆಂಟ್‌ಗೆ ತಿರಸ್ಕಾರವಿದ್ದದ್ದು.

ಆದರೆ ಅಂದು ಒಂದು ಪವಾಡವೇ ನಡೆಯಿತು. ಡಾಕ್ಟರ್ ಕ್ವಾಜರನ್ನು ನಿಂದಿಸುತ್ತಾ ತಮ್ಮ ಅಭಿಪ್ರಾಯವನ್ನು ಪ್ರಕಟಿಸಿ ಮೆಡಿಕಲ್ ವಾರ್ಡಿನಿಂದ ಸೂಪರಿಂಟೆಂಡೆಂಟ್

ಹೊರಟು ಒಂದೆರಡು ಗಂಟೆಗಳು ಕಳೆದಿರಬೇಕು. ಜಾನ್ ಬಲ್‌ದೇವ್ ಮಿರ್ಜಾಗೆ ಪ್ರಜ್ಞೆ ಬಂತು. ಎಷ್ಟೋ ತಿಂಗಳುಗಳ ನಂತರ ಅವನು ಲೋಕವನ್ನು ಕಣ್ಣುಬಿಟ್ಟು ನೋಡುತ್ತಿದ್ದನು. ಆಗ ಅವನು ಆಗತಾನೆ ಹುಟ್ಟಿದ ಮಗುವಿನಂತೆ ಆಗಿದ್ದನು. ವಿಸ್ಮಯದೊಂದಿಗೆ ಮಿರ್ಜಾ ನಾಲ್ಕು ದಿಕ್ಕುಗಳನ್ನೂ ನೋಡಿದನು. ತನ್ನ ಸುತ್ತಲೂ ಇರುವ ಮಂಚಗಳಲ್ಲಿ ಈಗ ಮಲಗಿರುವವರೆಲ್ಲಾ ಅಪರಿಚಿತರು. ಹೊಟ್ಟೆ ನೋವಿನಿಂದ ಆಗಾಗ ರೋದಿಸುತ್ತಿದ್ದ ಆ ರೋಗಿ ಎಲ್ಲಿ? ಏನೂ ಮಾತನಾಡದೆ ಆಗಾಗ ತೀಕ್ಷ್ಣವಾಗಿ ನೋಡುತ್ತಲೂ, ಅದಲ್ಲದ ಸಮಯದಲ್ಲಿ ಓದುತ್ತಲೂ ಇದ್ದ ಗಡ್ಡ ಬಿಟ್ಟಿದ್ದ ಆ ಯುವಕನೆಲ್ಲಿ? ಹೂವಿನ ಬುಟ್ಟಿಯೊಂದಿಗೆ, ಕಿತ್ತಳೆ ಹಣ್ಣಿನ ಪೊಟ್ಟಣದೊಂದಿಗೆ ಅವನನ್ನು ನಿತ್ಯವೂ ಸಂದರ್ಶಿಸಲು ಬರುತ್ತಿದ್ದ ಸುಂದರಿಯಾದ ಆ ಹುಡುಗಿ ಎಲ್ಲಿ? ಬೆಳ್ಳಂಬೆಳಗೂ ಮೇಲುಸಿರೆಳೆಯುತ್ತಿದ್ದ ಆ ಆಸ್ತಮಾ ರೋಗಿ ಎಲ್ಲಿ? ಯಾರೂ ಕಾಣಿಸುತ್ತಿಲ್ಲವಲ್ಲಾ? ಅವರ ಪ್ರೀತಿಪಾತ್ರವಾದ ಮಂಚಗಳಲ್ಲಿ ಯಾರ್‍ಯಾರೋ ಮಲಗಿದ್ದಾರಲ್ಲಾ? ಹಿಂದಿನ ದಿನ ರಾತ್ರಿ ತಾನು ಮಲಗಿ ನಿದ್ರಿಸುವಾಗ ಅವರೆಲ್ಲಾ ಅವರವರ ಮಂಚಗಳಲ್ಲಿ ಇದ್ದರಲ್ಲಾ?

ತಳ್ಳಿಕೊಂಡು ಬರುವ ಗಾಡಿಯಲ್ಲಿ ಮಧ್ಯಾಹ್ನದ ಆಹಾರವನ್ನು ತೆಗೆದುಕೊಂಡು ವಾರ್ಡ್‌ಬಾಯ್ ಬಂದನು. ಇದೇನಿದು ಆಶ್ಚರ್ಯ? ತಾನು ಮಧ್ಯಾಹ್ನದವರೆಗೆ ಮಲಗಿದ್ದೆನೇ? ಎದ್ದೇಳಲು ನೋಡಿದಾಗಲೇ ತನ್ನ ಶರೀರದ ಒಂದು ಭಾಗವು ಸೇದಿ ಹೋಗಿದ್ದು ಮಿರ್ಜಾಗೆ ನೆನಪಿಗೆ ಬಂದದ್ದು. ಸೇದಿಲ್ಲದ ಕೈಯನ್ನು ಎತ್ತಿ ಅವನು ಮುಖವನ್ನು ತಡವಿಕೊಂಡನು. ತನ್ನ ಮೂಗಿನ ಮೂಲಕ ರಬ್ಬರ್ ಕೊಳವೆಯನ್ನು ಹಾಕಿರುವುದು ಆಗ ಅವನಿಗೆ ತಿಳಿದುಬಂತು. ಆ ಟ್ಯೂಬನ್ನು ಹಣೆಯ ಮೇಲೆ ಪ್ಲಾಸ್ಟರ್‌ನಿಂದ ಅಂಟಿಸಿದ್ದರು. ಮಲಗಿದ್ದಂತೆಯೇ ಅವನು ಮೂಗಿನ ಮೂಲಕ ಒಳಕ್ಕೆ ಹಾಕಿದ್ದ ಟ್ಯೂಬನ್ನು ಎಳೆದು ಹಾಕಲು ಪ್ರಾರಂಭಿಸಿದನು.

ಡ್ಯೂಟಿ ರೂಮಿನಿಂದ ಸಿಸ್ಟರ್ ಓಡಿ ಬರುವ ಹೊತ್ತಿಗೆ ಮಿರ್ಜಾ ಆ ರಯಲ್ಸ್ ಟ್ಯೂಬ್ ಅನ್ನು ಎಳೆದು ಹಾಕಿಬಿಟ್ಟಿದ್ದನು.

ಸಿಸ್ಟರನ್ನು ಕಂಡಾಗ ಮಿರ್ಜಾ ಮುಗುಳ್ನಗುತ್ತಾ ಏನನ್ನೋ ಹೇಳಲು ಪ್ರಯತ್ನಿಸಿದನು. ಅವನಿಗೆ ಟೈಮ್ ಎಷ್ಟಾಯಿತೆಂದು ತಿಳಿಯಬೇಕಿತ್ತು. ಆದರೆ ಮಾತುಗಳು ಹೊರಕ್ಕೆ ಬರುತ್ತಿಲ್ಲ.

ಆಶ್ಚರ್ಯದಿಂದಲೂ ಸಂತೋಷದಿಂದಲೂ ಏನು ಮಾಡಬೇಕೆಂದು ತಿಳಿಯದೆ ಸಿಸ್ಟರ್ ಸ್ವಲ್ಪ ಹೊತ್ತು ದಿಗ್ಭ್ರಮೆಯಿಂದ ನಿಂತಳು.

"ಅಯ್ಯೋ....." ಎಂಬ ಶಬ್ದವನ್ನು ಹೊರಡಿಸುತ್ತಾ ಸಿಸ್ಟರ್ ಡ್ಯೂಟಿ ರೂಮ್‌ಗೆ ಓಡಿದಳು. ಹೌಸ್ ಸರ್ಜನ್‌ನೊಂದಿಗೂ, ಸೀನಿಯರ್ ರೆಸಿಡೆಂಟ್‌ನೊಂದಿಗೂ, ಸ್ಟಾಫ್ ನರ್ಸ್‌ನೊಂದಿಗೂ ಜಾನ್ ಬಲ್‌ದೇವ್ ಮಿರ್ಜಾಗೆ ಪ್ರಜ್ಞೆ ಬಂತೆಂಬ ವಿವರವನ್ನು ಅವಳು ದನಿ ಎತ್ತರಿಸಿ ಹೇಳಿದಳು. ಅದನ್ನು ಕೇಳಿಸಿಕೊಂಡ ಕೆಲವರು ಮಿಕ್ಕ ಕೆಲವರಿಗೆ ವಿಷಯ ತಿಳಿಸಿದರು. ಕ್ಷಣಮಾತ್ರದಲ್ಲಿ ಅವರೆಲ್ಲರೂ ಮಿರ್ಜಾನ ಮಂಚದ ಸುತ್ತ ಗುಂಪು ಸೇರಿದರು.

ವಾರ್ಡ್ ಒಂದು ಉತ್ಸವ ಸ್ಥಳವಾಗಿ ಮಾರ್ಪಟ್ಟಿತು. ಎಷ್ಟೋ ತಿಂಗಳುಗಳಿಂದ

ಪ್ರಜ್ಞಾಶೂನ್ಯನಾಗಿ ಮಲಗಿದ್ದ ರೋಗಿಗೆ ಪ್ರಜ್ಞೆ ಬಂದಿದೆ. ಅವನ ಒಂದು ಬಿದ್ದುಹೋಗಿದ್ದ ಪಾರ್ಶ್ವದ ಕೈಕಾಲುಗಳಿಗೆ ಹೆಚ್ಚು ಬಲವು ದೊರಕಿದೆ.

ಮೆಡಿಕೋಗಳೂ, ಡಾಕ್ಟರ್‌ಗಳೂ ವಾರ್ಡ್‌ಗೆ ಬಂದರು. ಇನ್ನಾವುದಾದರೂ ಸ್ಥಳವಾಗಿದ್ದರೆ ಮೆಡಿಕೋಗಳು ಖಂಡಿತ ಬಲದೇವ್ ಮಿರ್ಜಾನ ಮಂಚದ ಸುತ್ತಲೂ ರಾಕ್ ಅಂಡ್ ರೋಲ್ ಆಡುತ್ತಿದ್ದರು. ಆದರೂ ಅವರೆಲ್ಲರ ಮನಸ್ಸಿನಲ್ಲಿ ಆನಂದ ಸಾಗರದಲ್ಲಿ ಮುಳುಗಿದ್ದ ನೃತ್ಯ ನಡೆಯುತ್ತಿತ್ತು. ದೇವದಾಸ್‌ನೂ ಲಕ್ಷ್ಮಿಯೂ ಚಾಕೋಲೇಟ್ ಪೊಟ್ಟಣಗಳನ್ನು ವಾರ್ಡ್‌ನ ಇಡೀ ಜನರಿಗೆ ಹಂಚಿದರು. ವಾರ್ಡ್‌ನಲ್ಲೆಲ್ಲಾ ಸಿಹಿಯನ್ನು ಆಸ್ವಾದಿಸಲಾಗುತ್ತಿತ್ತು.

ಅಷ್ಟು ಹೊತ್ತಿಗೆ ಡಾಕ್ಟರ್ ಕ್ವಾಜ ವಾರ್ಡ್ ಅನ್ನು ಪ್ರವೇಶಿಸಿದರು. ತಮ್ಮ ಓದುವ ಕೋಣೆಯಲ್ಲಿ ಅವರಿಗೆ ಆ ಸಂತೋಷದ ಸುದ್ದಿ ಮುಟ್ಟಿತ್ತು. ತಾವು ಓದುತ್ತಿದ್ದ ಪುಸ್ತಕವನ್ನು ಹಾಗೇ ಕೈಯಲ್ಲಿ ಹಿಡಿದುಕೊಂಡೇ ಅವರು ಓಡಿ ಬಂದಿದ್ದರು. ಅವರ ಆನಂದಕ್ಕೆ ಪಾರವೇ ಇರಲಿಲ್ಲ. ಡಾಕ್ಟರ್ ಕ್ವಾಜರಿಗೆ ಜಾನ್ ಬಲದೇವ್ ಮಿರ್ಜಾನ ರೋಗವು ಜನನ ಮರಣಗಳ ನಡುವಿನ ಒಂದು ಹೋರಾಟವಾಗಿತ್ತು. ಅವರ ಅರಿವಿಗೇ ಒಂದು ಸವಾಲ್ ಆಗಿತ್ತು. ಅವರ ಅಭಿಮಾನದ ಹಾಗೂ ಆತ್ಮನಿಂದೆಯ ಒಂದಂಶವು ಅದರಲ್ಲಿ ಸೇರಿತ್ತು.

ಏದುಸಿರನ್ನು ನಿಯಂತ್ರಿಸಿಕೊಂಡ ನಂತರ ಡಾಕ್ಟರ್ ಕ್ವಾಜ ಕೇಳಿದರು "ಬಾಬಾ ಹೇಗಿದ್ದೀರಿ ? ಆರೋಗ್ಯವೇ ಅಲ್ಲವೇ ?"

ಜಾನ್ ಬಲ್‌ದೇವ್ ಮಿರ್ಜಾ ಬಹು ಪ್ರಯಾಸದಿಂದ ನಕ್ಕನು. ಅದೊಂದು ಮಂಕಾದ ನಗುವಾಗಿದ್ದರೂ ಲೋಕವೆಲ್ಲಾ ಗಹಗಹಿಸಿ ನಗುತ್ತಿರುವಂತೆ ಕ್ವಾಜರಿಗನ್ನಿಸಿತು.

"ಸಮುದ್ರದಲ್ಲಿ ಮುಳುಗಿ ಹೋಯಿತೆಂದು ಭಾವಿಸಿದ ಒಂದು ದೊಡ್ಡ ದೋಣಿಯೂ, ಅದರಲ್ಲಿನ ಪಯಣಿಗರೂ ಅನಿರೀಕ್ಷಿತವಾಗಿ ಹಿಂದಿರುಗಿದಹಾಗಿದೆ." ಡಾಕ್ಟರ್ ಕ್ವಾಜ ಸುತ್ತಲೂ ನಿಂತಿರುವವರೊಡನೆ ಹೇಳಿದರು "ನನಗೂ ಒಂದು ಚಾಕಲೇಟ್ ಕೊಡಿ."

ಲಕ್ಷ್ಮಿ ಒಂದು ಚಾಕಲೇಟ್ ಡಾಕ್ಟರ್ ಕ್ವಾಜರ ಕೈಯಲ್ಲಿ ಕೊಟ್ಟಳು. ಕ್ವಾಜ ಆ ಚಾಕಲೇಟ್ ಅನ್ನು ಜಾನ್ ಬಲ್‌ದೇವ್ ಮಿರ್ಜಾಗೆ ನೀಡಿದರು. ಮಿರ್ಜಾ ಎಡದ ಕೈ ಎತ್ತಿ ಅದನ್ನು ತೆಗೆದುಕೊಂಡನು. ಚಾಕಲೇಟ್‌ನ ಫಾಯಿಲ್ ಬಿಡಿಸಿ ತೆಗೆಯಲು ಅವನು ಬಲಕ್ಕೆ ಎತ್ತಲು ಶ್ರಮಿಸಿದನು. ಆಗುತ್ತಿಲ್ಲವೆಂದು ಅರಿತಾಗ ಅವನು ವಿಷಣ್ಣವದನನಾಗಿದ್ದನ್ನು ಕಂಡ ಡಾಕ್ಟರ್ ಕ್ವಾಜ ಚಾಕಲೇಟ್‌ನ ಫಾಯಿಲ್ ತಾವೇ ಬಿಡಿಸಿ ತೆಗೆದು ಚಾಕಲೇಟ್ ಅನ್ನು ಅವನ ಬಾಯಲ್ಲಿಟ್ಟರು.

ಒಂದು ಪುಟ್ಟ ಮಗುವಿನಂತೆ ಅವನು ಅದನ್ನು ಬಹು ಪ್ರಯಾಸದಿಂದ ಚೀಪಲು ಪ್ರಾರಂಭಿಸಿದನು. ಪ್ರಜ್ಞಾಹೀನ ಅವಸ್ಥೆಗೆ ಚಲಿಸುತ್ತಿದ್ದ ಅವನು ಆ ರಾತ್ರಿಯನ್ನು ಒಂದು ಚಾಕಲೇಟ್‌ನಿಂದ ಆರಂಭಿಸಿದ್ದನು. ಆದರೆ ಒಂದು ಚಾಕಲೇಟ್ ಅನ್ನು ಕಸಹಾಕುವ ಬುಟ್ಟಿಯಲ್ಲಿ ಹಾಕಿ ಅದರ ಅಲ್ಯೂಮಿನಿಯಂ ಫಾಯಿಲ್ ಅನ್ನು ಮಿರ್ಜಾ ಅಗಿಯುತ್ತಿದ್ದನು. ಅಂತಹ ತಮಾಷೆ ತೋರಿಸಲು ಅವನಿಗೀಗಲೂ ಆಸೆ ಇದೆ.

ಚಾಕಲೇಟ್ ಅಗಿಯುವಾಗಲೂ ಕಣ್ಣುಗಳಲ್ಲಿ ಸ್ಪಷ್ಟವಾದ ಆ ಕುಚೇಷ್ಟೆಯ ನಗು ಅದನ್ನೇ ಸಾರಿ ಹೇಳುತ್ತಿತ್ತು.

ಜಾನ್ ಬಲ್‌ದೇವ್ ಮಿರ್ಜಾ ಬಹಳ ಉತ್ಸಾಹದಿಂದ ಚುರುಕಾಗಿದ್ದನು. ಮಂಚದ ಮೇಲೆ ಒರಗಿ ಮಲಗಬೇಕೆಂದು ಅವನು ಸನ್ನೆ ಮಾಡಿದನು. ಸಿಸ್ಟರೂ, ಸ್ಟಾಫ್ ನರ್ಸೂ ಸೇರಿ ಅವನನ್ನು ಹಿಡಿದುಕೊಂಡು, ಎರಡು ತಲೆದಿಂಬುಗಳನ್ನಿಟ್ಟು ಮಂಚದಲ್ಲಿ ಒರಗಿಸಿ ಮಲಗಿಸಿದರು. ಅವನು ಇಷ್ಟು ದಿನಗಳೂ ಪ್ರಜ್ಞೆ ಇಲ್ಲದೆ ಮಲಗಿದ್ದರೂ ಸಹ ಒಂದು ಬೆಡ್ ಸೋರ್ ಸಹ ಆಗಿರಲಿಲ್ಲ. ಅಲ್ಲಿಯ ನರ್ಸ್‌ಗಳ ಸೇವೆಯು ಅಷ್ಟರ ಮಟ್ಟಿಗೆ ಸ್ತುತ್ಯಾರ್ಹವಾಗಿತ್ತು.

ಜೀವನದಲ್ಲಿ ಒಮ್ಮೆಯೂ ತೋಚದಂತಹ ಒಂದು ಹಸಿವು ಅಂದು ಮಿರ್ಜಾಗೆ ಅನುಭವವಾಗಿತ್ತು. ಅವನು ಮೊದಲು ಒಂದು ಲೋಟ ಹಾಲನ್ನು ಸ್ವಲ್ಪ ಸ್ವಲ್ಪವಾಗಿ ಕುಡಿದು ಮುಗಿಸಿದನು. ಮೊದಲಿನಂತೆ ಅವನಿಗೆ ಯಾವುದನ್ನೂ ಗಟಗಟನೆ ಕುಡಿಯಲು ಸಾಧ್ಯವಾಗುತ್ತಿರಲಿಲ್ಲ. ಮಧ್ಯೆ ಮಧ್ಯೆ ತುಟಿಯ ಅಂಚಿನಿಂದ ಹಾಲು ಕೆಳಕ್ಕೆ ಹರಿದುಹೋಗುತ್ತಿತ್ತು. ಕಷ್ಟವೆನಿಸುತ್ತಿದ್ದರೂ ತಿನ್ನಲು ಕುಡಿಯಲು ತಯಾರಾದವನಂತಾಗಿತ್ತು ಅವನು. ಹಾಲೂ, ಹಾರ್ಲಿಕ್ಸೂ, ಕಿತ್ತಲೆ ಹಣ್ಣು, ಆಪಲ್, ಕಿಚಡಿ, ಇವುಗಳನ್ನು ಅವನು ಒಂದಾದ ಮೇಲೊಂದರಂತೆ ತೆಗೆದುಕೊಳ್ಳುತ್ತಿದ್ದನು. ಒಂದು ನಿಮಿಷವೂ ವ್ಯರ್ಥಮಾಡದೆ ಮಿರ್ಜಾ ಏನಾದರೂ ತಿಂದೂ ಕುಡಿದೂ ಮಾಡುತ್ತಿದ್ದನು.

ಮಾರನೆಯ ದಿನ ಬೆಳಿಗ್ಗೆ ಮಿರ್ಜಾನನ್ನು ಒಂದು ವ್ಹೀಲ್ ಚೇರ್‌ನಲ್ಲಿ ಕುಳ್ಳಿರಿಸಿ ಆಯಾ ಹೊರಕ್ಕೆ ಕರೆದುಕೊಂಡು ಹೋದಳು. ಸೆಂಟ್ರಲ್ ಔಟ್‌ಡೋರ್‌ನ ಮುಂದೆ ವಿಶಾಲವಾದ ಹೂವಿನ ತೋಟದಲ್ಲಿ ಆ ವ್ಹೀಲ್ ಚೇರನ್ನು ತಳ್ಳಿಕೊಂಡು ಹೋಗಲಾರಂಭಿಸಿದಳು.

ಇನ್ನು ಇಬ್ಬರು ರೋಗಿಗಳು ವ್ಹೀಲ್‌ಚೇರ್‌ನಲ್ಲಿ ಹೀಗೆ ಚಲಿಸುತ್ತಿದ್ದರು. ಆ ರೋಗಿಗಳು ಕಣ್ಣುಗಳನ್ನು ಪಿಳಿಪಿಳಿ ಬಿಟ್ಟುಕೊಂಡೂ, ಮೂಗನ್ನೇ ಅರಳಿಸಿಕೊಂಡು ತಮ್ಮ ಆರಾಮ ಸಮಯವನ್ನೆಲ್ಲಾ ಸರಿಯಾಗಿ ವಿನಿಯೋಗಿಸುತ್ತಿರುವಂತೆ ತೋರಿತು. ವ್ಹೀಲ್ ಚೇರ್‌ಗಳನ್ನು ತಳ್ಳುತ್ತಿರುವ ಆಯಾಗಳೊಂದಿಗೆ ಬಾಯಿ ಮುಚ್ಚದೆ ಅವರು ಮಾತನಾಡುತ್ತಿರುವುದನ್ನು ಕಂಡಾಗ ಮಿರ್ಜಾಗೆ ದುಃಖವಾಯಿತು. ಅವನಿಗೆ ಒಂದು ಹೂವು ಹಿಡಿದುಕೊಳ್ಳಬೇಕೆಂಬ ಆಸೆಯಾಯಿತು. ಅವನು ತನ್ನ ಎಡದ ಕೈಯನ್ನೆತ್ತಿ ಅರಳಿದ ಗುಲಾಬಿ ಹೂವಿನತ್ತ ಬೊಟ್ಟು ಮಾಡಿ ತೋರಿಸಿದನು. ವ್ಹೀಲ್‌ಚೇರನ್ನು ಸ್ಟ್ಯಾಂಡ್‌ನಲ್ಲಿ ನಿಲ್ಲಿಸಿದನಂತರ ಆಯಾ ಹಸಿರುಹುಲ್ಲಿನ ಮೇಲೆ ನಡೆದು ಹೂದೋಟದ ಬಳಿ ಬೆಳೆದು ಸಮೃದ್ಧವಾಗಿ ಹೂಬಿಟ್ಟು ನಿಂತಿದ್ದ ಒಂದು ಗಿಡದಿಂದ ದೊಡ್ಡದೊಂದು ಗುಲಾಬಿ ಹೂವನ್ನು ಕಿತ್ತುಕೊಂಡು ಒಂದು ಮಿರ್ಜಾಗೆ ಕೊಟ್ಟಳು. ಸಂಪೂರ್ಣವಾಗಿ ಅರಳಿ ನಿಂತಿರುವ ಒಂದು ಹೂವಾಗಿತ್ತದು. ಕಡುಕೆಂಪಾಗಿದ್ದ ತೇವವುಳ್ಳ ಅದರ ದಳಗಳಲ್ಲಿ ಮಿರ್ಜಾ ತನ್ನ ತುಟಿಗಳನ್ನು ಒತ್ತಿದನು. ಮಂಕಾಗಿಯಾದರೂ ಅವನ ನೆನಪುಗಳು ಬಾಲ್ಯಕಾಲದತ್ತ ಹರಿದವು. ಅವನ ಕಣ್ಣುಗಳಲ್ಲಿ ತನಗೆ ಆದ ನಷ್ಟದ ಸಂಕಟ ಪ್ರತಿಫಲಿಸಿತು.

ಕಟ್ಟಡದ ಮೇಲ್ಭಾಗದಲ್ಲಿ ಸೂರ್ಯನ ಕಿರಣಗಳು ಹೊಳೆಯುತ್ತಿದ್ದವು. ವೃಕ್ಷಗಳ ಮೇಲು ಹರಿಪಿನಲ್ಲಿ ಬೆಳಕು ಚೆಲ್ಲಾಡಿತ್ತು. ಯಾವಾಗಲೂ ಗಲಾಟೆಯಾಗುತ್ತಿರುತ್ತಿದ್ದ ಸೆಂಟ್ರಲ್ ಔಟ್ ಡೋರ್‌ನ ಮುಂಭಾಗವು ಇಷ್ಟು ಪ್ರಶಾಂತವಾಗಿರುವುದನ್ನು ಅವನು ಒಮ್ಮೆಯೂ ಕಂಡಿರಲಿಲ್ಲ. ಆದರೆ ಬೆಳಗಿನಲ್ಲಿ ಅವನು ಒಮ್ಮೆಯೂ ಬಂದಿಲ್ಲವಲ್ಲಾ.

ಆರು ಗಂಟೆಯು ಸೈರನ್ ಕೂಗಿತು.

ಆಯಾ ವ್ಹೀಲ್‌ಚೇರನ್ನು ತಳ್ಳುತ್ತಾ ವಾರ್ಡನ್ನೇ ಪ್ರವೇಶಿಸಿದಳು.

ಬಹಳ ಕಾಲದನಂತರ ಜಾನ್ ಬಲ್‌ದೇವ್ ಮಿರ್ಜಾಗೆ ಯೇಸುವಿನ ಜ್ಞಾಪಕ ಬಂತು. ಬೈಬಲನ್ನು ತೆರೆದಿಟ್ಟುಕೊಂಡು ವಚನಗಳನ್ನು ಹೇಳಲು ಅವನು ಇಚ್ಛಿಸಿದನು.

ಆಯಾಳೂ ಸ್ಟಾಫ್ ನರ್ಸೂ ಸೇರಿ ಅವನನ್ನು ಮಂಚದ ಮೇಲೆ ಒರಗಿಸಿ ಮಲಗಿಸಿದಾಗ ತನ್ನ ಎಡಗೈಯಿಂದ ಜಾನ್ ಬಲ್‌ದೇವ್ ಮಿರ್ಜಾ ಹಣೆಯ ಮೇಲೂ ಎದೆಯ ಮೇಲೂ ಕ್ರಾಸ್ ಬರೆದುಕೊಂಡನು. ಅನಂತರ ನಿಸ್ಸಹಾಯವಾಗಿ ಅವನು ಆಯಾಳನ್ನು ನೋಡಿದನು. ಮಿರ್ಜಾನು ಕ್ರಾಸ್ ಬರೆದು ಕೊಂಡದ್ದನ್ನು ಕಣ್ಣುಗಳಲ್ಲಿನ ದೈನ್ಯತೆಯನ್ನು ನೋಡಿ ಆಯಾಳಿಗೆ ಎಲ್ಲಾ ಅರ್ಥವಾಯಿತು. ಜಾನ್ ಬಲ್‌ದೇವ್ ಮಿರ್ಜಾನ ಪ್ರೀತಿಪಾತ್ರವಾದ ಬೈಬಲನ್ನು ಡ್ಯೂಟಿ ರೂಮಿನಲ್ಲಿನ ಬೀರುವಿನಲ್ಲಿ ಜೋಪಾನವಾಗಿಟ್ಟಿದ್ದರು.

ಆಯಾ ಬೈಬಲ್‌ನೊಂದಿಗೆ ಮಂಚದ ಬಳಿ ಬಂದಳು. ಬಹಳ ದಿನಗಳ ನಂತರ ಅವನು ಬೈಬಲ್ ನೋಡುತ್ತಿದ್ದನು. ತನ್ನ ಸಂತೋಷವನ್ನು ಮಿರ್ಜಾ ಹೇಗೇ ತಾನೇ ಪ್ರಕಟಿಸುತ್ತಾನೆ? ಏಳು ಬೆಟ್ಟಗಳನ್ನೊಮ್ಮೆ ಹಾರಲು ಅವನು ಆಸೆಪಟ್ಟನು. ಅವನ ಬತ್ತಿಹೋಗಿದ್ದ ಮಾಂಸಖಂಡಗಳ ಒಂದೊಂದು ಕಣದಲ್ಲೂ ಭಕ್ತಿಯು ತುಂಬಿ ತುಳುಕಾಡುತ್ತಿತ್ತು.

ಸೈಡ್‌ಸ್ಟೂಲ್ ಎಳೆದುಕೊಂಡು ಆಯಾ ಅದರ ಮೇಲೆ ಕುಳಿತು ಬೈಬಲ್ ತೆರೆದಳು. ಗಂಟಲನ್ನೊಮ್ಮೆ ಸರಿ ಮಾಡಿಕೊಂಡನಂತರ ಕನ್ನಡಕವನ್ನು ಒಮ್ಮೆ ಮೇಲಕ್ಕೆ ಮಾಡಿಕೊಂಡು ಆಕೆ ಓದಲು ತೊಡಗಿದಳು.

ದೇವರೇನೇ ನಮ್ಮ
ಆಶ್ರಿತ ಕೇಂದ್ರವೂ ಶಕ್ತಿಯೂ
ದುರಿತದಲ್ಲಿ ತಕ್ಕ ಸಹಾಯವೂ
ಆದ್ದರಿಂದ ಭೂಮಿ
ಅಲ್ಲಾಡಿ ಹೋದರೂ,
ಪರ್ವತಗಳು ಸಮುದ್ರ ಹೃದಯದಲ್ಲಿ
ಸಿಡಿದು ಬಿದ್ದರೂ,
ಅದರಲ್ಲಿನ ನೀರು
ಭೋರ್ಗರೆದು ನೊರೆಯಾಗಿ ಬಂದರೂ,
ಅದರ ಕ್ಷೋಭೆಯಲ್ಲಿ
ಪರ್ವತಗಳು

ನಡುಗಿ ಹೋದರೂ, ನಾವು
ಭಯಪಡುವುದಿಲ್ಲ.
ಒಂದು ನದಿಯಿದೆ ಅದರ
ತೆಳುವಾದ ನೀರಿನ ಹರವು ದೇವರ ನಗರವನ್ನು
ಅತ್ಯುನ್ನತನ ಪೂಜ್ಯ ನಿವಾಸವನ್ನು
ಆಮೋದಭರಿತನನ್ನಾಗಿ ಮಾಡುತ್ತ.
ಆ ನಗರದ ಮಧ್ಯದಲ್ಲಿ
ದೇವರಿದ್ದಾನೆ,
ಅದು ಅಲ್ಲಾಡಿ ಹೋಗುವುದಿಲ್ಲ
ಮುಂಜಾನೆಯೇ ದೇವರು
ಅದಕ್ಕೆ ಸಹಾಯ ಮಾಡುತ್ತಾನೆ
ಜನರು ಕ್ರೋಧಗೊಳ್ಳುತ್ತಾರೆ
ದೇಶಗಳು ಕಾಲೆಡವುತ್ತವೆ.
ಅವನು ತನ್ನ ಶಬ್ದವನ್ನೆ
ಹೊರಡಿಸುತ್ತಾನೆ
ಭೂಮಿ ಕರಗಿ ಹೋಗುತ್ತದೆ.
ಸೈನ್ಯಗಳ ಪ್ರಭು
ನಮ್ಮೊಂದಿಗಿದ್ದಾನೆ
ಯಾಕೋಬ್‌ನ ದೇವರೇ
ನಮ್ಮ ಆಶ್ರಿತ ಕೇಂದ್ರವು
ಬನ್ನಿ, ಪ್ರಭುವಿನ
ಪ್ರವೃತ್ತಿಗಳನ್ನು ದರ್ಶನ ಮಾಡಿ
ಅವನು ಭೂಮಿಯನ್ನು ಹೇಗೆ
ಗಡುಸು ನೆಲವನ್ನಾಗಿ ಮಾಡಿದ್ದಾನೆ
ಎನ್ನುವುದನ್ನು ನೋಡಿ
ಭೂಮಿಯ ಎಲ್ಲೆಗಳವರೆಗೂ
ಅವನು ಯುದ್ಧಗಳಿಲ್ಲದಂತೆ ಮಾಡುತ್ತಾನೆ
ಅವನು ಬಿಲ್ಲುಗಳನ್ನು ಧ್ವಂಸ ಮಾಡುತ್ತಾನೆ
ಭರ್ಚಿಯನ್ನು ಧ್ವಂಸ ಮಾಡುತ್ತಾನೆ
ರಥಗಳನ್ನು ಸುಟ್ಟು ಹಾಕುತ್ತಾನೆ!
"ಶಾಂತರಾಗಿ, ನಾನು
ದೇವರೆಂದು ತಿಳಿಯಿರಿ
ಜನತೆಗಳ ಮಧ್ಯೆ ನಾನು
ಸಮುನ್ನತನು
ಭೂಮಿಯಲ್ಲಿ ನಾನು ಸಮುನ್ನತನು!"

ಸೈನ್ಯಗಳ ಪ್ರಭು
ನಮ್ಮೊಂಗಿದ್ದಾನೆ
ಯಾಕೋಬ್‌ನ ದೇವರೇ
ನಮ್ಮ ಆಶ್ರಿತ ಕೇಂದ್ರವು.

ಬೈಬಲ್ ಮುಚ್ಚಿದನಂತರ ಆಯಾ ಮಿರ್ಜಾನನ್ನು ನೋಡಿದಳು. ಅವನು ಏನನ್ನೋ ಆಲೋಚಿಸುತ್ತಾ ಅರ್ಥಗರ್ಭಿತವಾದ ದೃಷ್ಟಿಯಿಂದ ಮಲಗಿದ್ದನು. ಅವನು ಏನನ್ನು ಯೋಚಿಸುತ್ತಿರಬಹುದು ? ಬಹುಶಃ ಅತ್ಯುನ್ನತ ಮಹತ್ವದ ಬಗ್ಗೆ ಆಗಿರಬಹುದು. ಅಥವಾ ಭೂಮಿಯಲ್ಲಿನ ಶಾಂತಿಯ ಬಗ್ಗೆಯಾಗಿರಬಹುದು. ಏನೇ ಆದರೂ ಮಿರ್ಜಾನ ಯೋಚನೆಯು ಅಗಾಧವಾದದ್ದು.

# ಇಪ್ಪತ್ತೇಳು

ಡಾಕ್ಟರ್ ಕ್ವಾಜರ ಒಂದು ದಿನವು ಹೀಗೆ ಆರಂಭವಾಗುತ್ತಿತ್ತು. ಅವರು ಬ್ರಾಹ್ಮೀ ಮುಹೂರ್ತದಲ್ಲಿ ನಿದ್ದೆಯಿಂದೆದ್ದರು. ಅವರನ್ನು ಎಬ್ಬಿಸಲು ಮನುಷ್ಯರ ಸಹಾಯವೋ, ಅಲಾರಮ್ ಸಹಾಯವೋ ಬೇಕಿಲ್ಲ. ಆ ಸಮಯಕ್ಕೆ ಸರಿಯಾಗಿ ಅವರು ತಾವಾಗಿಯೇ ಎಚ್ಚರಗೊಳ್ಳುತ್ತಾರೆ. ನಿದ್ದೆಯಿಂದ ಫಕ್ಕನೆ ಗಾಬರಿಯಿಂದಲೋ, ಅಥವಾ ಏನನ್ನಾದರೂ ಸ್ವಪ್ನ ನೋಡಿ ನಡುಗುತ್ತಲೋ ಎಚ್ಚರಗೊಳ್ಳುವುದಿಲ್ಲ. ಒಂದು ಹೂವು ಅರಳುವಂತೆ ಅವರು ಮೆಲ್ಲಮೆಲ್ಲನೆ ಎಚ್ಚೆತ್ತು ಮಂಚದಿಂದ ಏಳುತ್ತಾರೆ.

ಇಂದು ಡಾಕ್ಟರ್ ಕ್ವಾಜರಿಗೆ ವಿರಾಮವಿಲ್ಲದ ದಿನವು. ಎಂ.ಬಿ.ಬಿ.ಎಸ್‌ನವರಿಗೆ ಒಂದು ಬೆಡ್‌ಸೈಡ್ ಮೆಡಿಸಿನ್ ಕ್ಲಾಸ್. ಎಂ.ಡಿ.ಯವರಿಗೆ ಒಂದು ಡೆಮಾನ್‌ಸ್ಟ್ರೇಷನ್ ಕ್ಲಾಸ್. ಮಧ್ಯಾಹ್ನದ ನಂತರ ಸೆಮಿನಾರ್. ಸಾಯಂಕಾಲ ಡಿಪಾರ್ಟ್‌ಮೆಂಟ್ ಮೀಟಿಂಗ್. ರಾತ್ರಿ ಇಂಡಿಯನ್ ಮೆಡಿಕಲ್ ಅಸೋಸಿಯೇಷನ್‌ನ ಪ್ರಾಂತೀಯ ಸಮ್ಮೇಳನದಲ್ಲಿ ಅವರ ಮುಖ್ಯವಾದ ಭಾಷಣ.

ಸ್ನಾನವಾದ ನಂತರ ಡಾಕ್ಟರ್ ಕ್ವಾಜ ಅಡಿಗೆಕೋಣೆಯನ್ನು ಪ್ರವೇಶಿಸಿದರು. ಒಂದು ಹಿಡಿ ದ್ರಾಕ್ಷಿಯನ್ನು ತೆಗೆದುಕೊಂಡು ಮಿಕ್ಸಿಯಲ್ಲಿ ಹಾಕಿ ತಣ್ಣನೆಯ ನೀರನ್ನೂ ಮಾತ್ರ ಸೇರಿಸಿ ತಿರುಗಿಸಿ ಅವರು ಜ್ಯೂಸ್ ಮಾಡಿದರು. ದಿನವೂ ಬೆಳಿಗ್ಗೆಯ ಹೊತ್ತು ಒಂದು ಲೋಟ ಹಣ್ಣಿನ ರಸವು ಅವರ ಪಾನೀಯವು. ಟೊಮ್ಯಾಟೋ, ಕಿತ್ತಳೆ ಹಣ್ಣು, ಪೈನಾಪಲ್, ದ್ರಾಕ್ಷಿ ಎಂಬವುಗಳಲ್ಲಿ ಯಾವುದಾದರೊಂದು ಆಗಬಹುದು. ಅದರಲ್ಲಿ ಸಕ್ಕರೆಯನ್ನಾಗಲಿ ಉಪ್ಪನ್ನಾಗಲಿ ಸೇರಿಸುವುದಿಲ್ಲ. ಟೀ ಆಗಲಿ ಕಾಫೀ ಆಗಲಿ ಕುಡಿಯುವ ರೂಢಿ ಅವರಿಗಿಲ್ಲ. ಆಹಾರದ ವಿಷಯದಲ್ಲಿ ಅವರಿಗೆ ಯಾವುದೇ ಬಗೆಯ ಆಸೆಯಿಲ್ಲ. ಎರಡು ಮೂರು ಸ್ಲೈಸ್ ಬ್ರೆಡ್, ಸ್ವಲ್ಪ ಬಟ್ಟರ್, ತಣ್ಣೀರು ಅಥವಾ ಒಂದು ಹಿಡಿ ಕಾರ್ನ್ ಫ್ಲೇಕ್ಸ್, ಒಂದು ಲೋಟ ಹಾಲು. ಇಷ್ಟರಲ್ಲಿ ಅವರ ಬ್ರೇಕ್ ಫಾಸ್ಟ್ ಮುಗಿಯುತ್ತೆ. ಮಧ್ಯಾಹ್ನ ಬೇಳೆಯೂ, ಬೇಯಿಸಿದ ತರಕಾರಿ, ಚಪಾತಿ. ರಾತ್ರಿ ಹುಳಿಯಾಗದ ಒಂದು ಕಪ್ ಮೊಸರು, ಒಂದೋ ಎರಡೋ ಹಣ್ಣುಗಳು. ಇದಕ್ಕಿಂತ ಹೆಚ್ಚು ಆಹಾರವನ್ನು ಅವರು ತೆಗೆದುಕೊಳ್ಳುವುದಿಲ್ಲ. ಡಾಕ್ಟರ್ ಕ್ವಾಜ ಪೂರ್ಣವಾಗಿ ಸಸ್ಯಾಹಾರಿಯಾಗಿದ್ದರು. ಮೊಟ್ಟೆಯನ್ನೂ ಸಹ ಅವರು ಕೈಯಿಂದ ಮುಟ್ಟುವುದಿಲ್ಲ. ಇಷ್ಟು ಸ್ವಲ್ಪ ಆಹಾರ ತೆಗೆದುಕೊಂಡರೂ ಸಹ ಅವರ ಶಕ್ತಿಗೇನೂ ಕಡಿಮೆಯಿಲ್ಲ.

ಡಾಕ್ಟರ್ ಕ್ವಾಜ ತಮ್ಮ ರೀಡಿಂಗ್ ರೂಮನ್ನು ಪ್ರವೇಶಿಸಿದರು. ಅವರಿಗೆ ಬಹಳವಾಗಿ ವ್ಯಾಸಂಗದ ಹವ್ಯಾಸವಿತ್ತು. ಪುಸ್ತಕವನ್ನು ತಿನ್ನುವುದೇ ಅವರ

ಹವ್ಯಾಸವು. ಅದೂ ಅವರು ಬೇಗ ಬೇಗ ಪುಸ್ತಕದ ಪೇಜುಗಳನ್ನು ತಿರುವಿ ಹಾಕುವುದನ್ನು ನೋಡುವಾಗ, ನಾವು ಆಶ್ಚರ್ಯದಿಂದ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುತ್ತೇವೆ. ಆಗತ್ಯವಿರುವ ಅಂಶಗಳನ್ನು ಅವರು ಆಗಾಗ್ಗೆ ಅವಸರವಸರವಾಗಿ ಗುರುತು ಮಾಡಿಡುವರು. ಟ್ರೈನ್ ಹೊರಡಲಾದಾಗ, ಪ್ಲಾಟ್ ಫಾರಂಗೆ ಬಂದು ನಿಂತಿರುವಾಗ ಅವಸರವಸರದಲ್ಲೇ ಅವರು ಓದುತ್ತಿರುತ್ತಾರೆ. ಹಾಗೇ ಗುರುತು ಹಾಕಿಟ್ಟುಕೊಳ್ಳುವುದನ್ನೂ ಮಾಡುತ್ತಾರೆ. ಇಷ್ಟು ಕಡಿಮೆ ಸಮಯದಲ್ಲಿ ಇಷ್ಟು ಹೆಚ್ಚು ಓದುವ, ಇಷ್ಟು ಹೆಚ್ಚಿನ ಜ್ಞಾಪಕಶಕ್ತಿಯನ್ನು ಹೊಂದಿರುವ ಇನ್ನೊಬ್ಬ ವ್ಯಕ್ತಿಯನ್ನು ಕಾಣಲು ಕಷ್ಟವಷ್ಟೆ.

ಇಂಡಿಯನ್ ಮೆಡಿಕಲ್ ಅಸೋಸಿಯೇಷನ್‌ನ ಮೀಟಿಂಗ್‌ನಲ್ಲಿ ಭಾಷಣ ಮಾಡಲಿರುವ ವಿಷಯುವನ್ನು ಪೂರ್ಣವಾಗಿ ಬರೆದು ತಯಾರು ಮಾಡಿದ ನಂತರ ಡಾಕ್ಟರ್ ಕ್ವಾಜ ನೆಟ್ಟಗೆ ನಿಂತರು. ಅವರಿಗೆ ದೊರಕಿದ್ದು ಒಂದು ಜನರಲ್ ಟಾಪಿಕ್ ಆಗಿತ್ತು. ಇಂಡಿಯನ್ ಜನತೆಯೂ ಪೌಷ್ಟಿಕ ಆಹಾರವೂ, ಪೌಷ್ಟಿಕ ಆಹಾರದ ಕೊರತೆಯಿಂದ ನಮ್ಮ ದೇಶದಲ್ಲುಂಟಾಗುವ ಕೇಡುಗಳ ಬಗ್ಗೆಯೇ ಡಾಕ್ಟರ್ ಕ್ವಾಜ ಭಾಷಣವನ್ನು ಮಾಡಲಿದ್ದರು. ಆ ಸಮಯದಲ್ಲೇ ಪೌಷ್ಟಿಕ ಆಹಾರಗಳನ್ನು ಅಮಿತವಾಗಿ ಸಿದ್ಧಪಡಿಸುತ್ತಿರುವ ಒಂದು ಅಡಿಗೆಮನೆಯಿಂದ ಬರುವ ವಾಸನೆಯ ಅಲೆಗಳು ಚೆನ್ನಾಗಿ ಕಿಟಕಿಯನ್ನು ತೆರೆದಿಟ್ಟಿದ್ದ ಅವರ ಕೋಣೆಯನ್ನು ಪ್ರವೇಶಿಸಿತು. ಅದು ಮತ್ತಾವ ಅಡಿಗೆಯ ಮನೆಯಿಂದಲೂ ಅಲ್ಲ. ಅವರದೇ ಡಿಪಾರ್ಟ್‌ಮೆಂಟಿ ನಲ್ಲಿರುವ ನಂಬರ್ ಟು ಪ್ರೊಫೆಸರ್ ಆದ ಡಾಕ್ಟರ್ ಸಂತುಕುಮಾರ್‌ನ ಮನೆಯಿಂದಾಗಿತ್ತು.

ಬೆಳಕು ಹರಿಯುತ್ತಿತ್ತು. ಜೊತೆಗೇ ಪ್ರೊಫೆಸರ್‌ಗಳ ಕ್ವಾರ್ಟರ್ಸ್‌ಗಳಲ್ಲಿ ಶಬ್ದವೂ ಕೋಲಾಹಲವೂ ಪ್ರಾರಂಭವಾಗುತ್ತಿತ್ತು.

ಡಾಕ್ಟರ್ ಕ್ವಾಜ ಬಾಗಿಲು ತೆರೆದು ಹೊರಗಿದ್ದ ತೋಟವನ್ನು ಪ್ರವೇಶಿಸಿದರು. ದಿನವೂ ಬೆಳಿಗ್ಗೆ ಒಂದು ಗಂಟೆಯಷ್ಟು ಸಮಯವನ್ನು ಅವರು ತೋಟದಲ್ಲಿ ಕಳೆಯುತ್ತಿದ್ದರು. ಅಲ್ಲಿ ಕಳೆಯನ್ನು ಕೀಳುವುದು. ಗಿಡಗಳನ್ನು ಕತ್ತರಿಸುವುದು, ಹುಲ್ಲು ಸಮ ಮಾಡುವುದು, ಗೊಬ್ಬರ ಹಾಕುವುದು, ಗಿಡಗಳಿಗೆ ನೀರು ಹಾಕುವುದು ಎಲ್ಲಾ ಮಾಡುತ್ತಿದ್ದುದು ಅವರೇ.

ಈ ತೋಟವು ಅವರಿಗೆ ತಮ್ಮ ಸ್ವಂತ ಕುಟುಂಬವಿದ್ದಂತೆ. ಅಲ್ಲಿನ ಹುಲ್ಲು, ಹೂಗಳು, ಗಿಡಗಳು, ಮರಗಳು ಅವರ ಹೆಂಡತಿ, ಮಕ್ಕಳು, ತಂದೆ ತಾಯಿಗಳೂ ಆಗಿರುತ್ತಾರೆ. ಗಿಡಗಳ ಭಾಷೆ ಅವರಿಗೆ ಗೊತ್ತಿತ್ತು. ಹೂಗಳು ಹೆರುವುದನ್ನು ಅವರು ತಮ್ಮ ಕಣ್ಣುಗಳಿಂದ ಕಂಡಿದ್ದಾರೆ. ಮರಗಳ ಸಾವನ್ನು ಡಾಕ್ಟರ್ ಕ್ವಾಜ ದಾಖಲೆ ಮಾಡಿದ್ದರೆ. ಈ ಸ್ಥಾವರ ಜಂಗಮಗಳ ಉಬ್ಬರವಿಳಿತಗಳ ಮಧ್ಯೆ ಅವರು ಯಾವಾಗಲೂ ಮುಳುಗಿ ತೇಲುತ್ತಿರುತ್ತಾರೆ.

ತೋಟದ ಮುಂಭಾಗದ ಅತಿ ಸಮೀಪದಲ್ಲಿಯೇ ಒಂದು ರೋಡ್ ಹೋಗುತ್ತಿತ್ತು. ಆ ರೋಡಿನ ಎದುರು ಭಾಗದಲ್ಲಿ ಮಿಸ್ಟರ್ ಆಚಾರಿಯವರು ವಾಸಿಸುತ್ತಿದ್ದರು. ಅವರು ಪೋರ್ಟಿಕೋದಲ್ಲಿರುವ ಕಾಲಿಂಗ್‌ಬೆಲ್ ಬಾರಿಸಲು

ರೋಗಿಗಳು ಬಂದರು. ಸಂಬಳದ ಶೇಕಡ ಐವತ್ತರಷ್ಟು ನಾನ್ ಪ್ರಾಕ್ಟೀಸಿಂಗ್ ಅಲೋಯನ್ಸ್ ದೊರಕುತ್ತಿರುವ ಮಿಸ್ಟರ್ ಆಚಾರಿಯವರು ಮನೆಯಲ್ಲಿ ರೋಗಿಗಳನ್ನು ಪರೀಕ್ಷಿಸಬಾರದು. ಆದರೂ ಅವರು ಅದನ್ನು ಮಾಡುತ್ತಿದ್ದರು. ಬೇಡವೆಂದು ವರ್ಜಿಸಿದ ಹಣ್ಣುಗಳನ್ನು ಅವರು ತಿನ್ನುತ್ತಾರೆ. ವರ್ಜಿಸಿದ ಹಣ್ಣುಗಳಿಗೆ ಎಂದಿಗೂ ರುಚಿ ಹೆಚ್ಚಿರುತ್ತಲ್ಲವೇ ?

ಡಾಕ್ಟರ್ ಕ್ವಾಜರ ಹೂತೋಟದ ಹೊರಗಿನಲ್ಲಿರುವ ಲಾನ್‌ನಲ್ಲಿ ಐದಾರು ಜನರು ಪ್ರತ್ಯಕ್ಷರಾದರು; ಡಾಕ್ಟರ್ ಸಂತುಕುಮಾರ್ ಮತ್ತು ಆತನ ಮಕ್ಕಳೂ ಬಂದಿದ್ದರು. ಆತನಿಗೆ ಹೂತೋಟವಿರಲಿಲ್ಲ. ಆ ಸ್ಥಳವನ್ನು ಆತನು ಒಂದು ಪುಟ್ಟ ಜಿಮ್ನೇಷಿಯಂ ಆಗಿ ಮಾರ್ಪಡಿಸಿದ್ದನು. ಪಕ್ಕ ಪಕ್ಕದಲ್ಲಿರುವ ಎರಡು ಕಬ್ಬಿಣದ ಬಾರ್‌ಗಳೂ, ಒಂದು ದೊಡ್ಡ ಬಾರ್, ಎರಡು ಮೂರು ಗದೆಗಳು, ಕಬ್ಬಿಣದ ದೊಡ್ಡ ಒಂದು ಚೆಂಡು. ಇವುಗಳನ್ನು ಅಲ್ಲಿ ಕಾಣಬಹುದು. ಅದು ಒಂದು ದೊಡ್ಡ ಕುರುಕ್ಷೇತ್ರವು. ಸರ್ಕಸ್ ಗುಡಾರದಲ್ಲಿನ ಪ್ರದರ್ಶಕರಂತೆ ಸಂತುಕುಮಾರ್‌ನ ಮಕ್ಕಳು ನೆಗೆಯಲು, ಪಲ್ಟಿ ಹೊಡೆಯಲು ಗದೆ ತೆಗೆದುಕೊಂಡು ತಿರುಗಿಸಲು ಆರಂಭಿಸಿದರು. ಹಿಸ್ ಹಿಸ್ ಶಬ್ದಗಳನ್ನು ಅವರು ಮಧ್ಯೆ ಮಧ್ಯೆ ಹೊರಡಿಸುವರು.

ದಪ್ಪಗೆ ಕೊಬ್ಬಿದ್ದ ಸಂತುಕುಮಾರ್ ಒಂದು ಚೆಡ್ಡಿಯನ್ನು ಮಾತ್ರ ಧರಿಸಿದ್ದನು. ಆತನು ನೆಲದ ಮೇಲೆ ಮುಗುಚಿಕೊಂಡು ಕೈಕಾಲುಗಳ ಬೆರಳುಗಳ ಮೇಲೆ ನಿಲ್ಲಲು ಪ್ರಯತ್ನಿಸುತ್ತಿದ್ದನು. ಅದು ಸಾಧ್ಯವಾಗುವುದೇ ಆದರೆ ಸಾಧಿಸಲಾಗದ ಮತ್ತೊಂದು ಅಭ್ಯಾಸಕ್ಕೆ ಆತನು ಪ್ರಯತ್ನಿಸತೊಡಗುವನು. ಸಂತುಕುಮಾರನ ಶಾಶ್ವತವಾದ ಲಕ್ಷ್ಯವು ಅಸಾಧ್ಯವಾದ ಒಂದು ಐಟಂ ಆಗಿರುತ್ತದೆ.

ಗಿಡಗಳ ಮಧ್ಯೆ ಡಾಕ್ಟರ್ ಕ್ವಾಜರ ತಲೆ ಕಾಣಿಸಿಕೊಂಡಾಗ ಸಂತುಕುಮಾರ್ ಕೂಗಿಕೊಂಡನು.

"ಗುಡ್ ಮಾರ್ನಿಂಗ್ ಕ್ವಾಜ! ನೀನೇನು ಮಾಡುತ್ತಿದ್ದೀ ?"

ಡಾಕ್ಟರ್ ಕ್ವಾಜ ತೋಟದ ಪಕ್ಕಕ್ಕೆ ಬಂದರು. ಅವರಿಬ್ಬರ ಮನೆಗಳು ಅಕ್ಕಪಕ್ಕದಲ್ಲೇ ಇದ್ದವು. ಮನೆಯ ಮುಂದೆ ಒಬ್ಬನು ಹೂ ತೋಟವನ್ನು ಮಾಡಿದ್ದರೆ ಮತ್ತೊಬ್ಬನು ನೆಲವನ್ನು ಸಸ್ಯರಹಿತವಾದ ಆಟದ ಕಣವನ್ನಾಗಿ ಮಾರ್ಪಡಿಸಿದ್ದನು.

ಸಂತುಕುಮಾರ್‌ಗೆ ಏದುಸಿರು ಬರುತ್ತಿತ್ತು. ಆತನ ಮಕ್ಕಳ ಎಡೆಬಿಡದೆ ಅಭ್ಯಾಸ ನಡೆಸುತ್ತಿದ್ದರು. ಸಂತುಕುಮಾರ್‌ಗೆ ಆರು ಮಕ್ಕಳು ಎಲ್ಲರೂ ಗಂಡೇ. ಅವನಂತೆಯೇ ಅವರೂ ತಿನ್ನುವರು. ಕುಡಿಯುವರು. ದಪ್ಪವಾಗದಿರಲೆಂದೇ ಈ ದೈಹಿಕ ವ್ಯಾಯಾಮದ ಅಭ್ಯಾಸವನ್ನು ಆರಂಭಿಸಿದ್ದರು. ದಿನವೂ ಬೆಳಿಗ್ಗೆ ಅವರು ವ್ಯಾಯಾಮ ಮಾಡುವ ಅಭ್ಯಾಸವನ್ನಿಟ್ಟುಕೊಂಡಿದ್ದರು.

"ನೀನೂ ಏನಾದರೂ ವ್ಯಾಯಾಮ ಮಾಡಬೇಕು" ಆಯಾಸದ ಮಧ್ಯೆ ಕ್ವಾಜರೊಂದಿಗೆ ಸಂತುಕುಮಾರ್ ಹೇಳಿದನು.

ಒಂದು ಅಪಹಾಸ್ಯದ ನಗುವಿನೊಂದಿಗೆ ಕ್ವಾಜ ಹೇಳಿದರು:

"ಅದಕ್ಕೆ ನಾನು ನಿಮ್ಮ ಹಾಗೆ ಆಹಾರವನ್ನೇನು ತೆಗೆದುಕೊಳ್ಳುವುದಿಲ್ಲವಲ್ಲ. ನಾನು ಹಾಗೆ ಸ್ಥೂಲ ಶರೀರದವನೂ ಅಲ್ಲ. ನೀವುಗಳು ಮಾಡುವ ಈ

ಅಭ್ಯಾಸಗಳಲ್ಲಿ ಒಂದನ್ನೇನಾದರೂ ನಾನು ಮಾಡುವುದಾದರೆ ಅಂದೇ ನಾನು ಸತ್ತಂತೆ."

"ನೀನು ಹೇಳುವುದೂ ಸರಿಯೇ" ಕತ್ತಿನ ಸುತ್ತಲಿದ್ದ ಬೆವರನ್ನ ಒರೆಸಿಕೊಂಡು ಸಂತುಕುಮಾರ್ ಹೇಳಿದನು. "ಚೆನ್ನಾಗಿ ಆಹಾರ ತೆಗೆದುಕೊಳ್ಳಬೇಕು. ಸಿಕ್ಕಿದ್ದನ್ನೆಲ್ಲಾ ತಿನ್ನಬೇಕು. ಅನಂತರ ವ್ಯಾಯಾಮ ಮಾಡಿ ಜೀರ್ಣಸಿಕೊಳ್ಳಬೇಕು. ಮತ್ತೆ ತಿನ್ನಬೇಕು. ಅನಂತರ ಜೀರ್ಣಸಿಕೊಳ್ಳಬೇಕು. ಒಂದು ವಿಷಿಯಸ್ ಸರ್ಕಲ್."

ಒಂದು ದೊಡ್ಡ ತಮಾಷೆ ಹೇಳಿದಂತೆ ಆತನು ಘೊಳ್ಳೆಂದು ನಕ್ಕನು. ಅನಂತರ ಹೇಳಿದನು: "ರುಚಿಕರವಾದ ಆಹಾರಗಳನ್ನು ತಿನ್ನುವ ಆನಂದವು ಜೀವನದಲ್ಲಿ ಇನ್ಯಾವುದೇ ಕೆಲಸದಲ್ಲಿ ಸಿಗುವುದಿಲ್ಲ. ಅದಕ್ಕಾಗಿ ಹೀಗೆ ಎರಡು ಮೂರು ಬಾರಿ ಹೊರಳಾಡಿದರೆ ಏನೀಗ ?"

"ಇಷ್ಟೆಲ್ಲಾ ಹೊರಳಾಡಿಯೂ ನಿಮ್ಮ ಶರೀರಕ್ಕೆ ಒಂದು ಬಗೆಯ ಬದಲಾವಣೆಯೂ ಉಂಟಾಗಲಿಲ್ಲವಲ್ಲಾ ?" ಡಾಕ್ಟರ್ ಕ್ವಾಜ ಕೇಳಿದರು.

"ಮುಂದಿನ ಭವಿಷ್ಯ ಜೀವನದಲ್ಲಿ ಎಲ್ಲವೂ ಸುರಕ್ಷಿತವು" ಸಂತುಕುಮಾರ್ ಹೇಳಿದನು.

"ಆಗಲಿ, ಇನ್ನೇನು ವ್ಯಾಯಾಮ ಮಾಡುತ್ತೀರಿ! ನಾನೊಮ್ಮೆ ನೋಡಬಯಸುತ್ತೇನೆ" ಡಾಕ್ಟರ್ ಕ್ವಾಜ ಹೇಳಿದರು.

"ಇಂದಿನದು ಇಲ್ಲಿಗೆ ಮುಗಿಯಿತು. ಇನ್ನು ಹಾಟ್‌ಕೋಲ್ಡ್ ಬಾತ್."

"ಹಾಟ್‌ಕೋಲ್ಡ್ ಬಾತೇ ? ಏನದು ?" ಡಾಕ್ಟರ್ ಕ್ವಾಜ ಕೇಳಿದರು.

"ಅದೇನೆಂದು ಹೇಳುತ್ತೇನೆ. ಮೊದಲು ತಣ್ಣಗಿನ ನೀರಿನ ಷವರ್ ತೆರೆಯುವುದು. ದೇಹವು ತಣ್ಣಗಾಗತೊಡಗಿದಾಗ ಬಿಸಿನೀರಿನ ಷವರ್ ತರೆಯುವುದು. ಮತ್ತೆ ದೇಹವು ಬಿಸಿಯಾಗುವಾಗ ಮತ್ತೆ ತಣ್ಣಗಿನ ನೀರಿನ ಷವರ್ ತೆರೆಯುವುದು. ಹೀಗೆ ಮಾಡಿ ಮಾಡಿ ಕೊನೆಗೆ ಬಿಸಿನೀರಿನಲ್ಲಿ ಈ ಆಟವನ್ನು ನಿಲ್ಲಿಸುವುದು."

"ಯಾವುದಾದರೂ ಒಂದು ನೀರಿನಲ್ಲಿ ಸ್ನಾನಮಾಡಿದರೆ ಸಾಲದೆ? ಹೀಗೆ ಬಿಸಿನೀರಿನಲ್ಲಿ ಒಂದು ಸಲ, ತಣ್ಣೀರಿನಲ್ಲಿ ಒಂದು ಸಲ ಯಾಕೆ ಸ್ನಾನ ಮಾಡುತ್ತೀರಿ ?"

"ಹಾಂ ಕೇಳುವಂತವನಾಗು. ನಿನಗೆ ಫಿಸಿಯಾಲಜಿ ಏನೇನೂ ಗೊತ್ತಿಲ್ಲವಲ್ಲ" ಸಂತುಕುಮಾರ್ ಹೇಳಿದನು. "ತಣ್ಣೀರಿನಲ್ಲಿ ಸ್ನಾನಮಾಡುವಾಗ ಶರೀರದಲ್ಲೆಲ್ಲಾ ಇರುವ ಕೋಟ್ಯಾನುಕೋಟಿ ಸುಷಿರಗಳು ಮುಚ್ಚಿ ಹೋಗುತ್ತವೆ. ತಕ್ಷಣ ಬಿಸಿ ನೀರಿನಲ್ಲಿ ಸ್ನಾನ ಮಾಡಿದರೆ ಈ ಸುಷಿರಗಳೆಲ್ಲವೂ ತೆರೆದುಕೊಳ್ಳುತ್ತವೆ. ಮತ್ತೆ ತಣ್ಣನೆಯ ನೀರನ್ನು ಸುರಿಯುವಾಗ ಇವುಗಳು ಮತ್ತೆಯೂ ಮುಚ್ಚಲ್ಪಡುತ್ತವೆ."

ಡಾಕ್ಟರ್ ಕ್ವಾಜ ಒಂದು ನಿಮಿಷ ಯೋಚಿಸಿದರು.

"ನೀವೊಬ್ಬರು ಮಹಾನ್ ವ್ಯಕ್ತಿ."

"ಹೌದಾ ಅದೇನು ?" ಸಂತುಕುಮಾರ್ ಕೇಳಿದನು.

"ನಿಮಗೆ ನಿಮ್ಮ ದೇಹದಲ್ಲಿನ ಸುಷಿರಗಳನ್ನು ಇಷ್ಟಬಂದಾಗ ತೆರೆಯಲೂ ಇಷ್ಟಬಂದಾಗ ಮುಚ್ಚಲೂ ಸಾಧ್ಯ. ಇದೇ ಮಹತ್ವ."

ಇಬ್ಬರೂ ನಕ್ಕರು.

ಡಾಕ್ಟರ್ ಕ್ವಾಜ ತೋಟದ ಕೆಲಸದ ನಂತರ ಕ್ವಾರ್ಟರ್ಸ್‌ನೊಳಕ್ಕೆ ಹೋದರು. ನಂಬರ್ ಒನ್ ಪ್ರೊಫೆಸರ್‌ರ ದೊಡ್ಡದಾದ ಕ್ವಾರ್ಟರ್ಸ್ ಆಗಿತ್ತದು. ಎಲ್ಲಾ ಕೋಣೆಗಳನ್ನೂ ನೆಲವನ್ನು ಗುಡಿಸಿ ಸಾರಿಸಿ ಸ್ವಚ್ಛ ಮಾಡಿದರು. ಪುಸ್ತಕಗಳನ್ನು ಜೋಪಾನವಾಗಿಡುವ ಬೀರುಗಳನ್ನು ಬಹು ಭದ್ರತೆಯಿಂದಾಗಿತ್ತು ಅವರು ಚೊಕ್ಕಟ ಮಾಡುತ್ತಿದ್ದುದು. ಒಂದು ಜಿರಳೆಯೋ, ಬೆಳ್ಳಿಹುಳುವೋ ತಮ್ಮ ಬುಕ್ ಷೆಲ್ಫ್‌ನಲ್ಲಿರಬಾರದೆಂದು ಡಾಕ್ಟರ್ ಕ್ವಾಜರಿಗೆ ನಿರ್ಬಂಧವು. ಅವರ ಜೀವನದ ಸಂಪಾದನೆಯೆಂದರೆ ಈ ಅಸಂಖ್ಯಾತ ಪುಸ್ತಕಗಳಾಗಿದ್ದುವು. ಅವರ ಜೀವನಾಂಶವು ಇವುಗಳಲ್ಲೇನೇ. ಮೂರು ಕೋಣೆಗಳ ತುಂಬ ಈ ಗ್ರಂಥಗಳೇ ತುಂಬಿವೆ. ಶಾಸ್ತ್ರಗಳ, ಸಾಹಿತ್ಯದ ಪುಸ್ತಕಗಳು. ಹಗಲು ಹೊತ್ತಿನಲ್ಲಿ ಶಾಸ್ತ್ರ ಗ್ರಂಥಗಳನ್ನೂ, ರಾತ್ರಿಯ ಹೊತ್ತಿನಲ್ಲಿ ಸಾಹಿತ್ಯದ ಗ್ರಂಥಗಳನ್ನೂ ಅವರು ಓದುವರು. ಸಾಹಿತ್ಯ ಗ್ರಂಥಗಳಲ್ಲಿ ಬಹುಪಾಲು ಸೋಷಿಯಲ್ ಥ್ರಿಲ್ಲರ್‌ಗಳಾಗಿದ್ದುವು. ಸಾವಿರಗಳ ಲೆಕ್ಕದಲ್ಲಿ ಥ್ರಿಲ್ಲರ್‌ಗಳನ್ನು ಅವರು ಓದಿ ಮುಗಿಸಿದ್ದಾರೆ. ನಡೆದ ಘಟನೆಗಳೊಂದಿಗೆ ತಕ್ಷಣ ಪ್ರತಿಕ್ರಿಯೆ ತೋರಿಸಲೂ, ಬಹುಬೇಗ ತೀರ್ಮಾನಗಳನ್ನು ತೆಗೆದುಕೊಳ್ಳಲೂ, ಎಲ್ಲದಕ್ಕಿಂತ ಹೆಚ್ಚಾಗಿ ಸಾಮಾನ್ಯ ಪ್ರಜ್ಞೆಯನ್ನು ಬೆಳೆಸಿಕೊಂಡು ಬರಲೂ ಥ್ರಿಲ್ಲರ್‌ಗಳೇ ಅವರಿಗೆ ಸಹಾಯ ಮಾಡಿರುವುದು. ಬೇರೆಲ್ಲಿಂದಲೂ ಪಡೆಯಲಾಗದ ತಿಳುವಳಿಕೆಯನ್ನು ಈ ಥ್ರಿಲ್ಲರ್‌ಗಳ ಸಹಾಯದಿಂದ ಅವರು ಗಳಿಸಿದ್ದರು. ಉದಾಹರಣೆಗೆ, ಸಮುದ್ರದಲ್ಲಿ ಲಂಗರು ಹಾಕಲ್ಪಟ್ಟು ನಿಂತಿರುವ ಹಡಗಿಗೆ ದಡದಿಂದಿರುವ ದೂರವನ್ನೆ ಅಳೆಯುವ ವಿದ್ಯೆಯನ್ನು. ಮೃಗಗಳು ಓಡುವಾಗ ಯಾವಾಗಲೂ ಬಲಭಾಗಕ್ಕೆ ಸರಿಯುವುದೆಂಬ ವಾಸ್ತವಿಕತೆಯನ್ನೂ, ಒಂದು ತೆಂಗಿನ ಮರವು ಒಂದು ದಿವಸದಲ್ಲಿ ಸಾವಿರ ಲೀಟರ್ ನೀರನ್ನು ಬಾಷ್ಪರೂಪದಲ್ಲಿ ಗರಿಗಳ ಮೂಲಕ ಹೊರಕ್ಕೆ ಬಿಡುವ ವಿವರವನ್ನೂ ಅವರು ಥ್ರಿಲ್ಲರ್‌ಗಳಿಂದಲೇ ಅರ್ಥಮಾಡಿಕೊಂಡಿದ್ದು. ಲೋಕದಲ್ಲಿರುವ ಯಾವ ತಿಳುವಳಿಕೆಗಳೂ ಅಧ್ಯಯನಕ್ಕೆ ಸಹಾಯಕರವಷ್ಟೆ. ಡಾಕ್ಟರ್ ಕ್ವಾಜ ಒಳ್ಳೆಯ ಅಧ್ಯಾಪಕರೆಂಬ ಗೌರವಕ್ಕೆ ಅರ್ಹರಾಗಿದ್ದು ಅಪರಿಮಿತವಾದ ಈ ಓದಿನಿಂದಲೇ ಆಗಿತ್ತು. ಪ್ರಸಿದ್ಧರಾದ ಭಾಷಣಕಾರರಾಗಲೂ ಅವರಿಗೆ ಈ ಪುಸ್ತಕಗಳೇ ಸಹಾಯ ಮಾಡಿದ್ದುವು. ಆದ್ದರಿಂದಲೇ ಅವರು ಪುಸ್ತಕಗಳನ್ನು ಪ್ರೀತಿಸುವುದು. ಪೂಜಿಸುವುದು. ಹೂವಿನಂತೆ ಅವುಗಳನ್ನು ಜೋಪಾನವಾಗಿಡುವುದು.

ಬೀರುಗಳೆಲ್ಲವನ್ನೂ ಮುಚ್ಚಿ ಭಕ್ತ್ಯಾದರಗಳಿಂದ ಅವುಗಳನ್ನು ಮತ್ತೊಮ್ಮೆ ನೋಡಿ ಅವರು ಕೋಣೆಯಿಂದ ಹೊರ ಹೋದರು.

ಮನೆಗೆ ಹೊರಗಿನಿಂದ ಬೀಗ ಹಾಕಿ, ಗ್ಯಾರೇಜ್‌ನಿಂದ ತಮ್ಮ ಸ್ಕೂಟರನ್ನು ತೆಗೆದುಕೊಂಡು ಡಾಕ್ಟರ್ ಕ್ವಾಜ ರೋಡಿಗಿಳಿದರು. ಸ್ಕೂಟರ್ ಸ್ಟಾರ್ಟ್ ಮಾಡುವುದಕ್ಕಿಂತ ಮುಂಚೆ ನಿರ್ಜನವಾಗಿದ್ದ ತಮ್ಮ ಕ್ವಾರ್ಟರ್ಸ್ ಅನ್ನು ಅವರು ನೋಡಿದರು. ತಮ್ಮ ಮನೆಯನ್ನು ಕಾಯಲು ಒಂದು ನಾಯಿ ಸಹ ಇಲ್ಲ. ಡಾಕ್ಟರ್

ಕ್ವಾಜರ ಮನೋಭಾವವು ಆ ಸಮಯದಲ್ಲಿ ಏನಾಗಿರಬಹುದು ? ಅವರು ತಮ್ಮ ಸ್ಕೂಟರನ್ನು ಹತ್ತಿ ಕಾಲೇಜಿಗೆ ಹೊರಟರು.

ಡಾಕ್ಟರ್ ಕ್ವಾಜ ವಾರ್ಡ್‌ನಲ್ಲಿ ರೌಂಡ್ಸ್‌ಗೆ ಹೋದಾಗ ಜಾನ್ ಬಲ್‌ದೇವ್ ಮಿರ್ಜಾ ನಿಶ್ಶಕ್ತನಾಗಿ ಮಲಗಿರುವುದನ್ನು ಕಂಡರು. ಹಿಂದಿನ ದಿನ ಬಹಳ ಉತ್ಸಾಹದಿಂದ ಕಂಡು ಬಂದಿದ್ದ ಪಾರ್ಶ್ವವಾಯು ಬಾಧಿಸಿದ್ದ ಮಿರ್ಜಾಗೆ ಏನಾಯಿತು ? ವಾಂತಿಯೂ ಹೊಟ್ಟೆನೋವೂ.

"ಇಲ್ಲಿ ಬನ್ನಿ" ಡಾಕ್ಟರ್ ಕ್ವಾಜ ಮೆಡಿಕೋಗಳನ್ನು ಕರೆದರು. ಲಕ್ಷ್ಮಿಯೂ ದೇವದಾಸೂ ಮತ್ತು ಇನ್ನು ಕೆಲವರನ್ನು ಸೇರಿದಂತೆ ಒಂದು ಗುಂಪಾಗಿದ್ದ ಅವರೆಲ್ಲಾ ವಾರ್ಡ್‌ನ ಒಂದು ಮೂಲೆಯಿಂದ ಓಡಿ ಬಂದರು. ಅವರು ಆಗ ಒಬ್ಬ ಫೈಲ್ಸ್ ರೋಗಿಯ ಸುತ್ತಲೂ ಸೇರಿ ನಿಂತು ಅವನ ರೋಗದ ಚರಿತ್ರೆಯನ್ನು ವಿಚಾರಿಸಿ ತಿಳಿದುಕೊಳ್ಳುತ್ತಿದ್ದರು.

"ನಾವು ಇವತ್ತು ಇನ್ನೊಂದು ವಿಷಯದ ಚರ್ಚೆಯನ್ನು ಮಾಡೋಣ. ಚರ್ಚೆಯನ್ನು ನಾವು ಅನೇಕ ಸಲ ಮಾಡಿದ್ದೇವೆ. ಪೆಪ್ಟಿಕ್ ಅಲ್ಸರ್. ಏನೇ ಆದರೂ ಬಲ್‌ದೇವ್ ಮಿರ್ಜಾನ ಕರುಳಿನ ಹುಣ್ಣಿಗೆ ಬಹಳ ಪ್ರಾಧಾನ್ಯವಿದೆ. ಹುಚ್ಚು ಹಿಡಿದ ಕೋತಿಗೆ ಹೆಂಡ ಕುಡಿಸಿದಂತೆ."

ಜಾನ್ ಬಲದೇವ್ ಮಿರ್ಜಾ ತನ್ನ ಸೇರಿ ಹೋಗದ ಎಡಗೈನಿಂದ ಹೊಟ್ಟೆಯನ್ನು ಭದ್ರವಾಗಿ ಹಿಡಿದುಕೊಂಡಿದ್ದನು. ಪ್ರಜ್ಞೆ ಬಂದ ಮೇಲೆ ಎರಡು ಮೂರು ದಿನ ಮಿರ್ಜಾ ಬಹು ಆಸೆಯಿಂದ ತಿಂದು ಕುಡಿದು ಮಾಡಿದನಲ್ಲಾ. ಪರಿಮಿತ ಆಹಾರ ಮಿರ್ಜಾಗೆ ತೊಂದರೆ ಕೊಟ್ಟಿತ್ತು. ತಿಂದು ಕುಡಿದದ್ದೆನ್ನೆಲ್ಲಾ ವಾಂತಿ ಮಾಡುತ್ತಿದ್ದನು.

ಡಾಕ್ಟರ್ ಕ್ವಾಜ ಹೇಳಿದರು:

"ಸಿಸ್ಟರ್ ಈತನಿಗೆ ಕುಡಿಯಲು ಇನ್ನೇನನ್ನೂ ಕೊಡಬೇಡಿ. ವಾಂತಿ ಮಾಡುವುದಾದರೆ ವಾಂತಿ ಮಾಡಲಿ. ವಾಂತಿ ಮಾಡಿ ಮಾಡಿ ಇನ್ನೂ ಸಾಧ್ಯವಾಗುವುದಿಲ್ಲ ಎಂಬ ಘಟ್ಟಕ್ಕೆ ಬಂದಾಗ ಮಾತ್ರ ಡ್ರಿಪ್ಸ್ ಕೊಡಿ."

"ಆಗಲಿ ಸರ್."

"ಅದಿರಲಿ ಅವನ ಮಲದ ಪರೀಕ್ಷೆಯ ವಿವರಗಳೇನು ?"

ಒಂದು ಕ್ಷಮಾಪಣೆಯೆಂಬಂತೆ ಸಿಸ್ಟರ್ ಹೇಳಿದಳು:

"ಸಾರಿ ಸರ್, ನಾನು ಅದನ್ನು ನೋಡಲು ಮರೆತುಬಿಟ್ಟೆ."

"ಪರವಾಗಿಲ್ಲ" ವಿದ್ಯಾರ್ಥಿಗಳನ್ನು ನೋಡುತ್ತಾ ಅವರು ಹೇಳಿದರು. ನೋಡಲು ಮರೆತು ಹೋಗಿದ್ದು ಬೇರೊಬ್ಬನ ಮಲದ ಬಣ್ಣವನ್ನು. ಆದರೆ ಮನುಷ್ಯನು ತನ್ನ ಮಲದ ಬಣ್ಣವನ್ನೋ ನೋಡುವುದಿಲ್ಲವಲ್ಲ. ತಾನು ವಿಸರ್ಜಿಸಿದ ಮಲದ ಬಣ್ಣವನ್ನು ನೋಡುವ ಸಂಪ್ರದಾಯವು ಮನುಷ್ಯನಿಗಿದ್ದಿದ್ದರೆ ಇಷ್ಟು ಉದರ ರೋಗಗಳು ಭೂಲೋಕದಲ್ಲಿರುತ್ತಿರಲಿಲ್ಲ.

ಡಾಕ್ಟರ್ ಕ್ವಾಜರ ಕಣ್ಣುಗಳಲ್ಲಿ ಪ್ರಕಾಶವು ಮಿಂಚಿತು. ಅವರು ಒಂದು ನಿಮಿಷ ಗಾಢವಾಗಿ ಏನನ್ನೋ ಯೋಚಿಸಿದರು. ದೇವದಾಸ್‌ಗೆ ಅತ್ಯುತ್ಸಾಹವುಂಟಾಯಿತು. ಗಂಭೀರವಾದ ಏನೋ ಒಂದು ವಿಷಯವನ್ನು ಡಾಕ್ಟರ್ ಕ್ವಾಜ ಹೇಳಲಿದ್ದಾರೆ. ಹೇಳಿ

ಕೊಡುವಾಗ ಥಕ್ಕನೆಯುಂಟಾಗುವ ಅವರ ಶೂನ್ಯ ನೋಟವೂ, ಅದಿಲ್ಲದಿದ್ದರೆ ಕಣ್ಣುಗಳಲ್ಲಿ ಕಾಣುವ ಪ್ರಕಾಶವು ಅದರ ಲಕ್ಷಣಗಳು.

ಹಾಗೇ ನಡೆದದ್ದು. ಡಾಕ್ಟರ್ ಕ್ವಾಜ ಮಾತನಾಡಲು ತೊಡಗಿದರು.

"ಬೆಕ್ಕಿಗೆ ಹೊಟ್ಟೆನೋವು ಅನುಭವವಾಗುವುದು ಬಹಳ ಅಪರೂಪ. ಹೊಟ್ಟೆ ನೋವು ಬರುವುದಕ್ಕಿಂತ ಮುಂಚೆಯೇ ರೋಗ ಬರುವುದೆಂದು ಬೆಕ್ಕಿಗೆ ಗೊತ್ತಾಗಿ ಬಿಡುವುದೇ ಇದಕ್ಕೆ ಕಾರಣ. ಆಗ ಬೆಕ್ಕು ಬಯಲಿಗೆ ಹೋಗಿ ಒಂದು ವಿಶೇಷ ಬಗೆಯ ಹುಲ್ಲನ್ನು ಹುಡುಕಿ ತೆಗೆದು ತಿಂದುಬಿಡುತ್ತೆ. ಆಗಾಗ್ಗೆ ಬೆಕ್ಕು ಹುಲ್ಲಿನ ನಡುವೆ ಏನನ್ನೋ ಹುಡುಕುತ್ತಾ ಮೂಸುತ್ತಾ ನಡೆಯುವುದನ್ನು ನೀವು ನೋಡಿರಬಹುದು. ಅದು ಆ ಹುಲ್ಲಿಗೋಸ್ಕರವಾಗಿಯೇ ಹುಡುಕಾಡುತ್ತಿರುತ್ತದೆ. ತನ್ನ ಔಷಧಿಯನ್ನು ಅದು ತಾನೇ ಕಂಡುಹಿಡಿದುಕೊಳ್ಳುತ್ತದೆ.

"ಆದರೆ ರೋಗವು ಬರುತ್ತೆಂಬ ಅರಿವು ಬೆಕ್ಕಿಗೆ ಹೇಗೆ ದೊರಕುತ್ತೆ ಎಂಬುದು ಒಂದು ಆಶ್ಚರ್ಯಕರವಾದ ವಿಷಯವಲ್ಲವೇ? ಆದರೆ ಅದರಲ್ಲೇನೂ ಆಶ್ಚರ್ಯವಿಲ್ಲ. ಒಂದೊಂದು ಸಲ ಮಲ ವಿಸರ್ಜಿಸುವಾಗಲೂ ಬೆಕ್ಕು ತಿರುಗಿ ತನ್ನ ಮಲವನ್ನು ನೋಡಿಕೊಳ್ಳುತ್ತದೆ. ಅದು ಸುಮ್ಮನೆ ನೋಡಿಕೊಳ್ಳುವುದಿಲ್ಲ. ಒಂದೊಂದು ಸಲವೂ ತಾನು ವಿಸರ್ಜಿಸಿದ ಮಲದ ಬಣ್ಣವು ಏನೆಂದು ತಿಳಿಯಲು ನೋಡಿಕೊಳ್ಳುತ್ತಷ್ಟೆ. ಮಲದ ಬಣ್ಣದ ಬದಲಾವಣೆಯಿಂದಲೇ ತನ್ನ ಉದರ ರೋಗವನ್ನು ಅದು ಕಂಡುಹಿಡಿಯುತ್ತದೆ. ಆದರೆ ಈ ವಿಷಯದಲ್ಲಿ ಮನುಷ್ಯನಿಗೆ ಮಾತ್ರ ಈ ಸಿದ್ಧಿಯು ಲಭ್ಯವಾಗದೆ ಹೋಯಿತು.

"ಅವನ ಆತುರದ ಜೀವನದಲ್ಲಿ ಮಲದ ಬಣ್ಣವನ್ನು ನೋಡಿಕೊಳ್ಳಲು ಮನುಷ್ಯನಿಗೆ ಸಮಯವೆಲ್ಲಿ? ಹೇಗಾದರೂ ಅವನಿಗೆ ಮಲ ವಿಸರ್ಜಿಸಿ ಮುಗಿದರೆ ಸಾಕು. ಆಮೇಲೆ ತನ್ನ ಶರೀರವನ್ನು ಕಾಪಾಡಿಕೊಳ್ಳುವ ವಿಷಯ."

ಕ್ಲಾಸ್‌ನಲ್ಲಿದ್ದವರೆಲ್ಲಾ ನಕ್ಕರು.

ಕ್ಲಾಸ್ ಮುಗಿದಾಗ ಮೆಡಿಕೋಗಳು ಒಂದು ಬೇಡಿಕೆಯೊಂದಿಗೆ ಡಾಕ್ಟರ್ ಕ್ವಾಜರನ್ನು ಸಮೀಪಿಸಿದರು. ಕಾಲೇಜ್‌ನ ಸ್ಟೇಡಿಯಂ ಗ್ರೌಂಡಿನಲ್ಲಿ ಇಂಟರ್ ಯೂನಿವರ್ಸಿಟಿ ಹಾಕಿ ಪಂದ್ಯವು ನಡೆಯುತ್ತಿದೆ. ಮೆಡಿಕೋಗಳಿಗೆ ಆಟ ನೋಡಬೇಕಿತ್ತು. ಡಾಕ್ಟರ್ ಕ್ವಾಜ ಸ್ಪೋರ್ಟ್ಸ್ ಕೌನ್ಸಿಲ್‌ನ ವೈಸ್ ಪ್ರೆಸಿಡೆಂಟ್ ಆಗಿದ್ದರು. ಪ್ರೆಸಿಡೆಂಟ್ ಬ್ರಿಗೇಡಿಯರ್ ತಾಜುದ್ದೀನ್.

"ಅದಕ್ಕೇನು ಈಗಲೇ ಹೋಗಿ ಮೊದಲೇ ಹೇಳಿದ್ದರೆ ನಾನು ಕ್ಲಾಸ್ ತೆಗೆದುಕೊಳ್ಳದೆ ಬಿಟ್ಟುಬಿಡುತ್ತಿದ್ದೆನಲ್ಲಾ?"

ಸಮಸ್ಯೆ ಅದು ಮಾತ್ರವಾಗಿರಲಿಲ್ಲ. ಮಧ್ಯಾಹ್ನದ ನಂತರ ಬ್ರಿಗೇಡಿಯರ್‌ಗೆ ಒಂದು ಥಿಯರಿ ಕ್ಲಾಸ್ ಇದೆ. ತಿಂಗಳಲ್ಲಿ ಒಮ್ಮೆ ಮಾತ್ರವೇ ಅವರ ಕ್ಲಾಸಿರುವುದು. ಅವರು ಪಾಠಮಾಡಲು ಬರುವುದು ದೊಡ್ಡ ಆರ್ಭಟದಿಂದಲೇ. ಮೊದಲು ಟ್ಯೂಟರ್‌ಗಳು ಬರುತ್ತಾರೆ. ಅನಂತರ ಲೆಕ್ಚರರ್ ಬರುತ್ತಾರೆ. ಚಾರ್ಟ್‌ಗಳನ್ನೂ ಪಟಗಳನ್ನೂ ಗೋಡೆಯಲ್ಲಿ ನೇತು ಹಾಕುತ್ತಾರೆ. ಬೇಕಾದಷ್ಟು ಎಕ್ಸ್‌ರೇ ಫಿಲಂಗಳನ್ನೂ ಎಕ್ಸ್‌ರೇ ಲೋಭಿಗಳನ್ನೂ ತೆಗೆದುಕೊಂಡು ಬರುತ್ತಾರೆ. ಮಧ್ಯೆ

ರೋಗಿಗಳನ್ನು ಎತ್ತಿಕೊಂಡು ಬರುತ್ತಾರೆ. ಇವೆಲ್ಲಾ ಆದ ನಂತರ ಇಬ್ಬರು ಲೇಡಿ ರೆಸಿಡೆಂಟಗಳ ಪರಿವಾರದೊಂದಿಗೆ ಬ್ರಿಗೇಡಿಯರ್‌ರು ದಯಮಾಡಿಸುತ್ತಾರೆ. ದಪ್ಪ ದಪ್ಪಗಿರುವ ಎಂಟು ಹತ್ತು ಗ್ರಂಥಗಳೊಂದಿಗೆ ಅಟೆಂಡರ್‌ಗಳು ಜೊತೆಯಲ್ಲಿರುತ್ತಾರೆ. ಅನಂತರ ಅಟೆಂಡೆನ್ಸ್ ತೆಗೆಯುತ್ತಾರೆ. ಆಗ ಒಬ್ಬೊಬ್ಬ ವಿದ್ಯಾರ್ಥಿಯೂ ಎದ್ದು ನಿಲ್ಲಬೇಕು. ಮಧ್ಯೆ ಕೆಲವು ಪ್ರಶ್ನೆಗಳನ್ನು ಅವರು ಕೇಳುತ್ತಾರೆ. ಆ ವೇಳೆಗೆ ಅರ್ಧಗಂಟೆ ಕಳೆಯುತ್ತದೆ. ಮಿಕ್ಕ ಅರ್ಧಗಂಟೆಯ ಸಮಯದಲ್ಲಿ ಬಾಯಿಗೆ ಬಂದದ್ದೆನ್ನೆಲ್ಲಾ ಅವರು ಜೋರಾಗಿ ಹೇಳುವರು. ಇದರ ಮಧ್ಯೆ ಮೆಡಿಕೋಗಳನ್ನು ಚೆನ್ನಾಗಿ ಬಯ್ಯಲೂ ಅವರು ಮರೆಯುವುದಿಲ್ಲ.

ಅಂತಹ ಕ್ಲಾಸೊಂದು ವಿದ್ಯಾರ್ಥಿಗಳಿಗೆ ನಷ್ಟವಾಗಲಿತ್ತು. ಅಂತಹ ಕ್ಲಾಸೊಂದು ನಷ್ಟವಾಗುವುದರಲ್ಲಿ ಯಾರಿಗೂ ದುಃಖ ತೋರುತ್ತಿರಲಿಲ್ಲ. ಆದರೆ ಬ್ರಿಗೇಡಿಯರ್‌ರನ್ನು ಲೀವ್ ಬೇಕೆಂದು ಕೇಳಲು ಒಬ್ಬ ಮೆಡಿಕೋನೂ ತಯಾರಿಲ್ಲ. ಬೆಕ್ಕಿಗೆ ಗಂಟೆ ಕಟ್ಟುವ ಒಂದು ಏರ್ಪಾಡದು.

"ಸರಿ, ಸರಿ" ಕ್ವಾಜ ಹೇಳಿದರು. "ಅವರಿಗೆ ನಾನು ಹೇಳುತ್ತೇನೆ. ನೀವೆಲ್ಲರೂ ಸ್ಟೇಡಿಯಂನಲ್ಲಿ ಖುಷಿಯಾಗಿ ಆಟ ನೋಡಿ."

"ಸಾರ್" ದೇವದಾಸ್ ನಡುಗುತ್ತಾ ನಿಂತನು. ಲಕ್ಷ್ಮಿಯೂ ಮಿಕ್ಕವರೂ ದೇವದಾಸ್‌ನ ಹಿಂದೆ ಸಾಲಾಗಿ ನಿಂತರು.

"ಆಟ ನೋಡುವಾಗ ನಮಗೆ ಹಸಿವಾಗುತ್ತೆ ಸಾರ್."

"ಓಹೋ, ನಿಮ್ಮ ಸಮಸ್ಯೆ ಹಾಗಾದರೆ ಅದು."

ಡಾಕ್ಟರ್ ಕ್ವಾಜ ತಮ್ಮ ಪರ್ಸ್ ತೆಗೆದು ಅದನ್ನು ತೆರೆದು ಅದರಲ್ಲಿರುವ ಕರೆನ್ಸಿ ನೋಟುಗಳನ್ನು ತೆಗೆದು ವಿದ್ಯಾರ್ಥಿಗಳಿಗೆ ಕೊಟ್ಟರು.

"ಇದು ಬಹಳ ಜಾಸ್ತಿ ಸಾರ್" ದೇವದಾಸ್ ಹೇಳಿದನು.

"ಪರವಾಗಿಲ್ಲ ಬೇಕಾದ್ದನ್ನೆಲ್ಲಾ ಕೊಂಡು ತಿನ್ನಿ."

ಡಾಕ್ಟರ್ ಕ್ವಾಜ ತಮ್ಮ ಬ್ರೀಫ್‌ಕೇಸ್‌ನೊಂದಿಗೆ ನಡೆದು ದೂರವಾದರು.

ಅಂದು ಸಾಯಂಕಾಲ ಒಂದು ತಮಾಷೆ ನಡೆಯಿತು. ಪರಿವಾರದೊಂದಿಗೆ ಬ್ರಿಗೇಡಿಯರ್ ಕ್ಲಾಸಿಗೆ ಹೋದಾಗ ಕ್ಲಾಸ್‌ರೂಮ್ ಖಾಲಿಯಾಗಿತ್ತು. ಬ್ರಿಗೇಡಿಯರ್‌ಗೆ ಕೋಪ ಬಂತು. ಅವರ ಜ್ಞಾನವೆಲ್ಲ ಅವರ ತಲೆಯಲ್ಲೇ ಜಡ್ಡು ಹಿಡಿದುಕೊಂಡು ಹೋಗಿ ಬಿಡುತ್ತಲ್ಲಾ ಅಂತಿರಬೇಕು.

ಮಾರನೆಯ ದಿನ ಬ್ರಿಗೇಡಿಯರ್ ಮೆಡಿಕೋಗಳನ್ನು ಒಬ್ಬೊಬ್ಬರನ್ನಾಗಿ ತಮ್ಮ ಕ್ಯಾಬಿನ್‌ಗೆ ಕರೆದು ಅವರನ್ನು ಬಯ್ದು ಅವರೆಲ್ಲರಿಗೂ ಫೈನ್ ಹಾಕಿದರು.

ಮೆಡಿಕೋಗಳ ಪರವಾಗಿ ಡಾಕ್ಟರ್ ಕ್ವಾಜ ಬ್ರಿಗೇಡಿಯರ್‌ರ ಮುಂದ ಹಾಜರಾದರು. ತಪ್ಪು ಸಂಪೂರ್ಣವಾಗಿಯೂ ತಮ್ಮದೆಂಬ ವಿವರವನ್ನು ಅವರೊಂದಿಗೆ ಹೇಳಲು ಮರೆತು ಹೋದದ್ದರಿಂದ ತಾವು ಕ್ಷಮಾಪಣೆ ಬೇಡುತ್ತಿರುವುದಾಗಿ ಡಾಕ್ಟರ್ ಕ್ವಾಜ ಹೇಳಿದರು.

ಆದರೆ ಬ್ರಿಗೇಡಿಯರ್‌ರ ಕೋಪವು ಶಾಂತವಾಗಲಿಲ್ಲ. ಅವರೆಂದರು:

"ಡಾಕ್ಟರ್ ಕ್ವಾಜ, ತಾವು ಒಬ್ಬ ದೊಡ್ಡ ಅಧ್ಯಾಪಕರಾಗಿರಬಹುದು. ದೊಡ್ಡ

ಪಂಡಿತರಾಗಿರಬಹುದು. ಆದರೆ ಅದೇ ನೆಪಮಾಡಿಕೊಂಡು ಇತರರಿಗೆ ಅಪಮಾನ ಮಾಡಬೇಡಿ. ಪಾಠಮಾಡುವ ಶಕ್ತಿ ಕಡಿಮೆ ಇರುವ ಅಧ್ಯಾಪಕರೂ ಇರುತ್ತಾರಲ್ಲವೇ ? ಅವರಿಗೂ ಇಲ್ಲಿ ಸ್ವಲ್ಪ ಕಾಲವಿರಬೇಕಲ್ಲವೇ ? ಹಾಗ ಅವರು ಸ್ವಲ್ಪ ಕಾಲ ಇರಲು ಒಪ್ಪಬೇಕು."

"ಸಾರ್, ನಾನು ಹಾಗೇನೂ ತಿಳಿದಿಲ್ಲ. ಡಿಪಾರ್ಟ್‌ಮೆಂಟ್ ಮೀಟಿಂಗ್‌ಗೆ ತಾವು ಬಂದರೆ ತಮಗೆ ಹೇಳೋಣವೆಂದು ನಾನು ಆಲೋಚಿಸಿದ್ದೆ. ಮೀಟಿಂಗ್‌ಗೆ ತಾವು ಬರಲಿಲ್ಲ" ಕ್ಷಮಾಪಣೆ ಕೋರುವವರಂತೆ ಡಾಕ್ಟರ್ ಕ್ವಾಜ ಹೇಳಿದರು.

"ಆದರೆ ನಾನು ನನ್ನ ಕೋಣೆಯಲ್ಲೇ ಇದ್ದೆನಲ್ಲಾ. ಒಂದು ಚೀಟಿ ಬರೆದು ಫ್ಯೂನ್ ಕೈಯಲ್ಲಿ ಕೊಟ್ಟು ಕಳುಹಿಸಿದ್ದರೆ ಆಗುತ್ತಿತ್ತಲ್ಲ ?"

"ಕ್ಷಮಿಸಬೇಕು, ಬ್ರಿಗೇಡಿಯರ್ ಕೆಲಸದ ಅವಸರದಲ್ಲಿ ನಾನದನ್ನು ಮರೆತೆ."

ತಮ್ಮ ದಪ್ಪ ಸೋಡಾಗ್ಲಾಸ್ ಕನ್ನಡಕದ ಮೂಲಕ ಡಾಕ್ಟರ್ ಕ್ವಾಜರನ್ನು ಚುಚ್ಚುವಂತೆ ನೋಡುತ್ತಾ. ಬ್ರಿಗೇಡಿಯರ್ ಹೇಳಿದರು:

"ಎಂತಹ ಕೆಲಸ ? ಎಲ್ಲಿಯ ಅವಸರ ? ನೀವು ಬೇಕೆಂದೇ ಹೀಗೇ ಮಾಡಿದ್ದೀರಿ."

ಡಾಕ್ಟರ್ ಕ್ವಾಜರ ಮುಖ ಕೆಂಪೇರಿತು. ಅವರಿಗೂ ಉದ್ರೇಕ ಏರುತ್ತಿತ್ತು. ಆದರೂ ಅವರು ಮತ್ತೊಮ್ಮೆ ಕ್ಷಮೆ ಕೇಳುವಂತೆ ಹೇಳಿದರು:

"ಇಲ್ಲ ಸಾರ್, ನಾನು ಹಾಗೆ ಎಂದಿಗೂ ಭಾವಿಸಿಲ್ಲ. ನನ್ನ ಉದ್ದೇಶವೂ ಹಾಗಿಲ್ಲ."

ಗುಂಡು ಹಾರಿಸಿದಂತೆ ಬ್ರಿಗೇಡಿಯರ್ ಹೇಳಿದರು:

"ಬರೀ ಸುಳ್ಳು."

ಡಾಕ್ಟರ್ ಕ್ವಾಜರ ಮುಖವು ಸಾಮಾನ್ಯವಾಗಿ ಇರುವುದಕ್ಕಿಂತ ಕೆಂಪೇರಿತು. ಮಾತುಗಳು ತುಂಡು ತುಂಡಾಗಿ ಹೊರಬಿದ್ದವು.

ಅವರು ಚೀರಿದರು:

"ಹಾಗಾದರೆ ನೀವು ಹಾಗೇ ಅಂದುಕೊಳ್ಳಿ. ನಾನು ಬೇಕೆಂತಲೇ ಮಾಡಿದೆ."

ಈಗೇನು ಮಾಡುತ್ತೀರಿ ಎಂಬದರ್ಥದಲ್ಲಿ ಬ್ರಿಗೇಡಿಯರ್ ಅನ್ನು ನುಂಗಿಬಿಡುವಂತೆ ನೋಡಿದ ನಂತರ ಡಾಕ್ಟರ್ ಕ್ವಾಜ ಬೇಗ ಬೇಗ ಹೊರಟು ಹೋದರು.

# ಇಪ್ಪತ್ತೆಂಟು

ಮನುಷ್ಯನ ಅವಯವಗಳಲ್ಲಿ ಬಹು ಪ್ರಧಾನವೆನಿಸಿರುವ ಯಾವುವು ? ಮೆದುಳು, ಹೃದಯ, ಮೂತ್ರ ಜನಕಾಂಗ, ಪಿತ್ತ ಜನಕಾಂಗ ಮೊದಲಾದ ಅವಯವಗಳೇ ! ನಿಜವಾಗಲೂ ಶಕ್ತಿಯುತವಾದ ಈ ಅವಯವಗಳೇ. ಆದರೆ ಮನುಷ್ಯ ಅಂಗೈಯೋ ?

ಪರಿಣಾಮ ಪ್ರಕ್ರಿಯೆಗಳಿಂದ ಇಷ್ಟಬಂದಂತೆ ಚಲಿಸಲಾಗುವ ಬೆರಳುಗಳುಳ್ಳ ಅಂಗೈಯನ್ನು ದೇವರು ಮನುಷ್ಯನಿಗೆ ಅನುಗ್ರಹಿಸಿದ್ದಾನೆ. ಈ ಅಂಗೈಗಳು ಇಲ್ಲದಿದ್ದಲ್ಲಿ ಆದಿ ಮನುಷ್ಯನಾದ ಕಪಿಗೆ ಮರದ ಕೊಂಬೆಯನ್ನು ಹಿಡಿದು ನೇತಾಡಲು ಸಾಧ್ಯವಾಗುತ್ತಿತ್ತೆ ? ವ್ಯಾಪಾರಿಯ ಟೋಪಿಗಳನ್ನು ಒಂದೊಂದಾಗಿ ಕದ್ದು ತೆಗೆದುಕೊಂಡು ತನ್ನ ತಲೆಯ ಮೇಲಿಟ್ಟುಕೊಳ್ಳಲು ಸಾಧ್ಯವಾಗುತ್ತಿತ್ತೆ ? ಅನಂತರ ಅವುಗಳನ್ನು ತನ್ನ ತಲೆಯ ಮೇಲಿಂದ ತೆಗೆದು ಕೆಳಕ್ಕೆ ಬಿಸಾಡಿ ಅವನಿಗೆ ಅವುಗಳನ್ನು ಕೊಡಲು ಸಾಧ್ಯವಾಗುತ್ತಿತ್ತೆ ?

ಮಿದುಳೋ, ಹೃದಯವೋ ನಷ್ಟವಾದರೆ, ಮನುಷ್ಯನು ಸತ್ತು ಹೋಗುತ್ತಾನಷ್ಟೆ. ಆದರೆ ಅಂಗೈಗಳು ನಷ್ಟವಾದರೆ ? ಅವನ ಜೀವನವೇ ನಷ್ಟವಾಗುತ್ತೆ.

ಏಳಂತಸ್ತಿನ ಲೈಬ್ರರಿ ಕಟ್ಟಡದಲ್ಲಿನ ನಾಲ್ಕನೆಯ ಅಂತಸ್ತಿನಲ್ಲಿ ಕುಳಿತು ದೇವದಾಸ್‌ನೂ ಲಕ್ಷ್ಮಿಯೂ ಅಂಗೈನ ಬಗ್ಗೆ ಒಂದು ಸರ್ಜರಿ ಪುಸ್ತಕವನ್ನು ಓದುತ್ತಲಿದ್ದರು.

"ನದೀತೀರದಲ್ಲಿದ್ದು ಇದನ್ನು ಓದಬೇಕು. ಆಗಲೇ ಅದು ಬೇಗ ತಲೆಗೆ ಹತ್ತುವುದು" ಲಕ್ಷ್ಮಿ ಹೇಳಿದಳು.

"ನಾನೊಪ್ಪುವುದಿಲ್ಲ" ದೇವದಾಸ್ ವಿರೋಧಿಸುತ್ತಾ ಹೇಳಿದನು. "ನದಿಯೂ ನದಿಯ ತೀರವೂ ಸೇರಿದಂತೆ ಆ ಮಹತ್ತದ ಪ್ರಕೃತಿಯನ್ನು ಹಿನ್ನೆಲೆಯಾಗಿಟ್ಟುಕೊಂಡು ಬೇರೆ ಯಾವುದನ್ನಾದರೂ ಅದಕ್ಕೆ ಸೇರಿಸುವುದು ಸರಿಯಿಲ್ಲ. ಅದು ನದಿಯ ಪ್ರಕೃತಿಯ ಸೌಂದರ್ಯವನ್ನು ನಿಂದಿಸಿದಂತಾಗುತ್ತದೆ."

"ಸರಿಯನ್ನು. ದೊಡ್ಡದರಲ್ಲಿ ಕುಳಿತು, ಚಿಕ್ಕದನ್ನು ನೋಡಬಾರದು" ಲಕ್ಷ್ಮಿ ಒಪ್ಪಿಕೊಂಡಳು.

"ಭೇಷ್!" ದೇವದಾಸ್ ನಕ್ಕನು. "ಹಾಗೆ ಸರಿಯಾದ ದಾರಿಗೆ ಬಾ".

"ಓದಿ ಓದಿ ಬೋರಾಗಿದೆ. ಲೈಬ್ರರಿ ಕ್ಯಾಂಟೀನ್‌ಗೆ ಹೋಗಿ ನಾವು ಟೀ ಕುಡಿಯೋಣ" ಲಕ್ಷ್ಮಿ ಹೇಳಿದಳು.

"ಪರೀಕ್ಷೆ ಹತ್ತಿರ ಬರುತ್ತಿದೆ. ನಾನು ಇದುವರೆಗೆ ಏನೇನೋ ಓದುತ್ತಾ

ಸಮಯವನ್ನೆಲ್ಲಾ ಕಳೆದೆ. ಇದುವರೆಗೆ ಗಂಭೀರವಾಗಿ ಪಠ್ಯಪುಸ್ತಕಗಳನ್ನು ನಾನು ಮುಟ್ಟೇ ಇಲ್ಲ."

ಬೇಸರದಿಂದ ದೇವದಾಸ್ ಹೇಳಿದನು.

"ಪರವಾಗಿಲ್ಲ, ಬುದ್ಧಿ ಇರುವವರು ಯಾವಾಗಲೂ ಪರೀಕ್ಷೆಗಳನ್ನು ನೆಗೆದು ದಾಟುತ್ತಾರೆ."

"ಅದು ಮಾತ್ರ ಸಾಲದಲ್ಲ. ಪರೀಕ್ಷೆ ನೆಗೆದು ದಾಟುವುದೂ ಪರೀಕ್ಷಕನನ್ನು ಸೋಲಿಸುವುದೂ ಸುಲಭ. ಆದರೆ ಅದು ಸರಿಯಲ್ಲ. ವಿಷಯಗಳನ್ನು ಸರಿಯಾಗಿ ತಿಳಿದುಕೊಳ್ಳದೆ ಉಪಾಯದಿಂದ ಪರೀಕ್ಷೆ ಪಾಸ್ ಮಾಡಬಾರದು. ಅದು ಆತ್ಮವಂಚನೆ."

"ನಾವು ಮಾಡುತ್ತಿರುವುದು ಅದೇ ಅಲ್ಲವೇ ?"

ಅವರು ಎದ್ದರು. ಕ್ಯಾಂಟೀನ್‌ಗೆ ಹೋಗುವುದಕ್ಕೆ ಬದಲಾಗಿ ದೇವದಾಸ್ ಲಿಫ್ಟಿನ ಬಳಿಗೆ ನಡೆದನು. ಲಕ್ಷ್ಮಿಯೂ ಏನೂ ಹೇಳದೆ ದೇವದಾಸ್‌ನ ಹಿಂದೆ ನಡೆದಳು.

ಅವರು ಏಳನೆಯ ಅಂತಸ್ತನ್ನು ಪ್ರವೇಶಿಸಿದರು.

ಏಳನೆಯ ಅಂತಸ್ತಿನಲ್ಲಿ ಸಾಹಿತ್ಯದ ಗ್ರಂಥಗಳೇ ಇರುವುದು. ನಿತ್ಯವೂ ಒಂದು ಸಲವಾದರೂ ದೇವದಾಸ ಅಲ್ಲಿಗೆ ಬಂದು ಹೋಗುತ್ತಾನೆ. ಫಿಕ್ಷನ್‌ಗಳನ್ನು ಜೋಡಿಸಿಟ್ಟ ಬೀರುಗಳ ಮಧ್ಯೆ ಅವರು ನಡೆದರು.

ಈ ಗ್ರಂಥಾಲಯವು ಒಂದು ಆಶ್ಚರ್ಯಕರ ಸ್ಥಳವಾಗಿತ್ತು. ಈ ಏಳಂತಸ್ತಿನ ಕಟ್ಟಡದಲ್ಲಿಲ್ಲದ ಪುಸ್ತಕಗಳೇ ಇರಲಿಲ್ಲ. ಪುಸ್ತಕ ಪ್ರೇಮಿಗಳಿಗಿದೊಂದು ತೀರ್ಥ ಕೇಂದ್ರವೆಂದು ಹೇಳಬಹುದು. ಅಪೂರ್ವವಾದ ಹಸ್ತಪ್ರತಿಗಳನ್ನು ನಿಧಿಯಂತೆ ಇಲ್ಲಿ ಜೋಪಾನವಾಗಿಟ್ಟಿದ್ದರು. ತಾಳೆಗರಿಗಳೂ ತಾಮ್ರದ ತಗಡುಗಳೂ ಇಲ್ಲಿವೆ. ಲೋಕದಲ್ಲಿರುವ ಎಲ್ಲಾ ಪ್ರಧಾನ ಪ್ರಕಟಣೆಗಳೂ ಇಲ್ಲಿ ಲಭ್ಯವಿದ್ದವು ನಿತ್ಯವೂ ಸೆಮಿನಾರುಗಳೂ, ವ್ಯಾಸಂಗವೂ ಇಲ್ಲಿ ನಡೆಯುತ್ತವೆ.

"ಒಂದು ಬಿಳಿ ನುಸಿಹುಳುವಾಗಿ ನಾನು ಮುಂದಿನ ಜನ್ಮದಲ್ಲಿ ಅವತರಿಸುತ್ತೇನೆ. ಈ ಕಟ್ಟಡದೊಳಗೆ ಪ್ರವೇಶಿಸಿ ಈ ಪುಸ್ತಕಗಳನ್ನೆಲ್ಲಾ ನಾನು ತಿಂದು ಮುಗಿಸುತ್ತೇನೆ. ಇಲ್ಲಿಯ ಒಂದೊಂದು ಅಣುವಿನಲ್ಲೂ ನಾನು ಸಂಚರಿಸುತ್ತೇನೆ." ದೇವದಾಸ್ ಹೇಳಿದನು.

"ಒಂದು ಹೆಣ್ಣು ನುಸಿಯಾಗಿ ನಾನೂ ನಿನ್ನೊಂದಿಗೆ ಬರುತ್ತೇನೆ" ಲಕ್ಷ್ಮಿ ಹೇಳಿದಳು.

"ಯಾಕೆ ರಕ್ತ ಕುಡಿಯಲೇನು ?" ದೇವದಾಸ್ ಅವಳನ್ನ ತಮಾಷೆ ಮಾಡಿದನು. "ಹ್ಯಾಂಡ್ ಬುಕ್ ಆಫ್ ಸರ್ಜರಿ ಯಲ್ಲಿ ಹೆಬ್ಬೆರಳಿನ ಪ್ರಾಧಾನ್ಯದ ಬಗ್ಗೆ ಹೇಳಿರುವುದು ಜ್ಞಾಪಕವಿದೆಯೇ ? ಹೆಬ್ಬೆರಳಿನಿಂದ ಇತರ ಬೆರಳುಗಳನ್ನು ಇಷ್ಟಬಂದಂತೆ ಮುಟ್ಟಲು ಸಾಧ್ಯ. ಅಂಗೈನಲ್ಲಿನ ಬೆರಳುಗಳಿಗೆ ಹೀಗೆ ಚಲಿಸಲು ಸಾಧ್ಯವಾಗುರುದರಿಂದಲೇ ಮನುಷ್ಯನು ಇಷ್ಟು ಒಳ್ಳೆಯ ಕೈಚಳಕ ಮಾಡಲು ಸಾಧ್ಯವಾಗಿದೆ. ಅಲ್ಲದೆ ಇಲ್ಲಿರುವ ಸಾಧನೆಗಳ್ಯಾವುದನ್ನೂ ಸಾಧಿಸಲು ಮನುಷ್ಯನಿಂದ ಸಾಧ್ಯವಾಗುತ್ತಿರಲಿಲ್ಲ. ಆದರೆ ಅದಕ್ಕೂ ಮುಂಚೆಯೇ ಟಾಲ್‌ಸ್ಟಾಯ್ ಹೆಬ್ಬೆರಳಿನ

ಮಹಾತ್ಮ್ಯೆಯನ್ನು 'ವಾರ್ ಅಂಡ್ ಪೀಸ್'ನಲ್ಲಿ ಹೇಳಿದ್ದಾನೆ."

ಲಕ್ಷ್ಮಿ ಮಿಕ ಮಿಕ ನೋಡುತ್ತಾ ನಿಂತಳು. ಅವಳು ಅವನ್ನೆಲ್ಲಾ ಓದಿರಲಿಲ್ಲವಲ್ಲಾ ?

"ದೀರ್ಘಪ್ರಣಯ ಕಾಲದ ನಂತರ ಪ್ರಣಯಿಯಾದ ಆಂಟೋನಿ ಹೆಂಡತಿಯಾದ ಮರಿಯಾ, ಅವನಿಗೆ ಹಿಂದಿನಂತೆ ಅವಳೊಂದಿಗೆ ಪ್ರೇಮವಿಲ್ಲವೆಂದು ದೂರು ಹೇಳುವ ಒಂದು ಸಂದರ್ಭವಿದೆ. ಆಗ ಆಂಟೋನಿ ಹೇಳಿದ್ದೇನು ಗೊತ್ತೇ ? ನೀನೀಗ ನನ್ನ ಬಲಗೈನ ಹೆಬ್ಬೆರಳು. ಅದರ ಪ್ರಾಧಾನ್ಯವು ಅದು ನಷ್ಟವಾದಾಗಲೇ ನಿನಗೆ ಗೊತ್ತಾಗುವುದು ಎಂದು."

ಲಕ್ಷ್ಮಿ ಆರಾಧನೆಯಿಂದ 'ವಾರ್ ಅಂಡ್ ಪೀಸ್' ನೋಡುತ್ತಾ ನಿಂತಳು. ಗಾಜಿನ ಬೀರುವಿನೊಳಗೆ ಪುಸ್ತಕಗಳ ಮಧ್ಯೆ ಅಮುಕಲ್ಪಟ್ಟಿದ್ದರೂ, ಆ ಸ್ಥಿತಿಯಲ್ಲೂ ಅದು ನಡುಗುತ್ತಲಿತ್ತು. ಪುಸ್ತಕವು ಅಮುಕಲ್ಪಟ್ಟಿದ್ದರೂ ಆ ಲೈಬ್ರರಿಯಲ್ಲೆಲ್ಲಾ ಟಾಲ್‌ಸ್ಟಾಯ್ ಎಂಬ ಲೇಖಕನು ತುಂಬಿ ನಿಂತಿದ್ದನು.

"ನನ್ನ ಬಾಲ್ಯವನ್ನೆಲ್ಲಾ ನಾನು ಹಾಳು ಮಾಡಿಕೊಂಡೆ. ಈ ಬಗೆಯ ಒಂದು ಕೃತಿಯನ್ನು ಓದಿ ಆಸ್ವಾದಿಸಲು ನನಗೆ ಸಾಧ್ಯವಾಗಲಿಲ್ಲ!" ದುಃಖದಿಂದ ಲಕ್ಷ್ಮಿ ಹೇಳಿದಳು. "ಏನು ಮಾಡುವುದು ? ನನ್ನ ಪರಿಸ್ಥಿತಿ ಹಾಗಿತ್ತು. ಪಠ್ಯ ಪುಸ್ತಕಗಳನ್ನಲ್ಲದೆ ಬೇರೆ ಯಾವುದನ್ನೇ ಓದಲೂ ನನ್ನ ತಂದೆ ನಮ್ಮನ್ನು ಬಿಡುತ್ತಿರಲಿಲ್ಲ. ನನ್ನ ತಾಯಿಯೂ ಬಿಡುತ್ತಿರಲಿಲ್ಲ. ರ್‍ಯಾಂಕ್ ರ್‍ಯಾಂಕ್ ಅದಾಗಿತ್ತು. ಅವರಿಬ್ಬರೂ ಉರು ಹೊಡೆದಂತೆ ಹೇಳುತ್ತಿದ್ದ ಮಂತ್ರವು. "ಪೌಲ್ಟ್ರಿಯ ಕೋಳಿ ಮರಿಗಳಂತೆ ನಾವು ಅತ್ತಿತ್ತ ಚಲಿಸಲು ಒಪ್ಪದೆ ನಮ್ಮನ್ನು ಬೆಳೆಸಿದರು."

"ಆದರೇನು ಇನ್ನು ಸಮಯವಿದೆ. ಪುಸ್ತಕಗಳನ್ನು ಆಯ್ದು ಕೊಡುತ್ತೇನೆ." ದೇವದಾಸ್ ಹೇಳಿದನು.

"ನಾನೆಷ್ಟೋ ಪ್ರಯತ್ನಿಸಿ ನೋಡಿದೆ. ನನ್ನಿಂದ ಆಗುವುದಿಲ್ಲ. ಪುಸ್ತಕವನ್ನು ತೆರೆದಿಟ್ಟು ಕುಳಿತುಕೊಳ್ಳುವಾಗ ನಾನು ಇನ್ನೇನಾದರೂ ಯೋಚಿಸುತ್ತಿರುತ್ತೇನೆ. ನಾನೂ ಯಾವತ್ತೂ ಇದರಲ್ಲಿ ಸೋಲುತ್ತಲೇ ಇದ್ದೇನೆ." ಲಕ್ಷ್ಮಿ ನೊಂದುಕೊಳ್ಳುತ್ತಾ ಹೇಳಿದಳು.

"ನಿನ್ನ ಮನೆಯಲ್ಲಿ ದೊಡ್ಡ ಲೈಬ್ರರಿ ಇದೆಯೆಂದು ಕೇಳಿದ್ದೇನೆ. ನಿನ್ನ ತಂದೆ ಅದನ್ನೆಲ್ಲಾ ಓದುವುದುಂಟೆ ? ಅಥವಾ ಕೇವಲ ಅಂದಕ್ಕಾಗಿ ಎಲ್ಲಾ ಪುಸ್ತಕಗಳನ್ನು ಷೋಕೇಸ್‌ನಲ್ಲಿಟ್ಟುಕೊಂಡಿರುತ್ತಾರೆಯೇ ?" ದೇವದಾಸ್ ಕೇಳಿದನು.

"ಮನೆಯಲ್ಲಿ ದೊಡ್ಡ ಲೈಬ್ರರಿ ಇದೆ. ಆದರೆ ಅದು ತಂದೆಯವರ ರೀಡಿಂಗ್ ರೂಮಿನಲ್ಲಿ. ನಮಗೆಲ್ಲಾ ಅಲ್ಲಿಗೆ ಪ್ರವೇಶವಿಲ್ಲ" ದುಃಖದಿಂದ ಲಕ್ಷ್ಮಿ ಹೇಳಿದಳು. "ಅದೂ ಅಲ್ಲದೆ ತಂದೆಯವರೂ ನಾವು ಪರಸ್ಪರ ನೋಡಿಕೊಳ್ಳುವುದೇ ಇಲ್ಲ. ಮನೆಯಲ್ಲಿರುವ ಒಬ್ಬೊಬ್ಬರೂ ಅವರವರ ಸ್ವಂತ ಲೋಕದಲ್ಲಿರುತ್ತಾರೆ."

ಅನಂತರ ಸ್ವಲ್ಪ ಹೊತ್ತು ಲಕ್ಷ್ಮಿ ಇನ್ನೇನೂ ಮಾತಾಡದಿದ್ದಳು.

"ನಾವು ದೊಡ್ಡವರಾಗಲಿಲ್ಲವೇ ? ಈಗ ನಮ್ಮ ತಂದೆತಾಯಿಗಳಿಗೂ ನಮಗೂ ಅಷ್ಟು ದೃಢವಾದ ಬಂಧನವೇಕೆ ?" ದೇವದಾಸ್ ಕೇಳಿದನು.

"ತಂದೆತಾಯಿಗಳು, ಮಕ್ಕಳು ಪರಸ್ಪರ ಪ್ರೀತಿಸಬೇಕಾದ್ದು ಧರ್ಮ. ಇಲ್ಲದಿದ್ದರೆ

ಅದೆಂತಹ ಜೀವನ'' ಲಕ್ಷ್ಮಿ ಕೇಳಿದಳು.

"ನನಗದರಲ್ಲಿ ನಂಬಿಕೆ ಇಲ್ಲ. ಬಂಧುಗಳು ಒಬ್ಬರನ್ನೊಬ್ಬರು ಪ್ರೀತಿಸುವುದರಲ್ಲಿ ಅರ್ಥವಿಲ್ಲ. ಬೇರೆಯವರನ್ನು ಒಬ್ಬನು ಪ್ರೀತಿಸಬೇಕಾದ್ದು. ಆ ಪ್ರೀತಿ ಅಪಾರವೂ ಆಗಿರಬೇಕು."

"ಹಾಗಿರುವ ಜನರು ಕಾವಿ ಉಡುಪನ್ನು ಧರಿಸಿ ಸನ್ಯಾಸ ಸ್ವೀಕರಿಸಿದರೆ ಸಾಕು'' ಲಕ್ಷ್ಮಿ ಹೇಳಿದಳು.

"ಕಾವಿಬಟ್ಟೆ ತೊಡದೆಯೂ ಸನ್ಯಾಸ ಸ್ವೀಕರಿಸಬಹುದು'' ದೇವದಾಸ್ ಹೇಳಿದನು. "ಸನ್ಯಾಸವೆನ್ನುವುದು ಒಂದು ನಂಬಿಕೆಯಷ್ಟೆ. ಕಮಂಡಲವನ್ನು ಕಾವಿಯನ್ನು ತೋರಿಸಿ ಅದನ್ನು ಪ್ರಕಟಪಡಿಸುವಂತಹುದಲ್ಲ."

"ಒಬ್ಬೊಬ್ಬರಿಗೂ ಒಂದೊಂದು ವೇಷವಿದೆ. ಒಂದು ವೇಷದಲ್ಲಿದ್ದರೆ ತಾನೆ ಅವನನ್ನು ತಿಳಿಯಲು ಸಾಧ್ಯ. ನ್ಯಾಯಾಧೀಶನ ವೇಷ, ಸನ್ಯಾಸಿಯ ವೇಷ, ಬ್ರಿಗೇಡಿಯರ್‌ರ ವೇಷ, ಡಾಕ್ಟರ್‌ರ ವೇಷ ಇವೆಲ್ಲವೂ ಐಡೆಂಟಿಟಿ ಅಲ್ಲವೇ ?'' ಲಕ್ಷ್ಮಿ ಕೇಳಿದಳು.

"ವೇಷವು ಒಂದು ಮರೆ ಇದ್ದಂತೆ. ಒಬ್ಬನ ವೇಷದಿಂದಲೇ ಅಲ್ಲವೇ ಅವನು ಗೊತ್ತಾಗುವುದು. ಐಡೆಂಟಿಟಿಯೊಳಗೆ ದೈನ್ಯ, ಸುಳ್ಳುಗಳನ್ನು ಮರೆಮಾಚಲು ಇರುವ ಒಂದು ಸೂತ್ರಕ್ಕೇ ಈ ವೇಷವೆನ್ನುತ್ತಾರೆ. ಏನು ಮಾಡುವುದು ? ಪ್ರಪಂಚವೇ ಹೀಗಾಗಿ ಬಿಟ್ಟಿತು '' ದೇವದಾಸ್ ಹೇಳಿದನು.

"ಸರಿ ಸರಿ'' ಲಕ್ಷ್ಮಿ ಹೇಳಿದಳು. "ನಾವು ಇಂದು ಅಂಗೈನ ಸರ್ಜರಿಯನ್ನು ಕಲಿಯಬೇಕು. ಬಾ ವಾರ್ಡ್‌ಗೆ ಹೋಗೋಣ."

ಐಸೋಲೇಷನ್ ವಾರ್ಡಿನಲ್ಲಿದ್ದ ಗ್ಯಾಂಗ್ರೀನ್‌ನಿಂದ ನರಳುತ್ತಿದ್ದ ಒಬ್ಬ ರೋಗಿಯ ಮಂಚದ ಬಳಿ ಅವರು ಬಂದರು. ಅವನ ಮಂಚದ ಸುತ್ತಲೂ ಅಸಹನೀಯವಾದ ಒಂದು ದುರ್ಗಂಧವು ವ್ಯಾಪಿಸಿತ್ತು. ಇನ್ನು ಸ್ವಲ್ಪ ಹೊತ್ತು ಆ ವಾಯುವಿನಲ್ಲಿ ಉಸಿರಾಡಿದ್ದೇ ಆದರೆ ತನಗೆ ಪ್ರಜ್ಞೆ ತಪ್ಪಿ ನೆಲದ ಮೇಲೆ ಬೀಳುವುದಾಗಿ ಲಕ್ಷ್ಮಿಗೆ ಅನ್ನಿಸಿತು.

ರೋಗಿಯ ಬಲಗೈಗೆ ಗ್ಯಾಂಗ್ರೀನ್ ಆಗಿತ್ತು. ಮೆಡಿಕೋಗಳು ಅವನ ರೋಗದ ಇತಿಹಾಸವನ್ನು ದಾಖಲು ಮಾಡಿಕೊಳ್ಳಲು ಪ್ರಾರಂಭಿಸಿದರು. ರೋಗಿಯಾಗಿದ್ದ ಆ ನೇಕಾರನಿಗೆ ಸುಮಾರು ಐವತ್ತು ವರ್ಷ ವಯಸ್ಸಾಗಿತ್ತು. ಅವನ ಹೆಂಡತಿ ಕ್ಷಯ ರೋಗಿಯಾಗಿದ್ದಳು. ಅವರಿಗೆ ಆರು ಮಕ್ಕಳು. ಹಿರಿಯ ಮಗನಿಗೆ ಇಪ್ಪತ್ತು ನಾಲ್ಕು ವರ್ಷವಾಗಿತ್ತು. ಅವನೊಬ್ಬ ಅಪಸ್ಮಾರ ರೋಗಿಯಾಗಿದ್ದನು. ಎರಡನೆಯ ಮಗ ಮೂಗನಾಗಿದ್ದನು. ಮೂರನೆಯ ಮಗನು ಒಂದು ಕಳ್ಳತನದ ಕೇಸಿನಲ್ಲಿ ಸಿಕ್ಕಿ ಬಿದ್ದು ಊರೇ ಬಿಟ್ಟು ಓಡಿ ಹೋಗಿದ್ದನು. ಅವನ ಬಗ್ಗೆ ಇದುವರೆಗೆ ಒಂದು ಸುದ್ದಿಯೂ ಇರಲಿಲ್ಲ. ನಾಲ್ಕನೆಯವಳು ಹುಡುಗಿ. ಅವಳು ಅಕ್ರಮ ಗರ್ಭಧರಿಸಿ ಮನೆಯಲ್ಲೇ ಇದ್ದಳು. ಅವಳಿಗೆ ಹೆರಿಗೆಯ ದಿನ ಹತ್ತಿರ ಬರುತ್ತಿತ್ತು. ಐದನೆಯವನು ಮಗ. ಸಿನಿಮಾ ಥಿಯೇಟರ್‌ನಲ್ಲಿ ಟಿಕೆಟ್‌ಗಳನ್ನು ಬ್ಲಾಕ್‌ನಲ್ಲಿ ಮಾರುವ ಕೆಲಸದಲ್ಲಿದ್ದಾನೆ. ಹಾಗೆ ಸಂಪಾದಿಸಿದ್ದನ್ನೆಲ್ಲಾ ಗಾಂಜಾ ಸೇದಿ, ಇಸ್ಪೀಟ್ ಆಡಿ ಮುಗಿಸಿ ಬಿಡುತ್ತಾನೆ.

ಮಧ್ಯೆ ಮಧ್ಯೆ ಜೈಲಿಗೂ ಹೋಗಿ ಬರುತ್ತಾನೆ. ಆರನೆಯವನು ಹನ್ನೆರಡು ವರ್ಷ ವಯಸ್ಸಿನ ನ್ಯೂಸ್ ಪೇಪರ್ ಬಾಯ್. ಅವನೇ ಈಗ ಮನೆಯಲ್ಲಿರುವವರನ್ನು ಸಾಕುತ್ತಿರುವುದು. ಆ ಹನ್ನೆರಡು ವರ್ಷದ ಹುಡುಗ ಒಬ್ಬ ವಯಸ್ಸಾದ ಮನುಷ್ಯನು ಪಡುವ ಯಾತನೆಗಳನ್ನೆಲ್ಲ ಪಡುತ್ತಿದ್ದಾನೆ.

ಮೂರು ವಾರದ ಹಿಂದೆ ನೇಯುತ್ತಿದ್ದ ಮಗ್ಗದಿಂದ ಒಂದು ಚಿಕ್ಕ ಮರದ ಚೂರು ಈ ನೇಕಾರನ ಬಲಗೈನ ಕಿರಿಯ ಬೆರಳಿನಲ್ಲಿ ಚುಚ್ಚಿಕೊಂಡಿತ್ತು. ತಕ್ಷಣ ಅವನು ಅದನ್ನು ಕಿತ್ತು ತೆಗೆದು ದೂರ ಬಿಸಾಡಿದ್ದನು. ಒಂದು ತೊಟ್ಟು ರಕ್ತವು ಹೊರ ಬಂದಿತ್ತು. ಅಷ್ಟೆ. ಅನಂತರ ಅವನು ರೂಢಿಯಂತೆ ಕೆಲಸ ಮಾಡಲು ಪ್ರಾರಂಭಿಸಿದ್ದನು. ಒಂದು ವಾರ ಕಳೆಯುವ ವೇಳೆಗೆ ಕಿರಿಯ ಬೆರಳು ಸ್ವಲ್ಪ ಊದಿಕೊಂಡಿತು. ನೋವೂ ಆರಂಭವಾಯಿತು. ಅನಂತರ ಆ ನೋವು ಅಂಗೈನಲ್ಲೆಲ್ಲಾ ವ್ಯಾಪಿಸಿತು. ಅಂಗೈನ ಹಿಂಭಾಗವು ಒಂದು ಆಮೆಯಂತೆ ಬಾತುಕೊಂಡಿತು. ತೀವ್ರ ಜ್ವರ, ಚಳಿ, ವಾಂತಿ, ಭಯಂಕರವಾದ ನಿಶ್ಶಕ್ತಿ ತೋರಿ, ಬಲಗೈ ಮೊಣಕೈನವರೆಗೂ ಕೆಂಪಾಗಿ ಊದಿಕೊಂಡಿತ್ತು. ಅನಂತರ ಕೈಯನ್ನು ಎತ್ತಲೂ ಸಹ ಸಾಧ್ಯವಾಗದೆ ಹೋಗಿತ್ತು. ಹೋಮಿಯೋಪತಿ ಡಾಕ್ಟರನ್ನು ನೋಡಿ ಔಷಧಿ ತೆಗೆದುಕೊಂಡಿದ್ದನು. ಒಂದು ಬಿಳಿ ಬಣ್ಣದ ಪುಡಿಯನ್ನು ಡಾಕ್ಟರ್ ಕೊಟ್ಟಿದ್ದನು. ಒಂದು ಚಿಟಿಕೆ ಪುಡಿಯನ್ನು ನೀರಿನಲ್ಲಿ ಬೆರೆಸಿ ದಿವಸವೂ ನಾಲ್ಕು ಬಾರಿ ಸೇವಿಸಲು ಹೇಳಿದ್ದರು. ಐದು ದಿವಸಗಳು ಕಳೆಯುವ ವೇಳೆಗೆ ಬೆರಳುಗಳು ಪೂರ್ಣವಾಗಿ ಕೀತುಕೊಂಡು ಕೊಳೆಯ ತೊಡಗಿದವು. ಬಲಗೈ ಭುಜದವರೆಗೂ ಊದಿಕೊಂಡಿತ್ತು. ಅನಂತರ ಎರಡು ದಿವಸಗಳು ಮನೆಯಲ್ಲೇ ಮಲಗಿದ್ದನು. ಮಾರನೆಯ ದಿವಸ ಬೆಳಗಾಗಿದ್ದೇ ಅವನಿಗೆ ಜ್ಞಾಪಕವಿಲ್ಲ. ಜ್ಞಾಪಕ ಬಂದಾಗ ಅವನು ಆಸ್ಪತ್ರೆಗೆ ಬಂದಿದ್ದನು.

ಅವನು ಅಳಲು ಪ್ರಾರಂಭಿಸಿದ್ದನು. ಅವನು ಅಳುತ್ತಲೇ ಹೇಳಿದನು:

"ನನ್ನ ಬಲಗೈಯನ್ನು ಭುಜದಿಂದ ಕೆಳಕ್ಕೆ ಕತ್ತರಿಸಬೇಕೆಂದು ಸರ್ಜನ್ ಹೇಳಿದರು."

ಈಗ ಅವನ ಬಲಗೈಗೆ ಅವನ ಶರೀರದ ಗಾತ್ರವಿತ್ತು. ಇನ್ನೊಬ್ಬ ಮನುಷ್ಯ ಮಂಚದಲ್ಲಿ ಮಲಗಿರುವಂತೆ ಆ ಕೈ ಹಾಸಿಗೆಯಲ್ಲಿ ಬಿದ್ದಿತ್ತು.

ಇಬ್ಬರು ಸ್ಟಾಫ್ ನರ್ಸ್‌ಗಳು ಬಂದು ಅವನ ಕೈಗೆ ಕಟ್ಟಿದ್ದ ಬಟ್ಟೆಯನ್ನು ಬಿಚ್ಚಲು ಪ್ರಾರಂಭಿಸಿದರು. ಮೊದಲಿಗಿಂತ ಹೆಚ್ಚಾಗಿ ದುರ್ಗಂಧವು ಹರಡಿತು. ಮಡಿಕೋಗಳಲ್ಲಿ ಅನೇಕರು ತಮ್ಮ ಮೂಗನ್ನು ಮುಚ್ಚಿಕೊಂಡರು.

"ಯಾರೂ ಮೂಗು ಮುಚ್ಚಿಕೊಳ್ಳಬಾರದು" ವಾರ್ಡ್‌ನಲ್ಲಿ ಮಿಸ್ಟರ್ ಗೋವರ್ಧನ್ ಆಚಾರಿಯ ಧ್ವನಿ ಎದ್ದಿತು. ಅವರು ಒಂದು ಕರಿಯ ನೆರಳಿನಂತೆ ಹಿಂದೆಯೇ ನಡೆದು ಬರುತ್ತಿದ್ದರು. "ರೋಗಿಯ ಯಾವ ದುರ್ಗಂಧವೂ ನಮಗೆ ಸುಗಂಧವಾಗಿರಬೇಕು. ಇನ್ನೂ ಯಾರಾದರೂ ಮೂಗು ಮುಚ್ಚಿಕೊಂಡಿದ್ದನ್ನು ನೋಡಿದರೆ ಈತನ ಕೈ ಕತ್ತರಿಸುವ ಚಾಕುವಿನಿಂದ ಮೂಗು ಮುಚ್ಚಿಕೊಂಡವನ ಮೂಗನ್ನು ನಾನು ಮೊದಲು ಕತ್ತರಿಸಿ ಹಾಕುತ್ತೇನೆ. ಆಮೇಲೇ ಆಪರೇಷನ್ ಮಾಡುವುದು."

ನೀರಿನಲ್ಲಿ ನೆನೆದ ಬಟ್ಟೆಯನ್ನೂ ಹತ್ತಿಯನ್ನೂ ಬಿಚ್ಚಿ ಬದಲಾಯಿಸಿದಾಗ ಒಂದು ಒರಳಿನಷ್ಟು ಗಾತ್ರವಿರುವ, ಊದಿ ಕಪ್ಪಗಾಗಿದ್ದ, ಉಬ್ಬಿಕೊಂಡಿದ್ದ ಕೈ ಅಸಹ್ಯವಾದೊಂದು ರೂಪದಲ್ಲಿ ಮಂಚದಲ್ಲಿ ಬಿದ್ದುಕೊಂಡಿತ್ತು. ತೋಳಿನಲ್ಲಿದ್ದ ಒಂದು ದೊಡ್ಡ ಗುಳ್ಳೆಯನ್ನು ಆಚಾರಿ ಚಾಕುವಿಂದ ಒಮ್ಮೆ ತಟ್ಟಿದರು. ಸ್ವಲ್ಪ ನೀರೂ, ಶೀ ಎಂದು ಸ್ವಲ್ಪ ಗ್ಯಾಸೂ ಹೊರಕ್ಕೆ ಬಂದಿತು.

"ಇದು ಗ್ಯಾಸ್ ಗಾಂಗ್ರೀನ್" ಮಿಸ್ಟರ್ ಆಚಾರಿ ಹೇಳತೊಡಗಿದರು. "ಈತನ ಕೈಯನ್ನು ಭುಜದಿಂದ ಕತ್ತರಿಸಿ ಬೇರ್ಪಡಿಸುವುದರಿಂದ ದೊಡ್ಡ ಪ್ರಯೋಜನವೇನೂ ಇಲ್ಲ. ಗ್ಯಾಂಗ್ರೀನ್ ಬಹುಶಃ ಶ್ವಾಸಕೋಶಕ್ಕೆ ವ್ಯಾಪಿಸಬಹುದು. ಬಹುಮಟ್ಟಿಗೆ ಈತನ ಉಸಿರು ನಿಂತು ಹೋಗಬಹುದು."

ಮಿಸ್ಟರ್ ಆಚಾರಿಯ ಎದುರಿಗೆ ರೋಗಿಯು ಶಾಂತನಾಗಿ ಮಲಗಿದ್ದನು. ಅವನಿಗೆ ಅರ್ಥವಾಗದ ಭಾಷೆಯಲ್ಲಿ ಮಾತನಾಡುವ ಸರ್ಜನ್ ಅವನಿಗೆ ಸಂಬಂಧಿಸಿದಂತೆ ಅವನ ರಕ್ಷಣೆ ಮಾಡುವವರಾಗಿದ್ದರು. ಒಂದು ಆರಾಧ್ಯ ದೈವವನ್ನು ನೋಡುವ ಭಕ್ತಿ ಮರ್ಯಾದೆಗಳಿಂದ ಅವನು ಆಚಾರಿಯನ್ನು ನೋಡಿದನು. ಬಹುಶಃ ಈ ರೋಗಿ ಕೃಷ್ಣನ ಭಕ್ತನಾಗಿರಬೇಕು. ಎತ್ತಿನ ಗಾಡಿಯಲ್ಲಿ ಹತ್ತಿ ಕುಳಿತು ಭಕ್ತಿಗಾನಗಳನ್ನು ಹಾಡುತ್ತಾ ಮಧುರೆಗೆ ತಾನು ಪ್ರಯಾಣ ಮಾಡಿದ್ದನ್ನು ಅವನು ನೆನೆಯುತ್ತಿರಬಹುದು. "ಕೃಷ್ಣ, ಕಳ್ಳ ಕೃಷ್ಣ ನನ್ನನ್ನೂ ಕಾಪಾಡು" - ಎಂದು ಅವನು ಪ್ರಾರ್ಥಿಸುತ್ತಿದ್ದಾನೆಯೇ? ಅವನ ತುಟಿಗಳು ನಡುಗುತ್ತಿವೆ. ಅವನು ಏನೆಂದು ಪ್ರಾರ್ಥನೆ ಮಾಡುತ್ತಿದ್ದಾನೆ? ಮನಸ್ಸಾಕ್ಷಿಯನ್ನು ಕಾಯುವವನ ರಹಸ್ಯ ಧ್ವನಿಗಳೆ? ಯಾತನೆಯ ವಿವರಣೆಯೇ? ಜೀವನ ಚರಿತ್ರೆಯ ಬೆನ್ನೆಲುಬುಗಳೇ? ಅಥವಾ ಬರಿ ಅಳುವೇ?

ಬಹು ಮಟ್ಟಿಗೆ ಅದು ಅಳುವೇ ಆಗಿರಬೇಕು. ರೋಗಿಗೆ ಅಳುವುದಕ್ಕಿಲ್ಲದೆ ಪ್ರಾರ್ಥನೆ ಮಾಡಲು ಹೊತ್ತೆಲ್ಲಿ?

ನೇಕಾರನಾದ ಒಬ್ಬ ಮನುಷ್ಯನ ಬಲಗೈ ಕತ್ತರಿಸಿ ತೆಗೆದು ಹಾಕುವುದು ಎನ್ನುವುದು ಒಂದು ಘೋರ ಪಾಪವಲ್ಲವೇ? ಆ ಸತ್ಯವನ್ನು ಮಿಸ್ಟರ್ ಆಚಾರಿ ಅವನಿಗೆ ಅರ್ಥವಾಗುವ ಭಾಷೆಯಲ್ಲಿ ಮಂಡಿಸಿದರು.

ಮಿಸ್ಟರ್ ಆಚಾರಿ ಹೇಳಿದರು:

"ಈಗ ಚೆಂಡು ಕೋರ್ಟಿನ ಮಧ್ಯೆ ಇದೆ. ಒಂದು ಭಾಗದಲ್ಲಿ ಗೋಲಿಯಿಲ್ಲ. ಅವನಿಗೇನೋ ಆಗಿದೆ. ಅವನು ಎಲ್ಲಿ ಹೋದನೆಂದು ಯಾರಿಗೂ ತಿಳಿಯದು. ಗೋಲ್‌ಗೆ ಹಾಕಿದ ಬಲೆಯ ಸುಳಿರವ ಮೂಲಕ ಅವನು ಹಿಂಬದಿಗೆ ಹೋದನೇನು? ಏನೇ ಆದರೂ ಧರ್ಮವೇ ಶ್ರೇಯಸ್ಕರವೆಂಬ ನಂಬಿಕೆ ಇದ್ದಲ್ಲಿ ಈಗ ಗೋಲ್ ಹೊಡೆಯಬಾರದು. ಹಾಗಿಲ್ಲದಿದ್ದಲ್ಲಿ ನೇರವಾಗಿ ಚೆಂಡನ್ನು ಒದೆಯಿರಿ. ಆಗ ನಿಶ್ಚಯವಾಗಿಯೂ ಗೋಲ್ ಆಗುತ್ತೆ. ಧರ್ಮದ ಮೇಲೆ ನಂಬಿಕೆ ಇದ್ದರೆ ಇವನ ಕೈ ಕತ್ತರಿಸಲೇ ಬೇಕು. ಸಾಯುವುದಕ್ಕಿಂತ ಜೀವಿಸಿರುವುದೇ ಒಳ್ಳೆಯದು. ಅವನು ದೇವರ ಲೀಲಾ ವಿನೋದಗಳನ್ನು ಎಷ್ಟೋ ಕಾಲದಿಂದ ಕಂಡಿದ್ದಾನೆ. ಅವುಗಳನ್ನು ನೋಡಿ ಆಸ್ವಾದಿಸುವುದೇ ಭಕ್ತಿ ಮಾರ್ಗ.

ಕೈಯಿಲ್ಲದಿದ್ದರೇನು ? ಕಾಲಿಲ್ಲದಿದ್ದರೇನು ? ಒಂದು ಹೊತ್ತಿಗೂ ಸಹ ಅನ್ನಕ್ಕೆ ಗತಿಯಿಲ್ಲದ ಭಿಕ್ಷುಕನು ನನ್ನ ಕಾರು ಬರುವುದನ್ನು ಕಂಡರೆ ದಾರಿ ಬಿಟ್ಟು ಪಕ್ಕಕ್ಕೆ ಸರಿಯುತ್ತಾನೆ. ಭಿಕ್ಷೆ ಬೇಡಿಯಾದರೂ ಅವನು ಜೀವಿಸಬೇಕಲ್ಲ ? ನನ್ನ ಕಾರು ಅವನ ಮೇಲೆ ಹತ್ತಿ ಅವನು ಸಾಯುವುದಕ್ಕಿಂತ, ಮುಚ್ಚಿರುವ ಗೇಟಿನ ಮುಂದೆ ನಿಂತು 'ಏನೂ ಇಲ್ಲ ಮುಂದಕ್ಕೆ ಹೋಗಪ್ಪ' ಎಂಬ ಮನೆಯವರ ಧ್ವನಿಯನ್ನು ಕೇಳುವುದೇ ಅವನಿಗಿಷ್ಟ. ಜೀವನವು ಒಂದು ಚದುರಂಗದಾಟ. ಈ ಆಟದಲ್ಲಿ ನಾಲ್ಕು ಮನೆಗಳಿರುತ್ತವೆ. ಹಿಂದು ಮುಂದೆ ಯೋಚಿಸದೆ ಒಂದು ಕಾಯಿಯನ್ನೇನಾದರೂ ಎತ್ತಿಟ್ಟು ಬಿಟ್ಟರೆ ಕಿರೀಟವು ನಷ್ಟವಾದಂತೆಯೇ.

"ಅನೇಕ ರೋಗಗಳಿವೆ. ಅಸಂಖ್ಯಾತ ರೋಗಿಗಳಿದ್ದಾರೆ.
ನದಿಗಳು ಒಣಗಿ ಹೋಗುತ್ತವೆ. ಮಣ್ಣಿನ ಹಲವಾರು ದಿಬ್ಬಗಳಾಗುತ್ತವೆ.
ಯಮುನೆಯ ದಡದಲ್ಲಿ ಒಂದು ಚಟ್ಟವು ಬಂದು ಹೊಡೆಯುತ್ತದೆ.
ಶ್ರೀಕೃಷ್ಣನ ದ್ವಾರಕದಲ್ಲಿ ರಬ್ಬರ್ ಕೃಷಿ ಮಾಡುತ್ತಿದ್ದಾರೆ.
ಮೆಕ್ಕಾ ಮಸೀದಿಯಲ್ಲಿ ಸೈನ್ಯವು ನೆಲೆಸುತ್ತದೆ.
ತಣ್ಣೀರನ್ನು ಯೇಸುವು ದ್ರಾಕ್ಷಾರಸವನ್ನಾಗಿ ಮಾಡುತ್ತಾನೆ.
ನಿರ್ಗತಿಕರ ತಾಯಿ ಮದರ್ ತೆರೇಸಳನ್ನು ಬಲಾತ್ಕರಿಸುತ್ತಾರೆ.
ಜಾನ್‌ಪಾಲ್ ಬಾಗಿಲು ತೆರೆಯುತ್ತಾರೆ.
ತಟ್ಟಿರಿ ತೆರೆಯುತ್ತದೆ ಎಂದು
ರೋಗಿಗಳು ನಂಬುತ್ತಾರೆ.
ಆದರೆ ಬೆರಳುಗಳಿಂದ
ತಟ್ಟಲಲ್ಲ ಯೇಸು ಹೇಳಿದ್ದು.
ಬೆಳ್ಳಿಯ ನಾಣ್ಯದಿಂದ ತಟ್ಟಲೇ
ಪಾದ್ರಿಯ ಧ್ವನಿಯು.
ತಟ್ಟಿದರೆ ಶಬ್ದವು ಉಂಟಾಗಬೇಕಾದಲ್ಲಿ
ಬೆಳ್ಳಿ ನಾಣ್ಯವೇ ಬೇಕು."

ತಕ್ಷಣವೇ ಮಿಸ್ಟರ್ ಆಚಾರಿ ತಮ್ಮ ಮಾತುಕತೆಗಳಿಗೆ ವಿರಾಮ ಚಿಹ್ನೆ ಹಾಕಿದರು.

ಮಿಸ್ಟರ್ ಆಚಾರಿ ದ್ವಂದ್ವ ವ್ಯಕ್ತಿತ್ವವುಳ್ಳ ಒಬ್ಬ ಮನುಷ್ಯರು. ಅವರೊಳಗೆ ಇಬ್ಬರು ವ್ಯಕ್ತಿಗಳಿದ್ದಾರೆ. ಅವರಲ್ಲಿ ಒಬ್ಬ ಗುಡ್‌ಮ್ಯಾನೂ, ಒಬ್ಬ ಆಚಾರಿಯೂ ಹೊಕ್ಕಿಕೊಂಡಿದ್ದಾರೆ.

ಮಿಸ್ಟರ್ ಆಚಾರಿಯ ಒಳಗಿರುವ ಗುಡ್‌ಮ್ಯಾನ್‌ನನ್ನು ಕಂಡರೆ, ಒಳಗಿರುವ ಆಚಾರಿಗೆ ಇಷ್ಟವಿಲ್ಲ. ಮಿಸ್ಟರ್ ಆಚಾರಿಗೆ ಒಬ್ಬ ಗುಡ್ ಮ್ಯಾನ್ ಆಗಬೇಕೆಂದಿದೆ. ಆದರೆ ಒಳಗಿರುವ ಆಚಾರಿಯು ಮಿಸ್ಟರ್ ಆಚಾರಿಯನ್ನು ಒಬ್ಬ ಗುಡ್ ಮ್ಯಾನ್ ಆಗಲು ಬಿಡುವುದೇ ಇಲ್ಲ.

ಹಾಗೆ ಮಿಸ್ಟರ್ ಆಚಾರಿಯಲ್ಲಿ ಗುಡ್ ಮ್ಯಾನೂ ಆಚಾರಿಯೂ ಯಾವಾಗಲೂ ಒಬ್ಬರೊಂದಿಗೊಬ್ಬರು ಯುದ್ಧದಲ್ಲೇನೇ. ಆದರೆ ಆ ಯುದ್ಧದಲ್ಲಿ ಯಾವಾಗಲೂ ಆಚಾರಿಯೇ ಗೆಲ್ಲುತ್ತಾರಷ್ಟೆ. ಗುಡ್ ಮ್ಯಾನ್ ಸೋಲೇ ಸೋಲುತ್ತಾನೆ. ಗುಡ್‌ಮ್ಯಾನ್

ಜಯಿಸಬೇಕೆಂದೇ ಮಿಸ್ಟರ್ ಆಚಾರಿಗೆ ಇಷ್ಟ. ಆದರೆ ಅದು ನಡೆಯುವುಗಿಲ್ಲ.

ಆದ್ದರಿಂದ ಮಿಸ್ಟರಿ ಆಚಾರಿ ಮಧ್ಯೆ ಮಧ್ಯೆ ಇಂತಹ ತಾವೇ ಬರೆದ ಗಜಲುಗಳನ್ನು ಹಾಡುತ್ತಾರೆ. ಹಾಡಿ ಆನಂದಿಸುತ್ತಾರೆ.

ಅವರ ಈ ಗಜಲ್ ಕೇಳಿ ಶಿಷ್ಯರು ಆನಂದಿಸುತ್ತಾರೆಯೇ ಎನ್ನುವುದು ಆಚಾರಿಗೆ ಸಂಬಂಧಿಸಿದ ಸಮಸ್ಯೆಯಲ್ಲ.

ಆಚಾರಿ ಅನೇಕ ಸಲ ಹೇಳುವುದುಂಟು:

"ನನಗೆ ನನ್ನ ಕ್ಲಾಸ್‌ನಲ್ಲಿ ಒಟ್ಟಿನಲ್ಲಿ ಐವತ್ತು ಮಂದಿ ವಿದ್ಯಾರ್ಥಿಗಳಿದ್ದಾರೆ. ಐವತ್ತು ವಿದ್ಯಾರ್ಥಿಗಳಿಗೆ ಅನೇಕ ಗ್ರೂಪ್‌ಗಳನ್ನಾಗಿ ಮಾಡಿ- ನಾನು ಶಸ್ತ್ರಕ್ರಿಯೆ ಕಲಿಸುವುದುಂಟು. ಈ ಐವತ್ತು ಜನರೂ ಶಸ್ತ್ರಕ್ರಿಯೆ ಕಲಿಯಬೇಕೆನ್ನುವುದು ಒಂದು ಬರೆದಿಟ್ಟಿರುವ ನಿಯಮವೇ. ಆದರೆ ಬರೆಯಲ್ಪಟ್ಟ ಆ ನಿಯಮವು ಒಮ್ಮೆಯೂ ನಡೆಯುವುದಿಲ್ಲ. ಆದ್ದರಿಂದ ನಾನು ಕಲಿಸುವ ವಿಷಯಗಳು ಈ ಐವತ್ತು ಜನರಿಗೂ ಅರ್ಥವಾಗಬೇಕೆಂದು ನನಗೆ ನಿಜವಾಗಿಯೂ ಆಸೆಯಿಲ್ಲ. ನನ್ನ ವಚನಗಳನ್ನು ಇವರಲ್ಲಿ ಒಬ್ಬನಾದರೂ ಅರ್ಥಮಾಡಿಕೊಂಡರೂ ನಾನು ಕೃತಾರ್ಥನು."

"ನಾನು ಓದುವುದು ನನಗಾಗಿ. ನಾನು ಹೇಳುತ್ತಿರುವುದು ಸಾವಿರಾರು ಜನರಿಗಾಗಿಯಲ್ಲ. ಆರು ಜನರಿಗಾಗಿ."

"ಆ ಆರು ಜನರಿಗಾಗಿ ನಾನು ಬದುಕಲು ಸಿದ್ಧ. ಅವರಿಗೋಸ್ಕರ ಅಗತ್ಯವೆನಿಸಿದರೆ ನಾನು ಸಾಯಲೂ ಸಿದ್ಧ."

ಆದರೆ ಮಿಸ್ಟರ್ ಆಚಾರಿ ಅಂದು ಬಲು ಎತ್ತರದ ಧ್ವನಿಯಲ್ಲಿ ಹೇಳಿದರು;

"ಈತನನ್ನು ತಕ್ಷಣವೇ ಥಿಯೇಟರ್‌ಗೆ ಕರೆದೊಯ್ಯಿರಿ. ಬಲಗೈನವನಾದ ಈ ನೇಕಾರನ ಬಲಗೈಯನ್ನು ನಾನು ಕತ್ತರಿಸಲಿದ್ದೇನೆ. ದ್ರೋಣರು ಏಕಲವ್ಯನ ಬಲಗೈ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಕೇಳಿದಂತೆ."

ಮಿಸ್ಟರ್ ಆಚಾರಿ ಅಂದು ಒಳ್ಳೆಯ ಮೂಡಿನಲ್ಲಿದ್ದರು.

ಅವರು ಅಂದೂ, ಹಿಂದಿನ ದಿನವೂ ಅಸಂಖ್ಯಾತ ಗಜಲುಗಳನ್ನು ಬರೆದಿದ್ದರು. ಓದಿಯೂ ಬಿಟ್ಟಿದ್ದರು.

ತಪ್ಪು ಮಾಡಿದರೆ, ಎಂತಹ ದುಷ್ಟನೂ ಕವಿತೆ ರಚಿಸುತ್ತಾನೆ.

# ಇಪ್ಪತ್ತೊಂಭತ್ತು

ಮೇರಿಯು ಒಂದು ಅರ್ಜಿಯೊಂದಿಗೆ ಮಿಸ್ಟರ್ ಆಚಾರಿಯವರ ಕೋಣೆಯೊಳ ಹೊಕ್ಕಳು.

"ಏನು ಯಾವತ್ತೂ ಇಲ್ಲದ್ದು, ಈ ಅವೇಳೆಯಲ್ಲಿ ?" ಆಚಾರಿ ಕೇಳಿದರು.

ತುಟಿಗಳಲ್ಲಿ ಮಂದಹಾಸವೋ, ಮತ್ತೇನೂ ಗೊತ್ತಾಗುತ್ತಿರಲಿಲ್ಲ. ಮೇರಿ ಬಹು ಗೌರವ ತೋರಿಸುತ್ತಾ ಅರ್ಜಿಯನ್ನು ಮೇಜಿನ ಮೇಲಿಟ್ಟಳು.

ಮಿಸ್ಟರ್ ಆಚಾರಿ ಒಂದು ಸಲ ಅದನ್ನು ಓದಿದನಂತರ ಮೇರಿಯನ್ನು ಸ್ವಲ್ಪ ಹೊತ್ತು ನೋಡುತ್ತಾ ನಿಂತರು. ತೀಕ್ಷ್ಣವಾದ ಆ ನೋಟದ ಅರ್ಥವು ಏನಾಗಿರಬಹುದು ? ಆಚಾರಿ ಮತ್ತೊಮ್ಮೆ ಅರ್ಜಿಯ ಮೇಲೆ ಕಣ್ಣೋಡಿಸಿದರು. ಅನಂತರ ಅದನ್ನು ಮೇಜಿನ ಮೇಲೆ ಹಾಗೇ ತೆರೆದಿಟ್ಟು ಅವರ ಮೇಲೊಂದು ಭಾರವಾದ ಪೇಪರ್ ವೈಟ್ ಹೇರಿದರು. ಅದು ಯಾವುದೋ ಮೆಡಿಕಲ್ ಕಂಪೆನಿಯು ಕೊಟ್ಟ ಪುರಸ್ಕಾರವಾಗಿತ್ತು.

"ಇದೆಲ್ಲಾ ನಡೆಯುವ ಮಾತಲ್ಲ. ನಿನ್ನ ಇಡೀ ಜೀವನವನ್ನು ನೀನು ನನ್ನ ಡಿಪಾರ್ಟ್‌ಮೆಂಟ್‌ನಲ್ಲಿ ಇದ್ದೇ ಮುಗಿಸುತ್ತೀ. ನನ್ನ ಇಚ್ಛೆಯನ್ನು ಪ್ರಕಟಿಸಿದ ನಂತರ ಅದಕ್ಕೆ ಬಾಗದ ಹುಡಗಿಯರನ್ನು ನಾನು ಸುಮ್ಮನೆ ಬಿಡುವುದಿಲ್ಲ. ಸ್ತ್ರೀಯರ ಮೇಲೆ ನನಗೊಂದು ಬಗೆಯ ಮರ್ಯಾದೆ ಇರುವುದರಿಂದಲೇ ನೀನು ಒಪ್ಪಿಕೊಳ್ಳದೆ ನಿನ್ನ ಮೇಲೆ ನಾನು ಕೈ ಹಾಕಿಲ್ಲ, ಅಷ್ಟೆ. ಹಾಗೆ ಮಾಡಲು ನನಗೆ ಒಂದು ಸೆಕಂಡ್ ಸಾಕು. ಆದರೆ ನಾನು ಹಾಗೆ ಮಾಡುವುದಿಲ್ಲ. ನನ್ನ ಅಪೇಕ್ಷೆಗೆ ಬಗ್ಗದ ಹುಡುಗಿ ಇದ್ದಂತೆ ಇದುವರೆಗೂ ನನಗೆ ಜ್ಞಾಪಕವಿಲ್ಲ. ನೀನು ಬಾಗಿಲ್ಲ ಎಂದು ನಾನು ಹೇಳುವುದಿಲ್ಲ. ಆದರೆ ಎಂದಾದರೂ ನಿನ್ನ ಮನಸ್ಸು ಬದಲಾಗಬಹುದು. ಬದಲಾಗಲೆಂದೇ ನಾನು ಕಾದಿದ್ದೇನೆ.

"ನನಗೆ ಯಾರ ಮೇಲಾದರೂ ಮೋಹ ಉಂಟಾದದ್ದೇ ಆದರೆ ನಾನು ಸುಮ್ಮನಿರುವವನಲ್ಲ. ನನ್ನ ಮೋಹವು ಅಲೆಯ ಮಾಲೆಗಳಂತೆ ಮುಂದೆ ಮುಂದೆ ಹೋಗುತ್ತಲೇ ಇರುತ್ತದೆ. ಅವು ದಡಕ್ಕೆ ಹೋಗಿ ಅಪ್ಪಳಿಸಿ, ಹರಡಿ, ಮರಳಿ ಬಂದು ಪುನಃ ಮೇಲಕ್ಕೇಳುತ್ತವೆ. ನನ್ನ ಬಯಕೆಗಳೂ ಹಾಗೇನೇ.

"ನನಗೇನೂ ಬೇಕೆಂದಿಲ್ಲ. ಯಾವಾಗ ನಿನಗೆ ಒಳ್ಳೆಯ ಬುದ್ಧಿ ತೋಚುತ್ತೋ, ಆಗ ನೀನು ಪೂರ್ಣವಾದ ಒಪ್ಪಿಗೆಯೊಂದಿಗೆ ಒಮ್ಮೆ 'ಹೂಂ' ಎಂದರೆ ಸಾಕು. ಆ ಒಪ್ಪಿಗೆಯೊಂದಿಗೇ ನಾನು ನಿನ್ನನ್ನು ತಪ್ಪಿಕೊಳ್ಳಬೇಕಷ್ಟೆ. ಅಂದೇ ನಿನಗೆ ವಿಮುಕ್ತಿ.

"ಅರ್ಜಿ ಇಲ್ಲೇ ಇರಲಿ. ನೀನು ಇನ್ನೂ ಒಂದು ದಿವಸ ಯೋಚಿಸಿ ನೋಡು. ನಿನ್ನ ಭವಿಷ್ಯವು ನನ್ನ ತಕ್ಕಡಿಯಲ್ಲಿ ತೂಗಾಡುತ್ತಿದೆ. ಜ್ಞಾಪಕವಿರಲಿ.

"ಇನ್ನೊಂದು ವಿಷಯ. ನೀನು ಪರಿಸ್ಥಿತಿಯ ಒತ್ತಡಕ್ಕೆ ತಲೆಬಾಗಿ ಒಪ್ಪಿಕೊಳ್ಳುವುದು ಬೇಡ. ಅದು ಮಹಾಪಾಪ. ನಿಜವಾಗಿ ಮನಃಪೂರ್ವಕವಾಗಿ ಒಪ್ಪುವುದೇ ನನಗಿಷ್ಟವಾದದ್ದು. ಒಪ್ಪಿಗೆ ನೀಡದ ಒಂದು ಹೆಣ್ಣನ್ನು ಮುಟ್ಟುವುದಕ್ಕಿಂತ ಒಂದು ಪ್ಲಾಸ್ಟಿಕ್ ಬೊಂಬೆಯನ್ನು ತಬ್ಬಿಕೊಳ್ಳುವುದು ಇನ್ನೂ ಚೆನ್ನಾಗಿರುತ್ತೆ.

"ಸರಿ ಹೋಗಿ ಬಾ."

ಮಿಸ್ಟರ್ ಆಚಾರಿ ಇಷ್ಟು ಹೇಳಿ ತಮ್ಮ ಮಾತಿಗೆ ವಿರಾಮ ಹಾಕಿದರು.

"ಸಿಸ್ಟರ್ ಎಲ್ಲಿ ಹೋಗುತ್ತಿದ್ದೀರಿ ?"

ಮಿಸ್ಟರ್ ಆಚಾರಿಯ ಕೋಣೆಯಿಂದ ಮೇರಿ ಹೊರಟು ರವೀಂದ್ರನಾಥ್‌ನ ರೂಮ್‌ನ ಬಳಿ ಬಂದಿದ್ದಳು. ಆಕಸ್ಮಾತ್ತಾಗಿ ಅವಳಿಗೆ ಹಾಗೆ ಎಷ್ಟೋ ಸಲ ಆಗುತ್ತಿತ್ತು. ರವೀಂದ್ರನಾಥ್‌ನ ದನಿ ಕೇಳಿಸಿದಾಗ ಮೇರಿ ತನ್ನ ತಲೆಯನ್ನೆತ್ತಿದಳು. ಮೇರಿ ಯಾವಾಗಲೂ ಆಚಾರಿಯ ಕೊಠಡಿಯಿಂದ ಹೊರಬರುವಾಗ ತಲೆಬಗ್ಗಿಸಿಕೊಂಡೇ ಹೊರಬರುತ್ತಿದ್ದಳು. ಆ ಕೋಣೆಯಿಂದ ಹೊರಬರುವಾಗ ಪ್ರಪಂಚದ ಕಡೆ ನೋಡಲೇ ಮೇರಿಗೆ ಭಯವು.

"ಏನು ಸಮಾಚಾರ ?" ದನಿ ತಗ್ಗಿಸಿ ರವೀಂದ್ರನಾಥ್ ಕೇಳಿದನು. "ಹುಲಿಯ ಬೋನಿನಿಂದ ಅಲ್ಲವೇ ಬರುತ್ತಿರುವುದು ? ಹುಲಿ ಈಗಲೂ ಆಡಿನಮರಿಗಳನ್ನು ತಿನ್ನುವುದುಂಟೇ ?"

ಮೇರಿ ಮರುಮಾತನಾಡಲಿಲ್ಲ. ಅವರಿಬ್ಬರೂ ಕಾರಿಡಾರ್ ಮೂಲಕ ಸಮಾನಾಂತರವಾಗಿ ನಡೆದರು.

"ಮೇರಿ ಹ್ಯಾಡ್ ಎ ಲಿಟಲ್ ಲ್ಯಾಂಬ್" ನರ್ಸರಿಯಲ್ಲಿ ಓದಿದ ಒಂದು ಹಳೆಯ ಪದ್ಯವನ್ನು ಡಾಕ್ಟರ್ ರವೀಂದ್ರನಾಥ್ ಹೇಳುತ್ತಿದ್ದನು.

ಡಾ. ರವೀಂದ್ರನಾಥ್ ಅಸಂಬದ್ಧವಾಗಿ ಏನಾದರೂ ಯೋಚಿಸುತ್ತಿದ್ದಾನೆಯೋ! ಅಲ್ಲದಿದ್ದಲ್ಲಿ ಮೇರಿಯನ್ನು ಹೆದರಿಸಲೆಂದೇ ಹೇಳುತ್ತಿದ್ದಾನೆಯೋ! ಯಾರೊಂದಿಗೂ ಬೇಕಾದ್ದಕ್ಕಿಂತ ಹೆಚ್ಚಾಗಿ ಆತನು ಏನೂ ಮಾತನಾಡುವವನಲ್ಲ. ಬಹಳ ಸೌಮ್ಯ ಸ್ವಭಾವದ ಮಿತ್ರರೊಂದಿಗೇನೇ ಡಾಕ್ಟರ್ ರವೀಂದ್ರನಾಥ ಮಾತನಾಡುತ್ತಿರುವುದು. ಹೊಸದಾಗಿ ಕಾಣುವ ರೋಗಿಗಳೊಂದಿಗೂ ಆತನು ಮಾತನಾಡುತ್ತಿದ್ದುದು ಅವರೊಂದಿಗೆ ಬಹುಕಾಲದಿಂದಲೂ ಪರಿಚಯದಿಂದ ಇದ್ದಂತೆಯೇ. ಇಷ್ಟು ಯೋಗ್ಯನೂ, ಸಹೃದಯನೂ ಆದ ಒಬ್ಬ ಡಾಕ್ಟರನ್ನು ಮೇರಿ ಆ ಆಸ್ಪತ್ರೆಯಲ್ಲಿ ಕಂಡೇ ಇರಲಿಲ್ಲ. ಆದರೆ ಮೇರಿಯೊಂದಿಗೆ ಮಾತನಾಡುವಾಗ ಡಾಕ್ಟರ್ ರವೀಂದ್ರನಾಥ್ ಸ್ವಲ್ಪ ಸ್ವಾತಂತ್ರ್ಯ ತೆಗೆದುಕೊಳ್ಳುತ್ತಿದ್ದನು. ಯಾವಾಗಲಾದರೂ ಅಪತ್ಯವೆಂದು ಕಂಡುಬಂದರೆ ಸ್ವಲ್ಪ ತಮಾಷೆಯ ಮಾತನಾಡುತ್ತಿದ್ದನು. ಈ ಸ್ವಾತಂತ್ರ್ಯ, ತಮಾಷೆಯನ್ನು ಒಂದು ತೊಂದರೆ ಎಂಬಂತೆ ಮೇರಿ ಎಂದೂ ತೋರಿಸಿಕೊಂಡಿರಲಿಲ್ಲ. ಅಂತಹ ಮಾತುಗಳನ್ನು ಆಗಾಗ ಕೇಳದಿದ್ದರೇ ಅವಳಿಗೆ ತೊಂದರೆ ಎನಿಸುತ್ತಿತ್ತು.

"ಡಾಕ್ಟರ್ ನೀವು ಎಲ್ಲಿಗ ?"

"ಸೆಮಿನಾರ್‌ಗೆ."

ಡಾಕ್ಟರ್ ರವೀಂದ್ರನಾಥ್‌ನ ಕೈಯಲ್ಲಿ ಒಂದು ಕೇಸ್ ಫೈಲ್‌ಗಳ ಕಟ್ಟೂ, ಎಕ್ಸ್‌ರೇ ಫಿಲ್ಮ್‌ಗಳೂ, ಮೂರು-ನಾಲ್ಕು ದಪ್ಪವಾದ ಪುಸ್ತಕಗಳೂ ಇದ್ದವು. ಹೊರಲಾಗದ ಹೊರೆಯೊಂದಿಗೆ ಆತನು ಯಾವಾಗಲೂ ನಡೆಯುತ್ತಿರುತ್ತಾನೆ. ಆತನು ಸುಮ್ಮನೆ ಒಂದು ಕಡೆ ಇರುವುದನ್ನು ಮೇರಿ ಎಂದೂ ನೋಡೇ ಇರಲಿಲ್ಲ. ಅವನು ಸದಾ ಚಲಿಸುವ ಒಂದು ಮನುಷ್ಯ ಯಂತ್ರವಾಗಿದ್ದನು. ತೂಕ ಬಲು ಕಡಿಮೆ ಇರುವ ಈ ಮನುಷ್ಯನಲ್ಲಿ ಇಷ್ಟರ ಮಟ್ಟಿಗೆ ಶಕ್ತಿಯು ಎಲ್ಲಿಂದ ಬಂತು ಎಂಬುವುದು ಆಶ್ಚರ್ಯವೇ.

"ಡಾಕ್ಟರ್ ನೀವು ವಿಶ್ರಾಂತಿ ತೆಗೆದುಕೊಳ್ಳುವುದಿಲ್ಲವೇ ?" ಮೇರಿ ಕೇಳಿದಳು.

"ಯಾವಾಗಲೂ ವಿಶ್ರಾಂತಿಯೇ ಅಲ್ಲವೇ ? ವಿಶ್ರಾಂತಿಯ ಮಧ್ಯೆಯೂ ನಾನು ಸ್ವಲ್ಪ ಕೆಲಸ ಮಾಡುತ್ತೇನೆ" ನಗುತ್ತಾ ರವೀಂದ್ರನಾಥ್ ಹೇಳಿದನು.

"ಪವಾಡ ಪುರುಷರು ನೀವು" ಮೇರಿ ಹೇಳಿದಳು.

ನನ್ನ ತಾಯಿಯೂ ಹಾಗೆಯೇ ಹೇಳುತ್ತಿದ್ದರು. ನಾನು ಹುಡುಗನಾಗಿದ್ದಾಗ ಒಂದು ನಿಮಿಷ ಸಹ ಸುಮ್ಮನೆ ಕಳೆಯುತ್ತಿರಲಿಲ್ಲವಂತೆ. ನಿದ್ದೆ ಮಾಡುತ್ತಿರುವಾಗಲೂ ಕೈಕಾಲುಗಳನ್ನು ಬಡಿದು ಆಟವಾಡುತ್ತಿದ್ದನಂತೆ. ನನ್ನ ತಾಯಿ ಅದ್ಭುತ ಶಿಶುವೆಂದೇ ನನ್ನನ್ನು ಕರೆಯುತ್ತಿದ್ದರಂತೆ.

"ನಿಮ್ಮ ತಾಯಿ ನೀವು ಮಗುವಾಗಿದ್ದಾಗಲೇ ನಿಮ್ಮನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡಿದ್ದಾರೆ " ಮೇರಿ ಹೇಳಿದಳು. ಆಕೆಯನ್ನು ಒಮ್ಮೆ ಕಾಣಬೇಕೆಂದು ಮೇರಿ ಬಯಸಿದಳು.

"ಸಿಸ್ಟರ್, ಬನ್ನಿ ನನ್ನ ಕ್ವಾರ್ಟರ್ಸ್‌ಗೆ ಹೋಗೋಣ. ನಾನು ನಿಮಗೆ ಒಂದು ಕಪ್ ಒಳ್ಳೆಯ ಟೀ ಮಾಡಿಕೊಡುತ್ತೇನೆ."

"ಬೇಡ ಡಾಕ್ಟರ್, ನನಗೆ ಸ್ವಲ್ಪ ಅವಸರದ ಕೆಲಸವಿದೆ."

"ಬನ್ನಿ ಪ್ಲೀಸ್" ಪ್ರೀತಿಪೂರ್ವಕವಾದ ಒಂದು ಆಹ್ವಾನವಾಗಿತ್ತದು. ಅದನ್ನು ನಿರಾಕರಿಸಲು ಮೇರಿಗೆ ಸಾಧ್ಯವಾಗಲಿಲ್ಲ.

ಪ್ಯಾರೇಲಾಲ್, ಕಾವಲು ನಿಲ್ಲುವ ಗೇಟನ್ನು ದಾಟಿ ಅವರು ಹೊರ ನಡೆದರು. ಗೇಟು ದಾಟುವಾಗ ಮೇರಿ ಎಂದಳು:

"ಪ್ಯಾರೇಲಾಲ್, ನೀವು ಸಾಯಂಕಾಲ ಹಾಸ್ಟೆಲ್‌ಗೆ ಬಂದಾಗ ನನ್ನನ್ನು ನೋಡದೆ ಹೋಗಬೇಡಿ. ನಿಮಗೆ ಒಂದು ಮುಖ್ಯವಾದ ವಿಷಯ ಹೇಳಬೇಕು."

"ಸರಿ ಸಿಸ್ಟರ್" ಪ್ಯಾರೇಲಾಲ್ ನಮಸ್ಕಾರ ಮಾಡುತ್ತಾ ಹೇಳಿದನು.

ಎರಡೂ ಭಾಗಗಳಲ್ಲಿ ಹಸಿರು ತುಂಬಿದ್ದ ಲಾನ್ ಅನ್ನು ನೇರವಾಗಿ ಭೇದಿಸಿಕೊಂಡು ಹೋಗುವ ಕಾಂಕ್ರೀಟ್ ರೋಡಿನ ಮೂಲಕ ಸಮಾನಾಂತರವಾಗಿ ಅವರು ನಡೆದರು. ಮಧ್ಯೆ ಮಧ್ಯೆ ಅವರು ಅದೂ ಇದೂ ಮಾತನಾಡುತ್ತಿದ್ದರು.

ಡಾಕ್ಟರ್ ರವೀಂದ್ರನಾಥ್‌ನ ಅಂತಸ್ತಿಗೆ ತಕ್ಕಂತಹ ಒಂದು ಚಿಕ್ಕ ಕ್ವಾರ್ಟರ್ಸ್ ಆಗಿತ್ತದು. ಅದರೊಳಗೆ ಬಹಳ ಸರಳವಾಗಿ ಸಜ್ಜುಗೊಳಿಸಲಾಗಿತ್ತು. ಎರಡು ಮೂರು ಕುರ್ಚಿಗಳು, ಒಂದು ಟೀಪಾಯ್. ಒಂದು ದೊಡ್ಡ ಮೇಜು, ಆರಾಮ ಕುರ್ಚಿ, ತಿಳಿ

ಹಳದಿ ಬಣ್ಣದಲ್ಲಿರುವ ಕಿಟಕಿಯ ಕರ್ಟನ್‌ಗಳು.

ಬಹು ಬೇಗನೇ ಬಿಸಿ ಬಿಸಿಯಾದ ಟೀಯೊಂದಿಗೆ ರವೀಂದ್ರನಾಥ್ ಬಂದನು. ಅಡಿಗೆ ಕೋಣೆಯಿಂದ ಪಾತ್ರೆಗಳ ಸದ್ದಾಗಲಿ ಸೀಮೆಎಣ್ಣೆಯ. ವಾಸನೆಯಾಗಲಿ ಒಂದೂ ಹೊರಕ್ಕೆ ಬರಲಿಲ್ಲ. ಆತ ಯಾವಾಗಲೂ ಹಾಗೆಯೇ. ಆತ ಬಹಳ ನಿಶ್ಶಬ್ದವಾಗಿ ಕೆಲಸಮಾಡುತ್ತಿದ್ದರು.

ಟೀ ಕುಡಿಯುವಾಗ ಮಧ್ಯೆ ಡಾಕ್ಟರ್ ರವೀಂದ್ರನಾಥ್ ಕೇಳಿದನು:

"ವಿರಾಮದ ಸಮಯವನ್ನು ಹೇಗೆ ಕಳೆಯುತ್ತೀರಿ ?"

"ನಿದ್ದೆ ಮಾಡಿ, ಸ್ವಪ್ನ ಕಾಣುತ್ತಾ ಕಳೆಯುತ್ತೇನೆ" ಮೇರಿ ಹೇಳಿದಳು.

"ಒಳ್ಳೆಯ ಸ್ವಪ್ನಗಳನ್ನು ಕಾಣುತ್ತೀರೇನು ?"

"ಸಾರಿ, ಎಲ್ಲಾ ದುಃಸ್ವಪ್ನಗಳು."

"ಯಾಕೆ ಹೀಗೆ ನಿದ್ದೆ ಮಾಡಿ, ದುಃಸ್ವಪ್ನಗಳನ್ನು ಕಾಣುತ್ತಾ ಸಮಯ ಕಳೆಯುತ್ತೀರಿ ?"

"ಇನ್ನೇನು ಮಾಡಲಿ ?"

"ಓದಬೇಕು."

"ಓದುವ ಹವ್ಯಾಸ ನನಗಿಲ್ಲವಲ್ಲ. ಓದಲೆಂದು ಒಂದು ಪುಸ್ತಕವನ್ನು ತೆರೆಯುವ ಹೊತ್ತಿಗೇನೇ ನನಗೆ ನಿದ್ದೆ ಬಂದು ಬಿಡುತ್ತೆ. ನಿದ್ದೆ ಬರಲು ನಾನು ಉಪಯೋಗಿಸುವ ಒಂದು ಆಯುಧವೆಂದರೆ ಓದುವುದು."

"ಹಾಗಾದರೆ ಸ್ನೇಹಿತೆಯರೊಂದಿಗೆ ಮಾತಾಡುತ್ತಾ ಕುಳಿತುಕೊಳ್ಳಬೇಕು. ಟೌನ್‌ಗೆ ಹೋಗಿ ಸುತ್ತಾಡಬೇಕು. ಆಗಾಗ ಸಿನಿಮಾಗೆ ಹೋಗಬೇಕು. ಹೀಗೆಲ್ಲಾ ಮಾಡಿದರೆ ನಿಮ್ಮ ಜೀವನವು ಆನಂದದಾಯಕವಾಗಿರುವುದಿಲ್ಲವೇ ?"

ಸ್ನೇಹಿತೆ ಎಂಬ ಶಬ್ದವನ್ನು ಕೇಳಿದಾಗ ಮೇರಿಯ ಮನಸ್ಸಿನೊಳಗೆ ಏನೋ ಸಂಕಟವಾದಂತಾಯಿತು. ಅವಳ ಮನಸ್ಸು ಥಟ್ಟನೆ ಬಲು ದೂರ ಹಾರಿಹೋಯಿತು.

"ಹುಂ ಏನಾಯಿತು ? ಮೇರಿ ಏನು ಆಲೋಚಿಸುತ್ತಿದ್ದೆ ?" ರವೀಂದ್ರನಾಥ ಕೇಳಿದನು.

"ನನಗೀಗ ಸ್ನೇಹಿತೆಯರೇ ಇಲ್ಲ. ಕುಞ್ಞಮ್ಮ ಹೋದ ನಂತರ ನಾನು ಏಕಾಕಿಯಾಗಿದ್ದೇನೆ. ಅನಂತರ ಮೇಟ್ರನ್ ಹೆಲೆನ್ ಸಿಂಗ್ ನನ್ನ ಪಕ್ಕೆಕ ಗಳತಿಯಾದರು. ಈಗ ಅವರೂ ಇಲ್ಲ. ಆಕೆ ಈಗ ಮಾದಕವಸ್ತುವನ್ನು ಆಶ್ರಯಿಸಿದ್ದಾರೆ. ಯಾವಾಗಲೂ ಆಕೆ-ಅದರ ಮತ್ತಿನಲ್ಲೇ ಇರುತ್ತಾರೆ. ವಿಶ್ರಾಂತಿಯ ವೇಳೆಯಲ್ಲೆಲ್ಲಾ ಆಕೆ ಮಂಚದ ಮೇಲೆ ಮತ್ತೇರಿ ಮಲಗಿರುವುದನ್ನು ಕಾಣಬಹುದು. ಟೈರ್ ಪಂಕ್ಚರ್ ಆದ ಮನೋಹರವಾದ ಒಂದು ಕಾರು ರೋಡಿನ ಮಗ್ಗುಲಲ್ಲಿ ಬಿದ್ದಿರುವಂತೆ."

ಇಬ್ಬರೂ ಸ್ವಲ್ಪ ಹೊತ್ತು ನಿಶ್ಶಬ್ದರಾಗಿದ್ದರು. ಡಾಕ್ಟರ್ ರವೀಂದ್ರನಾಥ್ ಎರಡನೆಯ ಕಪ್ ಟೀ ಸುರಿದನು. ಮೇರಿಯ ಟೀ ತಣ್ಣಗಾಗುತ್ತಿತ್ತು.

"ಕುಞ್ಞಮ್ಮಳ ಕೇಸ್ ಮುಗಿಯಿತೇ ?" ರವೀಂದ್ರನಾಥ ಕೇಳಿದನು.

"ಎಲ್ಲಾ ಮುಗಿಯಿತು. ತೀರ್ಪನ್ನು ಹೇಳಿಯೂ ಆಯಿತು. ಅವಳೀಗ ಜೈಲಿನಲ್ಲಿದ್ದಾಳೆ."

"ಅವಳ ಗಂಡ ?" ರವಿಂದ್ರನಾಥ ಕೇಳಿದನು.

"ಆತನು ಜೈಲಿಗೆ ಅವಳನ್ನು ನೋಡಲೆಂದು ಹೋಗಿದ್ದನು. ಆದರೆ ಕುಞ್ಞಮ್ಮ ಆತನನ್ನು ನೋಡಲಿಷ್ಟಪಡಲಿಲ್ಲ."

"ನಾವೊಂದು ದಿವಸ ಜೈಲಿಗೆ ಅವಳನ್ನು ನೋಡಲು ಹೋಗೋಣ." ಏನೋ ನೆನಪಾದಂತೆ ರವೀಂದ್ರನಾಥ್ ಹೇಳಿದನು.

"ಇಲ್ಲ, ನಾನು ಬರುವುದಿಲ್ಲ" ಮೇರಿ ದೃಢವಾದ ಒಂದು ತೀರ್ಮಾನದಿಂದ ಹೇಳಿದಳು.

ಮೇರಿ, ಡಾಕ್ಟರ್ ರವೀಂದ್ರನಾಥ್‌ನನ್ನು ಬೀಳ್ಕೊಂಡು ಹೊರಟಳು.

"ಇಂದು ನಿಮಗೆ ಆಫ್ ಏನು ?" ರವೀಂದ್ರನಾಥ್ ಕೇಳಿದನು.

"ನನಗಿಂದು ನೈಟ್‌ಡ್ಯೂಟಿ, ಡಾಕ್ಟರ್, ಇನ್ನು ರೂಮಿಗೆ ಹೋಗಿ ಸ್ವಲ್ಪ ಹೊತ್ತು ಮಲಗಬೇಕು. ಹಿಂದೆಲ್ಲಾ ನೈಟ್‌ಡ್ಯೂಟಿ ಇರುವವರು ಹಗಲೆಲ್ಲಾ ನಿದ್ರಿಸಿದರೆ ಹೆಲೆನ್ ಸಿಂಗ್ ಬಯ್ಯುತ್ತಿದ್ದರು."

"ಈಗಲೋ ?"

"ಆಕೆಯೋ ಯಾವಾಗಲೂ ನಿದ್ರಿಸುತ್ತಿರುತ್ತಾರೆ."

ಮೇರಿ ಹೇಳಿದಳು.

ಮೇರಿ ಹಾಸ್ಟೆಲ್‌ಗೆ ಬಂದು ಬಟ್ಟೆ ಬದಲಾಯಿಸಿದ ನಂತರ ಮೇಟ್ರನ್ ಹೆಲೆನ್ ಸಿಂಗರನ್ನ ಕಾಣಲೆಂದು ಆಕೆಯ ಕೊಠಡಿಗೆ ಹೋದಳು.

ಕೊಠಡಿಯ ಬಾಗಿಲಿಗೆ ಹಾಕಿದ್ದ ಮೊಲದ ಚಿತ್ರವಿರುವ ಡೋರ್ ಕರ್ಟನ್ ಬಹಳ ಕೊಳೆಯಾಗಿತ್ತು. ಅದರ ಕೆಳಭಾಗವು ಅಲ್ಲಲ್ಲಿ ಹರಿದಿತ್ತು. ಈಗ ಹೆಲೆನ್ ಸಿಂಗ್‌ಗೆ ಅಂತಹ ವಿಷಯಗಳಲ್ಲೆಲ್ಲಾ ಆಸಕ್ತಿ ಇದ್ದಂತಿಲ್ಲ.

ಮೇಟ್ರನ್ ಹೆಲೆನ್ ಸಿಂಗ್‌ರ ಕೋಣೆಯೊಳಗೆ ಸೋಫಾಗಳೂ, ಟೀಪಾಯ್‌ಗಳೂ ಅಲ್ಲೊಂದು ಇಲ್ಲೊಂದರಂತೆ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಟೀಪಾಯ್ ಮೇಲೆ ಇರುವ ಕಡಲೆಕಾಯಿ ಬೀಜದ, ಬಿಸ್ಕಟ್‌ನ ಚೂರುಗಳಿಗೆ ಇರುವೆಗಳು ಮುತ್ತಿ ಹರಿದಾಡುತ್ತಿದ್ದವು. ಖಾಲಿಯಾದ ರಮ್‌ನ ಬಾಟಲ್ ನೆಲದ ಮೇಲೆ ಉರುಳಿ ಬಿದ್ದಿತ್ತು. ಕೊಳೆಯಾದ ಬಟ್ಟೆಗಳು ಕುರ್ಚಿಯ ಮೇಲೂ, ಸೊಳ್ಳೆ ಪರದೆಯ ಮೇಲೂ ಬಿದ್ದಿದ್ದವು. ಕುಡಿದು ಮುಗಿಸಿದ ಟೀ ಕಪ್‌ಗಳು ಮಂಚದ ಕೆಳಗೆ ಬಿದ್ದಿದ್ದವು. ಒಂದು ನೊಣವು ಅದರಲ್ಲಿ ಬಿದ್ದು ಒದ್ದಾಡುತ್ತಿತ್ತು. ಟೀ ಕಪ್‌ನಲ್ಲಿ ಬಿರುಗಾಳಿ ಹೊಕ್ಕಂತಿತ್ತು.

ಎಷ್ಟು ಅಂದವಾಗಿಯೂ ಕ್ರಮಬದ್ಧವಾಗಿಯೂ ಅಲಂಕರಿಸಿಡಲಾಗುತ್ತಿದ್ದ ಒಂದು ಕೋಣೆಯಾಗಿತ್ತದು !

'ಮೇಟ್ರನ್' ಮೇರಿ ಮೆಲ್ಲನೆ ಕೂಗಿದಳು.

ದೊಡ್ಡ ಕಪ್ಪೆಯೊಂದು ಸತ್ತು ಅಂಗಾತನಾಗಿ ಬಿದ್ದಿರುವಂತೆ ಹೆಲೆನ್ ಸಿಂಗ್ ಮಂಚದ ಮೇಲೆ ಬಿದ್ದಿದ್ದರು. ಆಕೆಯ ಮೊಣಕಾಲುಗಳು ನಗ್ನವಾಗಿದ್ದವು. ತಲೆಗೂದಲು ತಲೆದಿಂಬಿನ ಮೇಲೆ ಹರಡಿಕೊಂಡಿದ್ದವು. ಆಕೆಯ ಮುಖದಲ್ಲಿ

ಮುಂಚಿನ ಆಹ್ಲಾದವೋ, ಪ್ರಸನ್ನತೆಯೋ ಇಲ್ಲ. ಕಣ್ಣಿನ ಕೆಳಭಾಗದಲ್ಲೆಲ್ಲಾ ಕಪ್ಪು ಉಂಗುರಗಳು ಮೂಡಿದ್ದವು. ಕಣ್ಣಿನ ರೆಪ್ಪೆಗಳು ಅರ್ಧ ನಿಮೀಲಿತವಾಗಿದ್ದವು. ಯಾರನ್ನೋ ನೋಡಬೇಕೆಂದು ಅವು ಸ್ವಲ್ಪವೇ ತೆರೆದುಕೊಂಡಿದ್ದವು.

"ಮೇಟ್ರನ್" ಮೇರಿ ದನಿ ಎತ್ತರಿಸಿ ಕೂಗಿದಳು.

ಸ್ಲೋ ಮೋಷನ್ ಸಿನಿಮಾದಲ್ಲೆಂಬಂತೆ ಹೆಲೆನ್ ಸಿಂಗ್ ಮೆಲ್ಲನೆ ಎದ್ದರು. ಬಹಳ ಪ್ರಯಾಸದಿಂದ ಕಣ್ಣುಗಳನ್ನು ತೆರೆದು ಮೇರಿಯನ್ನು ನೋಡಿ ಹೇಳಿದರು:

"ನಾನೂ ಹಾಗೇ ಮಲಗಿದ್ದೆ, ಜೊಂಪು ಹತ್ತಿತ್ತು."

"ನಾನು ಮಿಸ್ಟರ್ ಆಚಾರಿಗೆ ಒಂದು ಅಪ್ಲಿಕೇಷನ್ ಕೊಟ್ಟೆ." ಮೇರಿ ಹೇಳಿದಳು.

"ಒಳ್ಳೆಯದಾಯಿತು. ಬಹಳ ಒಳ್ಳೆಯದಾಯಿತು." ಆಕೆಯ ಬಾಯಿಂದ ಬಂದ ಮಾತು ಅಲ್ಲವೇ ಆಗಿತ್ತು.

ಮೇಟ್ರನ್ ಮತ್ತೆಯೂ ಮಂಚದ ಮೇಲೆ ಉರುಳಿಕೊಂಡರು.

ಮೇರಿ ತನ್ನ ಕೊಠಡಿಯನ್ನು ಪ್ರವೇಶಿಸಿದಳು. ಹೊಸದಾಗಿ ಬಂದಿದ್ದ ಸಿಸ್ಟರ್ ಅಲ್‌ಫೋನ್ಸ ಬೈಬಲನ್ನು ಓದುತ್ತಿದ್ದಳು. ಅವಳು ಯಾರೊಂದಿಗೂ ಹೆಚ್ಚು ಮಾತಾಡುತ್ತಿರಲಿಲ್ಲ. ಎಲ್ಲಿಗೂ ಹೋಗುತ್ತಲೂ ಇರಲಿಲ್ಲ. ಅವಳಿಗೆ ಬೇರೆ ಯಾರೂ ಸ್ನೇಹಿತರಿರಲಿಲ್ಲ. ಯಾವಾಗಲೂ ಪ್ರಾರ್ಥನೆ, ವ್ರತ ಮಾಡುತ್ತಿರುತ್ತಾಳೆ. ಅವಳು ಅದಕ್ಕೆಂದೇ ಸೃಷ್ಟಿಸಲ್ಪಟ್ಟವಳಂತೆ ಅವಳು ನಡೆದುಕೊಳ್ಳುತ್ತಿದ್ದಳು. ಆಡಂಬರ ವಸ್ತುಗಳಲ್ಲೋ, ವಸ್ತ್ರಗಳಲ್ಲೋ ಯಾವುದೇ ಬಗೆಯ ಮೋಹವೂ ಅವಳಿಗಿರಲಿಲ್ಲ. ಅವಳು ಆಹಾರವನ್ನು ತೆಗೆದುಕೊಳ್ಳುತ್ತಿದ್ದುದೂ ಯಾರಿಗೋಸ್ಕರವೋ ಎಂಬಂತಿತ್ತು.

ಮೇರಿ ನಿದ್ದೆ ಮಾಡಿ ಎದ್ದು, ಮಿಂದು, ಯೂನಿಫಾರಂ ಧರಿಸಿ ನೈಟ್‌ಡ್ಯೂಟಿಗೆ ಹೊರಟಳು. ನೈಟ್ ಡ್ಯೂಟಿಯವರನ್ನ ಹತ್ತಿಸಿಕೊಂಡು ಟೆಂಪೋ ವ್ಯಾನ್ ಓಡಿತು.

ಮೇರಿಗೆ ಅಂದು ಯಾವುದೇ ಉತ್ಸಾಹವಿರಲಿಲ್ಲ. ಸುಮ್ಮನೆ ಕೋಣೆಯಲ್ಲೇ ಕುಳಿತಿರಲು ಅವಳಿಗೆ ತೋರುತ್ತಿತ್ತು. ಆದರೆ ವಾರ್ಡ್‌ಗೆ ಬಂದಾಗ ಅವಳ ಉತ್ಸಾಹವು ವರ್ಧಿಸಿತು. ಮಿಸ್ಟರ್ ಆಚಾರಿಯ ರೋಗಿ - ಹೊಟ್ಟೆಯ ಆಪರೇಷನ್ ಆಗಿದ್ದವನು - ಸೀರಿಯಸ್ ಆಗಿ ಮಲಗಿದ್ದನು. ಡ್ಯೂಟಿ ಬದಲಾಗುವಾಗ ಸಿಸ್ಟರ್, ಮೇರಿಯೊಂದಿಗೆ ಹೇಳಿದಳು.

"ಮಗಳೆ, ಆ ರೋಗಿಯನ್ನು ಚೆನ್ನಾಗಿ ನೋಡಿಕೊಳ್ಳಬೇಕು. ಎಷ್ಟೇ ನೋಡಿಕೊಂಡರೂ, ಬೆಳಕು ಹರಿಯುವವರೆಗೆ ಆತನ ವಿಷಯ ಏನೂ ಹೇಳಲಾಗುವುದಿಲ್ಲ ಅಂತ ನನಗೆ ಅನ್ನಿಸುತ್ತದೆ."

"ಆತನಿಗೇನೂ ಆಗುವುದಿಲ್ಲ" ಮೇರಿ ಹೇಳಿದಳು.

"ಹುಂ ಅದೇನು ಹಾಗನ್ನುತ್ತೀ ?"

"ಮಿಸ್ಟರ್ ಆಚಾರಿ ಮಾಡಿದ ಆಪರೇಷನ್ ಅಲ್ಲವೇ ? ಇದುವರೆಗೂ ಹಾಗೆ ನಡೆದ ದಾಖಲೆ ಇಲ್ಲವಲ್ಲಾ ?"

"ಸರಿಯೇ. ಆದರೆ ಮಗಳೇ, ಒಂದೊಂದು ಸಲ ದೇವರೇ ಒಂದು ಆಪರೇಷನ್ ಮಾಡಿದರೂ.... " ಅವಳು ಅರ್ಧದಲ್ಲೇ ನಿಲ್ಲಿಸಿದಳು. ಅನಂತರ ಹೊರಟು ಹೋಗುತ್ತಾ ಹೇಳಿದಳು: "ಹೊತ್ತಾಗುತ್ತಿದೆ. ಗುಡ್‌ನೈಟ್."

ಇಷ್ಟರಲ್ಲೇ ರೋಗಿಗೆ ಅನಿಷ್ಟ ಸಂಭವಿಸಲಿದೆಯೆಂಬ ಸ್ಥಿತಿಯಲ್ಲಿದ್ದರೂ ವಾರ್ಡ್ ಸಾಧಾರಣದಂತೆ ಶಾಂತವಾಗಿತ್ತು. ಡ್ಯೂಟಿರೂಮಿನಲ್ಲಿ ಮೇರಿಗೆ ಒಂದು ನಿಮಿಷ ಕುಳಿತುಕೊಳ್ಳಲೂ ಸಹ ಆಗಲಿಲ್ಲ. ಅವಳು ರೋಗಿಯ ಬಳಿಗೆ ಬಂದಳು.

ಆ ರೋಗಿಗೆ ಸುಮಾರು ಇಪ್ಪತ್ತು ವರ್ಷವಿರಬೇಕು. ಅವನ ನೆನಪುಗಳೆಲ್ಲಾ ಪರಲೋಕದಲ್ಲೇ ಸಂಚರಿಸುತ್ತಿರುವಂತೆ ಅವನ ಕಣ್ಣುಗಳು ಸಾರಿ ಹೇಳುತ್ತಿದ್ದವು. ಎರಡು ಕೈಗಳಿಗೂ ಡ್ರಿಪ್ಸ್ ಏರಿಸಲಾಗಿತ್ತು. ಒಂದರಲ್ಲಿ ರಕ್ತ ಇನ್ನೊಂದರಲ್ಲಿ ಮೈನ್‌ಟೆನನ್ಸ್ ಫ್ಲೂಯಿಡ್. ಮೂಗಿನಲ್ಲೂ, ಮೂತ್ರನಾಳಗಳಲ್ಲೂ ಟ್ಯೂಬ್‌ಗಳನ್ನು ಹಾಕಿದ್ದರು. ಅನೇಕ ಟ್ಯೂಬ್‌ಗಳ ಒಂದು ಯಂತ್ರದ ಮನುಷ್ಯನಂತೆ ಅವನು ಮಲಗಿದ್ದನು. ಅವನ ತಾಯಿಯಾಗಿರಬೇಕು, ಒಬ್ಬ ಬಡಹೆಂಗಸು, ಅಳುವುದಕ್ಕಾಗಲಿ, ಏನಾದರೂ ಮಾಡಲಾಗಲಿ ತೋಚದೆ ಮುಖ ಊದಿಸಿಕೊಂಡು ಸೈಡ್ ಸ್ಟೂಲ್‌ನಲ್ಲಿ ಕುಳಿತಿದ್ದಳು.

ಅರ್ಧರ್ಧ ಗಂಟೆಗೂ ಮೇರಿ ಪಲ್ಸ್ ರೆಕಾರ್ಡ್ ಮಾಡುತ್ತಿದ್ದಳು. ಬ್ಲಡ್ ಪ್ರೆಷರ್ ನೋಡುವ ಯಂತ್ರದೊಂದಿಗೆ ಹೌಸ್ ಸರ್ಜನ್ ರೋಗಿಯ ಸುತ್ತಲೂ ವೇಗವಾಗಿ ನಡೆದಾಡುತ್ತಿದ್ದನು.

ಹೌಸ್ ಸರ್ಜನ್ ಹೊಸದಾಗಿ ಪೋಸ್ಟಿಂಗ್ ಆಗಿದ್ದ ಮನುಷ್ಯನು. ಏನಾದರೂ ಮಾಡಲೇಬೇಕೆಂಬ ಹಟ ಅವನ ಒಂದೊಂದು ಕೃತ್ಯದಲ್ಲೂ ಕಾಣಿಸುತ್ತಿತ್ತು. ಆರಂಭ ಶೂರತ್ವವು ಅವನ ಒಂದೊಂದು ಕೆಲಸದಲ್ಲೂ ಪ್ರತಿಬಿಂಬಿಸುತ್ತಿತ್ತು.

"ಎಲೆಕ್ಟ್ರೈಸ್ ಇಂಬಾಲೆನ್ಸ್" ರೋಗಿಯ ಸ್ಥಾಯಿಯಾದ ಅವಸ್ಥೆಯನ್ನು ಹೌಸ್ ಸರ್ಜನ್ ಯಾರೊಂದಿಗೂ ಅಲ್ಲವೆಂಬಂತೆ ಮಧ್ಯೆ ಮಧ್ಯೆ ವಿವರಿಸಿ ಹೇಳುತ್ತಿದ್ದನು.

ಅರ್ಧರಾತ್ರಿಯಾದಾಗ ರೋಗಿಯ ಶ್ವಾಸೋಚ್ಛ್ವಾಸವು ಮಂದಗತಿಯಲ್ಲಿ ಸಾಗುತ್ತಿತ್ತು.

ಕೃತ್ರಿಮ ಶ್ವಾಸೋಚ್ಛ್ವಾಸದ ಉಪಕರಣದೊಂದಿಗೆ ಹೌಸ್ ಸರ್ಜನ್ ಬಂದನು. ಆರ್ಟಿಫಿಷಿಯಲ್ ರೆಸ್ಪಿರೇಷನ್ ಕೊಡಬೇಕಾಗಿ ಬರುತ್ತದೆ. ಅದಕ್ಕೆ ಬೇಕಾದ ಸಿದ್ಧತೆಗಳು ಪ್ರಾರಂಭವಾದವು.

ಹೌಸ್ ಸರ್ಜನ್‌ನೂ, ಸಿಸ್ಟರ್ ಮೇರಿಯೂ ಒಬ್ಬೊಬ್ಬರು ಎರಡೆರಡು ಗಂಟೆಗಳಂತೆ ಡ್ಯೂಟಿ ಮಾಡಲು ತೀರ್ಮಾನಿಸಿದರು.

ಒಂದೂವರೆ ಗಂಟೆ ಹೊಡೆದಿತ್ತು.

ರೋಗಿಯ ಮೂಗನ್ನೂ ಬಾಯನ್ನೂ ಮೌತ್‌ಪೀಸ್‌ನ ಒಳಕ್ಕೆ ಮಾಡಿ, ಅದನ್ನು ಅದುಮಿ ಹಿಡಿದು ಉಬ್ಬಿ ಬರುತ್ತಿರುವ ಬೆಲೂನ್ ಅನ್ನು ಹೌಸ್ ಸರ್ಜನ್ ಒತ್ತಲು ಪ್ರಾರಂಭಿಸಿದನು. ಜೀವದ ಅಣುವಿನಂತೆ ಪ್ರಾಣವಾಯು ರೋಗಿಯ ಶ್ವಾಸನಾಳವನ್ನೂ ಪ್ರವೇಶಿಸಿತು. ರೋಗಿಯ ಬಿಳಿಚಿದ ಮುಖದಲ್ಲಿ ನಸುಗೆಂಪು ಪ್ರತ್ಯಕ್ಷವಾಯಿತು. ನಿರ್ಜೀವವಾದ ಅವನ ಕಣ್ಣುಗಳಲ್ಲಿ ಪ್ರಕಾಶವು ಬಿರಿಯುತ್ತಿದೆ. ಪ್ರತ್ಯಾಶೆಯ ಗಾನವು ವಾರ್ಡ್‌ನಲ್ಲೆಲ್ಲಾ ಹರಿದು ಹೋಗುತ್ತಿತ್ತು.

ಎರಡು ಗಂಟೆಗಳ ಕಾಲ ಕಳೆದಾಗ ಹೌಸ್ ಸರ್ಜನ್ ಕ್ಷೀಣಗೊಂಡನು. ಆವೇಳೆಗೆ ಸರದಿಯಂತೆ ಮೇರಿ ಬಂದಳು. ಮೇರಿಯು ಒಂದು ಮಗುವನ್ನು

ತೆಗೆದುಕೊಳ್ಳುವಂತೆ ಹೌಸ್ ಸರ್ಜನ್‌ನ ಕೈಗಳಿಂದ ಅಂಬು ಬ್ಯಾಗ್‌ನ್ನು ತನ್ನ ಕೈಯಲ್ಲಿ ತೆಗೆದುಕೊಂಡಳು. ರೋಗಿಯ ಪಕ್ಕದಲ್ಲಿ ಕುಳಿತು ಪ್ರೀತಿಪೂರ್ವಕವಾಗಿ ಅವನ ಮೇಲೆ ದಯಾದೃಷ್ಟಿ ಬೀರುತ್ತಾ ಮೇರಿಯು ಬೆಲೂನ್ ಒತ್ತಲು ಪ್ರಾರಂಭಿಸಿದಳು.

ಆದರೆ ರೋಗಿಯ ಆ ಸುಖಾವಸ್ಥೆಯು ಬಹು ಹೊತ್ತು ಮುಂದುವರೆಯಲಿಲ್ಲ. ಆಷಾಢ ಮಾಸದಲ್ಲಿನ ಬಿಸಿಲಿನಂತೆ ಅದೆಲ್ಲವೂ ಇದ್ದಕ್ಕಿದ್ದಂತೆ ಮಾಯವಾಯಿತು. ಕಾರ್ಮೋಡಗಳು ವಾರ್ಡ್‌ನ ಮೇಲ್ಭಾಗದಲ್ಲಿ ನೇತಾಡುತ್ತಿತ್ತು.

ಅವಿಶ್ರಾಂತಳಾಗಿ ಕುಳಿತಂತೆಯೇ ಮೇರಿಯು ಕೆಲಸವನ್ನು ಮುಂದುವರೆಸಿದಳು. ಒಂದು ರಾತ್ರಿ ಅವಳು ಪಡುವ ಕಷ್ಟದಿಂದ ಒಂದು ಜೀವವನ್ನು ರಕ್ಷಿಸುವುದು ಸಾಧ್ಯವಿದ್ದಲ್ಲಿ ಅದು ಅವನಿಗೆ ಪುನರ್ಜನ್ಮವನ್ನು ನೀಡಿದಂತಾಗುತ್ತದೆ.

ಎರಡು ಗಂಟೆಯ ಕಾಲ ಬಿಡುವಿಲ್ಲದಂತೆ ಉಪಕರಣವನ್ನು ಚಾಲೂ ಮಾಡಿ ಮೇರಿಯು ಸುಸ್ತಾದಳು. ಆದರೆ ಅವಳಿಗೇ ಆ ವಿಷಯ ಗೊತ್ತಾಗಿರಲಿಲ್ಲ.

ಆಯಾ ಬಂದು ಹೇಳಿದಳು.

"ಹೌಸ್ ಸರ್ಜನ್ ನಿದ್ದೆ ಮಾಡುತ್ತಿದ್ದಾರೆ."

"ಸರಿ. ಆತನನ್ನು ಎಬ್ಬಿಸಬೇಡಿ. ಆತನಿಗೆ ತಾನಾಗಿಯೇ ಎಚ್ಚರವಾಗುವವರೆಗೂ ನಾನೇ ನೋಡಿಕೊಳ್ಳುತ್ತೇನೆ."

ಬೆಳಗಿನ ಜಾವದ ಸಮಯ ಬರುವ ವೇಳೆಗೆ ಒಂದೇ ಸಮನಾಗಿ ಮೇರಿಯು ಕುಳಿತು ರೋಗಿಗೆ ಕೃತ್ರಿಮ ಶ್ವಾಸೋಚ್ಛ್ವಾಸ ನೀಡಿದ್ದಳು. ಅವಳ ಕೈಕಾಲುಗಳು ಸೋತು ಹೋಗಿದ್ದವು. ತಲೆ ಭಾರವೆನಿಸುತ್ತಿತ್ತವಳಿಗೆ. ಕಣ್ಣುಗಳಲ್ಲಿ ಕತ್ತಲೆ ಕವಿದಿತ್ತು. ಕಾಲುಗಳು ನೆಲದ ಮೇಲಿವೆಯೇ ಎಂದು ಅವಳಿಗೆ ಸಂದೇಹವಾಯಿತು.

ರೋಗಿಗಿಂತ ಮೇರಿಯೇ ಮೃತಪ್ರಾಯಳಾಗಿದ್ದಳು.

ಮೇರಿಯ ಶುಶ್ರೂಷೆಯಿಂದಾಗಿ ಬೆಳಗಿನ ಜಾವಕ್ಕಿಂತ ಮುಂಚೆಯೇ ರೋಗಿ ಸಾಯಲಿಲ್ಲ ಅಷ್ಟೆ.

ಹೌಸ್ ಸರ್ಜನ್ ತೋರಿಸಿದ ಔದಾಸೀನ್ಯ, ಬೇಜವಾಬ್ದಾರಿಗಳಲ್ಲಿ ಮೇರಿಗೆ ಯಾವುದೇ ಬಗೆಯ ತಿರಸ್ಕಾರ ತೋರಲಿಲ್ಲ. ಆಕ್ಷೇಪಣೆಯೂ ಇಲ್ಲ. ರೋಗಿ ಮೃತ್ಯುವಿನ ಬಾಯಿಯಿಂದ ಹೊರಬಿದ್ದಾಗ ಅವಳು ಎಲ್ಲವನ್ನೂ ಮರೆತಳು.

ಬೆಳಗಿನ ಜಾವ ಬಂದು ಡ್ಯೂಟಿ ಸರ್ಜನ್ ರೋಗಿಯನ್ನು ಥಿಯೇಟರ್‌ಗೆ ವರ್ಗಾಯಿಸಿದನು.

ಮಾರನೆಯ ದಿನ ಮೇರಿ ನೈಟ್‌ಡ್ಯೂಟಿಗೆಂದು ವಾರ್ಡ್‌ಗೆ ಬಂದೊಡನೆಯೇ ಆ ಮಂಚದ ಬಳಿಗೇ ಹೋದಳು. ಅಷ್ಟು ಹೊತ್ತಿಗೆ, ರೋಗಿಯ ಗಂಟಲಿಗೆ ಆಪರೇಷನ್ ಮಾಡಿ ಆರ್ಟಿಫಿಷಿಯಲ್ ರೆಸ್ಪಿರೇಟರ್ ಜೋಡಿಸಿದ್ದರು. ಎರಡು ಗಂಟೆಗಳಷ್ಟು ಸಮಯ ಕಳೆದರೆ ಒಬ್ಬ ಡಾಕ್ಟರೂ, ಒಬ್ಬ ನರ್ಸೂ ಒಬ್ಬರಾದ ಮೇಲೊಬ್ಬರಂತೆ ರೋಗಿಯ ಶುಶ್ರೂಷೆ ಮಾಡಬೇಕು. ಇನ್ನು ಅಂಬು ಬ್ಯಾಗ್* ತಾನಾಗಿಯೇ ಉಬ್ಬಿ, ಮುಚ್ಚಿಕೊಳ್ಳುತ್ತದೆ. ಆದರೆ ಶ್ವಾಸಗತಿಯನ್ನು ನಾಡಿಮಿಡಿತವನ್ನೂ ಆಕ್ಸಿಜನ್‌ನ

---

* ಅಂಬು ಬ್ಯಾಗ್: ಕೃತಕ ಉಸಿರಾಟ ಉಪಕರಣದ ಬ್ಯಾಗ್

ಪ್ರಮಾಣವನ್ನೂ ದಾಖಲೆಮಾಡಬೇಕು. ಒಂದೇ ಒಂದು ಸ್ವಲ್ಪ ಅಶ್ರದ್ಧೆ ತೋರಿದರೂ ಅವನ ಜೀವ ಹೋಗುವ ಸಾಧ್ಯತೆಯಿದೆ.

ಒಂದು ವಾರ ಹಾಗೆ ಕಳೆಯಿತು.

ರೋಗಿಯ ಕೃತ್ರಿಮ ಶ್ವಾಸೋಚ್ಛ್ವಾಸಕ್ಕೆ ಅಂತ್ಯವಿರುವಂತೆ ತೋರಲಿಲ್ಲ.

ಡ್ಯೂಟಿ ಮಾಡಿ ಮಾಡಿ ಡಾಕ್ಟರ್‌ಗಳೂ, ನರ್ಸ್‌ಗಳೂ ಸುಸ್ತಾಗಿದ್ದರು. ಬೇಸರಗೊಂಡಿದ್ದರು. ಆದರೆ ರೋಗಿಯ ಸ್ಥಿತಿಯಲ್ಲಿ ಯಾವ ಬದಲಾವಣೆಯೂ ಇರಲಿಲ್ಲ. ಅವನ ಸ್ಥಿತಿ ತಾನಾಗಿಯೇ ಒಮ್ಮೆಯಾದರೂ ಉಸಿರಾಡದಂತಿತ್ತು. ರೋಗಿಯ ಇತರ ಸ್ಥಿತಿಗಳು ಹಾಳಾಗಿ ಹೋಗುತ್ತಿದ್ದವು.

ಹತ್ತನೆಯ ದಿನ ರಾತ್ರಿ ಮಿಸ್ಟರ್ ಆಚಾರಿ ವಾರ್ಡ್‌ಗೆ ಬಂದಾಗ ರೋಗಿಯ ಮಂಚದ ಬಳಿ ಬಂದು ನಿಂತು ಹೀಗೆ ಹೇಳಿದರು:

"ಈತನು ನನ್ನನ್ನು ಸೋಲಿಸಲೆಂದೇ ಹುಟ್ಟಿದ್ದಾನೆ. ನನ್ನನ್ನು ಸೋಲಿಸುವುದೇ ಈತನ ಬಾಳಿನ ಪರಮ ಗುರಿಯಂತೆ ಕಾಣುತ್ತದೆ. ಅದು ನೆರವೇರಲಿದೆ."

ಅವರು ಮತ್ತೆ ಹೇಳಿದರು ?

"ಈ ಕೇಸ್ ಕೆಲಸಕ್ಕೆ ಬಾರದ ಒಂದು ಕೇಸ್ ಆಗಿತ್ತು. ಸಾಧಾರಣ ಹೌಸ್ ಸರ್ಜನ್ ಕೈಹಾಕಬೇಕಾದ ಒಂದು ಚಿಕ್ಕ ಆಪರೇಷನ್. ನನ್ನ ಹಣೆಬರೆಹ ಹೀಗಿತ್ತು. ನಾನು ಹಾಗೇ ನಂಬುತ್ತಿರುವುದು. ನನ್ನ ಹಣೆಯಲ್ಲಿ ಇದೇ ಬರೆದಿದ್ದರೆ ಹಾಗೇ ಆಗಲಿ."

ಮೇರಿಯನ್ನು ತಮ್ಮ ತೋರು ಬೆರಳಿನಿಂದ ಮುಟ್ಟುತ್ತಾ ಮಿಸ್ಟರ್ ಆಚಾರಿ ಹೇಳಿದರು.

"ಸಿಸ್ಟರ್ ಈ ಟ್ಯೂಬ್ ತೆಗೆದು ಹಾಕಿ. ಲೆಟ್ ಹಿಮ್ ಡೈ."

ನೆಲಕ್ಕೆ ಅಪ್ಪಳಿಸುತ್ತಾ ಮಿಸ್ಟರ್ ಆಚಾರಿ ಕಾರಿಡಾರ್‌ನಲ್ಲಿ ಮರೆಯಾದರು. ತಮಗಾದ ಪರಾಜಯದಿಂದ ಅವರು ಕುಪಿತರಾಗಿದ್ದರು.

ಮೇರಿ ಮಂಚದ ಬಳಿ ಬಂದಳು.

ರೋಗಿಯು ತನ್ನ ಕ್ಷೀಣವಾದ ಕಣ್ಣುಗಳನ್ನು ತೆರೆದು ನೋಡಿದನು.

ರೋಗಿ ಮೇರಿಯನ್ನು ದಿಟ್ಟಿಸಿ ನೋಡಿದನು. ಮಿಸ್ಟರ್ ಆಚಾರಿ ಹೇಳಿದ್ದು ರೋಗಿಗೆ ಕೇಳಿಸಿರಬಹುದೇ ? ಗಮನವಿಟ್ಟು ಆಲಿಸುತ್ತಿರುವ ರೋಗಿಯ ಕಿವಿಗಳ ಮೂಲಕ ಆಚಾರಿಯ ಮಾತುಗಳು ರೋಗಿಯ ಮೆದುಳನ್ನು ಪ್ರವೇಶಿಸಿರಬಹುದೇ ? ಅವು ರೋಗಿಯ ಮನಸ್ಸಿನಲ್ಲಿ ನಡುಕವನ್ನು ಸೃಷ್ಟಿಸುತ್ತಿವೆಯಲ್ಲವೇ ?

ರೋಗಿಯನ್ನು ಕಂಡರೆ ಅವನು ಯಾವುದಕ್ಕೂ ಸಿದ್ಧನೆಂಬಂತಿತ್ತು. 'ಆಯುಸ್ಸಿನ ಒಂದು ಸಣ್ಣ ಅಣುವಾದರೂ ಉಳಿದಿರುವುದೇ ಆದಲ್ಲಿ ನನ್ನನ್ನು ಒಂದು ನಿಮಿಷ ಈ ಲೋಕದಲ್ಲಿರಲು ಬಿಡು' ಎಂದು ಅವನ ತುಟಿಗಳು ಚಡಪಡಿಸುತ್ತಿವೆಯೇ ? ಸೂಕ್ಷ್ಮವಾಗಿ ಒಣಗಿದ ಆ ತುಟಿಗಳಲ್ಲಿ ಮಂಕಾಗಿ ಮಿಂಚಿ ಮರೆಯಾಗುತ್ತಿರುವುದೇನು ? ಅತಿ ಆಸೆಯು ಪ್ರತಿಫಲಿಸುತ್ತಿದೆಯೇ ? ಅಥವಾ ಅವು ಹಾಗೇ ಮರಗಟ್ಟಿಹೋಗುತ್ತಿವೆಯೇನು ?

ಗಂಟಲನ್ನು ಕತ್ತರಿಸಿ ಶ್ವಾಸನಾಳದೊಳಕ್ಕೆ ಇಳಿಸಿರುವ ಟ್ಯೂಬನ್ನು ತೆಗೆದು ಹಾಕಲು ಮೇರಿಗೆ ಮನಸ್ಸೇ ಬರಲಿಲ್ಲ. ಅವಳ ಕೈಗಳು ನಡುಗಿದವು. ಆ ಟ್ಯೂಬ್ ತೆಗೆದು

ಹಾಕಿದರೆ ರೋಗಿಯು ಸಾಯುತ್ತಾನೆ. ಅದು ತನ್ನ ಕೈಯಿಂದಲೇ ಆಗಬೇಕೇ ಎಂದು ಸಂದೇಹಪಡುತ್ತಾ ಮೇರಿ ಒಂದು ಕ್ಷಣ ನಿಂತಳು.

ಮರಣದ ಸ್ವಿಚ್ ಹಾಕಲು ಮೇರಿ ಹಿಂದೆಗೆದು ನಿಂತಳು.

ಹೌಸ್ ಸರ್ಜನ್‌ಗೆ ಅವಳು ಹೇಳಿದಳು:

"ನೀವೇ ತೆಗೆದುಹಾಕಿ. ನನ್ನಿಂದ ಇದು ಆಗುವುದಿಲ್ಲ."

ಹೌಸ್ ಸರ್ಜನ್ ಕೈಗಳನ್ನು ಮುಂದೆ ತಂದನು. ಬೇಡವೆಂದು ಹೇಳಲು ಮೇರಿ ಚಡಪಡಿಸಿದಳು. ಆದರೆ ಹೌಸ್ ಸರ್ಜನ್ ತನ್ನ ಕೈ ಹಿಂದೆಗೆದುಕೊಂಡನು. ರೋಗಿಯ ಜೀವಜ್ಯೋತಿಯನ್ನು ನಂದಿಸಲು ಅವನೂ ಹಿಂದೆಗೆಯುತ್ತಿದ್ದಾನೆಯೇ ?

"ರೋಗಿ ಸಾಯುವ ಹಾಗಿದ್ದರೆ ಸಾಯಲಿ. ನಾವು ನಮ್ಮ ಡ್ಯೂಟಿ ಮಾಡೋಣ ? ನಿಮಗೂ ಇದು ಒಪ್ಪಿಗೆಯೇ ಡಾಕ್ಟರ್!" ಮೇರಿ ಹೌಸ್ ಸರ್ಜನ್ ಅನ್ನು ಕೇಳಿದಳು.

"ಸರಿ" ಹೌಸ್ ಸರ್ಜನ್ ಹೇಳಿದನು. ಆದರೆ ಅವನು ನಿರ್ವಿಕಾರನಾಗಿದ್ದನು. ಮೇರಿಯಾದರೋ ಉದ್ವೇಗಭರಿತಳಾಗಿದ್ದಳು.

ಹಾಗೆ ಅವರಿಬ್ಬರೂ ಮೇರಿಯೂ ಹೌಸ್ ಸರ್ಜನೂ-ಒಬ್ಬರ ನಂತರ ಒಬ್ಬರಂತೆ ಡ್ಯೂಟಿ ಮಾಡುತ್ತಿದ್ದಂತೆ ಬೆಳಗಾಯಿತು.

ಹಗಲು ಡ್ಯೂಟಿಗೆ ನರ್ಸುಗಳು ವಾರ್ಡ್‌ಗೆ ಬಂದರು. ಮೇರಿ ಡ್ಯೂಟಿ ಚಾರ್ಜ್ ಕೊಡುತ್ತಿದ್ದಳು. ಬಹುಶಃ ಅವನು ಬದುಕುತ್ತಾನೇನೊ ?

ರೋಗಿಯ ಕಡೆ ಕೈ ತೋರಿಸುತ್ತಾ ಚಾರ್ಜ್ ತೆಗೆದುಕೊಂಡ ಸ್ಟಾಫ್ ನರ್ಸ್‌ನೊಂದಿಗೆ ಮೇರಿ ಹೇಳಿದಳು. "ಸಾಧ್ಯವಾದಲ್ಲಿ, ನೀನು ಅವನಿಗೆ ಧೈರ್ಯ ನೀಡು. ಜೀವನ ಮರಣದ ವಿಷಯವಲ್ಲವೇ ?"

ರೋಗಿಯನ್ನು ಮತ್ತೊಮ್ಮೆ ತಿರುಗಿ ನೋಡುತ್ತಾ ಮೇರಿ ವಾರ್ಡ್‌ನಿಂದ ಹೊರಟು ಹೋದಳು.

ಆದರೆ ಮೇರಿ ಕಾರಿಡಾರ್‌ನಲ್ಲಿ ಮರೆಯಾಗುವುದಕ್ಕಿಂತ ಮುಂಚೆಯೇ ಗಂಟಲಿನಲ್ಲಿ ಟ್ಯೂಬ್‌ನೊಂದಿಗೇ ಆ ರೋಗಿಯು ಕೊನೆಯುಸಿರೆಳೆದನು. ಆ ಕೃತ್ರಿಮ ಉಸಿರು ಸಹ ನಿಂತು ಹೋಯಿತು.

ಆ ರೋಗಿಯನ್ನು ರಾತ್ರಿಹಗಲೆನ್ನದೆ ಶುಶ್ರೂಷೆ ಮಾಡಿದ ಫಲವು ಎರಡು ದಿವಸಗಳು ಕಳೆದ ನಂತರ ಮೇರಿಗೆ ಲಭಿಸಿತು.

ಆ ಫಲವು ಅವಳಿಗೆ ಶಿಕ್ಷೆಯ ರೂಪದಲ್ಲಿ ಲಭಿಸಿತು. ಎರಡು ವಾರದವರೆಗೆ ಸಸ್ಪೆನ್‌ಷನ್‌ನ ರೂಪದಲ್ಲಿ.

ಮಿಸ್ಟರ್ ಆಚಾರಿಯ ಆಜ್ಞೆಯನ್ನು ಉಲ್ಲಂಘಿಸಿದ್ದೇ ಅವಳು ಮಾಡಿದ ತಪ್ಪು.

ಮಿಸ್ಟರ್ ಆಚಾರಿ ಆಜ್ಞೆಮಾಡಿದ ಒಡನೆಯೇ ಮೇರಿ ಆ ರೋಗಿಯ ಗಂಟಲಿನಿಂದ ಟ್ಯೂಬ್ ತೆಗೆದು ಹಾಕಿರಲಿಲ್ಲ. ಅದು ಅವಳು ಮಾಡಿದ ಘೋರವಾದ ಅಪರಾಧವಾಗಿತ್ತು.

# ಮೂವತ್ತು

ಎಂ.ಬಿ.ಬಿ.ಎಸ್‌ನ ಕೊನೆಯ ವರ್ಷದ ಪರೀಕ್ಷೆಯು ಪ್ರಾರಂಭವಾಯಿತು. ಅಂತಿಮ ನಿರ್ಣಯದ ಈ ಪರೀಕ್ಷೆಯನ್ನು ಪಾಸಾದರೆ ಡಾಕ್ಟರಾದಂತೆಯೇ. ಆದರೆ ಇದು ಕಷ್ಟಕರವಾದದ್ದು. ಬಹುಗಟ್ಟಿಗರೂ, ಕಷ್ಟಪಟ್ಟು ಓದುವವರೂ, ಬುದ್ಧಿವಂತರೂ ಆದ ವಿದ್ಯಾರ್ಥಿಗಳೇ ಈ ಪರೀಕ್ಷೆಯಲ್ಲಿ ಫೈಲ್ ಆಗಿರುವುದುಂಟು. ಸರ್ಜರಿ, ಮೆಡಿಸಿನ್, ಗೈನಕಾಲಜಿ ಎಲ್ಲವನ್ನು ಮುಗಿಸಿ ದಾಟ ಹೋಗಬೇಕಾದದ್ದು ಇಲ್ಲೇನೇ. ಇವರನ್ನು ಪರೀಕ್ಷಿಸಲು ಬರುವ ತಜ್ಞ ಪ್ರೊಫೆಸರ್‌ಗಳಿಗೆ ಒಬ್ಬ ಮೆಡಿಕೋನಿಗೆ ಏನೆಲ್ಲಾ ಗೊತ್ತು ಎಂದು ತಿಳಿದುಕೊಳ್ಳುವ ಬದಲು ಏನು ಗೊತ್ತಿಲ್ಲ ಎಂದು ಕಂಡು ಹಿಡಿಯುವ ಬುದ್ಧಿಯೇ ಹೆಚ್ಚಾಗಿರುತ್ತದೆ. ಇದು ಒಂದು ಸಾಧಾರಣ ಪರೀಕ್ಷೆಯಲ್ಲ. ಗೊತ್ತಿದೆ ಎಂದು ವ್ಯಕ್ತವಾಗಿ ತಿಳಿಸಬೇಕಾಗಿ ಬರುವ ಅಗ್ನಿಪರೀಕ್ಷೆ ಅಷ್ಟೆ.

ದೇವದಾಸ್ ಕ್ಯಾಲೆಂಡರನ್ನು ನೋಡುತ್ತಿದ್ದನು. ಪರೀಕ್ಷೆ ಪ್ರಾರಂಭವಾಗಲು ಇನ್ನೂ ಹದಿನೆಂಟೇ ದಿನಗಳಿವೆ. ದೇವದಾಸ್ ತನ್ನ ಡೈರಿಯನ್ನು ತೆರೆದು ಮತ್ತೆ ಟೈಮ್ ಟೇಬಲ್ ಬರೆಯಲು ಪ್ರಾರಂಭಿಸಿದನು. ಕಳೆದ ಮೂರು ದಿನಗಳಿಂದ ದೇವದಾಸ್ ಟೈಮ್ ಟೇಬಲ್ ಬರೆಯುತ್ತಲೇ ಇದ್ದನು. ಬರೆಯುವನು, ಅಳಿಸಿ ಹಾಕುವನು. ಮತ್ತೆ ಬರೆಯುವನು. ಬರಲಿರುವ ಹದಿನೆಂಟು ದಿವಸಗಳಲ್ಲಿ ಸರ್ಜರಿ, ಮೆಡಿಸಿನ್, ಗೈನಕಾಲಜಿ, ಪ್ರಿವೆಂಟಿವ್ ಅಂಡ್ ಸೋಷಿಯಲ್ ಮೆಡಿಸಿನ್, ಆಫ್ತಮಾಲಜಿ ಎಂಬೀ ಐದು ವಿಷಯಗಳನ್ನು ಕೊನೆಯ ಬಾರಿ ಓದಿ ಕಲಿತು ಮನಸ್ಸಿನಲ್ಲಿ ಅದನ್ನು ಭದ್ರ ಮಾಡಿಕೊಳ್ಳಬೇಕು.

ಸರ್ಜರಿಗೂ, ಮೆಡಿಸಿನ್‌ಗೂ ಐದೈದು ದಿವಸಗಳು, ಗೈನಕಾಲಜಿಗೂ, ಪ್ರಿವೆಂಟಿವ್ ಮೆಡಿಸಿನ್‌ಗೂ ಮೂರು ಮೂರು ದಿವಸಗಳು, ಹಾಗೆ ಹದಿನಾರು ದಿವಸಗಳು ಹೋದವು. ಇನ್ನು ಎರಡು ದಿವಸಗಳು ಆಫ್ತಮಾಲಜಿಗೆ. ದೇವದಾಸ್ ಡೈರಿಯಲ್ಲಿ ಎಲ್ಲವನ್ನೂ ಅಂದವಾಗಿ ಗುರುತು ಹಾಕಿಟ್ಟನು.

ಲವ್ ಅಂಡ್ ಬೆಲ್ಲಿ ಮಹತ್ತಾದ ಸರ್ಜರಿ ಪುಸ್ತಕವನ್ನು ತೆರೆದಿಟ್ಟುಕೊಂಡು ದೇವದಾಸ್ ಅದರಲ್ಲಿ ಕಣ್ಣೋಡಿಸಲು ಪ್ರಾರಂಭಿಸಿದನು. ಅರ್ಧ ಘಂಟೆ ಹೊತ್ತು ಓದಿದನಾದರೂ ಮನಸ್ಸಿಗೆ ಏನೂ ಹತ್ತಲಿಲ್ಲ. ಏಕಾಗ್ರಚಿತ್ತನಾಗಿ ಓದಲು ಆಗುತ್ತಿಲ್ಲ. ನೂರಾರು ಸಮಸ್ಯೆಗಳು ತಲೆಯಲ್ಲಿ ಹೋಗುತ್ತಿವೆ. ಪರೀಕ್ಷೆಗೆ ಬೇಕಾದ ಹಾಲ್‌ಟಿಕೇಟ್ ಇನ್ನೂ ಸಿಕ್ಕೇ ಇಲ್ಲ. ಅದು ಸಿಗಬೇಕಿದ್ದರೆ ಫೀಸ್‌ನ ಬಾಕಿಹಣವನ್ನೂ ಪೂರ್ಣವಾಗಿ ಕಟ್ಟಬೇಕು. ಆದರೆ ಅದಕ್ಕೆ ಹಣವೆಲ್ಲಿದೆ? ಹಣವನ್ನೂ ಸೇರಿಸಬೇಕಾಗಿದೆ. ಪ್ರಿವೆಂಟಿವ್ ಮೆಡಿಸನ್‌ಗೆ ಎರಡು ದಿವಸಗಳ ಹಾಜರಿ ಕಡಿಮೆ ಇದೆ. ಡಿಪಾರ್ಟ್‌ಮೆಂಟ್‌ಗೆ ಹೋಗಿ ಟ್ಯೂಟರನ್ನು ಕಂಡು ಅದನ್ನು ಸರಿಪಡಿಸಬೇಕು.

ಅವನ ದರಿದ್ರ ಮುಖವನ್ನು ನೋಡಬೇಕಾಗುತ್ತೆ. ಅವನ ಬೈಗಳನ್ನು ಕೇಳಬೇಕಾಗುತ್ತದೆ. ಸಿಟಿಯಲ್ಲಿ ತಾನು ಮೆಂಬರಾಗಿರುವ ಫಿಲಂ ಸೊಸೈಟಿಯವರು ಹತ್ತು ದಿವಸಗಳ ಫಿಲಂ ಷೋ ನಡೆಸುತ್ತಿದ್ದಾರೆ. ಅದು ಪ್ರಾರಂಭವಾಗಿದೆ. ಇಷ್ಟು ಶ್ರೇಷ್ಠವಾದ ಕ್ಲಾಸಿಕ್‌ಗಳನ್ನೂ ಜೀವನದಲ್ಲಿ ಇನ್ನೊಮ್ಮೆ ನೋಡಲು ಅವಕಾಶವು ಸಿಗುತ್ತೆಂದು ಹೇಳಲಾಗುವುದಿಲ್ಲ. ಅಂತಹ ಅವಕಾಶ ಕೈಜಾರಿ ಹೋಗುತ್ತಿದೆ. ನೆರಳೂ ಬೆಳಕೂ ಹಾಗೆ ಜಾರಿ ಜಾರಿ ಮರೆಯಾಗಿ ಹೋಗುತ್ತವೆ. ಪರೀಕ್ಷೆಯು ಮುಗಿದಾದ ಮೇಲೆ ಸಿಗುವ ರಜಾ ದಿವಸಗಳನ್ನು ಚೆನ್ನಾಗಿ ಉಪಯೋಗಿಸಿಕೊಳ್ಳಬೇಕು. ತೆಗೆದಿಟ್ಟಿರುವ ಪುಸ್ತಕಗಳನ್ನೆಲ್ಲಾ ಪೂರ್ಣವಾಗಿ ಓದಿ ಮುಗಿಸಬೇಕು. ಸ್ನೇಹಿತರೊಂದಿಗೆ ಕತ್ತಲೆಯಾಗುವವರೆಗೂ ನದೀ ತೀರದಲ್ಲಿ ಕುಳಿತಿರಬೇಕು. ಒಂದು ಬೋಟ್ ಸವಾರಿಯನ್ನು ಏರ್ಪಡಿಸಬೇಕು. ಪರೀಕ್ಷೆ ಮುಗಿದರೆ, ಮೆಡಿಸಿನ್ ಮತ್ತು ಸರ್ಜರಿಯನ್ನು ಮತ್ತೆ ಮತ್ತೆ ಓದಿ ಕಲಿಯಬೇಕು. ಮೂರು ವರ್ಷಗಳು ತನ್ನ ಮುಂದೆ ಹಾದು ಹೋಗಿದ್ದರೂ ಆ ದಿವಸಗಳನ್ನು ತಾನು ಸರಿಯಾಗಿ ಉಪಯೋಗಿಸಿಕೊಳ್ಳಲಿಲ್ಲ. ಉಪಯೋಗಿಸಿಕೊಂಡಿದ್ದಲ್ಲಿ ಈ ವಿಷಯಗಳನ್ನೆಲ್ಲಾ ಕಂಠಪಾಠ ಮಾಡಬಹುದಾಗಿತ್ತು. ಫಂಡಮೆಂಟಲ್ ವಿಷಯಗಳನ್ನೂ ಸಹ ಕಂಠಪಾಠ ಮಾಡಲಿಲ್ಲ. ಇಷ್ಟು ದಿವಸಗಳು ವ್ಯರ್ಥವಾದವು. ಅವು ಒಮ್ಮೆಯೂ ಮರಳಿ ಬರುವುದಿಲ್ಲ.

ದೇವದಾಸ್ ಸಂಕಟಪಡುತ್ತಿದ್ದನು. ಮನಸ್ಸೆನ್ನುವುದು ಲಗಾಮಿಲ್ಲದ ಕುದುರೆಯಂತೆ ಎಲ್ಲೆಲ್ಲೋ ಓಡಿ ಹೋಗುತ್ತದೆ.

ಅವನೆದ್ದು ಕೆಟಲ್‌ನಲ್ಲಿ ನೀರನ್ನು ತುಂಬಿಸಿ ಸ್ಟೌ ಮೇಲಿಟ್ಟನು. ಸ್ಟೌ ಹತ್ತಿಸಿದನು. ಒಂದು ಕಪ್ ಟೀ ಕುಡಿದರೆ ಎಲ್ಲಾ ಸರಿಯಾಗುತ್ತೆ. ಒಂದು ನವೋತ್ಸಾಹವೂ ಉಂಟಾಗುತ್ತೆ.

ಟೀ ಕುಡಿಯುತ್ತಿದ್ದಾಗ ಬಾಗಿಲನ್ನು ಯಾರೋ ತಟ್ಟಿದಂತಾಯಿತು. ಪಕ್ಕದ ಕೋಣೆಯ ಅನಿಲ್ ಕುಮಾರ್ ಬಂದಿದ್ದನು.

"ನೀನು ಓದಿ ಓದಿ ಧ್ವಂಸ ಮಾಡುತ್ತಿರುವ ಹಾಗಿದೆ" ಅನಿಲ್ ಹೇಳಿದನು.

"ಇಲ್ಲ ಕಣಯ್ಯ, ಬೆಳಿಗ್ಗೆಯಿಂದ ಒಂದೇ ಸಮನೆ ಕುಳಿತಿದ್ದೇನೆ. ಒಂದಕ್ಷರ ಸಹ ಓದಲಿಲ್ಲ" ದೇವದಾಸ್ ಸಂಕಟದಿಂದ ಹೇಳಿದನು.

"ನಾನೂ ಅಷ್ಟೆ" ಅನಿಲ್ ನಗುತ್ತಾ ಹೇಳಿದನು. "ಮೆಡಿಸಿನ್ ಬುಕ್ಕನ್ನು ಮುಚ್ಚಿಟ್ಟಾಗ ಇದ್ದಕ್ಕಿದ್ದಂತೆ ಒಂದು ಆಸೆಯುಂಟಾಯಿತು. ಚೆಸ್ ಆಟ ಆಡೋಣ ಅಂತ. ಹಾಗೆ ಕಾತುನ್ ರೂಮಿಗೆ ಹೋಗಿ ಇಲ್ಲಿಯವರೆಗೂ ಆಡುತ್ತಾ ಇದ್ದೆ. ನನ್ನ ಗ್ರಹಚಾರ ಅಲ್ಲದೆ ಇನ್ನೇನಿದು ?"

"ನನ್ನ ಸಬ್ಜೆಕ್ಟ್ಸ್ ಎಲ್ಲ ಹಾಗೇ ಮಿಕ್ಕಿದೆ" ದೇವದಾಸ್ ವ್ಯಥೆಯಿಂದ ಹೇಳಿದನು.

"ನಾನೂ ಮುಟ್ಟಿಲ್ಲ" ಅನಿಲ್ ಎಂದನು.

ಅನಿಲ್ ಕುಮಾರನ ಮಾತುಕತೆಯಲ್ಲಿ, ನಡವಳಿಕೆಯಲ್ಲಿ ಗಾಬರಿಯಾಗಲಿ ಹೆದರಿಕೆಯಾಗಲಿ ಇರಲಿಲ್ಲ. ಅವನ ಸ್ವಭಾವವೇ ಹಾಗೆ. ಪರೀಕ್ಷೆಗಳೆಂದರೆ ಅದು ಅನಿಲ್ ಕುಮಾರ್‌ಗೆ ಸಮಸ್ಯೆಯೇ ಆಗಿರಲಿಲ್ಲ. ಇಲ್ಲಿಯವರೆಗೂ ಒಂದು

ಪರೀಕ್ಷೆಯಲ್ಲೂ ಅವನು ಫೈಲ್ ಆಗಿರಲಿಲ್ಲ. ಇಲ್ಲಿಯವರೆಗೂ ಅಧ್ಯಾಪಕರು ಹೇಳಿಕೊಟ್ಟದ್ದನ್ನೆಲ್ಲಾ ಸಮರ್ಪಕವಾಗಿ ಅದನು ಅರ್ಥಮಾಡಿಕೊಂಡಿದ್ದಾನೆ. ಅವನು ಒಂದು ಕ್ಲಾಸ್ ಸಹ ಮಿಸ್ ಮಾಡಿಕೊಳ್ಳುವುದಿಲ್ಲ. ಅನಿಲ್‌ನ ಜ್ಞಾಪಕಶಕ್ತಿ ಬಹಳ ಚೆನ್ನಾಗಿತ್ತು. ಆದ್ದರಿಂದಲೇ ಅನಿಲ್‌ಗೆ ಪರೀಕ್ಷೆಯನ್ನು ಕಂಡರೆ ಹೆದರಿಕೆ ಇಲ್ಲ. ಅದಕ್ಕೆ ಬದಲಾಗಿ ಪರೀಕ್ಷೆಯೇ ಅವನನ್ನು ಕಂಡರೆ ಭಯಪಡುತ್ತಿತ್ತು.

ಕೆಲವು ವಿದ್ಯಾರ್ಥಿಗಳು ಕಾಲೇಜು ತೆಗೆಯುವುದರೊಂದಿಗೇನೇ ತಮ್ಮ ವ್ಯಾಸಂಗವನ್ನು ಆರಂಭಿಸುವರು. ಪರೀಕ್ಷೆಯ ಹಿಂದಿನ ದಿನದವರೆಗೂ ಅವರು ಓದುವರು. ರೆಸ್ಟೋರೆಂಟ್‌ನಲ್ಲೋ, ಸಿನೆಮಾ ಥಿಯಟರ್‌ಗಳಲ್ಲೋ, ರಿಕ್ರಿಯೇಷನ್ ಕ್ಲಬ್‌ನಲ್ಲೋ ಅವರನ್ನು ಒಮ್ಮೆಯೂ ನೋಡಲಾಗುವುದಿಲ್ಲ. ಪುಸ್ತಕಗಳೊಂದಿಗೇ ಆ ಜನರು ಹುಟ್ಟಿರುತ್ತಾರೆ. ಆದರೆ ಫಲವೇನು ? ಪರೀಕ್ಷೆಯ ಫಲಿತಾಂಶವು ಬಂದಾಗ ಅವರಲ್ಲಿ ಬಹುಜನರು ಫೈಲ್ ಆಗಿರುತ್ತಾರೆ. ಪರೀಕ್ಷೆಯ ಮಾಯಾಜಾಲ ಇದು ಎಂದಲ್ಲದೆ ಇನ್ನೇನು ಹೇಳುವುದು ?

ವರಾಂಡದಲ್ಲಿ ದೊಡ್ಡ ಗಲಾಟೆ ಕೇಳಿಸತೊಡಗಿತ್ತು. ಯಾರೋ ಕ್ರಿಕೆಟ್ ಟೆಸ್ಟ್‌ನ ಅನಿರೀಕ್ಷಿತವಾದ ತಿರುವಿನ ಬಗ್ಗೆ ಜೋರಾಗಿ ಮಾತನಾಡುತ್ತಿದ್ದರು. ಯಾರೋ ಔಟಾಗಿರಬೇಕು.

"ನೋಡು, ಸ್ವಲ್ಪ ರೇಡಿಯೋ ಹಾಕು" ಅನಿಲ್ ಹೇಳಿದನು.

"ಕ್ಷಮಿಸಬೇಕು, ನಾನು ಹಾಕುವುದಿಲ್ಲ" ಮುಖಕ್ಕೆ ಅಪ್ಪಳಿಸಿದಂತೆ ದೇವದಾಸ್‌ನ ಉತ್ತರ ಬಂತು.

ಮನಸ್ಸಿಗೆ ಬೇಜಾರಾಗಿ ಅನಿಲ್ ಕೋಣೆಯನ್ನು ಬಿಟ್ಟು ಹೊರನಡೆದನು. ವರಾಂಡದಲ್ಲಿ ನಡೆಯುತ್ತಿದ್ದ ಗಲಾಟೆಯಲ್ಲಿ ಲೀನವಾಗಿಬಿಟ್ಟನು.

ಅಪರಾಧ ಪ್ರಜ್ಞೆಯಿಂದ ದೇವದಾಸ್ ಪುಸ್ತಕವನ್ನು ಮತ್ತೆ ತೆರೆದು ಓದ ತೊಡಗಿದನು. ಆದರೆ ಅವನಿಗೆ ಓದಲು ಸಾಧ್ಯವಾಗಲಿಲ್ಲ. ಅನಿಲ್ ಕುಮಾರನನ್ನು ತಾನು ಅವಮಾನಿಸಿದೆನೇನೋ ಎಂದು ದೇವದಾಸ್‌ನ ಮನನೊಂದಿತು. ಸಮಯ ಮುಂದುವರೆಯುತ್ತಿತ್ತು. ಮನಸ್ಸು ತಳಮಳಗೊಳ್ಳುತ್ತಿತ್ತು. ಅದು ಪನನ್ನೋ ನೆನೆದು ದುಃಖಿಸುತ್ತಿತ್ತು.

ದೇವದಾಸ್ ಎದ್ದು ಹೊರಬಂದನು.

ಅನಿಲ್ ಕುಮಾರನ ಬಳಿ ಹೋಗಿ ಅವನನ್ನು ಕರೆದುಕೊಂಡು ಕೋಣೆಗೆ ಮರಳಿ ಬಂದನು. ರೇಡಿಯೋ ಹಾಕಿದನು. ಕ್ರಿಕೆಟ್‌ನ ರನ್ನಿಂಗ್ ಕಾಮೆಂಟರಿಯಿಂದ ದೇವದಾಸ್‌ನ ಕೋಣೆ ಮೊಳಗತೊಡಗಿತು.

ಮಧ್ಯಾಹ್ನದವರೆಗೂ ಅವರು ಕಾಮೆಂಟರಿ ಕೇಳುತ್ತಿದ್ದರು.

ಹಸಿವಾದಾಗ ಅವರು ಡೈನಿಂಗ್ ಹಾಲ್‌ಗೆ ಹೋದರು. ನಿದ್ದೆ ಬರದಿರಲೆಂದು ಹಿಂದಿನ ದಿನ ರಾತ್ರಿ ದೇವದಾಸ್ ಊಟ ಮಾಡಿರಲಿಲ್ಲ. ಆದ್ದರಿಂದ ಅವನಿಗೆ ಚೆನ್ನಾಗಿ ಹಸಿವಾಗುತ್ತಿತ್ತು. ಸಾಲದ್ದಕ್ಕೆ ಯಾವುದೋ ಕಾರಣದಿಂದ ಅಂದು ಸ್ಪೆಷಲ್ ಊಟ ಆಗಿತ್ತು.

ಒಂದು ಅಲ್‌ಸೇಷನ್ ನಾಯಿಯಂತೆ ದೇವದಾಸ್ ಗಬಗಬ ಊಟ ಮಾಡತೊಡಗಿದನು.

ದೇವದಾಸ್ ತನ್ನ ಕೋಣೆಗೆ ಮರಳಿ ಬಂದಾಗ ಬಹು ಸುಸ್ತಾಗಿ ಬಿಟ್ಟಿದ್ದನು. ಓದಲೆಂದು ಪುಸ್ತಕವನ್ನು ತೆರೆದಾಗ ನಿದ್ದೆಯು ಅವನ ಕಣ್ಣುಗಳನ್ನು ಆಕ್ರಮಿಸಿತು. ಅವನು ಮಂಚದ ಮೇಲೆ ಮಲಗಿಬಿಟ್ಟನು.

ಅನಂತರ ದೇವದಾಸ್‌ಗೆ ಎಚ್ಚರವಾದಾಗ ಹೊತ್ತು ಬಹಳವಾಗಿತ್ತು. ಗಂಟೆ ಐದು ಹೊಡೆದಿತ್ತು. ತಲೆಭಾರವಾಗಿ ಓಲಾಡುತ್ತಿತ್ತು. ಮನಸ್ಸು ಅಸ್ವಸ್ಥವಾಗಿತ್ತು. ಔದಾಸೀನ್ಯದ ಸೈತಾನ್‌ನು ಬೇಟೆಯಾಡುತ್ತಾ ತನ್ನನ್ನು ಹಿಂಬಾಲಿಸುತ್ತಿರುವಂತೆ ಅವನಿಗೆ ಭಾಸವಾಗುತ್ತಿತ್ತು.

ಒಂದು ಟೀ ಕುಡಿದು ಮನಸ್ಸನ್ನು ಉಲ್ಲಾಸಗೊಳಿಸಿಕೊಂಡು ದೇವದಾಸ್ ಹೊರಕ್ಕಿಳಿದನು. ಅವನು ನೇರವಾಗಿ ನಡೆದು ಹೋಗಿದ್ದು ಗರ್ಲ್ಸ್ ಹಾಸ್ಟೆಲ್‌ಗಾಗಿತ್ತು. ಲಕ್ಷ್ಮಿ ಈಗ ಅಲ್ಲೇ ಇರುವುದು. ಪ್ರತಿವರ್ಷದ ಪರೀಕ್ಷೆಯ ಸಮಯಗಳಲ್ಲಿ ಅವಳು ಹಾಸ್ಟೆಲ್‌ಗೆ ಓಡಿ ಬರುತ್ತಿದ್ದಳು. ಮನೆಯಲ್ಲಿ ಒಬ್ಬಳೇ ಇದ್ದುಕೊಂಡು ಅವಳಿಗೆ ಓದಲು ಸಾಧ್ಯವಿರಲಿಲ್ಲ. ಅಷ್ಟೇ ಅಲ್ಲ, ಅವಳ ತಂದೆ ಅವಳಿಗೆ ಹಾಗೆ ಆಜ್ಞೆ ನೀಡಿದ್ದರು.

ಲಕ್ಷ್ಮಿಯನ್ನು ಕಂಡ ಒಡನೆ ದೇವದಾಸ್‌ನ ಎಲ್ಲಾ ಅಸ್ವಸ್ಥತೆಯೂ ಮಾಯವಾಯಿತು. ಮಿಂಚುಹುಳುವಿನ ಬೆಳಕಿನಂತೆ ಆನಂದಾನುಭೂತಿಯಿಂದ ಅವನ ಮನಸ್ಸು ಮಿಂಚುತ್ತಿತ್ತು.

ಗೆಸ್ಟ್ ರೂಮಿನಲ್ಲಿ ಅವರು ಎದುರು ಬದುರು ಕುಳಿತರು. ದೇವದಾಸ್ ಲಕ್ಷ್ಮಿಯನ್ನು ನೋಡಿದನು. ತನ್ನ ಕಣ್ಣುತುಂಬ ಅವಳನ್ನು ಆಸೆಯಿಂದ ತುಂಬಿಸಿಕೊಂಡನು.

ಅವಳು ತಿಳಿ ನೀಲಿ ಬಣ್ಣದ ಒಂದು ಫ್ಲೈನ್ ಸೀರೆಯನ್ನು ಉಟ್ಟಿದ್ದಳು. ಸೀರೆಯನ್ನು ಬಹಳ ಅಶ್ರದ್ಧೆಯಿಂದ ಉಟ್ಟಂತಿತ್ತು. ಷಾಂಪೂ ಹಚ್ಚಿದ ಚಿನ್ನದ ಬಣ್ಣದ ಅವಳ ತಲೆಗೂದಲು ಗಾಳಿಯಲ್ಲಿ ಹಾರಾಡುತ್ತಿತ್ತು. ಅವಳ ದೊಡ್ಡ ಕಣ್ಣುಗಳಲ್ಲಿ ಪ್ರಕಾಶವಿದ್ದರೂ, ಕಣ್ಣುಗಳಿಂದ ನಿದ್ದೆ ಇನ್ನೂ ಮಾಯವಾಗದ ಗುರುತುಗಳು ಅಲ್ಲಿ ನೆರಳಿನಂತೆ ಹುದುಗಿದ್ದವು. ಉಗುರುಗಳನ್ನೂ ಅವಳು ಕತ್ತರಿಸಿಕೊಂಡಿರಲಿಲ್ಲ. ಕತ್ತಿನಲ್ಲಿ ಎಂದೂ ಕಾಣುವ ಚಿನ್ನದ ಸರ ಅಲ್ಲಿರಲಿಲ್ಲ. ಬರಿದಾದ ಅವಳ ಕತ್ತಿನಲ್ಲಿ ಒಂದು ತೆಳ್ಳನೆಯ ಬಳ್ಳಿಯು ಸುತ್ತಿಹಿಡಿಯುವುದನ್ನು ದೇವದಾಸ್ ತನ್ನ ಊಹೆಯಲ್ಲಿ ಕಂಡನು.

"ಪರೀಕ್ಷೆಯು ಮುಗಿಯುವವರೆಗೂ ನನ್ನನ್ನು ನೋಡಲು ಬರುವುದಿಲ್ಲವೆಂದು ಹೇಳಿದ್ದಿರಲ್ಲವೇ ?" ಲಕ್ಷ್ಮಿ ಕೇಳಿದಳು.

"ಆದರೆ ನನಗೆ ನೋಡಬೇಕೆನ್ನಿಸಿತು. ಬಂದುಬಿಟ್ಟೆ" ದೇವದಾಸ್ ಹೇಳಿದನು.

"ಆದರೆ ನನಗೆ ನೋಡಬೇಕೆಂದಿಲ್ಲ" ಲಕ್ಷ್ಮಿಯ ತುಟಿಗಳಲ್ಲಿ ಒಂದು ತುಂಟ ನಗು ಹರಡಿತು.

"ಸರಿ, ಓದು ಎಲ್ಲಿಯವರೆಗೆ ಬಂದಿದೆ ? ಎಲ್ಲಾ ರಿವೈಸ್ ಮಾಡಿ

ಮುಗಿಸಿರಬೇಕಲ್ಲವೇ ?" ಲಕ್ಷ್ಮಿ ಕೇಳಿದಳು.

"ಇಲ್ಲಿಯವರೆಗೂ ಪುಸ್ತಕವೇ ಮುಟ್ಟಿಲ್ಲ" ದೇವದಾಸ್ ಹೇಳಿದನು.

"ಅದು ಸುಳ್ಳು."

"ನಿನ್ನಾಣೆ ನಿಜ ಲಕ್ಷ್ಮಿ."

ಅದು ನಿಜವಾಗಿತ್ತು. ಲಕ್ಷ್ಮಿಯನ್ನು ಮುಟ್ಟಿ ಸತ್ಯ ಮಾಡಿದರೆ ಅದು ಸುಳ್ಳಾಗಲು ಸಾಧ್ಯವಿರಲಿಲ್ಲ. ಐದು ವರ್ಷಗಳ ಹಿಂದೆಯೇ ಅವರು ಮಾಡಿಕೊಂಡ ಕರಾರಾಗಿತ್ತದು.

"ಸರಿ, ನೀನು ಚೆನ್ನಾಗಿ ಓದಿದ್ದೀಯಾ ?" ದೇವದಾಸ್ ಕೇಳಿದನು.

"ಗೈನಕಾಲಜಿ ಸಂಪೂರ್ಣವಾಗಿ ಅರಗಿಸಿಕೊಂಡಿದ್ದೇನೆ. ಅದರಲ್ಲಿ ರೆಕಾರ್ಡ್ ಬ್ರೇಕ್ ಮಾಡಲೆಂದು ಪ್ಲಾನ್ ಮಾಡಿಕೊಂಡಿದ್ದೇನೆ."

"ಅದು ಆವತ್ತೇ ಹೇಳಿದ್ದೆಯಲ್ಲಾ ? ಡಾಕ್ಟರ್ ತನುಜರ ಗುರು ಚಟ್ಟೋಪಾಧ್ಯಾಯರಿಗಿಂತ ದೊಡ್ಡ ಗೈನಾಕಾಲಜಿಸ್ಟ್ ಆಗುತ್ತೇನೆ ಅಂತ ನನಗೆ ಮಾತು ಕೊಟ್ಟಿದ್ದೆಯಲ್ಲವೇ ?"

"ಆ ಮಾತನ್ನು ನಾನು ನಡೆಸಿಯೇ ತೀರುತ್ತೇನೆ."

"ಭಾರತದಲ್ಲಿ ಚೊಚ್ಚಲ ಹೆರಿಗೆಗೆ ಬಂದವರೆಲ್ಲರ ಮಕ್ಕಳನ್ನೂ, ನೀ ಹೆರಿಗೆ ಮಾಡಿಸಿ ಎತ್ತಿಕೊಳ್ಳುತ್ತೀ. ಹಾಗೆ ಒಬ್ಬ ಭಾರತಮಾತೆಯೆನಿಸಿಕೊಳ್ಳುತ್ತಿ. ಅದು ಖಂಡಿತ."

"ಆ ದೇವರ ಕೃಪೆ ಇದ್ದರೆ..."

"ನಿನಗದರಲ್ಲಿ ನಂಬಿಕೆ ಇದೆಯೇ ?"

"ಯಾವುದರಲ್ಲಿ ?"

"ದೇವರಲ್ಲಿ."

"ಖಂಡಿತ ಇದೆ. ಅಲ್ಲದಿದ್ದರೆ ಈ ಮಕ್ಕಳು ಹೇಗೆ ಹೊರಬರುತ್ತವೆ ? ಪೆಲ್‌ವಿಸ್ ಬ್ರಿಮ್ ಮೂಲಕ ಅವು ಬಿರಿಯುತ್ತವೆ. ದೇವರೇ ?"

"ಹಾಗಿದ್ದರೂ ಯಾಕೆ ಕೆಲ ಮಕ್ಕಳು ಸತ್ತು ಹೋಗುತ್ತವೆ ? ಆಗ ಈ ದೇವರು ಏನು ಮಾಡುತ್ತಿರುತ್ತಾನೆ ?" ದೇವದಾಸ್ ಒಂದು ವಿವಾದಾಸ್ಪದ ವಿಷಯವೆಂಬಂತೆ ಕೇಳಿದನು.

"ಅದು ದ್ರೋಹ."

"ಏನೆಂದೆ ?"

"ದೇವರ ಪ್ರಕೃತಿಯಲ್ಲೂ ಮೋಸಗಳಿವೆ." ಲಕ್ಷ್ಮಿ ಹೇಳಿದಳು.

"ಸರಿ ನೀನೂ, ನಿನ್ನ ದೇವರೂ, ಅವನ ಕೆಲ ಮೋಸಗಳೂ ನನಗೆ ಬೋರ್ ಆಗುತ್ತಿದೆ. ಬಾ, ನನಗೆ ಸ್ವಲ್ಪ ಶುದ್ಧಗಾಳಿಯ ಸೇವನೆ ಮಾಡಬೇಕು. ಹೊರಗೆ ಹೋಗೋಣ."

"ಎಲ್ಲಿಗೆ ?"

"ಅಲ್ಲಿಗೇನೇ ?"

"ನಾನು ಬರೋಲ್ಲಪ್ಪ ನನಗೆ ಹೆದರಿಕೆ ಆಗುತ್ತೆ" ಲಕ್ಷ್ಮಿ ಹೇಳಿದಳು. ಹೊರಗೆ

ಹೋಗಿದ್ದು ಯಾರಿಗಾದರೂ ಗೊತ್ತಾದರೆ.... ?"

"ಥೂ....." ದೇವದಾಸ್ ಗೊಣಗಿದನು.

ಕಾರ್ಡಿಯಾಲಜಿಯನ್ನು ದಾಟಿ, ಮೋರ್ಚರಿಯನ್ನೂ ದಾಟಿ, ಕಪ್ಪು ಕಲ್ಲುಗಳ ಮೆಟ್ಟಿಲುಗಳನ್ನಿಳಿದು ಅವರು ಯಮುನಾನದಿಯ ತೀರಕ್ಕೆ ಬಂದರು.

ನದಿಯಲ್ಲಿ ಪ್ರವಾಹ ಹರಿಳಿಯುತ್ತಿತ್ತು. ಯಾರೋ ಎರಡು ಕೈಗಳಿಂದ ಎಳೆದುಕೊಂಡು ಹೋದಂತೆ ನದಿಯು ಪೂರ್ವದಿಕ್ಕಿಗೆ ಎಳೆಯಲ್ಪಟ್ಟಿತು. ಯಾವುದೋ ಪ್ರೇರಣೆಗೆ ಶರಣಾದಂತೆ ನದಿಯ ಅಲೆಗಳು ಅಡಗಿದ್ದವು. ಮುಳುಗತೊಡಗಿದ ಕೆಂಪುಸೂರ್ಯನ ಮಂದವಾದ ಪ್ರಕಾಶವು ಒಂದು ಸಮಾಧಾನವೆಂಬಂತೆ ಜಲರಾಶಿಯ ಮೇಲೆ ಪ್ರತಿಬಿಂಬಿಸಿತು.

ಸಣ್ಣಗೆ ಕೃಶಳಾಗಿದ್ದ ಮಧ್ಯ ವಯಸ್ಕಳಾದ ಹೆಂಗಸೊಬ್ಬಳೂ, ಬಡಕಲಾಗಿದ್ದ ಮೂರು ನಾಲ್ಕು ಮಕ್ಕಳೂ ನದಿಯ ತೀರದಲ್ಲಿ ಬಟ್ಟೆ ಒಗೆಯುತ್ತಲೂ ಸ್ನಾನ ಮಾಡುತ್ತಲೂ ಇದ್ದರು. ಆರೋಗ್ಯವಿಲ್ಲದಿದ್ದರೂ ನದಿಯ ಜಲವು ಅವರುಗಳಿಗೆ ಕ್ಷಣಿಕವಾದ ಲವಲವಿಕೆಯನ್ನು ಕೊಟ್ಟಿತ್ತು. ಅವರು ಓಡಿಯಾಡುತ್ತಲೂ ಕೈಕಾಲುಗಳನ್ನು ಬಡಿದು ಈಜಾಡಿಯೂ ಆಹ್ಲಾದವನ್ನು ಪ್ರಕಟಿಸಿದರು.

ಏಕಾಂಗಿಯಾದ ಒಬ್ಬ ಬೆಸ್ತನು ಒಂದು ಪುಟ್ಟ ದೋಣಿಯಲ್ಲಿ ಗಾಳ ಹಾಕುತ್ತಿದ್ದಾನೆ. ಅವನ ದೊಡ್ಡ ಟೋಪಿಯು ಅವನನ್ನೂ, ದೋಣಿಯನ್ನು ಪೂರ್ವದಿಕ್ಕಿಗೆ ಬೀಸುತ್ತಿರುವ ಗಾಳಿಯಲ್ಲಿ ಎಳೆದುಕೊಂಡು ಹೋಗುತ್ತಿದೆ.

"ಕುಞ್ಞಮ್ಮ ಏಕಾಂಗಿಯಾಗಿ ಯಾರ ಸಹಾಯವೂ ಇಲ್ಲದೆ ಮಗುವನ್ನು ಹೆತ್ತ ಸ್ಥಳವಿದು. ಇಲ್ಲಿ ಹುಷಾರಾಗಿ ಹೆಜ್ಜೆ ಹಾಕಬೇಕು" ಮರಳಿನ ಹರವಿನತ್ತ ಬೆರಳನ್ನು ಮಾಡಿ ತೋರಿಸುತ್ತಾ ದೇವದಾಸ್ ಹೇಳಿದನು.

"ಈ ಮರಳಿನಲ್ಲೇ ಅವಳು ತನ್ನ ಮಗುವನ್ನು ಜೀವ ಸಹಿತ ಹೂತಿಟ್ಟದ್ದು" ಲಕ್ಷ್ಮಿ ಅವನ ಮಾತಿಗೆ ಜೊತೆಗೂಡಿಸಿದಳು.

"ಪಾಪ, ಕುಞ್ಞಮ್ಮ?" ದೇವದಾಸ್ ಹೇಳಿದನು.

"ಪಾಪ, ಮಗು ಅದಕ್ಕೇನೂ ತಿಳಿಯದಲ್ಲಾ!" ಲಕ್ಷ್ಮಿ ಕೇಳಿದಳು.

"ಬಾ ನಾವು ನದಿಯಲ್ಲಿಳಿಯೋಣ" ದೇವದಾಸ್ ಪ್ರವಾಹವು ಇಳಿದು ಹೋದ ದಾರಿಯಲ್ಲಿ ನಡೆಯುತ್ತಾ ಹೇಳಿದನು.

ಅವರು ನದಿಯಲ್ಲಿಳಿದರು. ಲಕ್ಷ್ಮಿಯ ಕಾಲಗೆಜ್ಜೆಗಳು ಯಮುನಾನದಿಯ ಹಾಲಿನಂತಹ ನೊರೆಯಲ್ಲಿ ನೊರೆ ನೊರೆಯಾಗಿ ಎದ್ದು ತೋರಿಸಿತು. ಅವಳ ಮೊಣಕಾಲುಗಳು ಚಳಿಗೆ ನವಿರಾಗಿ ನಡುಗಿದವು. ಒದ್ದೆಯಾದ ಕೂದಲುಗಳು ಎಚ್ಚೆತ್ತು ನಿಂತಂತಿದ್ದವು.

"ಇಲ್ಲಿ ಕುಳಿತುಕೊಳ್ಳೋಣ" ಕಾಲುಗಳನ್ನು ನೀರಿನೊಳಕ್ಕೆ ನೀಡಿಕೊಂಡು ದೇವದಾಸ್ ನೆನೆದಿದ್ದ ಮರಳಿನಲ್ಲಿ ಕುಳಿತನು. ಲಕ್ಷ್ಮಿಯು ಕಾಲು ಮಡಚಿಕೊಂಡು ಕುಳಿತಳು. ಪುಟ್ಟ ಪುಟ್ಟ ಜಲಜೀವಿಗಳು ಮರಳಿನಲ್ಲಿನ ಗುಳಿಗಳಿಂದ ಅವರನ್ನು ನೋಡಿ ಹೋಗಲೆಂಬಂತೆ ಒಮ್ಮೊಮ್ಮೆ ಹೊರಬರುತ್ತಿದ್ದವು.

ಒಂದು ಚಿಕ್ಕ ಅಲೆಯು ಅವರು ಕುಳಿತಿರುವ ಸ್ಥಳಕ್ಕೆ ಧಾವಿಸಿ ಬಂತು. ಲಕ್ಷ್ಮಿ ತನ್ನ

ಸೀರೆಯನ್ನು ಎತ್ತಿ ಹಿಡಿದಳು. ದೇವದಾಸ್ ತನ್ನ ಕೈಗಳನ್ನು ಬೊಗಸೆಮಾಡಿ ನೀರನ್ನು ತೆಗೆದುಕೊಂಡು ಲಕ್ಷ್ಮಿಯ ಪಾದಗಳ ಮೇಲೆ ಸುರಿದನು. ಅನಂತರ ಒಂದು ಚಿಟಿಕೆ ಕೊಚ್ಚೆಯ ಮಣ್ಣನ್ನು ತೆಗೆದುಕೊಂಡು ಅವಳ ಕಾಲಿನ ಬೆರಳುಗಳ ಮೇಲೆ ಹಚ್ಚಿದನು. ಆಗ ಅವಳ ಮೊಣಕಾಲುಗಳಲ್ಲಿನ ಮಾಂಸ ಖಂಡಗಳು ಮೇಲ್ಭಾಗಕ್ಕೆ ಉರುಳುತ್ತಾ ಏರಿದವು.

ಸೂರ್ಯನು ಕೆಂಪಗೆ ದುಂಡಗಾಗಿದ್ದನು.

ಅವರಿಬ್ಬರೂ ಎದ್ದರು. ಇಬ್ಬರೂ ಮೌನವಾಗಿದ್ದರೂ ಸಹ ಒಳಗೊಳಗೇ ಮಾತಲ್ಲಿ ಮಗ್ನರಾಗಿದ್ದರು.

ಕುಳ್ಳಮ್ಮ ಮಲಗಿ ಹೆತ್ತಿದ್ದ ತೀರದುದ್ದಕ್ಕೂ, ಆಗ ತಾನೇ ಹುಟ್ಟಿದ್ದ ಮಗುವನ್ನು ಹೂತಿ ಹಾಕಿದ್ದ ಮಣ್ಣಿನ ಮೇಲೂ ನಡೆದು ಕಪ್ಪು ಕಲ್ಲಿನ ಮೆಟ್ಟಿಲುಗಳನ್ನು ಹತ್ತಿ ಮೋರ್ಚರಿಯ ಮುಂದೆ ಅವರು ಬಂದಾಗ ಪೋಲೀಸ್ ಸರ್ಜನ್ ಚಟರ್ಜಿಯ ಸುಸ್ತಾಗಿದ್ದಂತಿದ್ದ ಧ್ವನಿಯು ಕೇಳಿಸಿತು. ಒಬ್ಬಿಬ್ಬರು ಪೋಲೀಸರೂ, ಬಂಧುಗಳೂ ಹೊರಗೆ ಕಾದಿದ್ದರು. ಪೋಸ್ಟ್ ಮಾರ್ಟಂ ನಡೆಯುತ್ತಲೇ ಇತ್ತು.

ದೇವದಾಸ್ ಲಕ್ಷ್ಮಿಯನ್ನು ಅವಳ ಹಾಸ್ಟೆಲಿಗೆ ಕರೆದುಕೊಂಡು ಹೋಗಿ ಬಿಟ್ಟು ತನ್ನ ಕೊಠಡಿಗೆ ಬಂದಾಗ ಗಂಟೆ ಏಳು ಹೊಡೆದಿತ್ತು. ಅವನು ಸ್ವಲ್ಪ ಹೊತ್ತು ಮಂಚದ ಮೇಲೆ ಬೋರಲು ಮಲಗಿ ಏನನ್ನೋ ಯೋಚಿಸಿದನು. ಅನಂತರ ನಿದ್ದೆ ಬರದಿರಲು ಒಂದು ಮಾತ್ರೆ ತೆಗೆದು ನುಂಗಿದನು.

ಮೇಜಿನ ಮೇಲಿದ್ದ ದೀಪದ ಸ್ವಿಚ್ ಹಾಕಿ ಲವ್ ಅಂಡ್ ಬೆಲ್ಲಿ ಪುಸ್ತಕವನ್ನು ತೆರೆದನು. ತನ್ನದೇ ಅಂಗರಚನೆಯು ದೇವದಾಸ್‌ನ ಕಣ್ಣ ಮುಂದೆ ಸ್ಪಷ್ಟವಾಗತೊಡಗಿತು. ಆಚಾರ್ಯ ಪುರುಷರಾದ ಚರಕನೂ ಸುಶ್ರುತನೂ ಆಕಾಶದಿಂದ ಕೆಳಕ್ಕಿಳಿದು ಬರುತ್ತಿದ್ದಾರೆ.

# ಮೂವತ್ತೊಂದು

ಪರೀಕ್ಷೆಯ ಜ್ವರವು ಪರಾಕಾಷ್ಠೆಯನ್ನು ತಲುಪಿತು. ಕೆಲವು ದಿನಗಳೊಳಗೇ ಡಾಕ್ಟರಾಗುವ ಹಣೆಬರೆಹವಿದ್ದ ವಿದ್ಯಾರ್ಥಿಗಳು ಮೆಡಿಕಲ್ ವಾರ್ಡಿನ ಹೊರಗೆ ಅದೃಷ್ಟ ಪರೀಕ್ಷೆಯನ್ನು ಚೀಟಿ ಎತ್ತಿ ಆಯಲು ಕಾದಿದ್ದರು.

ಗಂಟೆ ಹೊಡೆಯಿತು.

ಪ್ರವೇಶದ್ವಾರದ ಮುಂದಿಟ್ಟಿರುವ ಮೇಜಿನ ಮೇಲಿನ ಚಿಕ್ಕ ಸ್ಟೀಲ್ ಪಾತ್ರೆಯಲ್ಲಿ ಕೈಹಾಕಿ ದೇವದಾಸ್ ಒಂದು ಚೀಟಿ ಎತ್ತಿದನು. ನಂಬರ್ ಆರು.

ಆರನೆಯ ನಂಬರ್ ಮಂಚದ ಬಳಿಗೆ ದೇವದಾಸ್‌ನ ಕಾಲುಗಳು ಚಲಿಸಿದವು. ಆ ರೋಗಿ ಯಾರಾಗಿರಬಹುದು ? ಅವನ ಭಾಷೆ ಏನಾಗಿರಬಹುದು ! ಅವನಿಗೆ ಯಾವ ರೋಗ ಬಂದಿರಬಹುದು ?

ತನ್ನ ಭವಿಷ್ಯ ಜೀವನದ ತಕ್ಕಡಿಯಲ್ಲಿನ ಎಡಗಡೆಯ ತಟ್ಟೆಯಲ್ಲಿರುವ ಆ ರೋಗಿಯನ್ನು ದೇವದಾಸ್ ನೋಡಿದನು. ಒಂದು ರೋಗವೂ ಇಲ್ಲದವನಂತೆ, ಈ ಪಟ್ಟಣದಿಂದ ಪ್ರಕಟವಾಗುವ ಸಂಜೆ ಪತ್ರಿಕೆಯ ಮೇಲೆ ಕಣ್ಣೋಡಿಸುತ್ತಾ ಅವನು ಮಲಗಿದ್ದನು. ಅವನ ರೋಗದ ವಿವರಗಳನ್ನು ಕೇಳಿ, ಆತನನ್ನು ಪರಿಶೋಧಿಸಿ ಬಲದ ತಕ್ಕಡಿ ತಟ್ಟೆಯಲ್ಲಿ ತೂಕದ ಕಲ್ಲುಗಳನ್ನಿಟ್ಟು ತಕ್ಕಡಿಯನ್ನು ಒಂದೇ ಸಮನಾಗಿ ನಿಲ್ಲುವಂತೆ ಮಾಡಿದರೆ, ವಿಜಯದೇವತೆ ತನ್ನನ್ನು ವರಿಸಿದಂತೆಯೇ. ಅಲ್ಲದಿದ್ದರೋ ತಲೆ ಕೆಳಗಾದಂತೆಯೇ; ಸೊನ್ನೆಯಿಂದ ಪುನಃ ಪ್ರಾರಂಭಿಸಬೇಕಾಗುತ್ತೆ.

ದೇವದಾಸ್ ಮಂಚದ ಬಳಿಗೆ ಬಂದಾಗ 'ಹುಂ, ಏನು ಬೇಕು ?' ಎಂಬಂತೆ ಪತ್ರಿಕೆಯನ್ನು ತನ್ನ ಡೊಳ್ಳುಹೊಟ್ಟೆಯ ಮೇಲೆ ಇಟ್ಟುಕೊಂಡು ಆ ರೋಗಿ ದೇವದಾಸ್‌ನನ್ನು ನೋಡಿದನು.

ನಿಗದಿ ಮಾಡಿದ ಎರಡು ಗಂಟೆಯ ಕಾಲವಿತ್ತು. ಅಷ್ಟರೊಳಗೆ ಅವನ ರೋಗದ ವಿವರಗಳನ್ನು ಕೇಳಿ ತಿಳಿದುಕೊಂಡು, ಅವನನ್ನು ಪರೀಕ್ಷಿಸಿ, ಅವನ ರೋಗವು ಏನೆಂದು ಕಂಡುಹಿಡಿದು ರೆಕಾರ್ಡ್ ಮಾಡಬೇಕು.

ರೋಗಿಯನ್ನು ಸಂತೋಷಪಡಿಸಿದರೆ ಮಾತ್ರವೇ ಸರಿಯಾದ ರೋಗ ವಿವರವು ದೊರಕುವುದು ಅಲ್ಲವೇ ? ಅದಕ್ಕೆ ಪ್ರಾರಂಭವೆಂಬಂತೆ ದೇವದಾಸ್ ರೋಗಿಯನ್ನು ನೋಡಿ ಮಂದಹಾಸ ಬೀರಿದನು.

ಆದರೆ ಆ ನಗು ರೋಗಿಯ ಮೇಲೆ ಯಾವ ಪರಿಣಾಮವನ್ನೂ ಉಂಟು ಮಾಡಲಿಲ್ಲ. ಅವನು ಬಹಳ ಗಾಂಭೀರ್ಯದಿಂದ ದೇವದಾಸ್‌ನನ್ನು ನೋಡಿದನು.

"ನಿಮ್ಮ ಹೆಸರೇನು ?" ದೇವದಾಸ್ ಕೇಳಿದನು.

ಡೊಳ್ಳು ಹೊಟ್ಟೆಯ ಮೇಲಿದ್ದ ಪತ್ರಿಕೆಯನ್ನು ಮತ್ತೆ ಕೈಯಲ್ಲಿ ತೆಗೆದುಕೊಂಡು

ಅಶ್ರದ್ಧೆಯಿಂದ ಅದರ ಮೇಲೆ ಕಣ್ಣೋಡಿಸುತ್ತಾ ಅವನು ಕೇಳಿದನು:

"ಅದು ತಿಳಿದುಕೊಂಡು ನಿಮಗೇನಾಗಬೇಕು ?"

ದೇವದಾಸ್ ದಿಗ್ಭ್ರಮೆಗೊಂಡನು. ಇಂತಹ ಒಂದು ಪ್ರಶ್ನೆಯನ್ನು ಇಲ್ಲಿಯವರೆಗೂ ಅವನು ಯಾರ ಬಾಯಿಂದಲೂ ಕೇಳಿರಲಿಲ್ಲ. ಇಷ್ಟು ದಿನಗಳವರೆಗೂ ಯಾವ ರೋಗಿಯೂ ತನ್ನ ರೋಗದ ಚರಿತ್ರೆಯನ್ನು ಹೇಳಲು ಇಷ್ಟು ಬೇಸರವನ್ನು ತೋರಿರಲಿಲ್ಲ. ಆದರೆ ಇವನ್ಯಾಕೋ ತನ್ನ ಬಗ್ಗೆ ವಿಮುಖನಾಗಿರುವಂತಿದೆ ?

"ಸಾಹೇಬ್, ನಿಮ್ಮ ರೋಗವನ್ನು ಕಂಡುಹಿಡಿಯಬೇಕಾದರೆ ಅದು ನಾನು ತಿಳಿದುಕೊಳ್ಳಬೇಕು" ದೇವದಾಸ್ ಹೇಳಿದನು.

"ಓಹೋ, ನನ್ನ ಹೆಸರು ಹೇಳಿದರೆ ನೀವು ನನ್ನ ರೋಗವನ್ನು ಕಂಡು ಹಿಡಿಯುತ್ತೀರಿ. ಅಲ್ಲವೇ ? ಪರವಾಗಿಲ್ಲ ಡಾಕ್ಟರ್, ಬಹಳ ಗಟ್ಟಿಗರಂತೆ ಕಾಣುತ್ತೀರಿ ?" ಸಂಜೆಯ ಪತ್ರಿಕೆಯನ್ನು ಮತ್ತೆಯೂ ಅವನ ತನ್ನ ಡೊಳ್ಳು ಹೊಟ್ಟೆಯ ಮೇಲಿಟ್ಟು ಕನ್ನಡಕದ ಕೆಳಭಾಗದಿಂದ ದೇವದಾಸ್‌ನನ್ನು ನೋಡುತ್ತಾ ಅವನು ಹೇಳಿದನು.

"ನಾನಿನ್ನೂ ಡಾಕ್ಟರ್ ಆಗಿಲ್ಲ. ವೈದ್ಯ ವಿದ್ಯಾರ್ಥಿ. ಇನ್ನೂ ಓದುತ್ತಿದ್ದೇನೆ" ಕ್ಷಮೆ ಕೇಳುವ ಧ್ವನಿಯಲ್ಲಿ ದೇವದಾಸ್ ಹೇಳಿದನು.

"ಅದು ಸರಿ, ನೀನಿನ್ನೂ ವಿದ್ಯಾರ್ಥಿ ಅಲ್ಲವೇ ? ಲೋ ದೊಡ್ಡ ದೊಡ್ಡ ಡಾಕ್ಟರುಗಳು ಪರೀಕ್ಷೆ ಮಾಡಿದರೂ ಸಹ ನನ್ನ ರೋಗವೇನೆಂದು ಇಲ್ಲಿಯವರೆಗೂ ಅವರ್ಯಾರಿಗೂ ಗೊತ್ತಾಗಿಲ್ಲ. ಇನ್ನೂ ನೀನು ಬೇರೆ ಪರೀಕ್ಷೆ ಮಾಡುತ್ತೀನಿ ಅಂತೀಯಾ ?" ಅವನು ಮಾತನ್ನು ಅರ್ಧದಲ್ಲಿ ನಿಲ್ಲಿಸಿದನು.

ಒಬ್ಬ ವೈದಿಕೋವಿನೊಂದಿಗೆ ತೋರಿಸಬೇಕಾದ ಆದರ ಅಣು ಮಾತ್ರವೂ ಇಲ್ಲದ ಅವನು ಮಾತಾಡುತ್ತಿದ್ದನು. 'ಲೋ', ಎಂದೋ 'ನೀನು' ಎಂದೋ ಬೇರೊಂದು ಸಂದರ್ಭದಲ್ಲಿ ಅವನು ಹೀಗೆ ಹೇಳಿದ್ದೇ ಆಗಿದ್ದರೆ, ಅವನಿಗೆ ಗ್ರಹಚಾರ ಬಿಡಿಸಬಹುದಾಗಿತ್ತು.

"ಸಾಹೇಬ್ ಇವತ್ತು ನನ್ನ ಪರೀಕ್ಷೆ. ನಿಮ್ಮನ್ನು ಪರೀಕ್ಷಿಸಿ ರೋಗವೇನೆಂದು ಕಂಡುಹಿಡಿಯಲು ನನಗೆ ವಹಿಸಲಾಗಿದೆ. ಇದರಲ್ಲಿ ಏನಾದರೂ ತಪ್ಪಾದರೆ, ಪರೀಕ್ಷೆಯಲ್ಲಿ ನಾನು ಸೋತು ಹೋಗುತ್ತೇನೆ" ದೇವದಾಸ್ ತಾಳ್ಮೆಯಿಂದ ಮತ್ತೆ ಹೇಳಿದನು.

"ಅಯ್ಯೋ ಹುಡುಗಾ ?" ಅವನು ಎದ್ದು ಕುಳಿತನು. "ನನ್ನನ್ನು ಬಹಳ ಜನ ಬಹಳಷ್ಟು ಪರೀಕ್ಷಿಸಿಯಾಗಿದೆ. ಇನ್ನೂ ನನ್ನ ದೇಹವನ್ನು ಯಾರೂ ಪರೀಕ್ಷಿಸಬೇಕಾಗಿಲ್ಲ. ನೀನು ಬೇರೆ ಯಾರಾದರೂ ರೋಗಿಯನ್ನು ನೋಡಿ ಪರೀಕ್ಷಿಸಿ ಅವನ ರೋಗವೇನೆಂದು ಕಂಡುಹಿಡಿದು ಪರೀಕ್ಷೆಯಲ್ಲಿ ಪಾಸಾಗಲು ಪ್ರಯತ್ನಿಸು."

ತನ್ನ ಬೆನ್ನಿನ ಮೇಲೆ ಕೈಯೊಂದು ಬಿದ್ದಾಗ ದೇವದಾಸ್ ತಿರುಗಿ ನೋಡಿದನು. ಡಾಕ್ಟರ್ ಕ್ವಾಜ ಒಬ್ಬ ದೇವದೂತನಂತೆ ಬಂದು ನಿಂತಿದ್ದರು.

"ವಾಟ್ ಹ್ಯಾಪನ್ಡ್ ? ಏನು ವಿಷಯ ? ಏಕೆ ಪರೀಕ್ಷೆ ಮಾಡುತ್ತಿಲ್ಲ ?" ಡಾಕ್ಟರ್ ಕ್ವಾಜ ಕೇಳಿದರು.

"ಸರ್, ರೋಗಿ ಏನೇನೂ ಸಹಕಾರ ತೋರುತ್ತಿಲ್ಲ" ನಿರಾಶೆಯಿಂದ ದೇವದಾಸ ಹೇಳಿದನು.

"ಬಾಬಾ, ಸ್ವಲ್ಪ ಸಹಕಾರ ತೋರಿಸಿ. ಈ ಡಾಕ್ಟರ್ ನಿಮ್ಮನ್ನು ಪರೀಕ್ಷಿಸಲಿ" ಡಾಕ್ಟರ್ ಕ್ವಾಜ ವಿಶ್ವಾಸದಿಂದ ರೋಗಿಯ ಬೆನ್ನನ್ನು ತಡವಿದರು.

ರೋಗಿಯು ತನ್ನ ಕೈಗಳನ್ನು ಜೋಡಿಸಿ ನಮಸ್ಕರಿಸುತ್ತಾ ಡಾಕ್ಟರ್ ಕ್ವಾಜರನ್ನು ನೋಡಿದನು. ಸುಮ್ಮನೆ ಔಪಚಾರಿಕವಾಗಿ ನಮಸ್ಕರಿಸಿದ್ದಲ್ಲ. ಅವನ ಮುಖದಲ್ಲಿ ಡಾಕ್ಟರ ಬಗ್ಗೆ ಮರ್ಯಾದೆ ಎದ್ದು ಕಾಣುತ್ತಿತ್ತು.

"ಏನೂ ಹೆದರಬೇಡ. ಏನಾದರೂ ಸಂದೇಹವಿದ್ದರೆ ನನ್ನನ್ನು ಕೇಳು" ಡಾಕ್ಟರ್ ಕ್ವಾಜ ದೇವದಾಸ್‌ನಿಗೆ ಉತ್ತೇಜನ ನೀಡಿದರು.

ಡಾಕ್ಟರ್ ಕ್ವಾಜರ ಮಹತ್ವದ ಎದುರಿಗೆ ದೇವದಾಸ್ ನಮಸ್ಕರಿಸಿದನು. ಪರೀಕ್ಷೆಗೆ ಮಾರ್ಕ್ ನೀಡಿ ಯಾರನ್ನೆಲ್ಲಾ ಪಾಸ್ ಮಾಡಿಸಬೇಕೆಂದು ತೀರ್ಮಾನ ಮಾಡಬೇಕಾದ್ದು ಡಾಕ್ಟರ್ ಕ್ವಾಜ. ಅಂತಹುದರಲ್ಲಿ ಅವರ ಮಾತು ಕೇಳಿ ದೇವದಾಸ್ ಆಶ್ಚರ್ಯಗೊಂಡನು.

"ಇದೊಂದು ಪ್ರಾಬ್ಲಂ ಕೇಸು. ಆದರೂ ಪ್ರಯತ್ನಪಟ್ಟು ನೋಡಿ" ಡಾಕ್ಟರ್ ಕ್ವಾಜ ಆ ಮಾತುಗಳನ್ನು ಹೇಳಿ ದೂರ ಹೋದರು. ದೂರದಿಂದಲೇ "ವಿಷ್ ಯು ಆಲ್ ಸಕ್ಸೆಸ್" ಎಂದರು. ಡಾಕ್ಟರ್ ಕ್ವಾಜರ ದನಿಯು ದೂರವಾಯಿತು.

ಪ್ರಾಬ್ಲಂ ಕೇಸೆಂದು ಕೇಳಿದಾಗ ದೇವದಾಸ್‌ನ ಗಾಬರಿ ಹೆಚ್ಚತೊಡಗಿತು. ಜೊತೆಗೆ ಸಮಾಧಾನವೂ ತೋರಿತು. ಪ್ರಾಬ್ಲಂ ಕೇಸುಗಳು ಕೆಲವೊಮ್ಮೆ ಸುಲಭವಾಗಿ ಸಾಲ್ವ್ ಆಗಿ ಜಯಗಳಿಸಿ ಕೊಡುತ್ತವೆ.

"ಎಂ.ಬಿ.ಬಿ.ಎಸ್. ಪರೀಕ್ಷೆ ಅಲ್ಲವೇ ?" ರೋಗಿ ಕೇಳಿದನು.

"ಹೌದು" ದೇವದಾಸ್ ಹೇಳಿದನು.

"ಸಾಧಾರಣವಾಗಿ ನನ್ನನ್ನು ಎಂ.ಡಿ. ಪರೀಕ್ಷೆಗೆ ಮಾತ್ರವೇ ಕರೆದುಕೊಂಡು ಹೋಗುತ್ತಾರೆ" ರೋಗಿ ಹೇಳತೊಡಗಿದನು. "ಎರಡು ದಿವಸ ಇಲ್ಲಿ, ಅನಂತರ ಲಕ್ನೋ ಮೆಡಿಕಲ್ ಕಾಲೇಜಿನಲ್ಲಿ, ಅದಾದ ಮೇಲೆ ಕಾನ್‌ಪುರ್, ಅನಂತರ ಆಗ್ರಾ, ಆಮೇಲೆ ಮೈಸೂರು, ಮದ್ರಾಸ್, ಬನಾರಸ್‌ನಲ್ಲಿ ಕಳೆದವಾರ ಪರೀಕ್ಷೆ ಇತ್ತು. ನನ್ನನ್ನು ಪರೀಕ್ಷಿಸಿದ ಆ ಎಂ.ಡಿ. ವಿದ್ಯಾರ್ಥಿ ಫೇಲ್ ಆದ. ಗೊತ್ತೆ ? ಆಮೇಲೆನೇ ನನಗೆ ಆ ವಿಷಯ ಗೊತ್ತಾದದ್ದು. ಆದರೆ, ನನ್ನನ್ನು ಪರೀಕ್ಷಿಸಿ ಥಟ್ಟೆಂದು ಪಾಸಾಗಲು ಯಾರಿಗೂ ಸಾಧ್ಯವಿಲ್ಲ. ಅದಕ್ಕೆ ನಾನು ಸಹಕರಿಸುವುದೂ ಇಲ್ಲ. ಅಂದರೆ ನನ್ನ ರೋಗವಿರುವುದೇ ಹಾಗೆ. ನಾನು ಎಷ್ಟೋ ವರ್ಷಗಳಿಂದ ವಿದ್ಯಾರ್ಥಿಗಳನ್ನು ಫೇಲ್ ಮಾಡಿಸುತ್ತಿದ್ದೇನೆ. ನೀವು ಹೆದರಬೇಡಿ. ಗೊತ್ತಾಯಿತೆ ? ನಿಮ್ಮ ಕೆಲಸ ನೀವು ಮುಂದುವರೆಸಿ. ಆದರೆ ನನ್ನಿಂದ ಒಂದು ಸಹಾಯ ಸಹ ನಿಮಗೆ ಸಿಗುವುದಿಲ್ಲ. ಒಂದು ಕ್ಲೂ ಸಹ ನಾನು ಕೊಡುವುದಿಲ್ಲ. ಹಾಗೆ ಕೊಡುವುದೂ ಸರಿಯಲ್ಲವಲ್ಲಾ ? ಇದು ಪರೀಕ್ಷೆಯಲ್ಲವೇ ? ಬುದ್ಧಿವಂತರು ಹತ್ತಿ ಇಳಿಯುತ್ತಾರೆ. ಮೂರ್ಖರು ತಪ್ಪಲಲ್ಲೇ ಬಿದ್ದಿರುತ್ತಾರೆ."

ಅವನ ಭಾಷಣವು ಮುಗಿದ ನಂತರ ದೇವದಾಸ್ ತನ್ನ ಕೆಲಸ ಆರಂಭಿಸಿದನು.

ಒಂದೂವರೆ ಗಂಟೆಯ ಕಾಲ ರೋಗ ಚರಿತ್ರೆಯನ್ನು ಪರೀಕ್ಷಿಸಿದ ರೀತಿಯನ್ನೂ, ಅದರ ಫಲಿತಾಂಶವನ್ನೂ ದೇವದಾಸ್ ರೆಕಾರ್ಡ್ ಮಾಡಿದನು.

ರೋಗಿ ಒಬ್ಬ ಅಸಾಧಾರಣ ಮನುಷ್ಯನಾಗಿದ್ದನು. ಅವನು ದೇವದಾಸ್‌ನ ಪ್ರಶ್ನೆಗಳಿಗೆ ತೂಕ ಮಾಡಿ, ತುಂಡು ಮಾಡಿ ಉತ್ತರಗಳನ್ನು ನೀಡಿದನು. ಪರೀಕ್ಷಿಸುವಾಗ ರೋಗಿಯು ಶಾಸ್ತ್ರೀಯವಾದ ರೀತಿಯಲ್ಲಿ ದೇವದಾಸ್‌ಗೆ ತನ್ನನ್ನೊಪ್ಪಿಸಿಕೊಂಡನು. ಒಂದಕ್ಕೂ ಸಮಯ ಕಳೆಯಬೇಕಾಗಿ ಬರಲಿಲ್ಲ.

ಎಲ್ಲ ಮುಗಿದ ಮೇಲೆ ರೋಗಿ ಹೇಳಿದನು.

"ನಾನು ಎಷ್ಟು ಜನ ವಿದ್ಯಾರ್ಥಿಗಳನ್ನು ನೋಡಿದ್ದೇನೆ. ನನ್ನ ಪಲ್ಸ್ ಜಾಸ್ತಿ ಮಾಡಲೂ ನನಗೆ ಸಾಧ್ಯ. ಬ್ಲಡ್ ಪ್ರೆಷರ್ ಅನ್ನು ಇಷ್ಟಬಂದಂತೆ ಹೆಚ್ಚು ಕಡಿಮೆ ಮಾಡಲೂ ನನಗೆ ಗೊತ್ತು. ಹೊಟ್ಟೆಯೊಳಗೆ ಗಡ್ಡೆ ಬರಿಸಿಕೊಳ್ಳಲು ನನಗೆ ಬರುತ್ತೆ. ಉದಾಹರಣೆಗೆ, ಇಷ್ಟ ಬಂದಾಗ ಜ್ವರ ಬರಿಸಿಕೊಳ್ಳಲೂ ನನಗೆ ಸಾಧ್ಯ. ಹೇಗೆಂದರೆ ಒಂದು ದೊಡ್ಡ ಚೂರು ಹೊಗೆಸೊಪ್ಪು ಕಂಕುಳಿನಲ್ಲಿ ಅದುಮಿಟ್ಟುಕೊಂಡರೆ ಐದು ನಿಮಿಷದಲ್ಲಿ ಜ್ವರದ ತಾಪ ಹೆಚ್ಚುತ್ತದೆ. ಒಂದು ರಬ್ಬರ್ ಚೆಂಡನ್ನು ಕಂಕುಳಲ್ಲಿಟ್ಟು ಅದುಮಿದರೆ ನಾಡಿಯ ಬಡಿತವು ಹಾಗೇ ನಿಂತು ಹೋಗುತ್ತೆ. ವಿದ್ಯಾರ್ಥಿಯೊಬ್ಬನನ್ನು ನೋಡುತ್ತಿದ್ದಂತೆಯೇ ಅವನನ್ನು ಪಾಸ್ ಮಾಡಿಸಬೇಕೇ ಬೇಡವೇ ಎಂದು ನಾನೇ ತೀರ್ಮಾನಿಸುತ್ತೇನೆ. ಅದಕ್ಕೆ ಸರಿಯಾಗಿ ನಾನು ನನ್ನ ವಿದ್ಯೆಗಳನ್ನು ಪ್ರಯೋಗಿಸುತ್ತೇನೆ."

"ನನ್ನ ವಿಷಯದಲ್ಲಿ ಏನು ಪ್ರಯೋಗ ಮಾಡಿದಿರಿ? ಒಳ್ಳೆಯದೋ ಕೆಟ್ಟದ್ದೋ?" ದೇವದಾಸ್ ಕೇಳಿದನು.

"ರಿಸಲ್ಟ್ ಬರಲಿ. ಆಗ ಗೊತ್ತಾಗುತ್ತೆ" ಮಂದಹಾಸ ಬೀರುತ್ತಾ ರೋಗಿ ಹೇಳಿದನು.

ಜಾನ್ ಬಲದೇವ್ ಮಿರ್ಜಾನನ್ನು ಲಕ್ಷ್ಮಿ ಪರೀಕ್ಷಿಸುತ್ತಿರುವುದನ್ನು ದೇವದಾಸ್ ನೋಡಿದನು. ಸಾಧಾರಣವಾಗಿ ಬೇರೆ ಕಡೆಯಿಂದ ರೋಗಿಗಳನ್ನು ಪರೀಕ್ಷೆಗೆ ಕರೆತರುವ ಪದ್ಧತಿ ಇರುತ್ತದೆ. ಆದರೆ ರೋಗಿಯ ವಿಷಯ, ರೋಗದ ವಿಷಯ ತಿಳಿದುಕೊಂಡು ಹೆಚ್ಚಿನ ಪ್ರಯೋಜನವೇನೂ ಸಾಧಾರಣವಾಗಿ ಆಗುವುದಿಲ್ಲ. ಅಂತಹ ಕೇಸುಗಳಲ್ಲಿ ವೈವಾವೋಸಿ (ಮೌಖಿಕ ಪರೀಕ್ಷೆ) ಬಹಳ ಕಠಿಣವಾಗಿರುತ್ತದೆ. ಚಿತ್ರ ವಿಚಿತ್ರವಾದ ಪ್ರಶ್ನೆಗಳನ್ನು ಕೇಳಿ ಉಸಿರು ಕಟ್ಟಿಸಿಬಿಡುತ್ತಾರೆ.

ಆದರೂ ಲಕ್ಷ್ಮಿ ನಿಂತಿದ್ದನ್ನು ನೋಡಿದರೆ ಎಲ್ಲಾ ಬರೆದು ಸಿದ್ಧ ಮಾಡಿ ವಿಜಯವನ್ನು ಗಳಿಸಿದಂತಿತ್ತು.

ಅಷ್ಟು ಹೊತ್ತಿಗೆ ಪರೀಕ್ಷಕರಾಗಿ ಬಂದ ಪ್ರೊಫೆಸರ್, ಡಾಕ್ಟರ್ ಕ್ವಾಜ ಇಬ್ಬರೂ ದೇವದಾಸ್ ನಿಂತಿದ್ದ ಮಂಚದ ಬಳಿಗೆ ಬಂದರು.

"ಈ ವಿದ್ಯಾರ್ಥಿ ಬಲು ಬುದ್ಧಿವಂತನು" ಡಾಕ್ಟರ್ ಕ್ವಾಜ ಎಕ್ಸಾಮಿನರ್‌ಗೆ ದೇವದಾಸ್‌ನ ಪರಿಚಯ ಮಾಡಿಕೊಟ್ಟರು.

ರೋಗನಿರ್ಣಯದ ವಿಷಯದಲ್ಲಿ ಒಂದು ನಿಲುವಿಗೆ ಬರಲು ದೇವದಾಸ್‌ಗೆ ಸಾಧ್ಯವಾಗಿರಲಿಲ್ಲ. ಆದರೂ ಶಾಸ್ತ್ರೀಯವಾಗಿ ಎಲ್ಲಾ ಸಂಗತಿಗಳನ್ನೂ ಅವನು

ವಿಶದೀಕರಿಸಿ ಹೇಳಿ ಫಲಪ್ರದವಾಗಿ ಬರೆದು ಸಿದ್ಧಪಡಿಸಿದ್ದನು. ಪ್ರಶ್ನೆಗಳಿಗೆಲ್ಲಾ ವ್ಯಕ್ತವಾದ ಉತ್ತರವಿತ್ತನು. ಒಟ್ಟಿನಲ್ಲಿ ಅರ್ಧಗಂಟೆಗೂ ಹೆಚ್ಚು ಸಮಯ ನಡೆದ ಆ ಪರೀಕ್ಷೆಯಲ್ಲಿ ದೇವದಾಸ್‌ಗೇ ತೃಪ್ತಿ ತೋರಿತು.

"ಯುವರ್ ರೋಲ್ ನಂಬರ್?" ಎಕ್ಸಾಮಿನರ್ ಕೇಳಿದರು.

ದೇವದಾಸ್ ಹೇಳಿದನು.

"ಓ.ಕೆ. ಗೋ ಅಂಡ್ ಸ್ಲೀಪ್" ಎಕ್ಸಾಮಿನರ್ ಹಾಗೆ ಹೇಳಿದವರೆ ಮುಂದಿನ ಮಂಚದತ್ತ ನಡೆದರು.

ಎಕ್ಸಾಮಿನರ್ 'ಗೋ ಅಂಡ್ ಸ್ಲೀಪ್' ಎಂದು ಹೇಳಿದರೆ ವಿದ್ಯಾರ್ಥಿ ಪಾಸಾದನೆಂದು ಅರ್ಥ. 'ಗೋ ಅಂಡ್ ರೀಡ್' ಎಂದೋ, 'ವಿ ವಿಲ್ ಮೀಟ್ ಎಗೈನ್' ಎಂದೋ ಹೇಳಿದರೆ ಅವನು ಫೈಲ್ ಆದನೆಂದರ್ಥ. ಒಬ್ಬೊಬ್ಬ ಪರೀಕ್ಷಕನೂ ಒಂದೊಂದು ರೀತಿಯಲ್ಲಿರುತ್ತಾನೆ.

ವಾರ್ಡ್‌ನ ಹೊರಗೆ ಲಕ್ಷ್ಮಿ ದೇವದಾಸ್‌ಗಾಗಿ ಕಾದಿದ್ದಳು. ಲಕ್ಷ್ಮಿ ಬಲು ಸಂತೋಷದಿಂದ್ದಳು. ಅವಳ ದೊಡ್ಡ ಕಣ್ಣುಗಳು ಪ್ರಕಾಶಮಾನವಾಗಿದ್ದವು. ಅವಳೊಂದಿಗೂ ನಿದ್ದೆ ಮಾಡಲು ಹೇಳಿರಬೇಕು.

"ಅದೇ, ಹಾಗೇ ಹೇಳಿದ್ದು" ಲಕ್ಷ್ಮಿ ಧ್ವನಿ ಆಕಾಶದಿಂದ ಇಳಿದು ಬಂತು.

"ನನ್ನೊಂದಿಗೂ ಹಾಗೆ ಹೇಳಿದ್ದು."

ಅವಳು ಆಕಾಶದಲ್ಲೇ ಹಾರಾಡುತ್ತಿದ್ದಳು. ಮೆಡಿಸಿನ್ ಪರೀಕ್ಷೆಯನ್ನು ಪಾಸಾದರೆ ಎಂ.ಬಿ.ಬಿ.ಎಸ್ ಅರ್ಧ ಪಾಸಾದಂತೆ. ಅನಂತರ ಸರ್ಜರಿಯ ವಿಷಯಕ್ಕೆ ಭಯಪಡಬೇಕು. ಇನ್ನು ಮೂರು ದಿವಸಗಳು ಕಳೆದ ನಂತರವೇ ಸರ್ಜರಿ ಪರೀಕ್ಷೆ ಇರುವುದು. ಓದಿ ತಯಾರಾಗಲೂ ಸಮಯವಿದೆ. ಇಂದು ರಾತ್ರಿ ನಿಜವಾಗಿಯೂ ನಿದ್ದೆ ಮಾಡಲೇಬೇಕು. ಸತ್ತಂತೆ ನಿದ್ದೆ ಮಾಡಬೇಕು.

"ನಿನಗೆ ಜಾನ್ ಬಲದೇವ್ ಮಿರ್ಜಾ ಸಿಕ್ಕಿದರು ಅಲ್ಲವೇ?" ದೇವದಾಸ್ ಲಕ್ಷ್ಮಿಯನ್ನು ಕೇಳಿದನು.

"ನನಗೆ ಗ್ರಹಚಾರ ಕಡಿಮೆ ಆಗಿದೆಯೆಂದು ನಾನು ಭಾವಿಸಿದೆ" ಲಕ್ಷ್ಮಿ ಹೇಳಿದಳು. ಸ್ಥಿರವಾಗಿ ವಾರ್ಡ್‌ನಲ್ಲೇ ಇರುವ ರೋಗಿಯೊಬ್ಬನು ಮೆಡಿಕೋಗೆ ಸಿಕ್ಕರೆ ಅವನ ಕಥೆ ಮುಗಿದಂತೆಯೇ.

ಲಕ್ಷ್ಮಿ ಮುಂದುವರೆಸಿದಳು:

"ಡಾಕ್ಟರ್ ಕ್ವಾಜ ಕಲಿಸಿದ ವಿಷಯಗಳೆಲ್ಲಾ ನನ್ನ ನಾಲಿಗೆಯ ತುದಿಯಲ್ಲೇ ಇತ್ತು."

ಡಾಕ್ಟರ್ ಕ್ವಾಜ ಪರೀಕ್ಷೆಯಲ್ಲಿ ವಿದ್ಯಾರ್ಥಿಗಳನ್ನು ಫೈಲ್ ಮಾಡಿಸಬಾರದೆಂಬ ಅಭಿಪ್ರಾಯವುಳ್ಳವರು. ವಿದ್ಯಾರ್ಥಿಗಳಿಗೆ ಪಾಸಾಗಲು ಬೇಕಾದ ಸಹಾಯವನ್ನು ಅವರು ಮಾಡುತ್ತಾರೆ. ಉತ್ತೇಜನ ನೀಡುತ್ತಾರೆ. ಆದರೆ ಕೆಲ ವಿದ್ಯಾರ್ಥಿಗಳು 'ನಮ್ಮ ತಂಟೆಗೆ ಬರಬೇಡಿ. ನಾವು ಸೋತರೇನೇ ನಮಗೆ ಸಂತೋಷ' ಎಂಬ ನಿಲುವನ್ನು ಸ್ವೀಕರಿಸಿರುತ್ತಾರೆ. ಅಂತಹವರಿಗೆ ಡಾಕ್ಟರ್ ಕ್ವಾಜ ಹೇಗೆ ಸಹಾಯ ಮಾಡಲು ಸಾಧ್ಯ?

ಕಾರಿಡಾರ್ ಮೂಲಕ ಅವರಿಬ್ಬರೂ ನಡೆದರು. ಅವರಿಗೆದುರಾಗಿ ಬಂದ ಡಾಕ್ಟರ್ ರವೀಂದ್ರನಾಥ್, ಮೇರಿ, ಮೇಟ್ರನ್ ಹೆಲೆನ್ ಸಿಂಗ್, ಅಲ್‌ಫೋನ್ಸ್ ಇವರೆಲ್ಲಾ

ಅವರನ್ನು ದಾಟಿ ಹೋಗುವಾಗ ಅವರಿಬ್ಬರನ್ನೂ ನೋಡಿದರು. ಮೇಟ್ರನ್ ಹೆಲೆನ್‌ಸಿಂಗ್‌ನ ನಗು ಬಲು ಕ್ಷೀಣವಾಗಿತ್ತು. ಆಕೆಯ ಕಾಲುಗಳು ಆಡುತ್ತಲಿದ್ದವು. ಅಲ್ಫೋನ್ಸಳ ತುಟಿಗಳು, ಕಾರಿಡಾರ್ ಮೂಲಕ ನಡೆಯುತ್ತಿರುವಾಗಲೂ, ಯಾವುದೋ ಮಂತ್ರವನ್ನು ಉರು ಹೊಡೆಯುತ್ತಿರುವಂತೆ ಚಲಿಸುತ್ತಿತ್ತು. ಡಾಕ್ಟರ್ ರವೀಂದ್ರನಾಥ್‌ನ ಕೈಗಳಲ್ಲಿ ಒಂದು ಕಟ್ಟು ಫೈಲ್‌ಗಳೂ, ಎಕ್ಸ್‌ರೇ ಫಿಲ್ಮ್‌ಗಳೂ, ದಪ್ಪ ದಪ್ಪ ಪುಸ್ತಕಗಳೂ ಇದ್ದವು. ಮೇರಿಯ ತುಟಿಗಳಲ್ಲಿ ಒಂದು ಮಂದಹಾಸವಿತ್ತು. ಅದನ್ನು ನೋಡಿದಾಗ ಹೂಗಳರಳುವ ವಸಂತಕಾಲವನ್ನು ಜ್ಞಾಪಿಸಿಕೊಂಡಂತಾಗುತ್ತಿತ್ತು.

ಅಪೂರ್ವವಾದ ಆ ನಿಮಿಷದಲ್ಲಿ ಲಕ್ಷ್ಮಿಯನ್ನು ಒಮ್ಮೆ ಮುಟ್ಟಲು ದೇವದಾಸ್‌ನಿಗೆ ಆಸೆಯಾಯಿತು. ತನಗೆ ಆ ಪ್ರೇರಣೆ ಎಲ್ಲಿಂದ ಬಂತೆಂದು ಯೋಚಿಸಿದಾಗ ದೇವದಾಸ್‌ನಿಗೇ ಆಶ್ಚರ್ಯವಾಯಿತು.

ಪ್ಯಾರೇಲಾಲ್ ಕಾವಲು ನಿಂತಿರುವ ಗೇಟಿಗೆ ಅವರು ಬಂದರು.

"ಡಾಕ್ಟರ್ ಸಾಬ್, ಹೇಗಿತ್ತು?" ಪ್ಯಾರೇಲಾಲ್ ಒಬ್ಬ ತಂದೆಯ ವಾತ್ಸಲ್ಯದೊಂದಿಗೆ ಕೇಳಿದನು.

"ಚೆನ್ನಾಗಿ ಮಾಡಿದ್ದೇನೆ" ದೇವದಾಸ್ ಹೇಳಿದನು.

ಪ್ಯಾರೇಲಾಲ್ ತನ್ನ ನರೆತ ಹುಬ್ಬುಗಳನ್ನೆತ್ತಿ ಅವನು ಲಕ್ಷ್ಮಿಯನ್ನು ನೋಡಿದನು.

"ಹಾಗಾದರೆ ನನಗೆ ಸಿಹಿ ಖಂಡಿತ ಸಿಗುತ್ತೆ" ಪ್ಯಾರೇಲಾಲ್ ಸಂತೋಷಪಟ್ಟನು.

ಅವರಿಬ್ಬರೂ ಗೇಟ್ ದಾಟಿದನಂತರ ಬೇರೆ ಬೇರೆ ದಾರಿ ಹಿಡಿದು ಹೊರಟರು. ಹೊರಟವರು ಅವರವರ ದಾರಿಗಳಲ್ಲಿ ನಡೆಯತೊಡಗಿದರು. ಇದ್ದಕ್ಕಿದ್ದಂತೆ ದೇವದಾಸ್‌ಗೆ ಲಕ್ಷ್ಮಿಯನ್ನೊಮ್ಮೆ ನೋಡಬೇಕೆಂದೆನ್ನಿಸಿತು. ಅವನು ಹಿಂದಿರುಗಿ ನಿಂತನು.

ಆದರೆ ಲಕ್ಷ್ಮಿ ಅವನ ದೃಷ್ಟಿಯಿಂದ ಮರೆಯಾಗಿದ್ದಳು. ಕ್ಷಣಾರ್ಧದಲ್ಲಿ ಅವಳು ಹೇಗೆ ಮಾಯವಾದಳು. ಅವಳೇನಾದರೂ ಓಡಿ ಹೋದಳೇ? ಅಥವಾ ಅಪ್ಪಳಿಸಿ ಬೀಸುತ್ತಿರುವ ಬಿಸಿಗಾಳಿ ಅವಳನ್ನು ಎಗರಿಸಿಕೊಂಡು ಹೋಯಿತೇ? ಯಾಕಿಷ್ಟು ವ್ಯಾಕುಲತೆ? ಇನ್ನು ಪರೀಕ್ಷೆ ಇಲ್ಲವೇ? ಅಥವಾ ನಾಳೆ ಸಾಯಂಕಾಲ ಹಾಸ್ಟೆಲ್‌ಗೆ ಹೋಗಿ ಅವಳನ್ನು ನೋಡಿದರೆ ಆಗೋಲ್ಲವೇ?

ಅಜ್ಞಾತವಾದ ಒಂದು ದುಃಖವು ದೇವದಾಸ್‌ನನ್ನು ಕಾಡುತ್ತಲಿತ್ತು. ಐದು ವರ್ಷಗಳು ಯಾರಿಗೂ ತಿಳಿಯದಂತೆ ಕಳೆದು ಹೋದವು. ಇನ್ನು ಬೆರಳೆಣಿಸುವಷ್ಟು ದಿವಸಗಳು ಮಾತ್ರವೇ ಬಾಕಿ ಇರುವುದು.

ಲಕ್ಷ್ಮಿ ಉನ್ನತದರ್ಜೆಯಲ್ಲಿ ಪಾಸ್ ಆದಳು. ಅವಳಿಚ್ಛೆಪಟ್ಟಂತೆ ಗೈನಾಕಾಲಜಿಯಲ್ಲಿ ಉನ್ನತ ವ್ಯಾಸಂಗಕ್ಕೆ ಅವಳು ಸೇರಿ ಓದುವಳು. ಅವಳ ಬಯಸಿದಂತೆ ಅವಳು ದೊಡ್ಡ ಗೈನಕಾಲಜಿಸ್ಟ್ ಆಗಿಬಿಡುತ್ತಾಳೆ.

ಭವಿಷ್ಯದಲ್ಲಿ ಯಾರಾಗಬೇಕೆಂದೋ, ಏನು ಮಾಡಬೇಕೆಂದೋ ದೇವದಾಸ್ ಇಲ್ಲಿಯವರೆಗೂ ಯೋಚಿಸಲಿಲ್ಲ. ಔಷಧಿಗಳು ಮತ್ತು ಮೃತ್ಯುವಿನ ಒಂದು ಲೋಕವು ತನಗೆ ಕಾದಿರುವ ಯಥಾರ್ಥವು ದೇವದಾಸ್‌ಗೆ ಸ್ಪಷ್ಟವಿತ್ತು. ಔಷಧಿಯೋ

ಅಥವಾ ಮೃತ್ಯುವೋ ಯಾವುದು ದೊಡ್ಡದೆಂದು ದೇವದಾಸ್‌ಗೆ ತಿಳಿಯದು. ಒಂದು ಮತ್ತೊಂದನ್ನು ಸತತವಾಗಿ ಸೋಲಿಸುತ್ತಲೇ ಇದೆ. ಅದು ಸತ್ಯ.

ಡಾಕ್ಟರ್ ಕ್ವಾಜರ ಮಾತುಗಳನ್ನು ದೇವದಾಸ್ ನೆನೆದನು:

"ಮೃತ್ಯುವಿನ ಪ್ರವೇಶವಾದರೆ, ಅಲ್ಲಿ ಔಷಧಿಗೆ ಯಾವ ಸಂಬಂಧವೂ ಇರುವುದಿಲ್ಲ. ಆದರೆ ಮೃತ್ಯುವಿಗೆ ಔಷಧಿಯನ್ನು ಕಂಡರೆ ಭಯ. ಮೃತ್ಯುವು ಔಷಧಿಯ ಲೋಕದಲ್ಲಿ ಒಂದು ಹದ್ದಿನಂತೆ. ಅದು ಸುತ್ತು ಹೊಡೆಯುತ್ತಾ ಹಾರುತ್ತಾ ಇರುತ್ತದೆ. ಯಾವಾಗಲಾದರೂ ಅದು ಹಾರಿ ಕೆಳಕ್ಕಿಳಿದು ಬಂದು ಹಿಡಿದುಕೊಂಡು ಹೋಗದಿರುವುದಿಲ್ಲ."

"ಡಾಕ್ಟರುಗಳಾದ ನೀವುಗಳು ಔಷಧಿಯಿಂದ ಮೃತ್ಯುವನ್ನು ಸೋಲಿಸಲು ಪ್ರಯತ್ನಿಸಬೇಡಿ. ನಿಮ್ಮ ಪ್ರಯತ್ನವು ಔಷಧಿಯಿಂದ ಜೀವವನ್ನು ರಕ್ಷಿಸುವುದಕ್ಕಾಗಿ ಇರಬೇಕಷ್ಟೆ. ಜೀವವೆನ್ನುವುದು ಬೆಂಕಿ ಇರುವ ಪಾತ್ರೆಯಲ್ಲಿನ ಒಂದು ಕೆಂಡದಂತೆ. ಉರಿದುರಿದು ಯಾವಾಗಲಾದರೂ ಆ ಕೆಂಡವು ಆರಿಯೇ ಹೋಗುತ್ತೆ. ಅದು ಪ್ರಕೃತಿಯ ನಿಯಮವು. ಆದರೆ ಆರುವವರೆಗೂ ಔಷಧಿಯಿಂದ ಜೀವವೆಂಬ ಕೆಂಡವನ್ನು ಉರಿಸುತ್ತಿರುವುದು ವೈದ್ಯವೃತ್ತಿಯು."

ಹಾಸ್ಟೆಲ್‌ಗೆ ಬಂದು ಸೇರಿದ್ದೇ ದೇವದಾಸ್‌ಗೆ ಗೊತ್ತಾಗಲಿಲ್ಲ. ರಾತ್ರಿ ಬಹಳವಾಗಿತ್ತು.

ದೇವದಾಸ್ ತನ್ನ ಕೋಣೆಯನ್ನು ಪ್ರವೇಶಿಸಿ ಬಾಗಿಲು ಮುಚ್ಚಿ ಬೋಲ್ಟ್ ಹಾಕಿದನು. 'ಕೋಣೆಯೊಳಗೆ ಪ್ರವೇಶಿಸಿ ಯಾರೂ ತನಗೆ ತೊಂದರೆ ಕೊಡದಿರಲಿ' ದೇವದಾಸ್ ಪ್ರಾರ್ಥಿಸಿದನು.

ಅವನು ಲೈಟ್ ಹಾಕಿದನು.

ಹೂಸ್ ಬಿಚ್ಚಿಟ್ಟು ಮಂಚದ ಮೇಲೆ ಮಲಗಿಕೊಂಡು ದೇವದಾಸ್ ಮೇಲೆ ನೋಡಿದನು. ಅವನಿಗೆ ತನ್ನ ಕಣ್ಣುಗಳನ್ನು ನಂಬಲೇ ಸಾಧ್ಯವಾಗಲಿಲ್ಲ. ಎಲೆಕ್ಟ್ರಿಕ್ ಬಲ್ಬ್ ಎರಡಾಗಿ ಕಾಣುತ್ತಿತ್ತು. ಏನು ? ಏನಿದೀ ಆಶ್ಚರ್ಯ ? ಒಂದು ಬಲ್ಬ್‌ನ ಸ್ಥಾನದಲ್ಲಿ ಎರಡು ಬಲ್ಬ್‌ಗಳೇ ?

ದೇವರೇ ಇದೇನಾಗುತ್ತಿದೆ ? ನನಗೆ ಡಿಪ್ಲೋಪಿಯಾವೇ ?* ದೇವದಾಸ್ ಹಾಸಿಗೆಯಿಂದ ಆತುರಪಟ್ಟುಕೊಂಡು ಎದ್ದನು. ತನ್ನ ಕಣ್ಣಿಗೆ ಏನಾದರೂ ತೊಂದರೆ ಆಗುತ್ತಿದೆಯೇ ? ಇಲ್ಲ, ಒಂದೂ ಇಲ್ಲ. ಮೇಜು ಒಂದಾಗಿಯೇ ಕಾಣುತ್ತಿದೆ. ಕುರ್ಚಿಯೂ ? ಒಂದಾಗಿಯೆ ಕಾಣುತ್ತಿದೆ. ಗೋಡೆಯಲ್ಲಿನ ಕ್ಯಾಲೆಂಡರ್ ಸಹ ಒಂದಾಗಿಯೇ ಕಾಣುತ್ತಿದೆ.

ಮತ್ತೆ ಮಂಚದ ಮೇಲೆ ಬಂದು ಒರಗಿಕೊಂಡು ಮಲಗಿದ ದೇವದಾಸ್ ದೀಪದ ಕಡೆ ನೋಡಿದನು. ಮುಂಚಿನಂತೆ ಅದು ಎರಡಾಗಿ ಕಾಣುತ್ತಿತ್ತು. ದೀಪ ಮಾತ್ರ ಎರಡಾಗಿ ಉರಿಯುತ್ತಿತ್ತು.

ದೇವದಾಸ್ ಕಳವಳದಿಂದ ಎದ್ದು ತನ್ನ ಕೊಠಡಿಯಲ್ಲಿ ಅಲ್ಲಿಂದಿಲ್ಲಿಗೆ

---

* ಡಿಪ್ಲೋಪಿಯಾ: ಒಂದು ವಸ್ತು ಎರಡಾಗಿ ಕಾಣುವ ರೋಗ.

ನಡೆಯುತೊಡಗಿದನು. ಆಗ ಅವನಿಗೆ ಕೋಣೆಯ ನೆಲದ ಮೇಲೆ ತನ್ನ ನೆರಳು ಕಾಣಿಸಿತು. ಅದಕ್ಕೆ ತಲೆಯೇ ಇರಲಿಲ್ಲ. ತಲೆಯಿಲ್ಲದ ತನ್ನ ನೆರಳನ್ನು ಕಂಡಾಗ ದೇವದಾಸ್ ದಿಗ್ಭ್ರಾಂತನಾದನು.

ಕಂಡಿತು ಮರಣದ ಹೇತುಗಳು
ಕಂಡಿತು ಶಿರಹೀನವಾದ ತನ್ನ ನೆರಳು
ಒಂದು ದೀಪವು ಎರಡಾಗಿ ಕಂಡಿತು
ಒಂದು ನೆರಳು ಛಿದ್ರವಾಗಿದ್ದು ಕಂಡಿತು.

# ಮೂವತ್ತೆರಡು

ರಾಣಿ ಆಚಾರಿಯವರ ಒಂದು ಸಂದೇಶದೊಂದಿಗೆ ಒಬ್ಬ ದೂತನು ಹಾಸ್ಟೆಲ್‌ಗೆ ಬಂದನು. ರಾಣಿ ಆಚಾರಿ ಮಿಸ್ಟರ್ ಆಚಾರಿಯವರ ಧರ್ಮಪತ್ನಿ.

ಆದಿನ ಒಂದು ದೀಪವನ್ನು ಎರಡು ದೀಪಗಳಾಗಿಯೂ, ತನ್ನ ನೆರಳಿಲ್ಲಿ ತಲೆಯಿಲ್ಲದಂತೆಯೂ ನೋಡಿದ್ದ ದೇವದಾಸ್ ಕಂಗೆಟ್ಟು ಆ ರಾತ್ರಿಯನ್ನು ಕಳೆದಿದ್ದನು. ಅವನು ಆ ರಾತ್ರಿಯನ್ನೆಲ್ಲಾ ನಿದ್ದೆಯಲ್ಲಿ ನಡೆದಾಡುತ್ತಾ, ಅರ್ಧ ಎಚ್ಚರದಲ್ಲಿ ಏನೆಲ್ಲವನ್ನೋ ಕಂಡು, ಕೇಳಿ, ಕಳೆದಿದ್ದನು. ಅವನು ಮಲಗಿ ನಿದ್ದೆ ಮಾಡುವ ವೇಳೆಗೆ ಬೆಳಗಾಗಿತ್ತು.

ದೇವದಾಸ್ ಬಾಗಿಲು ತಟ್ಟಿದ ಶಬ್ದವನ್ನು ಕೇಳಿ ಎದ್ದು ಬಾಗಿಲು ತೆರೆದಾಗ ಸಂದೇಶವೊಂದನ್ನು ಕೈಯಲ್ಲಿ ಹಿಡಿದು ನಿಂತಿದ್ದ ದೂತನನ್ನು ಕಂಡನು. ಕಪ್ಪನೆಯ ಉದ್ದನೆಯ ಒಂದು ಳೋಪ*ವನ್ನು ಧರಿಸಿದ್ದ ಆ ದೂತನು ವಿಚಿತ್ರವಾಗಿ ಕಂಡನು.

ಕಾಗದಲ್ಲಿ ಹೀಗಿತ್ತು:

"ಮಿಸ್ಟರ್ ದೇವದಾಸ್,

ಈ ಕಾಗದ ತರುವ ದೂತನ ಜೊತೆಯಲ್ಲಿ ನಮ್ಮ ಮನೆಗೆ ಸ್ವಲ್ಪ ಬನ್ನಿ. ನಿಮ್ಮ ಬಳಿ ಬಹಳ ಅವಸರದ ವಿಷಯವೊಂದನ್ನು ಮಾತಾಡಬೇಕಿದೆ. ವೃಥಾ ಕಾಲ ಕಳೆಯಬೇಡಿ.

ಇತಿ

ರಾಣಿಯಮ್ಮ"

ಮಿಸೆಸ್ ಆಚಾರಿಯನ್ನು ಎಲ್ಲರೂ ರಾಣಿಯಮ್ಮ ಎಂದೇ ಕರೆಯುತ್ತಿದ್ದುದು. ರಾಣಿಯಮ್ಮ ಎಂದರೆ ಟೆರ್ರಾಮೈಸಿನ್ ಬಿಲ್ಡಿಂಗ್‌ನೊಂದಿಗೂ ಮಿಸ್ಟರ್ ಆಚಾರಿಯವರೊಂದಿಗೂ ಸಂಪರ್ಕವಿರುವ ಎಲ್ಲರಿಗೂ ಚೆನ್ನಾಗಿ ಗೊತ್ತೇ ಇತ್ತು. ಆಚಾರಿಯವರ ಮನೆಯಲ್ಲಿ ಒಂದು ಅಲ್‌ಸೇಷಿಯನ್‌ನ ಅಭಾವವನ್ನು ರಾಣಿಯಮ್ಮ ತುಂಬಿಸುತ್ತಿದ್ದಾರೆ. ಆಚಾರಿಯವರಿಂದ ಆರಂಭವಾಗಿ ಡಿಪಾರ್ಟ್‌ಮೆಂಟಿನ ಪ್ಯೂನ್‌ವರೆಗೂ ಎಲ್ಲರೂ ಹೆದರುವ ವ್ಯಕ್ತಿಯಾಗಿದ್ದರಾಕೆ. ರಾಣಿಯಮ್ಮ ಎಂಬ ಹೆಸರು ಕೇಳಿದರೆ ಮಕ್ಕಳು ಅಳುವುದನ್ನು ನಿಲ್ಲಿಸುತ್ತಿದ್ದರು. ತಣ್ಣೀರು ಆವಿಯಾಗಿ ಹೋಗುತ್ತೆ. ಹೇಂಟೆ ಕೂಗುತ್ತದೆ.

ರಾಣಿಯಮ್ಮನವರ ಬಗ್ಗೆ ದೇವದಾಸ್ ಬೇಕಾದಷ್ಟು ಕೇಳಿದ್ದನು. ಸರ್ಜರಿ ಪರೀಕ್ಷೆಯಲ್ಲಿ ಯಾರ್‍ಯಾರನ್ನು ಫೇಲ್ ಮಾಡಿಸಬೇಕೆನ್ನುವವರೆಗೆ ರಾಣಿಯಮ್ಮ ಮಿಸ್ಟರ್

---

* ಳೋಪ: ಪಾದ್ರಿಗಳ ಒಂದು ವಿಶೇಷ ಉಡುಗೆ.

ಆಚಾರಿಯವರಿಗೆ ಉಪದೇಶ ಮಾಡುತ್ತಿದ್ದರು. ಈ ವಿಷಯ ಎಲ್ಲರಿಗೂ ಗೊತ್ತಿತ್ತು.

ಮೈ ತೊಳೆದು ಹಲ್ಲುಜ್ಜಿ, ಬಟ್ಟೆ ಬದಲಾಯಿಸಿ ದೇವದಾಸ್ ಮಿಸ್ಟರ್ ಆಚಾರಿಯವರ ಮನೆಗೆ ಬಂದನು.

ಮನೆಯ ಪೋರ್ಟಿಕೋವಿನಲ್ಲಿ ಯಾರೂ ಇರಲಿಲ್ಲ. ಅಲ್ಲಿ ಕಾರೂ ಇರಲಿಲ್ಲ. ಅದು ಮಿಸ್ಟರ್ ಆಚಾರಿಯವರು ಮನೆಯಲ್ಲಿಲ್ಲವೆಂಬುದರ ಕುರುಹಾಗಿತ್ತು. ಬೆಲ್ ಹೊಡೆದಾಗ ಒಂದು ಬಿರುಗಾಳಿಯಂತೆ ರಾಣಿಯಮ್ಮ ಹೊರಕ್ಕೆ ಬಂದರು. ಆಕೆಯ ದುಂಡು ಮುಖವು ಕೆಂಪೇರಿತ್ತು. ಒಬ್ಬ ಚೈನಾದವನನ್ನು ನೆನಪಿಸುವ ಬಾದಾಮಿ ಯಾಕಾರದ ಆಕೆಯ ಕಣ್ಣುಗಳು ದೇವದಾಸ್‌ನ ಮೇಲೆ ನೆಟ್ಟವು. ಕಣ್ಣುಗಳು ಚಿಕ್ಕದಾದರೂ ನೋಟವು ತೀಕ್ಷ್ಣವಾಗಿತ್ತು. ಆಕೆಯ ತಲೆಗೂದಲುಗಳು ತೋಳಿನವರೆಗೂ ಕತ್ತರಿಸಲ್ಪಟ್ಟಿದ್ದವು. ತೋಳಿಲ್ಲದ ಬ್ಲೌಸಿನ ಒಳಗೆ ಮಾಂಸಲವಾದ ಬೊಜ್ಜು ಬೊಜ್ಜಾದ ತೋಳುಗಳನ್ನು ಕರೆಯುತ್ತಾ ಹೊರಬಂದು ಕೈಯನ್ನೆತ್ತಿ ವಿಸಿಟರ್ಸ್ ರೂಮ್ ಅನ್ನು ನಿರ್ದೇಶಿಸಿ ಆಕೆ ಒಂದು ಕ್ಷಣ ಅಲ್ಲಿ ನಿಂತರು. ಆಕೆಯ ಅಂಗೈಗಳು ಬಲು ಚಿಕ್ಕದಾಗಿದ್ದವು. ಬೆರಳುಗಳು ಅಂಟಿಕೊಂಡಿದ್ದರಿಂದ ಅವಕ್ಕೆ ಹಸಿಶುಂಠಿಯ ಆಕೃತಿ ಇತ್ತು. ಕೈ ತೋರಿಸಿದರಲ್ಲದೆ ಆಕೆ ಮತ್ತೇನೂ ಹೇಳಲಿಲ್ಲ. ಆಕೆಯ ನಿರ್ದೇಶನವನ್ನು ಅರ್ಥಮಾಡಿಕೊಂಡ ದೇವದಾಸ್ ವಿಸಿಟರ್ಸ್ ರೂಮನ್ನು ಪ್ರವೇಶಿಸಿದನು. ಅವನ ಹಿಂದೆಯೇ ಆಕೆಯೂ ಪ್ರವೇಶಿಸಿ ಬಾಗಿಲು ಮುಚ್ಚಿದರು.

ರೂಮಲ್ಲಿ ಬೆಳಕಿದ್ದರೂ ಅದರೊಳಗೆ ಕತ್ತಲೆಯು ಹರಡಿ ತುಂಬಿದಂತೆ ದೇವದಾಸ್‌ಗೆ ಭಾಸವಾಯಿತು.

ಏನಾದರೂ ಹೇಳಲೋ ಕೇಳಲೋ ದೇವದಾಸ್‌ಗೆ ಸಾಧ್ಯವಾಗುತ್ತಿಲ್ಲ. ಯಾವುದೋ ಒಂದು ಅಜ್ಞಾತಶಕ್ತಿ ಅವನನ್ನು ಆಜ್ಞಾಪಿಸಿ ನಿಯಂತ್ರಿಸುತ್ತಿತ್ತು. ದೇವದಾಸ್ ಆ ಶಕ್ತಿಗೆ ಆಜ್ಞಾಬದ್ಧನಾಗಿದ್ದಾನೆ.

ಏನು ನಡೆಯುತ್ತೆ ಈಗ ? ಏನೊಂದೂ ತಿಳಿಯದೆ ಯಾವುದೋ ಬಲವಂತಕ್ಕೆ ಶರಣಾಗಲು ಕಾದಿರುವವನಂತೆ, ತನ್ನ ಬಲವೆಲ್ಲಾ ಸೋರಿ ಹೋದಂತೆ, ದೇವದಾಸ್ ಬೆವರುತ್ತಿದ್ದನು.

"ದೇವದಾಸ್ ಎಂದರೆ ನೀನೇನು ?" ಇದ್ದಕ್ಕಿದ್ದಂತೆ ರಾಣಿಯಮ್ಮ ಕೇಳಿದರು. ಆಕೆಯ ಧ್ವನಿ ಬಲು ಗಡುಸಾಗಿತ್ತು. ಹೆಂಗಸಿನ ಧ್ವನಿಯಂತೆ ಅದು ಭಾಸವಾಗುತ್ತಿರಲಿಲ್ಲ.

"ಹೌದು" ದೇವದಾಸ್‌ನ ಧ್ವನಿ ಪಾತಾಳದಿಂದ ಬಂದಂತಿತ್ತು.

"ನೀನು ಯಾವ ಊರಿನವನು ? ಯಾವ ಜಾತಿಗೆ ಸೇರಿದವನು ? ಯಾವ ಮತದವನು ? ನೀನು ಯಾವ ವಂಶಕ್ಕೆ ಸೇರಿದವನು ? ನಿನ್ನ ತಂದೆ ಯಾರು ? ಆತನ ಉದ್ಯೋಗವೇನು ?" ಒಂದೇ ಉಸುರಿಗೆ ಆಕೆ ಇಷ್ಟು ಪ್ರಶ್ನೆಗಳನ್ನೂ ಕೇಳಿದರು.

ಅಷ್ಟು ಕೇಳಿ ನಿಲ್ಲಿಸಿ ರಾಣಿಯಮ್ಮ ದೀರ್ಘವಾಗಿ ಉಸಿರೆಳೆದುಕೊಂಡರು.

"ಮಿಸ್ಟರ್ ಆಚಾರಿಯವರ ಮಗಳನ್ನು ಪ್ರೇಮಿಸಲು ನಿನಗೆಂತಹ ಯೋಗ್ಯತೆ ಇದೆ ? ಲಕ್ಷ್ಮಿಯ ಒಂದು ರೋಮದ ಬೆಲೆಯಿದೆಯೇ ನಿನಗೆ ?"

ರಾಣಿಯಮ್ಮನವರಿಗೆ ಉಸಿರು ಕಟ್ಟಿದಂತಾಯಿತು. ಅದರ ಮಧ್ಯೆಯೂ ಬಿಕ್ಕುತ್ತಿರುವಂತೆ ಆಕೆ ಮಾತನಾಡತೊಡಗಿದರು.

"ಆನೆಯ ಒಂದೆ ಮಾವುತನಂತೆ ನೀನು ಯಾವಾಗಲೂ ಅವಳ ಒಂದೆ ಓಡಾಡುತ್ತಿರುವ ವಿಷಯ ನನಗೆ ಬಲು ತಡವಾಗಿಯಾದರೂ ತಿಳಿಯಿತು. ಮುಂಚೆಯೇ ಇದೆಲ್ಲಾ ತಿಳಿದಿದ್ದರೆ ನಿನ್ನನ್ನು ರಕ್ಷಿಸಲು ನನಗೆ ಸಾಧ್ಯವಾಗುತ್ತಿತ್ತೇನೋ ?"

ಸ್ವಲ್ಪ ಹೊತ್ತು ಆಕೆ ನಿಶ್ಶಬ್ದರಾದರು.

"ಆದರೆ ಈಗ ಬಲು ವಿಳಂಬವಾಗಿ ಹೋಯಿತು. ಇನ್ನೂ ನೀನು ಬಚಾವಾಗಲು ದಾರಿ ಇದೆ. ಮಿಸ್ಟರ್ ಆಚಾರಿ ಈ ವಿಷಯವನ್ನು ಇನ್ನು ಪತ್ತೆ ಹಚ್ಚಿಲ್ಲವಾದ್ದರಿಂದ ನೀನು ಇನ್ನೂ ಅದೃಷ್ಟವಂತ ಎನ್ನಬಹುದು. ಅವರಿಗೇನಾದರೂ ಈ ವಿಷಯ ಗೊತ್ತಾದರೆ ನೀನು ನಾಶವಾಗುವುದು ಮಾತ್ರವಲ್ಲ, ನನ್ನ ಮಗಳೂ ಹಾಳಾಗಿ ಹೋಗುತ್ತಾಳೆ. ಇದುವರೆಗೆ ನಿನಗೆ ಅವರನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗಲಿಲ್ಲವೇ ? ಅವರಿಗೇನಾದರೂ ಕೋಪಬಂದರೆ ದಯೆ ಎನ್ನುವ ಭಾವನೆ ಅವರ ಬಳಿ ಸುಳಿಯುವುದೇ ಇಲ್ಲ. ಅವರು ಎಲ್ಲವನ್ನೂ ಸುಟ್ಟು ಭಸ್ಮ ಮಾಡಿಬಿಡುತ್ತಾರೆ. ಅದರಿಂದ ಯಾರಿಗೆ ಏನು ನಷ್ಟವಾದರೂ ಅವರಿಗದು ಸಮಸ್ಯೆ ಎನಿಸುವುದಿಲ್ಲ."

ರಾಣಿಯಮ್ಮನವರ ಕೋಪವು ಸ್ವಲ್ಪ ಶಾಂತವಾದಂತೆ ತೋರಿತು. ಅವರ ಧ್ವನಿಯಲ್ಲಿ ನಡುಕ ಸ್ವಲ್ಪ ಕಡಿಮೆಯಾಯಿತು. ಧ್ವನಿ ಮೃದುವಾಯಿತು.

"ಸರಿ ನೀನು ಒಂದು ಕೆಲಸ ಮಾಡು. ಇಂದಿನಿಂದ ನೀನು ನನ್ನ ಮಗಳ ಮುಖವನ್ನು ನೋಡಬೇಡ ಅಥವಾ ಅಕಸ್ಮಾತ್ತಾಗಿ ನೋಡಿಬಿಟ್ಟರೆ, ನೋಡದಂತೆ ನಟಿಸು. ನಿನ್ನ ಮನಸ್ಸಿನಲ್ಲಿ ಇನ್ನೂ ಏನಾದರೂ ಅವಳ ಬಗ್ಗೆ ಕೋಮಲ ಭಾವನೆಗಳು ಉಳಿದಿದ್ದರೆ. ಅವನ್ನು ಒಂದು ಗುಂಡಿಯೊಳಗೆ ತೆಗೆದು ಹೂತುಬಿಡು. ಆವಾಗಲೇ ನೀನು ಬಚಾವಾಗಲು ಸಾಧ್ಯ. ಅವಳಿಗೂ ಹೀಗೇ ಹೇಳುತ್ತೇನೆ. ನೀನಿನ್ನೂ ಯುವಕ, ಬುದ್ಧಿವಂತ, ಚೆನ್ನಾಗಿ ಓದಿ ಪಾಸಾಗಿ ನಿನ್ನ ಅಂತಸ್ತಿಗೆ ಸರಿಯೆನಿಸುವ ಒಬ್ಬ ಹುಡುಗಿಯನ್ನು ಮದುವೆಯಾಗಿ ಸುಖವಾಗಿ ಬದುಕಿ ಬಾಳು. ನಿನಗೆ ಎಲ್ಲಾ ಬಗೆಯ ಶ್ರೇಯಸ್ಸನ್ನೂ ಕೋರುತ್ತೇನೆ."

ಇದೆಲ್ಲಾ ಕೇಳುತ್ತಾ ಆಕೆಯಲ್ಲೇ ತನ್ನ ಕಣ್ಣುಗಳನ್ನು ನೆಟ್ಟು ದೇವದಾಸ್ ಕುಳಿತಿದ್ದನು. ಆಕೆ ಹೇಳಿದ ಮಾತುಗಳೆಲ್ಲಾ ಅವನ ಒಂದು ಕಿವಿಯಲ್ಲಿ ಹೊಕ್ಕು ಇನ್ನೊಂದು ಕಿವಿಯ ಮೂಲಕ ಹರಿದು ಹೋಗುತ್ತಿತ್ತು. ದೇವದಾಸ್‌ನ ಮನಸ್ಸು ಆ ಮಟ್ಟಿಗಾಗಿತ್ತು.

"ನೀನೇಕೆ ಏನೂ ಮಾತನಾಡುತ್ತಿಲ್ಲ ?" ದೇವದಾಸ್‌ನನ್ನು ದುರುಗುಟ್ಟಿಕೊಂಡು ನೋಡುತ್ತಾ ರಾಣಿಯಮ್ಮ ಕೇಳಿದರು.

"ಎಲ್ಲಾ ನೀವು ಹೇಳುತ್ತಲೇ ಇದ್ದೀರಲ್ಲಾ ?" ದೇವದಾಸ್ ಬಹಳ ಸಂಯಮ ತಂದುಕೊಂಡು ಹೇಳಿದನು.

"ಹಾಗಾದರೆ ನಿನ್ನ ತೀರ್ಮಾನವೇನು ? ನನ್ನನ್ನು ರಕ್ಷಿಸಿಕೊಳ್ಳಬಚ್ಚಿಸುತ್ತೀಯಾ

ಅಥವಾ ನಾಶವಾಗುತ್ತೀಯಾ ?" ರಾಣಿಯಮ್ಮನವರ ಧ್ವನಿಯಲ್ಲಿ ಕೋಪವಿತ್ತೋ, ತಾಳ್ಮೆಯಿತ್ತೋ ಒಂದೂ ಸ್ಪಷ್ಟವಾಗಿ ಗೊತ್ತಾಗುತ್ತಿರಲಿಲ್ಲ.

ಆಗ ಇದ್ದಕ್ಕಿದ್ದಂತೆ ಪೋರ್ಟಿಕೋವಿನಲ್ಲಿ ಕಾರು ಬಂದು ನಿಂತ ಶಬ್ದ ಕೇಳಿಸಿತು. ರಾಣಿಯಮ್ಮ ಗಾಬರಿಗೊಂಡರು.

ಆಕೆ ಬಾಗಿಲು ತೆರೆದರು.

ಬ್ರೀಫ್ ಕೇಸಿನೊಂದಿಗೆ ಮಿಸ್ಟರ್ ಆಚಾರಿ ಬಾಗಿಲನ್ನು ಪ್ರವೇಶಿಸಿದರು. ಕಾಮಿಕ್ ಪುಸ್ತಕಗಳಲ್ಲಿ ಕಾಣಬರುವ ಒಬ್ಬ ರಾಕ್ಷಸನಂತೆ ಅವರು ಬೆಳೆಯುತ್ತಿದ್ದಾರೆಂದು ದೇವದಾಸ್‌ಗನ್ನಿಸಿತು.

"ಟ್ರೈನ್ ಅರ್ಧ ಗಂಟೆ ಲೇಟ್" ಮಿಸ್ಟರ್ ಆಚಾರಿ ವಿಸಿಟರ್ಸ್ ರೂಮನ್ನು ನೋಡಿದರು. ದೇವದಾಸ್‌ನನ್ನು ಕಂಡು ಮಿಸ್ಟರ್ ಆಚಾರಿ ಹೇಳಿದರು.

"ಓ, ತಾವಿಲ್ಲಿಗೆ ಬಂದು ಬಿಟ್ಟಿರೇನು ? ಆದರೆ ಇಷ್ಟು ಬೇಗ ನೀವು ಬರುತ್ತೀರೆಂದು ನಾನು ನಿರೀಕ್ಷಿಸಿರಲಿಲ್ಲ. ಆದರೆ ಒಂದಲ್ಲ ಒಂದು ದಿನ ಇಲ್ಲಿಗೆ ಬಂದೇ ಬರುತ್ತೀರೆಂದು ನಾನು ಖಂಡಿತವಾಗಿ ತಿಳಿದಿದ್ದೆ."

ಕ್ಷೋಭೆಯಿಂದ ಮಿಸ್ಟರ್ ಆಚಾರಿ ಒಳಕ್ಕೆ ಹೋದರು.

ರಾಣಿಯಮ್ಮನವರ ಮುಖವು ಕಾಗದದಂತೆ ಬಿಳಿಚಿಕೊಂಡಿತು. ಆಕೆ ತಲೆ ತಿರುಗಿ ನೆಲದ ಮೇಲೆ ಬಿದ್ದು ಬಿಡುತ್ತಾರೆಯೋ ? ಬೀಳುವುದಾದರೆ ಬೀಳಲಿ. ದೇವದಾಸ್ ಕೋಣೆಯಿಂದ ಅವಸರವಸರವಾಗಿ ಹೊರಕ್ಕಿಳಿದು ಗೇಟು ದಾಟಿ ರಸ್ತೆಗೆ ಬಂದನು. ಬಂದದ್ದೇ ತಡ ಅವನು ಓಟಕಿತ್ತನು.

ಮಿಸ್ಟರ್ ಆಚಾರಿಯವರ ಮನೆಯ ವಾತಾವರಣ ಮೊದಲಿಗಿಂತ ಅಸ್ತವ್ಯಸ್ತವಾಗುತ್ತಿತ್ತು. ಕೋಪಾಕ್ರಾಂತರಾಗಿ ಮಿಸ್ಟರ್ ಆಚಾರಿ ಕೇಳಿದರು:

"ಇಲ್ಲಿಗೆ ಬರಲು ಅವನಿಗೆ ಯಾರು ಹೇಳಿದರು ? ಲಕ್ಷ್ಮಿಯೋ ನೀನೋ ? ಅದು ನನಗೆ ಗೊತ್ತಾಗಬೇಕು."

ಮಿಸ್ಟರ್ ಆಚಾರಿ ಕೋಪಗೊಂಡರು.

"ಸಣ್ಣ ಸಣ್ಣ ಮಾತುಗಳು ಕೆಲವು ನನ್ನ ಕಿವಿಗೆ ಬಿದ್ದವು. ಆದರೆ ಒಂದು ರುಜುವಾತಿಗೋಸ್ಕರ ನಾನು ಕಾದಿದ್ದೆ. ನನಗೆ ಈಗ ಅದು ಲಭಿಸಿತು."

ನಡೆದ ವಿಷಯವನ್ನು ಹೊರಗೆಡಹಲು ರಾಣಿಯಮ್ಮ ಪ್ರಯತ್ನಿಸಿದದಾದರೂ, ಮಿಸ್ಟರ್ ಆಚಾರಿ ಒಂದು ಮಾತು ಆಡಲೂ ಅವರಿಗೆ ಬಿಡಲಿಲ್ಲ. ಒಂದು ಪುನುಗಿನ ಬೆಕ್ಕಿನಂತೆ ಅವರು ಕೋಣೆಯಲ್ಲಿ ದಡ ದಡ ನಡೆದರು.

"ಮಕ್ಕಳು ಪ್ರೇಮಿಸಲಿ ನನಗದರಲ್ಲಿ ಆಕ್ಷೇಪಣೆ ಇಲ್ಲ. ಆದರೆ ಅದರಲ್ಲಿ ಸಾಮರಸ್ಯವಿರಬೇಕು."

ರಾಣಿಯಮ್ಮ ಏನನ್ನೋ ಹೇಳಲು ಸಿದ್ಧರಾದರು.

"ಹೋಗು ನನ್ನ ಎದುರಿಗೆ ನಿಲ್ಲಬೇಡ." ಮಿಸ್ಟರ್ ಆಚಾರಿ ಹಾಗೆಂದವರೇ ತಮ್ಮ ರೀಡಿಂಗ್ ರೂಮನ್ನು ಪ್ರವೇಶಿಸಿ ಬಾಗಿಲನ್ನು ಹಾಕಿಕೊಂಡರು.

ಮಿಸ್ಟರ್ ಆಚಾರಿ ತಮ್ಮ ಜೀವನದಲ್ಲಿ ನಿಶ್ಶಕ್ತರಾಗುತ್ತಾ ಬರುತ್ತಿದ್ದರು. ಕಳೆದ ಎರಡು ಮೂರು ತಿಂಗಳಿಂದ ಅವರ ಆರೋಗ್ಯ ಸರಿ ಇರಲಿಲ್ಲ. ಅವರ ಗಂಟಲಿಗೆ

ಏನೋ ಆದಂತಿತ್ತು. ಆಹಾರ ಸೇವಿಸುವಾಗ ಸ್ವಲ್ಪ ಏನೋ ಗಂಟಲಿನಲ್ಲಿ ಸಿಕ್ಕಿಕೊಂಡಂತಾಗುತ್ತಿತ್ತು. ತಮ್ಮ ಕಾಲೇಜ್‌ನಲ್ಲಿ ಇದ್ಯಾರಿಗೂ ಗೊತ್ತಾಗದಿರಲೆಂದು ದೂರದಲ್ಲಿರುವ ತಮ್ಮ ಡಾಕ್ಟರ್ ಸ್ನೇಹಿತರೊಬ್ಬರನ್ನು ಕನ್‌ಸಲ್ಟ್ ಮಾಡಲೆಂದು ಅವರು ಹೊರಟಿದ್ದರು. ಅಷ್ಟು ಹೊತ್ತಿಗೆ ಟ್ರೈನ್ ಎಂದಿಗಿಂತ ಹೆಚ್ಚು ಲೇಟ್ ಆಗಿದೆಯೆಂದು ಗೊತ್ತಾಯಿತು. ಪ್ರಯಾಣವನ್ನು ಮತ್ತೊಂದು ದಿನಕ್ಕೆ ಮುಂದೂಡಿ ಮನೆಗೆ ವಾಪಸ್ ಬಂದಾಗ ಅಲ್ಲಿಯೂ ಈ ಗೋಳು ಕಂಡು ಬಂದಿತ್ತು.

ಗಾಜಿನ ಬೀರುವನ್ನು ತೆರೆದು ಗಜಲ್ ಗ್ರಂಥವನ್ನು ಮುಂದೆ ತೆರೆದಿಟ್ಟುಕೊಂಡು ಕುಳಿತು ಮಿಸ್ಟರ್ ಆಚಾರಿ ಗಜಲುಗಳನ್ನು ಓದಲು ಪ್ರಾರಂಭಿಸಿದರು. ಆದರೆ ಅದರಲ್ಲಿನ ಒಂದು ಪಂಕ್ತಿಯನ್ನೂ ಅವರಿಗೆ ಓದಿ ಸಂತೋಷಪಡಲು ಆಗಲಿಲ್ಲ. ಮನಸ್ಸಿನಲ್ಲಿ ಏನೋ ಸಂಕಟ. ಎಲ್ಲೋ ತಾಳ ತಪ್ಪುತ್ತಿದೆ. ಕೊನೆಯ ದಿನಗಳ ನೆನಪುಗಳು ತಲೆಯಲ್ಲಿ ಹೊಕ್ಕು ಕೊರೆಯಲು ಆರಂಭವಾದಂತಿದೆ.

ಮಿಸ್ಟರ್ ಆಚಾರಿ ಎದ್ದು ಹೊರಕ್ಕೆ ಬಂದು ಜೋರಾಗಿ ಕೂಗಿದರು:

"ಲಕ್ಷ್ಮೀ!"

ಲಕ್ಷ್ಮಿ ಮಿಸ್ಟರ್ ಆಚಾರಿಯ ಮುಂದೆ ಬಂದು ನಿಂತಳು. ಆಗ ಅವಳು ನೆನೆದು ಮುದ್ದೆಯಾದ ಬೆಕ್ಕಿನಂತಿದ್ದಳು. ನಿದ್ದೆಯಿಂದ ಎಚ್ಚೆತ್ತಂತಿದ್ದ ಅವಳ ದೊಡ್ಡ ಕಣ್ಣುಗಳಲ್ಲಿ ಲೋಕದ ದುಃಖಗಳೆಲ್ಲಾ ಹೆಪ್ಪುಗಟ್ಟಿದಂತಿತ್ತು. ತನ್ನ ತಂದೆಯ ಎದುರಿಗೆ ಒಬ್ಬ ನ್ಯಾಯಾಧೀಶನ ಸಾನ್ನಿಧ್ಯದಲ್ಲಿಯಂತೆ ತೀರ್ಪನ್ನು ಕೇಳಲು ನಿಂತಿರುವಂತೆ ಅವಳು ಕಿವಿಗೊಟ್ಟು ನಿಂತಳು.

ತಂದೆಯ ಮುಖವನ್ನು ನೋಡಲು ಅವಳಿಗೆ ಧೈರ್ಯವಿರಲಿಲ್ಲ. ಧೈರ್ಯ ತರಿಸಿಗೊಳ್ಳಲು ಅವಳಿಗೆ ಶಕ್ತಿಯೇ ಇರಲಿಲ್ಲ. ಅವಳೀಗ ನಿರಾಯುಧಳಾದ ಒಬ್ಬ ಸೈನಿಕನಂತಿದ್ದಳು. ಅವಳ ಅಂತರ್ಮಥನದ ಕೂಗನ್ನು ಕೇಳುವವರ್‍ಯಾರು ?

"ಲಕ್ಷ್ಮೀ" ದೃಢವಾದ ಸ್ವರದಲ್ಲಿ ಮಿಸ್ಟರ್ ಆಚಾರಿ ಕೂಗಿ ಹೇಳಿದರು. "ಇಲ್ಲಿಗೆ ಇನ್ನು ನಿನ್ನ ಓದು ನಿಂತಂತೆಯೇ. ನಾಳೆಯಿಂದ ನೀನು ಕಾಲೇಜಿಗೆ ಹೋಗಬೇಡ. ಕಾಲೇಜ್‌ಗೆ ಕಾಲೇ ಇಡಬೇಡ."

ಲಕ್ಷ್ಮಿ ನೆಲಕ್ಕೆ ಕೀಲಿಸಿದಂತೆ ನಿಂತು ನೆಲವನ್ನು ನೋಡುತ್ತಿದ್ದಳು.

"ನಿನಗೆ ಏನಾದರೂ ಹೇಳಲಿದೆಯೇ ?" ಚಾರ್ಜ್‌ಷೀಟ್ ಓದಿ ಕೇಳಿಸಿದ ನಂತರ ನ್ಯಾಯಾಧೀಶನು ಅಪರಾಧಿಯನ್ನು ಕೇಳಿದಂತಿತ್ತು.

ಲಕ್ಷ್ಮಿ ಬಿಕ್ಕುತ್ತಾ ಹೇಳಿದಳು.

"ಇನ್ನೂ ಪರೀಕ್ಷೆ ಮಾತ್ರ ಉಳಿದಿದೆ. ರೆಗ್ಯುಲರ್ ಕ್ಲಾಸ್ ಮುಗಿಯಿತು."

"ಪರೀಕ್ಷೆಗೇನೂ ಹೋಗಬೇಡ. ನೀನು ಡಾಕ್ಟರ್ ಆಗಲೂ ಬೇಡ. ನಿನ್ನ ಹಣೆಯಲ್ಲಿ ಬರೆದಿರುವುದೇ ಅದು." ಮಿಸ್ಟರ್ ಆಚಾರಿ ಕೇಳಿದರು. "ನನಗೆ ಇಲ್ಲಿಯವರೆಗೂ ಬಲು ಆಶ್ಚರ್ಯವಾಗುತ್ತಿತ್ತು. ನಿನ್ನ ಜಾತಕದಲ್ಲಿ ನೀನು ಡಾಕ್ಟರಾಗುತ್ತೀ ಎಂದು ಎಲ್ಲೂ ಹೇಳಿಲ್ಲ. ಜಾತಕದಲ್ಲಿ ದೊಡ್ಡ ಬದಲಾವಣೆಯನ್ನುಂಟುಮಾಡಲೆಂದು ನಕ್ಷತ್ರಗಳನ್ನು ಬದಲಾಯಿಸಿ ಬಿಡಲು ನನ್ನಿಂದ ಸಾಧ್ಯವಿಲ್ಲ."

"ಇನ್ನು ಎರಡು ಮೂರು ಪರೀಕ್ಷೆಗಳಲ್ಲವೇ ಉಳಿದಿರುವುದು. ಏನೇ ಆದರೂ ಅವಳು ಡಿಗ್ರಿ ಕಂಪ್ಲೀಟ್ ಮಾಡಲಿ" ರಾಣಿಯಮ್ಮ ಮಧ್ಯೆ ತಲೆಹಾಕಿ ಹೇಳಿದರು.

"ದಯವಿಟ್ಟು ನೀನು ನಿನ್ನ ರೂಮಿಗೆ ಹೋಗು. ನೀನು ಇದರಲ್ಲಿ ತಲೆ ಹಾಕಬೇಡ. ನೀನು ಸರಿಯಾಗಿದ್ದಿದ್ದರೆ ಇದೊಂದೂ ನಡೆಯುತ್ತಿರಲಿಲ್ಲ" ಮಿಸ್ಟರ್ ಆಚಾರಿ ಹೇಳಿದನು.

ಮಿಸ್ಟರ್ ಆಚಾರಿ ಒಂದು ತೀರ್ಮಾನ ತೆಗೆದುಕೊಂಡರೆ ಅದನ್ನು ದೃಢಪಡಿಸಿಕೊಂಡಂತೆಯೇ. ನದಿಯಲ್ಲಿ ಸೇತುವೆ ಬಲವಾಗಿ ಕಟ್ಟಿದಂತಿರುತ್ತಿತ್ತು.

"ನೀನಿನ್ನು ನಿನ್ನ ಕೋಣೆಗೆ ಹೋಗು" ಮಿಸ್ಟರ್ ಆಚಾರಿ ಮತ್ತೊಮ್ಮೆ ಹೇಳಿದನು.

"ಲಕ್ಷ್ಮೀ, ನೀನೂ ನಿನ್ನ ಕೋಣೆಗೆ ಹೋಗು. ನನಗಿನ್ನು ಹೆಚ್ಚು ಯಾರ ಬಳಿಯಲ್ಲೂ ಮಾತನಾಡಬೇಕಿಲ್ಲ."

ಮಿಸ್ಟರ್ ಆಚಾರಿ ಒಂಟಿಯಾಗಿ ನಿಂತರು. ಯಾರೊಂದಿಗೂ ಅಲ್ಲವೆಂಬಂತೆ ಅವರು ಹೇಳಿದರು. "ಜಾತಕದಲ್ಲಿ ದೊಡ್ಡ ಬದಲಾವಣೆಯನ್ನುಂಟು ಮಾಡಲು ನಾನು ಯಾರು ?"

ಆ ಮನೆಯು ನಿಶ್ಶಬ್ದವಾಯಿತು. ಮೌನವು ಇಬ್ಬನಿಯಂತೆ ಆ ಮನೆಯನ್ನು ಆವರಿಸಿತು.

ರಾಣಿಯಮ್ಮ ತಮ್ಮ ಕೋಣೆಯನ್ನು ಪ್ರವೇಶಿಸಿ ತಮ್ಮ ಆಭರಣಗಳ ಪೆಟ್ಟಿಗೆಯನ್ನು ತೆರೆದು ಆಭರಣಗಳನ್ನೆಲ್ಲಾ ಹಾಸಿಗೆಯ ಮೇಲೆ ಹರಡಿದರು. ಮನೆಯಲ್ಲಿ ಏನಾದರೂ ಘರ್ಷಣೆ ನಡೆದಾಗ ರಾಣಿಯಮ್ಮ ನಡೆದುಕೊಳ್ಳುವ ರೀತಿ ಅದು. ಒಂದೊಂದನ್ನು ಒಂದರ ನಂತರ ಒಂದಂತೆ ಧರಿಸಿ ಆಕೆ ಕನ್ನಡಿಯಲ್ಲಿ ತಮ್ಮನ್ನು ನೋಡಿಕೊಂಡರು. ಕೊನೆಗೆ ಎಲ್ಲವನ್ನೂ ಆಕೆ ಧರಿಸಿದರು. ಹಣೆಗೆ ಬೊಟ್ಟನ್ನು ಹಚ್ಚಿಕೊಂಡು ಏನನ್ನೋ ಗೊಣಗತೊಡಗಿದರು. ಗೊಣಗುತ್ತಾ ಗೊಣಗುತ್ತಾ ಆಕೆ ಹಾಗೇ ನಿದ್ದೆ ಮಾಡಿಬಿಟ್ಟರು. ರಾಣಿಯಮ್ಮನವರ ಗೊರಕೆಯು ಆ ರೂಮಿನಲ್ಲಿ ತಾಂಡವವಾಡತೊಡಗಿತು.

ಲಕ್ಷ್ಮಿ ತನ್ನ ಕೋಣೆಯೊಳಹೊಕ್ಕು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡಳು. ಆಗ ಲೋಕದ ದುಃಖವನ್ನೆಲ್ಲಾ ಹೊತ್ತಿರುವ ಒಬ್ಬ ಹುಡುಗಿಯ ಮುಖವನ್ನವಳು ಅದರಲ್ಲಿ ಕಂಡಳು. ಅವಳ ಮುಖವೆಲ್ಲಾ ಕೆಂಪೇರಿತ್ತು. ಕಣ್ಣುಗಳಲ್ಲಿ ನೀರು ತುಂಬಿತ್ತು. ನೀರಿನ ಚಿಲುಮೆಗಳು ನಾಲ್ಕೂ ಕಡೆಯಿಂದ ಸಣ್ಣ ಸಣ್ಣ ಕಣಗಳಾಗಿ ಕಾಣಿಸಿಕೊಂಡು, ಕಣ್ಣೀರು ಧಾರೆಧಾರೆಯಾಗಿ ಹರಿಯತೊಡಗಿತು. ಕನ್ನಡಿಯಲ್ಲಿನ ಲಕ್ಷ್ಮಿ ಅಳುವುದನ್ನು ಲಕ್ಷ್ಮಿ ನೋಡುತ್ತಾ ನಿಂತಳು. ಲಕ್ಷ್ಮಿ ಅವಳನ್ನು ಸಮಾಧಾನ ಪಡಿಸುವ ಪ್ರಯತ್ನ ಮಾಡಲೆತ್ನಿಸಿದಳು. ಆದರೆ ಅವಳಿಗದು ಸಾಧ್ಯವಾಗಲಿಲ್ಲ.

ಡಾಕ್ಟರ್ ಆಚಾರಿಯೂ ಬಾಗಿಲು ಹಾಕಿ ಬೇಗ ಹಾಗಿ ತಮ್ಮ ಕೋಣೆಯೊಳಗಿದ್ದ ಕನ್ನಡಿಯೊಳಗೆ ದಿಟ್ಟಿಸಿದರು. ಅವರು ಆಭರಣಗಳನ್ನೋ ಕಣ್ಣೀರನ್ನೋ ಕನ್ನಡಿಯಲ್ಲಿ ನೋಡಲಿಲ್ಲ. ಅವರು ಕನ್ನಡಿಯಲ್ಲಿ ತಮ್ಮ ಗಂಟಲನ್ನು ನೋಡಿಕೊಳ್ಳತೊಡಗಿದರು. ಬಾಯನ್ನು ಅಗಲಿಸಿ ತೆರೆದು, ಅವರು ತಮ್ಮ ಕಂಠನಾಳವನ್ನು ಪರೀಕ್ಷಿಸಿಕೊಳ್ಳಲೆತ್ನಿಸತೊಡಗಿದರು. ಅಗಲಿಸಿ ತೆರೆದಿದ್ದ ತಮ್ಮ ಬಾಯೊಳಗೆ ಆಚಾರಿ

ದಿಟ್ಟಿಸಿ ನೋಡಿದಾಗ, ಅಲ್ಲಿ ಮೂರು ಲೋಕಗಳೇನೂ ಅವರಿಗೆ ಕಾಣಿಸಲಿಲ್ಲ. ಆದರೆ ತಮ್ಮ ಗಂಟಲಿನ ನಾಳದಲ್ಲಿ ಬಿರಿದುಕೊಂಡಿರುವ ಒಂದು ರೋಗದ ಹೂಗಳನ್ನು ಅವರಿಗೆ ಕಾಣಲು ಸಾಧ್ಯವಾಯಿತು.

ಮಾರನೆಯ ದಿನ ಮಧ್ಯಾಹ್ನ ಮಿಸ್ಟರ್ ಆಚಾರಿ ಲಕ್ಷ್ಮಿಯನ್ನು ಕರೆದರು ಹಾಗೂ ಅವಳು ಬಂದು ನಿಂತಾಗ ಹೇಳಿದರು:

"ಲಕ್ಷ್ಮಿ ನಿನಗೆ ಬಹು ಇಷ್ಟವಾದ, ಉಟ್ಟರೆ ಚೆನ್ನಾಗಿ ಒಪ್ಪುವಂತಹ ಬಟ್ಟೆಗಳನ್ನು ಹಾಕಿಕೊಂಡು ಐದು ಗಂಟೆಯ ವೇಳೆಗೆ ರೆಡಿಯಾಗಿರಬೇಕು. ನನ್ನ ಮನೆ ನೋಡಲೆಂದು ಇಬ್ಬರು ಮೂವರು ಅತಿಥಿಗಳು ಬರುತ್ತಿದ್ದಾರೆ."

ಸಾಯಂಕಾಲ ಐದು ಗಂಟೆಯ ವೇಳೆಗೆ ಅವರೆಲ್ಲಾ ಬಂದರು.

ಒಬ್ಬಾಕೆ ತಾಯಿ

ಒಬ್ಬರು ಸೋದರ ಮಾವ

ಒಬ್ಬ ಹುಡುಗ.

ಶುಭ್ರವಾಗಿ ಅಲಂಕರಿಸಿ ಸಿದ್ಧಪಡಿಸಿದ್ದ ಅತಿಥಿಕೋಣೆಯಲ್ಲಿ ಅವರು ಕುಳಿತರು. ಅವರಿಗಭಿಮುಖವಾಗಿ ಆಚಾರಿಯೂ ರಾಣಿಯಮ್ಮನೂ ಕುಳಿತರು. ಅವರು ಮಾತು ಆರಂಭಿಸಿದ್ದು ಹವಾಮಾನದ ಬಗ್ಗೆ.

"ಬಿಸಿಲು ಜೋರಾಗಿದೆ" ಪುಟ್ಟ ಟವೆಲ್ ಒಂದರಿಂದ ಹಣೆಯನ್ನು ಒರೆಸಿಕೊಳ್ಳುತ್ತಾ ಆ ತಾಯಿ ಎಂದರು.

"ಹೋದ ವರ್ಷಕ್ಕಿಂತ ಈ ವರ್ಷ ಬಿಸಿಲು ಹೆಚ್ಚು" ಸೋದರಮಾವ ಹೇಳಿದರು. "ಒಳಗಿರಲೂ ಸಾಧ್ಯವಿಲ್ಲ. ಹೊರ ಬರುವುದೂ ಅಸಾಧ್ಯ."

"ನನ್ನ ಜೀವನದಲ್ಲಿ ಇಂತಹ ಬಿಸಿಲನ್ನು ನಾನು ಕಂಡೇ ಇರಲಿಲ್ಲ." ರಾಣಿಯಮ್ಮ ಹೇಳಿದರು. ಕುಳಿತಲ್ಲಿಂದ ರಾಣಿಯಮ್ಮ ಸ್ವಲ್ಪ ಜರುಗಿದ್ದರು.

"ಎಷ್ಟು ಸರಿಯಾದ ಮಾತು ?" ಮಿಸ್ಟರ್ ಆಚಾರಿ ತಮ್ಮ ಅಭಿಪ್ರಾಯವನ್ನು ಚುಟುಕಾಗಿ ಎರಡೇ ಮಾತಿನಲ್ಲಿ ಹೇಳಿ ನಿಲ್ಲಿಸಿದರು.

ಆ ಹುಡುಗ ಏನೂ ಮಾತನಾಡಲಿಲ್ಲ. ತಿಳಿಯಾದ ಮಂದಹಾಸವು ಮಾತ್ರ ಅವನ ತುಟಿಗಳಲ್ಲಿ ಹರಡಿತು.

ತಾಯಿ ಬಲು ದಪ್ಪಗೆ, ಜೊಜ್ಜು ಜೊಜ್ಜಾಗಿರುವ ಒಂದು ಮಾರ್ವಾಡಿ ಸ್ತ್ರೀಯಾಗಿದ್ದಳು. ವಯಸ್ಸಾಗಿದ್ದರೂ ಆಕೆಯಲ್ಲಿ ಈಗಲೂ ಯುವಚೈತನ್ಯ ತುಂಬಿದಂತಿತ್ತು. ಆಕೆ ಚಿರಯೌವನವೇ ಮೂರ್ತಿವೆತ್ತಂತಿದ್ದಳು. ಆಕೆಯ ಮುಖದಲ್ಲಿ ಕಠಿಣ ಹೃದಯದ ಛಾಯೆಯಿರುವ ಒಬ್ಬ ಹೆಂಗಸಿನ ಪ್ರತಿಬಿಂಬ ಮೂಡಿದಂತಿತ್ತು. ಕಣ್ಣುಗಳಲ್ಲಿ ಕೆಲವೇ ನಿಮಿಷಗಳಲ್ಲಿ ಕ್ರೌರ್ಯ ಮನೆಮಾಡಿತು. ಆಕೆಯ ಗಂಡ ಬಹು ವರ್ಷಗಳ ಹಿಂದೆಯೇ ತೀರಿಹೋಗಿದ್ದರು.

ಪ್ರಯಾಣದ ಸಮಯಗಳಲ್ಲಿ, ಸತ್ಕಾರ ಸಮಾರಂಭಗಳಲ್ಲಿ, ಒಬ್ಬ ಹಿರಿಯ ಪುರುಷನ ಸಹಾಯ ಆಕೆಗೆ ಅನಿವಾರ್ಯವಾಗಿದ್ದುದರಿಂದ ಅವರು ಸೋದರ ಮಾವನನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದರು. ಆತನು ಕಾಲಾವಧಿಗಿಂತ ಮುಂಚೆಯೇ ಸೈನ್ಯದಿಂದ ನಿವೃತ್ತನಾಗಿದ್ದ ಒಬ್ಬ ಕರ್ನಲ್ ಆಗಿದ್ದನು.

ಆತ ಸಿಗರೇಟ್ ಸೇದುವುದಿಲ್ಲ. ಮದ್ಯ ಮೂಸುವುದಿಲ್ಲ. ಶುದ್ಧ ಸಸ್ಯಾಹಾರಿಯು, ಸಾಲದ್ದಕ್ಕೆ ಅವಿವಾಹಿತನೂ ಆಗಿದ್ದನು.

ತಂದೆ ತೀರಿಕೊಂಡ ಮೇಲೆ ಮಗನು ಆತನ ದೊಡ್ಡ ಲಾಕ್ ಫ್ಯಾಕ್ಟರಿಯ ಏಕೈಕ ಯಜಮಾನನಾಗಿದ್ದನು. ಆ ಫ್ಯಾಕ್ಟರಿಯಲ್ಲಿ ಸಾವಿರಕ್ಕೂ ಹೆಚ್ಚು ಕಾರ್ಮಿಕರಿದ್ದರು. ಅಲ್ಲಿ ತಯಾರಿಸಲಾಗುವ ಬೀಗಗಳು ಲೋಕದಲ್ಲೇ ಪ್ರಸಿದ್ಧವಾದವುಗಳಾಗಿದ್ದವು. ಒಮ್ಮೆ ಬೀಗ ಹಾಕಿದರೆ ಅನಂತರ ಇನ್ಯಾವುದೇ ರೀತಿಯಲ್ಲಿ ಅದನ್ನು ತೆರೆಯಲು ಸಾಧ್ಯವಾಗದಂತಹವುಗಳಾಗಿದ್ದವು. ಅದರದೇ ಬೀಗದ ಕೈನಿಂದಲೇ ಅದನ್ನು ತೆರೆಯಲು ಸಾಧ್ಯವಾಗುತ್ತಿತ್ತಷ್ಟೆ.

ಹುಡುಗನ ವೇಷ ಬಲು ಜೋರಾಗಿತ್ತು. ಒಂದು ಯೂರೋಪಿಯನ್ ಲಂಚ್‌ಗೆ ಸಿದ್ಧನಾಗಿ ಬಂದವನಂತೆ ಅವನು ಕುಳಿತಿದ್ದನು. ಅವನ ಚಲನವಲನಗಳು ಒಂದು ಯಂತ್ರದ ನೆನಪು ನೀಡುವಂತಿತ್ತು. ಕುರ್ಚಿಯ ಮೇಲೆ ತನ್ನ ಆಳತೆ ಮಾಡಿ ತುಂಡು ಮಾಡಿದಂತಿತ್ತು. ಅವನು ತೆಳುವಾದ ಟೆರಿಕಾಟನ್ ಸೂಟ್ ಧರಿಸಿದ್ದನು. ಒಂದು ನೇಕ್‌ಟೈ ಕಟ್ಟಿಕೊಂಡಿದ್ದನು. ರಾಚ್‌ಗೆ ಕಟ್ಟಿದ್ದ ಚಿನ್ನದ ಸ್ಟ್ರಾಪಿನಿಂದ ತೆಳ್ಳನೆಯ ಒಂದು ಚಿನ್ನದ ಸರಪಳಿ ನೇತಾಡುತ್ತಿತ್ತು. ಹವಳದ ಎರಡು ಮೂರು ಉಂಗುರಗಳು. ಅವನ ಕೈ ಬೆರಳುಗಳಲ್ಲಿದ್ದು ಫಳಫಳನೆ ಹೊಳೆಯುತ್ತಿದ್ದವು. ಯಾವ ಅದೃಷ್ಟದಿಂದಲೂ ಏನೋ ಮೂಗುತಿ ಒಂದು ಆತ ಹಾಕಿಕೊಂಡಿರಲಿಲ್ಲ.

ಡೈನಿಂಗ್ ಹಾಲ್‌ನಲ್ಲಿ ಎಲ್ಲಾ ಸಿದ್ಧವಾಗಿದೆಯೆಂದು ಪರಿಚಾರಕನು ಬಂದು ತಿಳಿಸಿದನು. ಎಲ್ಲರೂ ಅಲ್ಲಿಗೆ ಹೋದರು.

ಅಲ್ಲಿದ್ದ ಡೈನಿಂಗ್ ಟೇಬಲ್ ಹತ್ತು ಜನರಿಗೆ ಕುಳಿತುಕೊಳ್ಳಲು ಸಾಧ್ಯವಾಗುವಂತಹುದು. ಒಂದು ಭಾಗದಲ್ಲಿ ಸಿಲ್ಕ್ ಕುಷನ್‌ಗಳಿಂದ ಅಲಂಕರಿಸಲಾದ ಎರಡು ಕುರ್ಚಿಗಳು ಪ್ರತ್ಯೇಕವಾಗಿ ಇಡಲ್ಪಟ್ಟಿದ್ದವು. ರಾಣಿಯಮ್ಮ ಆ ಹುಡುಗನನ್ನು ಆ ಎರಡು ಕುರ್ಚಿಗಳಲ್ಲೊಂದರಲ್ಲಿ ಕುಳ್ಳಿರಿಸಿದರು. ಅನಂತರ,

"ಲಕ್ಷ್ಮೀ" ಎಂದು ಕೂಗು ಹಾಕಿದರು.

ತನಗೆ ಬಹು ಇಷ್ಟವಾದ, ಒಪ್ಪುವಂತಹ ಬಟ್ಟೆ ಹಾಕಿಕೊಂಡು ಲಕ್ಷ್ಮಿ ಹೊರಬಂದಳು. ರಾಣಿಯಮ್ಮ ಇನ್ನೊಂದು ಕುರ್ಚಿಯಲ್ಲಿ ಲಕ್ಷ್ಮಿಯನ್ನು ಹಿಡಿದು ಕುಳ್ಳಿರಿಸಿದರು.

ಲಕ್ಷ್ಮಿಯ ಆಗಿನ ಅವಸ್ಥೆಯನ್ನು ವಿವರಿಸದಿರುವುದೇ ಒಳ್ಳೆಯದು. ಅಲ್ಲಿ ಅವಳೊಂದು ಸಾಕುಪ್ರಾಣಿಯಂತೆ ಕುಳಿತಿದ್ದಳು.

ಅವರು ಫಲಹಾರ ಮಾಡಲಾರಂಭಿಸಿದರು.

ಆ ಡೈನಿಂಗ್ ಟೇಬಲ್ ಬಳಿ ಕುಳಿತಿದ್ದ ಅವರು ಹವಾಮಾನದ ಮಾತುಗಳನ್ನು ಮಾರಕ ರೋಗಗಳ ಬಗ್ಗೆ ಮಾತುಗಳನ್ನು ಆಡತೊಡಗಿದರು. ಆ ರೋಗಗಳಲ್ಲಿ ಕ್ಯಾನ್ಸರ್‌ನ ವಿಷಯವೇ ಪ್ರಧಾನ ಚರ್ಚಾವಿಷಯವಾಗಿತ್ತು. ತನ್ನ ಹಿರಿಯ ಅಕ್ಕ ಕ್ಯಾನ್ಸರ್‌ನಿಂದ ನರಳುತ್ತಾ ಕೊನೆಯ ದಿನಗಳಲ್ಲಿ ಅನುಭವಿಸಿದ ನರಕಯಾತನೆಯನ್ನು ವಿವರಿಸಿದ ಕರ್ನಲ್ ಮಾತು ಮುಗಿಸುವ ವೇಳೆಗೆ ಆ ತಾಯಿ ಒಂದು ಪ್ಲೇಟ್ ಬಂಗಾಳಿಹಲ್ವ ತಿಂದು ಮುಗಿಸಿಬಿಟ್ಟಿದ್ದರು.

"ನಿಜವಾಗಿಯೂ ನಿಮಗೆ ಮಧುಮೂತ್ರ ರೋಗವು ಬರುತ್ತದೆ" ಆಕೆಯತ್ತ ನೋಡಿದ ಸೋದರ ಮಾವ ಕರ್ನಲ್ ಹೇಳಿದನು.

"ನಾನಾಗಲೇ ಅದರ ಮುಷ್ಟಿಯಲ್ಲಿ ಸಿಕ್ಕುಬಿದ್ದಿದ್ದೇನೆ" ಆ ತಾಯಿ ಎಂದರು.

"ಹಾಗಿದ್ದರೂ ಇಷ್ಟರ ಮಟ್ಟಿಗೆ ಸಿಹಿ....."

ಸೋದರಮಾವ ಮಾತುಗಳನ್ನು ಪೂರ್ಣಮಾಡಲು ಬಿಡದೆ ಆ ತಾಯಿ ಹೇಳಿದರು:

"ಸಿಹಿ ನನ್ನನ್ನು ಬಿಟ್ಟರೂ, ನಾನು ಸಿಹಿಯನ್ನು ಬಿಡುವುದಿಲ್ಲ" ಎಲ್ಲರೂ ಗೊಳ್ಳೆಂದು ನಕ್ಕರು.

ಲಕ್ಷ್ಮಿಯೂ ನಕ್ಕಳೇ ?

"ಸರಿ ನೀವು ಆ ಕೋಣೆಗೆ ಹೋಗಿ" ಅಲಂಕರಿಸಿಟ್ಟಿದ್ದ ಬೆಡ್‌ರೂಮನ್ನು ಬೆರಳು ಮಾಡಿ ತೋರಿಸುತ್ತಾ ಮಿಸ್ಟರ್ ಆಚಾರಿ ಆ ಮಗನೊಂದಿಗೂ, ಲಕ್ಷ್ಮಿಯೊಂದಿಗೂ ಹೇಳಿದರು. "ನೀವಿಬ್ಬರೂ ಅಲ್ಲಿ ಕುಳಿತುಕೊಂಡು ಸ್ವಲ್ಪ ಹೊತ್ತು ಮಾತಾಡಬಹುದು."

ಆ ಮಗನು ಮೊದಲು ಎದ್ದನು.

ಅನಂತರ ಲಕ್ಷ್ಮಿ ಎದ್ದಳು.

ಒಂದು ಮಾರ್ಚ್‌ಪಾಸ್ಟ್‌ನಂತೆ ಅವರಿಬ್ಬರೂ ಒಬ್ಬರ ಹಿಂದೊಬ್ಬರು ಆ ಬೆಡ್ ರೂಮಿನೊಳಹೊಕ್ಕರು.

ಕೋಣೆಯ ಬಾಗಿಲನ್ನು ಮಗನು ಮೆಲ್ಲನೆ ದೂಡಿದನು.

ದೊಡ್ಡ ಒಂದು ಬೀಗವನ್ನು ಹಾಕಿದಂತಹ ಶಬ್ದವು ಆ ಕೋಣೆಯಲ್ಲಿ ಮೊಳಗಿತು.

# ಮೂವತ್ತಮೂರು

ಲಕ್ಷ್ಮಿ ಬರೆದ ಕಾಗದವನ್ನು ದೇವದಾಸ್ ಮತ್ತೆ ಮತ್ತೆ ಓದಲು ಪ್ರಾರಂಭಿಸಿದನು. ಆಗ ಬಾಗಿಲು ತಟ್ಟಿದ ಶಬ್ದ ಕೇಳಿಸಿತು.

ಓದುತ್ತಿದ್ದ ಕಾಗದವನ್ನವನು ಮಡಿಸಿ ದೇವದಾಸ್ ಅದನ್ನು ತಲೆದಿಂಬಿನ ಕೆಳಗಿಟ್ಟನು. ಬಾಗಿಲು ತೆರೆದನು.

ಸೂಜಿಮದ್ದಿನ ಔಷಧಿಯೊಂದಿಗೆ ಪೆಟ್ಟಿಗೆ ಅಂಗಡಿಯ ಮುತ್ತುರಾಮನ್ ದೇವದಾಸ್‌ನ ಕೋಣೆಗೆ ಬಂದನು. ಅವನು ತಂದ ಔಷಧಿಯನ್ನು ತೆಗೆದುಕೊಂಡು ನೋಡಿದ ದೇವದಾಸ್ ಕೇಳಿದನು.

"ಇದು ಟಿ.ಬಿ.ಗಿರುವ ಇಂಜೆಕ್ಷನ್ ಅಲ್ಲವೇ, ಯಾರಿಗೆ ?"

"ನನಗೇನೇ" ಅವನು ಹೇಳಿದನು.

ಮುತ್ತುರಾಮನ್ ಹಾಸ್ಟೆಲ್ ಗೇಟಿನ ಬಳಿ ಒಂದು ಪೆಟ್ಟಿಗೆ ಅಂಗಡಿ ಇಟ್ಟುಕೊಂಡಿದ್ದನು. ಅವನನ್ನು ನೋಡದ ದೇವದಾಸ್ ಒಂದು ದಿನ ಸಹ ಗೇಟನ್ನು ದಾಟಿ ಹೋಗಿಲ್ಲ. ಅವನೂ ಅವನ ಹೆಂಡತಿಯೂ ಅವನ ಇಬ್ಬರು ಮಕ್ಕಳೂ ಯಾವಾಗಲೂ ಅಂಗಡಿಯಲ್ಲೇ ಇರುತ್ತಿದ್ದರು. ಎಲ್ಲರೂ ಏನಾದರೂ ಕೆಲಸ ಮಾಡುತ್ತಲೇ ಇರುತ್ತಿದ್ದರು. ಸಿಗರೇಟ್, ಹಾಲು, ಟಾಯಿಲೆಟ್ ಸಾಮಗ್ರಿಗಳು, ಬ್ರೆಡ್, ಬೆಣ್ಣೆ, ಚಾಕೋಲೇಟ್‌ಗಳು, ವರ್ತಮಾನ ಪತ್ರಿಕೆಗಳು, ಎಲ್ಲವೂ ಮುತ್ತುರಾಮನ್‌ನ ಅಂಗಡಿಯಲ್ಲಿದ್ದವು. ಬಾಡಿಗೆಗೆ ಕೊಡುವ ಎಂಟು ಹತ್ತು ಸೈಕಲ್‌ಗಳಿವೆ. ಮುತ್ತುರಾಮನ್‌ನನ್ನು ನೋಡಿದರೆ ಅವನೊಬ್ಬ ರೋಗಿಯೆಂದು ಯಾರಿಗೂ ಅನ್ನಿಸುವುದಿಲ್ಲ. ಆದರೆ ಅದಕ್ಕೆ ಬೇರೊಂದು ಮುಖವೂ ಇದೆ. ಮುತ್ತುರಾಮನ್‌ನ ತುಟಿಗಳಲ್ಲಿ ಯಾವಾಗಲೂ ಬೀಡಿ ಇರುವುದನ್ನು ನೋಡಬಹುದು. ಅವನು ತುಟಿಯಲ್ಲಿ ಒಂದು ಬೀಡಿ ತುಂಡಿನೊಂದಿಗೇನೇ ಜನಿಸಿದ್ದನೆಂದು ಅನ್ನಿಸುತ್ತೆ.

"ತೊಂಭತ್ತು ಸೂಜಿ ಮದ್ದು ಚುಚ್ಚಿಸಿಕೊಳ್ಳಬೇಕು ಡಾಕ್ಟರೇ" ಮುತ್ತುರಾಮನ್ ಹೇಳಿದನು. "ಇಷ್ಟೊಂದು ಸೂಜಿ ಮದ್ದು ಚುಚ್ಚಿ ಔಷಧಿ ಏರಿಸಿದರೆ ನನ್ನ ಮೈ ಏನಾಗಬೇಕು ?"

"ಮತ್ತೆ ಬಂದ ರೋಗ ಗುಣವಾಗಬೇಡವೇ ?" ದೇವದಾಸ್ ಕೇಳಿದನು.

"ಆಸ್ಪತ್ರೆಗೆ ದಿನಾ ಹೋಗಿ ಚುಚ್ಚಿಸಿಕೊಳ್ಳಲು ನನ್ನ ಕೈಲಾಗುವುದಿಲ್ಲ. ಅದಕ್ಕೆ ನನಗೆ ಟೈಮೂ ಇಲ್ಲ. ನಾನು ಸಿತ್ತ ಇಲ್ಲಿಗೇ ಬರುತ್ತೇನೆ. ನೀವೇ ಚುಚ್ಚಿಬಿಡಿ" ಮುತ್ತುರಾಮನ್ ಕೇಳಿಕೊಂಡನು.

ದೇವದಾಸ್ ಇಲ್ಲಿಯವರೆಗೂ ಯಾರಿಗೂ ಇಂಜೆಕ್ಷನ್ ಕೊಟ್ಟೇ ಇರಲಿಲ್ಲ.

ಹೌಸ್‌ಸರ್ಜನ್ ಆದರೇನೇ ಇದೆಲ್ಲವನ್ನು ಪ್ರಾಕ್ಟೀಸ್ ಮಾಡುವುದು. ಆದರೆ ಸೂಜಿ ಮದ್ದು ಚುಚ್ಚುವ ಆಸೆ ಅವನಿಗೆ ಬಹಳ ಇದೆ. ಜೀವನದಲ್ಲಿ ಪ್ರಥಮ ಬಾರಿಗೆ ಇಂತಹ ರೋಗಿಯೊಬ್ಬನು ಔಷಧಿಯೊಂದಿಗೆ ಚುಚ್ಚಿಸಿಕೊಳ್ಳಲೆಂದು ತನ್ನನ್ನು ಕೋರಿದ್ದಾನೆ. ಅದನ್ನು ಸಾಧ್ಯವಿಲ್ಲವೆನ್ನುವುದು ಬೇಡ. ಬಂದದ್ದು ಬರಲಿ. ಹೇಗಿದ್ದರೂ ಸಿರಿಂಜೂ ಸೂಜಿಯೂ ಮೇಜಿನ ಡ್ರಾಯರಲ್ಲಿದೆ.

ದೇವದಾಸ್ ಸ್ಟೀಲ್ ಪಾತ್ರೆಯಲ್ಲಿ ನೀರು ತೆಗೆದುಕೊಂಡು ಸಿರಿಂಜನ್ನು ಸೂಜಿಯನ್ನು ಅದರಲ್ಲಿ ಹಾಕಿ ಎಲೆಕ್ಟ್ರಿಕ್ ಸ್ಟೌ ಮೇಲಿಟ್ಟು ಆನ್ ಮಾಡಿ ಕುದಿಯಲು ಬಿಟ್ಟನು.

ಮುತ್ತುರಾಮನ್ ತನ್ನ ಕಷ್ಟಗಳನ್ನು ಹೇಳತೊಡಗಿದನು.

ಸಿರಿಂಜು ಸಾಕಷ್ಟು ಬಿಸಿಯಾದಾಗ ದೇವದಾಸ್ ಹೀಟರ್ ಆಫ್ ಮಾಡಿದನು. ಅವನು ಸಿರಿಂಜ್‌ನಲ್ಲಿ ಸೂಜಿಯನ್ನು ಸಿಗಿಸಿ ಡಿಸ್ಟಿಲ್ಡ್ ವಾಟರ್ ಫ್ಲಯಲ್ ತುದಿಯನ್ನು ಒಡೆದನು. ಅದರ ಗ್ಲಾಸಿನ ಚೂರುಗಳು ಕೋಣೆಯಲ್ಲೆಲ್ಲಾ ಚೆದುರಿ ಬಿದ್ದವು. ಇಂಜೆಕ್ಷನ್ ಔಷಧಿಯ ಸೀಸೆಯಲ್ಲಿ ಅವನು ನೀಡಲ್ ಅನ್ನು ಚುಚ್ಚಿ ಅದನ್ನೇರಿಸಿಕೊಂಡನು. ಚೆನ್ನಾಗಿ ಬೆರೆಸಲು ಪ್ರಾರಂಭಿಸಿದನು. ನೀರಿನಲ್ಲಿ ಬೆರೆತು ಹೋದ ಸಪ್ಟ್ರೋಮೈಸಿನ್ ಅನ್ನು ದೇವದಾಸ್ ಸಿರಿಂಜ್‌ನಲ್ಲಿ ಕಷ್ಟಪಟ್ಟು ತುಂಬಿಸಿದನು. ಟ್ಯೂಬರ್‌ಕ್ಯುಲೋಸಿಸ್‌ಗಿರುವ ಔಷಧಿಯಾಗಿತ್ತದು. ದೇವದಾಸ್‌ನ ಕೈಗಳಿಗೆ ಮೊದಲ ಬಾರಿಗೆ ಈ ಕೆಲಸ ದೊರಕಿತ್ತು.

ಒಬ್ಬ ಅಪರಿಚಿತನಿಗುಂಟಾಗುವ ನಡುಕವೂ ದಿಗ್ಭ್ರಾಂತಿಯೂ ದೇವದಾಸ್‌ಗೆ ಅನುಭವವಾಯಿತು. ಮಾಂಸಖಂಡಗಳಲ್ಲಿ ಸೂಜಿಯ ತುದಿಯನ್ನು ಚುಚ್ಚಿದಾಗ ಅದನ್ನು ತಳ್ಳಿ ಏರಿಸಲು ಅವನ ಕೈ ಹಿಂತೆಗೆಯುತ್ತಿತ್ತು. ಹಸಿಮಾಂಸದಲ್ಲಿ ನಿರ್ಮಲವಾದದ್ದಾದರೂ ಸೂಜಿಯನ್ನಲ್ಲವೇ ಚುಚ್ಚುತ್ತಿರುವುದು ಎಂಬ ಸತ್ಯಾಂಶವು ಒಂದು ನಿಮಿಷ ಅವನನ್ನು ಅಸ್ವಸ್ಥನನ್ನಾಗಿ ಮಾಡಿತು. ಆದರೂ ಮುತ್ತುರಾಮನ್‌ನ ಬಲ ತೋಳಿನಲ್ಲಿ ಸೂಜಿ ಚುಚ್ಚಿದಾಗ ಆ ನೋವನ್ನು ಹಲ್ಲು ಕಚ್ಚಿ ಮುತ್ತುರಾಮನ್ ಸಹಿಸಿದ್ದನ್ನು ದೇವದಾಸ್ ಕನಿಕರದಿಂದ ನೋಡಿದನು.

ಡಾಕ್ಟರಾಗುವುದಕ್ಕಿಂತ ಮುಂಚೆಯೇ ದೇವದಾಸ್ ಡಾಕ್ಟರ್ ಆದನು. ಅಂದು ಬಹಳ ವಿಶೇಷವಾದ ದಿನವಾಗಿತ್ತು. ತನ್ನ ತೋಳನ್ನು ತಡವಿಕೊಳ್ಳುತ್ತಾ ನಿಂತ ಮುತ್ತುರಾಮನ್ ಅನ್ನು ಆರಾಧನಾಭಾವದಿಂದ ದೇವದಾಸ್ ನೋಡಿದನು.

ಆದರೆ ದೇವದಾಸ್‌ಗೆ ಬಹು ಹೊತ್ತು ಹಾಗೆ ಆನಂದಪಡುತ್ತಾ ನಿಲ್ಲಲು ಆಗಲಿಲ್ಲ. ಅವನ ಪ್ರಿಯತಮೆಯಾದ ಲಕ್ಷ್ಮಿಯ ಜೀವನವು ತಲೆಕೆಳಗಾಗಿತ್ತು. ತಲೆದಿಂಬಿನ ಕೆಳಗೆ ಇಟ್ಟಿದ್ದ ಲಕ್ಷ್ಮಿಯ ಕಾಗದವನ್ನು ಅವನು ಹೊರಕ್ಕೆ ತೆಗೆದನು.

ಕವರ್‌ನ ಮೇಲೆ ಲಕ್ಷ್ಮಿ ಬರೆದಿದ್ದಳು:

**ಕೊನೆಯ ಪರೀಕ್ಷೆಗೆ ಹೋಗಿ ಬರೆದು ಮುಗಿಸಿದ ನಂತರ ಮಾತ್ರವೇ ಈ ಕವರನ್ನು ಒಡೆದು ಕಾಗದ ತೆರೆದು ಓದಬೇಕು. ಇದೇ ನನ್ನ ಅಂತಿಮ ಕೋರಿಕೆ.**

ದೇವದಾಸ್‌ಗೆ ಅಷ್ಟರ ಮಟ್ಟಿಗಿನ ಸಹನೆ ಇರಲಿಲ್ಲ. ಕೊನೆಯ ಪರೀಕ್ಷೆಗೆ ಇನ್ನೂ ಎಷ್ಟೋ ದಿನಗಳಿವೆ. ಒಂದು ನಿಮಿಷ ಸಹ ಕಾಯಲು ಅವನಿಂದ ಸಾಧ್ಯವಿರಲಿಲ್ಲ.

ಅವನು ಕವರ್ ಒಡೆದು ಕಾಗದ ತೆರೆದು ಅನೇಕ ಬಾರಿ ಓದಿದನು.

ದೇವದಾಸ್ ಮತ್ತೆ ಓದಿದನು. ಮುದ್ದಾದ ಅಕ್ಷರಗಳಲ್ಲಿ ಲಕ್ಷ್ಮಿ ಬರೆದಿದ್ದ ಕಾಗದವಾಗಿತ್ತದು:

"ಈ ಕಾಗದ ಹೇಗೆ ಪ್ರಾರಂಭಿಸಬೇಕೆಂದು ನನಗೆ ತಿಳಿಯುತ್ತಿಲ್ಲ. ನಮ್ಮಿಬ್ಬರ ಜೀವನದಂತೆ ಅಥವಾ ನಮ್ಮಿಬ್ಬರ ಬಂಧನದಂತೆ ಎರಡು ಅಂತ್ಯಗಳನ್ನು ಕಾಣಲು ಸಾಧ್ಯವಾಗದ ಒಂದು ಕಾಗದವಿದು.

"ನಾವು ಒಬ್ಬರನ್ನೊಬ್ಬರು ಭೇಟಿ ಯಾವತ್ತು ಆದೆವು ? ನಿಶ್ಚಯವಾಗಿಯೂ ಅದು ಹೋದ ಜನ್ಮದಲ್ಲಾಗಿರಬೇಕು. ಅಲ್ಲದಿದ್ದ ಪಕ್ಷದಲ್ಲಿ ನಿಮ್ಮೊಂದಿಗೆ ಇಷ್ಟು ನಿಕಟವಾಗಿರಲು ಈ ಜನ್ಮದಲ್ಲಿ ಸಾಧ್ಯವಾಗುತ್ತಿರಲಿಲ್ಲ. ನನಗೆ ಗೆಳತಿಯಾಗಿರಲೆಂದು ಒಬ್ಬ ಹುಡುಗಿಗೋಸ್ಕರ ಹುಡುಕಾಡುತ್ತಿದ್ದಾಗ ಹೆಸರಿನ ಮೊದಲ ಅಕ್ಷರಗಳು ನಮ್ಮನ್ನು ಹತ್ತಿರ ಮಾಡಿದ್ದವು.

"ನಾನು ಏತಕ್ಕಾಗಿ ಗಂಡಸೊಬ್ಬನ ಜೊತೆಯನ್ನು ಇಷ್ಟಪಡಲಿಲ್ಲ ಗೊತ್ತೇ ? ಬಹುಶಃ ನಾನು ಆದರ್ಶ ಪುರುಷನೆಂದು ಪರಿಗಣಿಸಿದ್ದ ನನ್ನ ತಂದೆಯ ಕೃತ್ಯಗಳು ನನ್ನನ್ನು ನಿರಾಶೆಪಡಿಸಿದ್ದರಿಂದ ಆಗಿರಬೇಕು. ಯಾವುದೇ ಒಬ್ಬ ಹುಡುಗಿಯ ಮೊದಲ ಆದರ್ಶ ಪುರುಷನು ಯಾವಾಗಲೂ ಅವಳ ತಂದೆಯೇ ಆಗಿರುತ್ತಾನೆ. ಅವಳ ಸ್ವಂತ ತಂದೆಯಲ್ಲಿ ಅವಳು ತಂದೆಯನ್ನು, ಅವಳ ಗೆಳೆಯನನ್ನು, ಅವಳ ಪ್ರಣಯಿಯನ್ನು, ಅವಳ ಗಂಡನನ್ನು ಅವಳ ರಕ್ಷಕನನ್ನು, ಅವಳ ಒಡೆಯನನ್ನು-ಎಲ್ಲರನ್ನು ಕಾಣುತ್ತಾಳೆ. ನಾನು ನನ್ನ ತಂದೆಯಲ್ಲಿ ಜೊತೆಗಾರನನ್ನು, ಪ್ರಣಯಿಯನ್ನು, ರಕ್ಷಕನನ್ನು, ಯಜಮಾನನನ್ನು ಕಾಣಲು ಹುಟ್ಟಿದಾಗಲಿಂದ ಪ್ರಯತ್ನಿಸುತ್ತಿದ್ದೇನೆ. ಆದರೆ ಅವರಲ್ಲಿ ಇವರ್ಯಾರನ್ನು ಕಾಣಲು ನನಗೆ ಸಾಧ್ಯವಾಗಲಿಲ್ಲ. ನನ್ನ ಮೇಲೆ ಅಧಿಕಾರ ಸ್ಥಾಪಿಸಿದ ಒಡೆಯನನ್ನು ಮಾತ್ರ ಕಂಡೆ. ನನ್ನ ಅಂತರಂಗದಲ್ಲಿ ಗಂಡಸಿನ ಬಗ್ಗೆ ಇಂತಹ ವೈರ ಸಿಡಿದೇಳಲು ಕಾರಣ ಆ ನಿರಾಶೆಯೇ ಇರಬೇಕು.

"ನನ್ನ ಮಸ್ತಿಷ್ಕದ ಅವಸ್ಥೆಯ ಬಗ್ಗೆ ನಾನೇನು ಹೇಳಲಿ ? ಬೆಣಚುಕಲ್ಲುಗಳು ಹರಡಿದ್ದ ರಸ್ತೆಯ ಮೂಲಕ ಎತ್ತಿನ ಗಾಡಿಗಳೂ ದನಕರುಗಳೂ ಹೋಗುವಾಗಿನ ಶಬ್ದ ನನ್ನ ಕಿವಿಗಳಿಗೆ ಕೇಳಿಸುತ್ತಲೇ ಇತ್ತು. ಆದರೆ ಆ ಒರಟು ಶಬ್ದದ ಮಧ್ಯೆ ನಾನು ನಮ್ಮ ಭೇಟಿಯ ಯಾದೃಚ್ಛಿಕತೆಯನ್ನು ನೆನೆದು ದುಃಖಿಸುತ್ತಿದ್ದೇನೆ. ನಾವು ಮೊದಲ ಬಾರಿ ಭೇಟಿ ಮಾಡಿದ್ದು ಎಲ್ಲಿ ? ಅನಾಟಮಿ ಹಾಲ್‌ನಲ್ಲೇ ? ರ್‍ಯಾಗಿಂಗ್ ನಡೆಯುತ್ತಿದ್ದ ಕತ್ತಲು ಕವಿದ ಕೋಣೆಯಲ್ಲೇ ? ನನಗೆ ನೆನಪಿಲ್ಲ. ಎರಡರಲ್ಲಿ ಎಲ್ಲೇ ಆದರೂ ನಮ್ಮ ಭೇಟಿಗೆ ಅವು ತಕ್ಕ ಸ್ಥಳಗಳೇ ಆಗಿದ್ದವು.

"ಕತ್ತಲೆಯಲ್ಲಿ ನಾವು ತಡವರಿಸುತ್ತಾ ನಡೆಯುತ್ತೇವೆ. ಗುರುತಿಸಿ ತಿಳಿಯಲು ಸಾಧ್ಯವಾಗದ್ದರಿಂದ ನಾವು ನಮ್ಮನ್ನು ಪ್ರೀತಿಸುವವರಿಗೆ ಹಾಸಿಯನ್ನುಂಟುಮಾಡುತ್ತೇವೆ. ಗೊತ್ತಿಲ್ಲದ್ದರಿಂದ ಕಷ್ಟವಾಗುತ್ತದೆ. ಆದರೆ

ಕೊನೆಯ ತತ್ತ್ವವೆನ್ನುವುದು ಅದಲ್ಲ. ಆ ಕಷ್ಟಗಳಲ್ಲೂ, ದುಃಖಗಳಲ್ಲೂ, ಆಕಸ್ಮಿಕಗಳಲ್ಲೂ ನಾವು ಪ್ರೀತಿಸುತ್ತೇವೆಂಬುದು ಬಹಳ ಪ್ರಬಲವಾದ ವಿಷಯವು. ಈ ಲೋಕಕ್ಕೆ ನಾವು ಬಂದಿದ್ದೇವೆ. ಇಲ್ಲಿರುವವರೊಂದಿಗೆ ಬೆರೆಯುತ್ತೇವೆ. ಅನಂತರ ಕಾಲವೆನ್ನುವುದು ನಮ್ಮನ್ನು ಎಳೆದುಕೊಂಡು ಹೋಗುತ್ತದೆ. ಹೀಗೆ ಎಷ್ಟೋ ಸಲ ನಡೆದಿದೆ. ಮತ್ತೆ ಮತ್ತೆ ನಡೆಯುತ್ತೆ. ಈ ಸುಖ ದುಃಖಗಳೆಲ್ಲಾ ಸೇರಿದರೇನೇ ಜೀವನವು ಸಂಪೂರ್ಣವಾಗುವುದು. ಆದರೆ ಈ ಕಷ್ಟಸುಖಗಳು ಜೀವನದ ಪ್ರಯಾಣಕ್ಕೆ ತಡೆಯನ್ನುಂಟು ಮಾಡುತ್ತವೆಯೋ ಎನ್ನುವುದೇ ನನ್ನ ಭಯವು.

"ಸಹಜವಾದ ಜೀವನದ ಪ್ರಯಾಣಕ್ಕೆ ತಡೆಯನ್ನೊಡ್ಡಿ ಎಲ್ಲರ ಕನಿಕರವನ್ನು ಪಡೆಯಲು ನನಗಿಷ್ಟವಿಲ್ಲ. ನನಗಾಗಿ ದಾರಿ ಬಿಟ್ಟುಕೊಡಲು ನಾನು ಯಾರನ್ನೂ ಕೇಳಿಕೊಳ್ಳುವುದಿಲ್ಲ. ಅವರಿಷ್ಟ ಬಂದಂತೆ ಅವರವರು ನಡೆದುಕೊಳ್ಳಲಿ. ಅವರೊಂದಿಗೇ ನಡೆದುಹೋಗಲು ನಾನು ತೀರ್ಮಾನಿಸಿದ್ದೇನೆ.

"ನನ್ನ ದುಃಖವನ್ನು ನಾನೇ ಸಹಿಸುತ್ತೇನೆ. ಅದರ ಯಥಾರ್ಥ ನೆಲೆಯು ಸಾರ್ವಜನಿಕರಿಗೆ ಅರ್ಥವಾಗುವುದಿಲ್ಲ. ಯಾರಾದರೂ ಹೇಳುವ ಸಮಾಧಾನದ ಮಾತುಗಳು ನನಗೆ ಬೇಕಿಲ್ಲ. ಅಂತಹ ಕನಿಕರದ ಮಾತುಗಳು ನನ್ನನ್ನು ಅಪಮಾನಗೊಳಿಸುವಂತೆ ಇರುತ್ತವೆ. ಎಲ್ಲರೂ ನನಗೆ ಸಮಾಧಾನ ಮಾಡಲು ಬರುತ್ತಾರೆಂದು ನಾನು ಸಂಶಯಪಟ್ಟೆ. ಕೆಲ ದಿನಗಳವರೆಗೆ ಯಾರೂ, ಅಂದರೆ ನನ್ನ ಸ್ನೇಹಿತೆಯರು, ನನ್ನ ಬಳಿ ಬರುವುದು ಬೇಡ.

"ದೊಡ್ಡ ಡಾಕ್ಟರಾಗಿ, ನನ್ನ ತಂದೆಯ ಶಾಪಗಳಿಗೆ ಒಂದು ಮೋಕ್ಷವೆಂಬಂತೆ ಅಥವಾ ತಂದೆಯ ತಪ್ಪುಗಳಿಗೆ ಒಂದು ಪ್ರಾಯಶ್ಚಿತ್ತವೆಂಬಂತೆ ನಿಸ್ವಾರ್ಥಸೇವೆಯನ್ನು ಸಲ್ಲಿಸಬೇಕೆಂಬ ಆಸೆಯಿತ್ತು ನನಗೆ. ನನ್ನ ಆಸೆಗಳಿಗಿಂತ ತಂದೆಯವರ ಶಾಪವೇ ಬಹಳ ದೊಡ್ಡದೆಂಬ ಅರಿವು ನನಗೆ ಉಂಟಾಯಿತು. ಗೈನಕಾಲಜಿಯಲ್ಲಿ, ಪ್ರಪಂಚದಲ್ಲಿ ಇರುವುದನ್ನೆಲ್ಲಾ ಕಲಿಯಲೂ, ಅರ್ಥ ಮಾಡಿಕೊಳ್ಳಲೂ, ಸಂಶೋಧನೆಗಳನ್ನು ನಡೆಸಲೂ ನಾನು ಉದ್ದೇಶಿಸಿದ್ದೆ. ಈಗ ಕೇವಲ ಈ ಪವಿತ್ರ ಉದ್ದೇಶ ಮಾತ್ರ ನನ್ನಲ್ಲುಳಿದಿದೆ. ದುಃಖಗಳನ್ನೆಲ್ಲಾ ನಾನು ಮರೆಯಲೆತ್ನಿಸಿದರೂ ಈ ನೋವು ನನ್ನನ್ನು ಒಮ್ಮೆಯೂ ಬಿಟ್ಟು ಹೋಗುವುದಿಲ್ಲ. ಎಲ್ಲರೂ ದುಃಖವನ್ನನುಭವಿಸುವಾಗ ನಾನು ಮಾತ್ರ ಅದರಿಂದ ಪಾರಾಗಲು ಆಸೆಪಡುವುದು ಸರಿಯಲ್ಲವಲ್ಲಾ? ಆದ್ದರಿಂದ ಈ ವೈಯಕ್ತಿಕ ದುಃಖವನ್ನು ನನ್ನ ತೋಳಿನಲ್ಲಿ ಹಿಡಿದೆತ್ತಿಕೊಂಡು ನಾನು ನನ್ನ ಜೀವನಯಾತ್ರೆಯನ್ನು ಮುಂದುವರೆಸುತ್ತಿದ್ದೇನೆ.

"ಈ ಕಾಗದವು ವಿರಹವೇದನೆಯನ್ನನುಭವಿಸುವ ಒಂದು ಹೆಣ್ಣಿನ ಕಾಗದವೆಂದು ಅನಾದರಿಸಬೇಡಿ. ಇದರಲ್ಲಿರುವುದು ವಿರಹವೇದನೆಯ ಕೇವಲ ಸ್ವಲ್ಪಭಾಗ ಮಾತ್ರ. ಮಿಕ್ಕ ವೇದನೆಯೆಲ್ಲಾ ಗೂಢವಾಗಿದ್ದು ನರಳುತ್ತಿದೆ.

"ಮರಣದ ಕರೆಯನ್ನು ನಾನು ಕೇಳುತ್ತಿದ್ದೇನೆ. ಜೀವನದ ದೊಡ್ಡ ಗಡಿಯಾರ

ನಿಂತು ಹೋಗಿರುವಂತೆ ನನಗನ್ನಿಸುತ್ತಿದೆ. ಸಮಯವೇ ಸಾಗುತ್ತಿಲ್ಲ. ಆದರೂ ನಾನು ಕೋಣೆಯ ಬಾಗಿಲನ್ನು ಮುಚ್ಚಿ ಮಲಗಿದ್ದೇನೆ. ಜವಾಬ್ದಾರಿಯಿರುವ ಯಾವೊಂದು ಕೆಲಸವನ್ನೂ ನಾನು ಮಾಡಬಲ್ಲೆನೆಂದು ನನಗನ್ನಿಸುತ್ತಿಲ್ಲ.

"ಈ ಕಾಗದವನ್ನು ನೀವು ಓದುವಾಗ ನಿಮ್ಮ ಪರೀಕ್ಷೆ ಮುಗಿದು ನಿರಾತಂಕವಾಗಿರುತ್ತೀರಲ್ಲಾ? ಆದ್ದರಿಂದಲೇ ಕವರಿನ ಮೇಲೆ ಅಮೂಲ್ಯವಾದ ಒಂದು ಟಿಪ್ಪಣಿಯನ್ನು ನಾನು ಬರೆದಿರುವುದು. ಅದು ನನ್ನ ಆಜ್ಞೆಯೆಂದೋ, ಅಹಂಕಾರದ ಮಾತೆಂದೋ ನೀವು ಭಾವಿಸಬೇಡಿ. ಪ್ರೀತಿಯು ಹೆಚ್ಚಾಗಿರುವುದರಿಂದ ಬರೆದಿದ್ದೇನಷ್ಟೆ.

"ಸುಮಾರು ಐದು ವರ್ಷಗಳು ನಾವು ಅತಿ ನಿಕಟವಾಗಿ ಜೀವನವನ್ನು ಸಾಗಿಸಿದೆವು. ನಮ್ಮಿಬ್ಬರ ಮಧ್ಯೆ ಯಾವ ಬಗೆಯ ಬಂಧನವಿತ್ತೋ? ಪ್ರೇಮವೇ? ಪ್ರೀತಿಯೋ? ಕಾಮವೇ? ಅಲ್ಲದಿದ್ದರೆ ಇನ್ನೇನಾದರೂ ಇತ್ತೇ? ಏನೇ ಆದರೂ ನಾವು ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡೆವು ಎಂಬುವುದೇ ಆ ಬಂಧನದ ಅತಿ ದೊಡ್ಡ ವಿಜಯವು.

"ಈ ಕಾಲಾವಧಿಯಲ್ಲಿ ನೀವು ನನ್ನನ್ನು ಒಮ್ಮೆ ಮುಟ್ಟಿಯೋ ಮುತ್ತಿಟ್ಟೋ ಮಾಡಲಿಲ್ಲ. ಕಾಮಪೂರಿತ ಮನಸ್ಸಿನಿಂದ ನನ್ನನ್ನೊಮ್ಮೆ ನೋಡಿಯು ಸಹ ಮಾಡಲಿಲ್ಲ.ನಮ್ಮಿಬ್ಬರ ಬಂಧನದಲ್ಲಿ ಒಂದು ದೊಡ್ಡ ವಿಷಯವೆಂದರೆ ಅದೇ. ಈ ವಿಜಯಕ್ಕೆ ಅತಿ ಹಗುರವೆನಿಸಿದ ಸೆಂಟಿಮೆಂಟಲಿಸಮ್‌ಗೆ ನಾವು ಒಮ್ಮೆಯೂ ಪಾತ್ರರಾಗಲಿಲ್ಲ ಎಂಬುವುದೇ ಕಾರಣವಷ್ಟೆ. ಕೊನೆಗೆ ಇನ್ನೂ ಮೇಲೆ ನನ್ನ ಸ್ವಂತವಾದುದೆಂದು ಜನಗಳು ಹೇಳಲಿರುವ ಸ್ಥಾನವನ್ನು ತಲುಪಿದ್ದೇನೆ. ಇನ್ನು ಮುಂದೆ ನಡೆಯಲಿರುವ ಅನೇಕ ಪರಿವರ್ತನೆಗಳಿಗೆ ನಾನು ಬದ್ಧಳಾಗಿರುತ್ತೇನೆ. ಆದರೂ ಆತ್ಮವಿಶ್ವಾಸವನ್ನು ನಾನು ಕೈ ಬಿಡುವುದಿಲ್ಲ. ಆದರೆ ಈ ಆತ್ಮವಿಶ್ವಾಸವನ್ನು ಬೆಳೆಸಿಕೊಂಡು ಬರುವ ಅನೇಕರಿಗೆ ಬಾಳು ಬರಡಾಗಿ ಹೋಗಿರುವುದುಂಟು. ಈ ಪರಿಸ್ಥಿತಿಯಲ್ಲಿ ನನ್ನೊಳಗೆ ಎರಡು ವಿರುದ್ಧ ಶಕ್ತಿಗಳು ತಮ್ಮಲ್ಲಿ ಹಣಾಹಣಿ ಕಾದಾಡುತ್ತಿರುವುದಾಗಿ ನನಗೀಗಅನ್ನಿಸುತ್ತಿದೆ. ಅವುಗಳಲ್ಲಿ ಒಂದು, ನನ್ನನ್ನೇ ಪರಿಸಮಾಪ್ತಿಯತ್ತ ಆಹ್ವಾನಿಸುತ್ತಿದೆ. ಇನ್ನೊಂದು ನನ್ನನ್ನು ವಿಶ್ರಾಂತಿ ತೆಗೆದುಕೊಳ್ಳಲು ಬಿಡುವುದಿಲ್ಲ. ಆದ್ದರಿಂದ ಒಂದು ಕಡೆ ನೋವು ಇನ್ನೊಂದು ಕಡೆ ಚೈತನ್ಯವು ಅನುಭವವಾಗುತ್ತಿವೆ. ಕೆಲವೊಮ್ಮೆ ಆಸೆ.ಕೆಲವೊಮ್ಮೆ ನಿರಾಸೆ. ಈಗ ನಾನು ಇದೇ ಅವಸ್ಥೆಯಲ್ಲಿದ್ದೇನೆ."

"ಒಂದು ವಿಷಯವನ್ನು ಮಿಕ್ಕವರಿಗೆ ಅರ್ಥವಾಗುವಂತೆ ತಿಳಿಯ ಹೇಳುವುದು ಕಷ್ಟ. ಏಕೆಂದರೆ ಆತ್ಮವಂಚನೆಯನ್ನು ಕಾಣಲು ಯಾರಿಗೂ ಸಾಧ್ಯವಿಲ್ಲ. ಏಕೆಂದರೆ ಆತ್ಮವಂಚನೆಗೇ ಹೆಚ್ಚು ಪ್ರಯತ್ನಪಡಬೇಕು. ಮಾನವನಿಗೆ ಪ್ರೀತಿ ಅದರಲ್ಲಿಯೇ ಇದೆಯೆಂದೆನ್ನಿಸುತ್ತದೆ.

"ಇದರಿಂದ ನಾನು ಜೀವನದ ಕಷ್ಟಸುಖಗಳಿಂದ ಪಾರಾಗಲು ಬಯಸುತ್ತೇನೆಂದು ಭಾವಿಸಬೇಡಿ. ದುರಿತಗಳಿಂದ ತುಂಬಿರುವ ಈ ಜೀವನವನ್ನು ದಾಟಿ

ಹೋಗುವುದೇ ಉತ್ತಮ ಮಾರ್ಗವು. ಪ್ರವಾಹದಿಂದ ತುಂಬಿ ಹರಿಯುತ್ತಿರುವ ನದಿಯನ್ನು ದಾಟಿ ಹೋಗಲು ಸಾಧ್ಯವಿಲ್ಲ. ನದಿಗೆ ಹಾರಿ, ತನ್ನದೇ ಆದ ಧೈರ್ಯದಿಂದಲೂ, ತನ್ನದೇ ಆದ ಕೈಗಳಿಂದ ಬಡಿದು ಅಲೆಯ ಹೊಡೆತಗಳನ್ನು ದಾಟಿ ಈಜಿ ಹೋದರೇನೇ ನಾನು ನದಿಯ ದಡವನ್ನು ಮುಟ್ಟಬಲ್ಲೆನಷ್ಟೆ. ಜೀವನವನ್ನು ಮನಃಪೂರ್ವಕವಾಗಿ ಅನುಭವಿಸುವುದೇ ಈ ನದಿಯನ್ನು ದಾಟುವುದಕ್ಕೆ ಸಮಾನವಾಗಿರುತ್ತೆ. ನಾನೀಗ ಕೈಕಾಲುಗಳನ್ನು ಬಡಿದು ಈಜಾಡುತ್ತಿದ್ದೇನೆ. ಈಗ ನನ್ನ ಬುದ್ಧಿ ಪರಿಪಕ್ವವಾಗಿರುವುದರಿಂದ ವಿಷಯ ಗಳನ್ನು ನಾನು ಸರಿಯಾಗಿ ಅರ್ಥಮಾಡಿಕೊಂಡಿದ್ದೇನೆಂದು ಇದರಿಂದ ಅರ್ಥ ವಾಗುವುದಿಲ್ಲ. ನಾನು ನನ್ನ ಬಾಳಿನ ಹೆಗಲ ಮೇಲೆ ನನ್ನ ಅಲ್ಪ ದುಃಖದ ಭಾರವನ್ನು ಹೊರೆಸಿಡುವುದರಿಂದ ನನ್ನ ಬಾಳೇ ನನಗೆ ಭಾರವಾಗಿದೆ. ಹಗುರವಾಗಿರಬೇಕಾದ ಬಾಳಿನ ರೆಕ್ಕೆಗಳನ್ನು ಕತ್ತರಿಸಿ ಹಾಕಿದ್ದೇನೆ.

"ನನಗೆ ಎಂದೆಂದಿಗೂ ಮುಕ್ತಿ ಸಿಗುವುದಿಲ್ಲ. ಒಬ್ಬ ಸಾಧಾರಣ ಹುಡುಗಿಯ ಬಾಳೇ ಹಾಗೆ. ಅವಳ ಬಾಳಿನ ಅರ್ಧಭಾಗವನ್ನು ಅವಳ ತಂದೆಯೂ, ಇನ್ನರ್ಧವನ್ನು ಅವಳ ಗಂಡನೂ ಹಾಳು ಮಾಡುತ್ತಾರೆ. ಆದುದರಿಂದ ಅವಳ ಬಾಳಿನಲ್ಲಿ ಅವಳಿಗೆ ಎಂದಿಗೂ ಮುಕ್ತಿಯು ಸಿಗುವುದಿಲ್ಲ. ಅಷ್ಟೇ ಅಲ್ಲ ನಾನು ನನ್ನ ಬಾಳಿನ ಪಥದಲ್ಲಿ ಜವಾಬ್ದಾರಿ ಎಂಬ ಒಂದು ಸಮಾಧಾನವನ್ನು ನಿರ್ಮಿಸಿಕೊಂಡಿದ್ದೇನೆ. ಈ ನಿರ್ಮಾಣಕ್ಕೆ ನನ್ನನ್ನು ಪ್ರೇರೇಪಿಸಿದ್ದು ನನ್ನ ತಂದೆಯೇ. ಆದುದರಿಂದ ನನಗಿರುವ ಏಕೈಕ ಆಶ್ರಯವೆಂದರೆ ಮುಂದಿನ ಜನ್ಮ. ಆದರೆ ನನ್ನ ಮುಂದಿನ ಜನ್ಮದಲ್ಲಿ ನಾನು ಒಬ್ಬ ಮನುಷ್ಯನಾಗಿಯೇ ಹುಟ್ಟಿದರೆ ?

"ಈ ಪುಟ್ಟ ಕಾಗದದಲ್ಲಿ ಪರಸ್ಪರ ಹೊಂದಾಣಿಕೆಯಿಲ್ಲದ ವಿಷಯಗಳನ್ನೇ ನಾನು ಬರೆಯುತ್ತಿದ್ದೇನೆ. ಹೇಗಾದರೂ ಸರಿ ಈ ಕಾಗದವನ್ನು ಬರೆದು ಮುಗಿಸಲು ನಾನು ಆಸೆಪಡುತ್ತೇನೆ. ಆದರೂ ಈ ವಾಕ್ಯಗಳಲ್ಲಿ ನನ್ನ ದುಃಖದ ಆಕ್ರಂದನಗಳು ಅವ್ಯಕ್ತವಾಗಿ ಅಡಗಿಕೊಂಡಿವೆ. ಹೀಗಿರುವ ಒಂದು ಸ್ಥಿತಿಯಲ್ಲಿ ಮನಸ್ಸಿಗೆ ಒಪ್ಪುವ ಒಂದು ತೀರ್ಮಾನವನ್ನು ತೆಗೆದುಕೊಳ್ಳಲು ನಾನು ಆಸೆ ಪಡುತ್ತಿದ್ದೇನೆ.

"ಅದರ ಪರಿಣಾಮ ನಿನ್ನೆ ರಾತ್ರಿಯೇ ಕಂಡು ಬಂತು. ನಿನ್ನೆ ನನ್ನ ಮೊದಲ ರಾತ್ರಿಯಾಗಿತ್ತು. ನಾನು ನನ್ನ ಬಾಳಿನಲ್ಲೇ ಮೊಟ್ಟ ಮೊದಲಾಗಿ ಒಬ್ಬ ಪುರುಷನಿಗೆ ಶರಣಾದೆ. ನನಗೆ ಗಂಡನಾಗಬೇಕೆಂದು ನನ್ನ ತಂದೆತಾಯಿಗಳು ನನಗಾಗಿ ಹುಡುಕಿದ ಪುರುಷನೊಬ್ಬನಿಗೆ, ಇಂದಿನಿಂದ ನನ್ನ ಗಂಡ ನಾಗಿದ್ದಾನೆಂದು ಲೋಕವು ಅಂಗೀಕರಿಸುವ ಪುರುಷನೊಬ್ಬನಿಗೆ ನಾನು ಶರಣಾದೆ.

"ಆತ ನೋಡಲು ಲಕ್ಷಣವಾಗಿದ್ದಾನೆ. ಹಣದ ವಿಷಯದಲ್ಲೂ ಆತ ಬಹಳ ದೊಡ್ಡವನು. ಲಾಕ್‌ಗಳನ್ನು ತಯಾರಿಸುವ ಕಂಪನಿಯೇ ಆತನ ಸಂಪಾದನೆಯ

ಮಾರ್ಗ. ಆತನು ತಯಾರಿಸಿ ಹೊರಕ್ಕೆ ಕಳುಹಿಸುವ ಬೀಗದಂತೆಯೇ ಇನ್ನು ಮೇಲೆ ನನ್ನ ಜೀವನವೂ ಇರುತ್ತದೆ. ನನ್ನ ಸಕಲ ಇಚ್ಛೆಗಳೂ ಆ ಒಂದು ಬೀಗದಿಂದ ಬಂಧಿತವಾಗಿವೆ. ಅಲ್ಲದಿದ್ದರೆ ನಿನ್ನೆ ರಾತ್ರಿ ನನ್ನನ್ನು ಬಲಾತ್ಕರಿಸಲಾಗುತ್ತಿರಲಿಲ್ಲ.

"ಆತನು ದಯೆಯಿಂದ ನನ್ನೊಡನೆ ವರ್ತಿಸಿದನು. ನನ್ನ ವಸ್ತುಗಳನ್ನು ಹಿಡಿದೆಳೆದೋ, ನನ್ನನ್ನು ಹಾಸಿಗೆಯಲ್ಲಿ ತಳ್ಳಿ ಬೀಳಿಸಿಯೋ ಮಾಡಲಿಲ್ಲ. ಮೃದುನುಡಿಗಳಿಂದ ಆತನು ನನ್ನನ್ನು ಗೆದ್ದನು. ಅವನ ಮಾತುಗಳನ್ನು ಕೇಳುವಂತೆ ಮಾಡಿದನು. ನಾನೇ ನನ್ನನ್ನು ವಿವಸ್ತ್ರಳನ್ನಾಗಿ ಮಾಡಿಕೊಂಡೆ. ವಿಧೇಯಳಾದ ಒಂದು ಮೃಗದಂತೆ ನಾನು ಹಾಸಿಗೆಯಲ್ಲಿ ಆತನಿಗೆ ನನ್ನನ್ನೇ ಅರ್ಪಿಸಿಕೊಂಡೆ. ಫಿಸಿಯಾಲಜಿಯ ಮೃಗಶಾಲೆಯಲ್ಲಿರುವ ಪುನುಗು ಬೆಕ್ಕಿನ ವಾಸನೆಯಿರುವ ಶುಕ್ಲದ ವಾಸನೆಯ ಅನುಭವವನ್ನು ನಾನು ಪ್ರಥಮ ಬಾರಿಗೆ ಅನುಭವಿಸಿದೆ.

"ಹಾಗೆ ನಾನು ಸಂಪೂರ್ಣವಾಗಿ ಬೇರೆ ಒಬ್ಬನ ಸ್ವಂತವಾಗಿದ್ದೇನೆ. ಹಾಗಿದ್ದರೂ ಆತನು ನನ್ನನ್ನು ಅನುಭವಿಸುವ ಒಂದೊಂದು ಕ್ಷಣವೂ ನನ್ನ ಮನಸ್ಸಿನಲ್ಲಿ ನಿಮ್ಮ ಚಿತ್ರವೇ ಮೂಡಿ ಬರುತ್ತೆ. ಬಹುಶಃ ಎಂದಿಗಾದರೂ ನನಗೊಂದು ಮಗು ಹುಟ್ಟುವುದೇ ಆದರೆ, ಅದಕ್ಕೆ ನಿಮ್ಮದೇ ಹೋಲಿಕೆಯಿರುತ್ತದೆ. ಯಾವುದೋ ಒಂದು ಹೆಣ್ಣು ಸಂಭೋಗ ಸಮಯದಲ್ಲಿ ತಾನು ಪ್ರೀತಿಸಿದ್ದ ಪುರುಷನ ಮುಖವನ್ನು ನೆನೆಯುವಳೋ, ಆ ಸಂಭೋಗದಿಂದ ಜನಿಸುವ ಶಿಶುವಿಗೆ ಅವಳು ನೆನೆಯುತ್ತಿರುವ ಪುರುಷನ ಹೋಲಿಕೆ ಇರುತ್ತೆಂದು ಕಾಮ ಶಾಸ್ತ್ರದಲ್ಲಿ ಎಲ್ಲೋ ಓದಿದಂತೆ ಜ್ಞಾಪಕ. ಆ ಶಾಸ್ತ್ರತತ್ವವು ನನ್ನನ್ನು ಕಾಪಾಡಲಿ. ಹಾಗೇನಾದರೂ ಸಂಭವಿಸಿದ್ದೇ ಆದರೆ ನಾನು ಬಲು ಆನಂದಪಡುತ್ತೇನೆ. ಆ ಆನಂದವು ಬಿಡುಗಡೆಯ ಆನಂದವಾಗಿರುತ್ತೆ. ಇದು ಯಥಾರ್ಥದಲ್ಲಿ ಆತ್ಮೀಯತೆಯೂ ಆಗಿರುತ್ತದೆ.

"ನಾನು ಇಲ್ಲಿಗೆ ನನ್ನ ಲೇಖನಿಯನ್ನು ನಿಲ್ಲಿಸುತ್ತೇನೆ.

"ಬೆರಳುಗಳು ಚಲಿಸುತ್ತಿಲ್ಲ. ಏನು ಮಾಡಲಿ? ಅಕ್ಷರಗಳು ಸೊಟ್ಟಸೊಟ್ಟಾಗುತ್ತಿವೆ. ಶಾಪಗ್ರಸ್ತೆಯಾದ ನಾನು ಕಬ್ಬಿಣವು ಕರಗಿ ಹೋಗುವಂತೆ ಕರಗಿಹೋಗುತ್ತೇನೆ. ತೆರೆದಿಟ್ಟ ಕಿಟಕಿಯ ಮೂಲಕ ಆಕಾಶದಲ್ಲಿ ಗರೆಗಳತ್ತ ನೋಡುತ್ತಿದ್ದೇನೆ. ಕಾರ್ಮೋಡಗಳು ಉರುಳುರುಳಿ ಸೇರಿಕೊಳ್ಳುತ್ತಿವೆ. ಆದರೆ ಮಳೆ ಸುರಿಯುವ ಲಕ್ಷಣವಿಲ್ಲ. ಅಥವಾ ಏನಾದರೂ ನೀರು ಬೀಳುವುದಾದರೆ ಅದು ನನ್ನ ಕಣ್ಣಿನಿಂದ ಮಾತ್ರವಾಗಿರುತ್ತದೆ.

"ಚಿಂತಿಸಲಾರೆ. ಬರೆಯಲಾರೆ. ಆದುದರಿಂದ ಇಷ್ಟಕ್ಕೇ ನಿಲ್ಲಿಸುತ್ತಿದ್ದೇನೆ. ಎಂದೆಂದಿಗೂ ಇಷ್ಟು ಮಾತ್ರವೇ."

ಇಂತೀ ನಿಮ್ಮ
ಲಕಿ

"ಮತ್ತೆ ಒಂದು ಮಾತು:

ದೇವದಾಸ್, ನೀವು ಕುಶಲಕರ್ಮಿ. ವಿಷ್ಣುವಿಗೆ ಗರುಡನು ಹೇಗೋ ಹಾಗೆ ಲೋಕವು ನಿಮಗೆ ಸಂಬಂಧಿಸಿದಂತೆ ಒಂದು ವಾಹನವಷ್ಟೆ. ನೀವು ಲೋಕದಲ್ಲಿ ಮೇಲೆ ಹತ್ತಿ ಕುಳಿತರೆ ಸಾಕು. ಲೋಕವೇ ನಿಮ್ಮನ್ನು ಎತ್ತಿಕೊಂಡು ಹೋಗುತ್ತದೆ. ಏಕೆಂದರೆ ನೀವು ಭಾರವೇ ಇಲ್ಲದ ಯಾತ್ರಿಕ."

# ಮೂವತ್ತನಾಲ್ಕು

ಮೆಡಿಸಿನ್, ಸರ್ಜರಿ, ಸೋಷಿಯಲ್ ಅಂಡ್ ಪ್ರಿವೆಂಟಿವ್ ಮೆಡಿಸಿನ್, ಆಫ್ತಾಲ್‌ಮಾಲಜಿ ಮೊದಲಾದ ವಿಷಯಗಳ ಪರೀಕ್ಷೆಗಳು ಕೊನೆಗೊಂಡವು. ಥಿಯರಿ, ವೈವಾ ಎಲ್ಲವನ್ನೂ ದೇವದಾಸ್ ಚೆನ್ನಾಗಿಯೇ ಮಾಡಿದ್ದನು. ಪ್ರಾಯಶಃ ಒಳ್ಳೆಯ ಮಾರ್ಕ್‌ಗಳಲ್ಲಿ ಪಾಸ್ ಆಗಬಹುದು. ಆದರೆ ಸರ್ಜರಿಯ ವಿಷಯದಲ್ಲಿ ದೇವದಾಸ್‌ಗೆ ಯಾವ ನಂಬಿಕೆಯೂ ಇರಲಿಲ್ಲ. ಪ್ರಾಯಶಃ ಮಿಸ್ಟರ್ ಆಚಾರಿ ಅಲ್ಲಿ ತನಗೆ ಕೈಕೊಡಬಹುದು. ಇದ್ದಕ್ಕಿದ್ದಂತೆ ಒಂದೇ ದಿನಕ್ಕೆ ಒಬ್ಬ ಮನುಷ್ಯನು ಒಳ್ಳೆಯವನಾಗುವುದಿಲ್ಲವಲ್ಲಾ ?

ದೇವದಾಸ್ ಒಂದು ಸ್ವಪ್ನದಲ್ಲೆಂಬಂತೆ ತನ್ನ ಪಾಠಗಳನ್ನು ಓದಿದ್ದನು. ವಾರ್ಡ್‌ನಲ್ಲಿನ ರೋಗಿಗಳನ್ನು ಪರೀಕ್ಷಿಸಿದ್ದನು. ಪ್ರಾಕ್ಟಿಕಲ್ ಪರೀಕ್ಷೆಗಳಿಗೆ ಸಿದ್ಧವಾಗಿದ್ದನು. ಆಯಾ ದಿನಗಳ ತಾರೀಕಾಗಲಿ, ದಿನವಾಗಲಿ, ಸಮಯವಾಗಲಿ ಒಂದೂ ಜ್ಞಾಪಕವಿಲ್ಲದಂತೆಯೇ ಇದೆಲ್ಲವನ್ನೂ ಮಾಡಿದ್ದನು. ಅವುಗಳೆಲ್ಲಾ ಕಾಲದ ಅಂಧಕಾರಮಯವಾದ ಒಂದು ಕೊನೆಯಲ್ಲಿ ಎಲ್ಲೋ ಹೋಗಿ ಅಡಗಿಕೊಂಡಿದ್ದವು. ತನ್ನದೇ ಆದ ಶರೀರದ ಪಂಚೇಂದ್ರಿಯಗಳ ಅಸ್ತಿತ್ವ ಸಹ ದೇವದಾಸ್‌ಗೆ ವೇದ್ಯವಾಗಿರಲಿಲ್ಲ. ನೋಡುವುದು, ಕೇಳುವುದು, ಸ್ಪರ್ಶಿಸುವುದು, ರುಚಿಯನ್ನು ತಿಳಿಯುವುದು, ವಾಸನೆ ನೋಡುವುದು ಎಂಬೀ ವಿಷಯಗಳು ಈಗ ಕೇವಲ ಪುಸ್ತಕದಲ್ಲಿ ಮಾತ್ರವೇ ಇರುವುದು. ಅವು ಅವನ ಶರೀರದಿಂದ ಬೇರ್ಪಟ್ಟು ಮತ್ತೆಲ್ಲೋ ಲಯಿಸಿ ಹೋಗಿದ್ದವು. ಆದರೂ ದುಃಖವೋ ಸಂತಾಪವೋ ದೇವದಾಸ್‌ನನ್ನೂ ಕಾಡಲಿಲ್ಲ. ಅಂತಹ ಕಾಟವುಂಟಾಗಲೆಂದು ಅವನು ಬಯಸಿಯೂ ಇರಲಿಲ್ಲ. ಹಾಗೇನಾದರೂ ಸಂಭವಿಸಿದ್ದೇ ಆದರೆ ಅದು ಅವನಿಗೆ ಒಂದು ಅಪಮಾನವೆಂದೆನಿಸುತ್ತಿತ್ತು.

ಲಕ್ಷ್ಮಿಯ ಕಾಗದವನ್ನು ಓದಿದ ನಂತರ ಎರಡು ಮೂರು ದಿವಸಗಳು ದೇವದಾಸ್ ಉದ್ವಿಗ್ನನಾಗಿದ್ದನು. ಅನಂತರ ಆ ಕಾಗದವನ್ನು ಅವನು ಪೆಟ್ಟಿಗೆಯ ಅಡಿಯಲ್ಲಿ ಭದ್ರವಾಗಿಟ್ಟನು. ತನಗೆ ಸಂಬಂಧಿಸಿದವರ ಶರೀರ ಉರಿಸಿದ ನಂತರ, ಆ ಭಸ್ಮವನ್ನು ಭದ್ರವಾಗಿ ಕಾಪಾಡುವಂತೆ ಅವನು ಅದನ್ನು ಕಾಪಾಡುತ್ತಿದ್ದನು. ಸೆಂಟಿಮೆಂಟಲ್ ಆಗದಿರಲೆಂದು ದೇವದಾಸ್ ಪ್ರಯತ್ನಿಸುತ್ತಿದ್ದನು. ಆದರೆ, ಅದಕ್ಕೆ ಬಹಳ ಪ್ರಯತ್ನ ಪಡಬೇಕಾಗೇನೂ ಬರಲಿಲ್ಲ. ಅದಕ್ಕೆ ಕಾರಣ ಅವನು ಆಲೋಚಿಸಿದ್ದನಾದರೂ, ಒಬ್ಬ ಸೆಂಟಿಮೆಂಟಲಿಸ್ಟಾಗಲು ದೇವದಾಸ್‌ಗೆ ಅದು ಸಾಧಿಸುತ್ತಿರಲಿಲ್ಲ. ದೇವದಾಸ್ ಎಂದರೆ ಹಾಗಲ್ಲವೇ ?

ದೇವದಾಸ್ ಪುಸ್ತಕವನ್ನು ತೆರೆದು ಇಟ್ಟನು.

ಯಾರಾದರೂ ಬಂದು ತೊಂದರೆ ಮಾಡದಿರಲೆಂದು ದೇವದಾಸ್ ತನ್ನ ಕೋಣೆಯನ್ನು ಬಲವಾಗಿ ಮುಚ್ಚಿದನು. ವರಾಂಡದಲ್ಲೂ ಲಾನ್‌ನಲ್ಲೂ ಗಲಾಟೆ ಕಡಿಮೆಯಾಗಿತ್ತು. ಹಿಂಭಾಗದಲ್ಲಿದ್ದ ಸೀಬೆ ತೋಟದಲ್ಲಿ ಗಾಳಿ ಬೀಸುತ್ತಿರುವ ಶಬ್ದವು ಮಾತ್ರ ಕೇಳಿ ಬರುತ್ತಿತ್ತು. ಆ ಹಣ್ಣುಗಳನ್ನು ತಿನ್ನಲು ಬರುವ ಹಕ್ಕಿಗಳನ್ನು ಹೆದರಿಸಿ ಓಡಿಸಲು ತೋಟಗಾರನು ಆಗಾಗ್ಗೆ ಗುಂಡು ಹಾರಿಸುತ್ತಿದ್ದನು.

ಇನ್ನು ಒಂದೇ ಒಂದು ಪೇಪರ್ ಬಾಕಿ ಇತ್ತು. ಅಬ್‌ಸ್ಟೆಟ್ರಿಕ್ಸ್ ಅಂಡ್ ಗೈನಕಾಲಜಿ. ಅದನ್ನು ಅವನು ಓದತೊಡಗಿದಾಗಲೇ ಆ ಕಷ್ಟಗಳು ಆರಂಭವಾಗಿದ್ದು.

ಅವನು ಪೇಜುಗಳನ್ನು ತಿರುವಿ ಹಾಕತೊಡಗಿದನು. ಮತ್ತೆ ಮತ್ತೆ ತಿರುವಿ ಹಾಕಿದನು. ಅವಸರದಿಂದ ದೇವದಾಸ್ ಪೇಜುಗಳನ್ನು ಹಿಂದಿನಿಂದ ಮುಂದಕ್ಕೆ ಮುಂದಿನಿಂದ ಹಿಂದಕ್ಕೆ ತಿರುವಿ ಹಾಕಲಾರಂಭಿಸಿದನು. ಪುಸ್ತಕವು ಶೂನ್ಯವಾದ ಒಂದು ಪಟ್ಟಿಗೆಯಂತೆ ಬದಲಾಗಿತ್ತು. ಪ್ರಿಂಟಿಂಗ್ ಇಂಕ್ ಹರಡಿದ ಅಕ್ಷರಗಳು ಅಲ್ಲಿ ಮಾಯವಾಗಿ ಹೋಗಿವೆ ?

ದೇವದಾಸ್ ಪುಸ್ತಕವನ್ನು ಮುಚ್ಚಿ ಅದರ ರಟ್ಟನ್ನು ಹಿಂದೆ ಮುಂದೆ ತಿರುಗಿಸಿ ನೋಡಿದನು. ರಟ್ಟಿನ ಮೇಲೆ ಏನೂ ಕಾಣಿಸಲಿಲ್ಲ.

ಸಂದೇಹ ಹೋಗದೆ ಅವನು ಮತ್ತೆ ಪುಸ್ತಕವನ್ನು ತೆರೆದು ಹಿಡಿದನು. ಒಂದು ಪೇಜಿನಲ್ಲೂ ಅಕ್ಷರಗಳು ಕಾಣಿಸುತ್ತಿರಲಿಲ್ಲ. ಅದಕ್ಕೆ ಬದಲಾಗಿ ಒಂದೊಂದು ಪೇಜಿನಲ್ಲೂ ಎರಡೆರಡು ಕಣ್ಣುಗಳು ಸ್ಪಷ್ಟವಾಗಿ ಕಾಣಿಸುತ್ತಿದ್ದವು. ನೀರು ಹರಿದು ಹೋಗುವಂತೆ, ದುಃಖಾರ್ತವಾದ ಅವಳ ಆ ಕಣ್ಣುಗಳು ಪೇಜಿನ ಉದ್ದಕ್ಕೂ ಸರಿದು ಹೋಗುತ್ತಿದ್ದವು.

ದೇವದಾಸ್ ಸ್ವಲ್ಪವೂ ಭಯಪಡಲಿಲ್ಲ. ಎದ್ದು ಬೀರು ತೆರೆದು ಲೌ ಅಂಡ್ ಬೆಲ್ಲಿಯ ಸರ್ಜರಿ ಪುಸ್ತಕವನ್ನು ತೆಗೆದುಕೊಂಡು ಅದನ್ನು ತೆರೆದು ಹಿಡಿದನು. ಸಂದೇಹವೇ ಇಲ್ಲ. ಇದಕ್ಕೆ ಮುಂಚಿನಂತೆಯೇ ಶೂನ್ಯವಾದ ಬಿಳಿಯ ಹಾಳೆಯಲ್ಲಿ ಎರಡು ಕಣ್ಣುಗಳೂ ಸ್ಪಷ್ಟವಾಗಿ ಕಾಣುತ್ತಿವೆ.

ಸುಂದರವಾದ, ವಿಶಾಲವಾದ ನೀಲವರ್ಣದ ಅರಳಿದ ದೊಡ್ಡ ಎರಡು ಕಣ್ಣುಗಳು. ಲಕ್ಷ್ಮಿಯ ಕಣ್ಣುಗಳು. ಹೌದು ಅವು ಲಕ್ಷ್ಮಿಯ ಕಣ್ಣುಗಳೇನೇ.

ಅಸ್ತವ್ಯಸ್ತವಾದ ದೇವದಾಸ್‌ಗೆ ಕೊಠಡಿಯಲ್ಲೇ ಕುಳಿತಿರಲು ಪ್ರಯಾಸವೆನಿಸಿತು.

ಹೊರಗೆ ಸೂರ್ಯಾಸ್ತಮಯ ಸಮಯದ ಹೊಂಬಿಸಿಲು.

ದೇವದಾಸ್ ವಿಶಾಲವಾದ ಲಾನ್‌ಗೆ ಹೋದನು. ಲಾನ್ ಸುಮಾರು ಒಂದು ವೃತ್ತದಲ್ಲಿ ಕಟ್ಟಿದ್ದ ನಾಲ್ಕು ಹಾಸ್ಟಲ್‌ಗಳನ್ನು ಒಳಸಿಕೊಂಡಿರುವ ಒಂದು ಹೂವಿನ ತೋಟವಾಗಿತ್ತು. ಅಲ್ಲಿ ಇಲ್ಲದ ಗಿಡಗಳಿರಲಿಲ್ಲ. ಹೂವುಗಳಿರಲಿಲ್ಲ. ಬೇಸಿಗೆ ಯಾದರೂ ಗಿಡಗಳೂ ಹೂಗಳೂ ಆರೋಗ್ಯದಿಂದಿದ್ದವು. ದಯಾಳು ಅದರ ತೋಟಗಾರನಾಗಿದ್ದನು.

ಲಾನ್‌ನಲ್ಲಿನ ಹುಲ್ಲುಗಾವಲಿನಲ್ಲಿ, ಕಾಂಕ್ರೀಟ್ ಬೆಂಚುಗಳಲ್ಲಿ, ವಿದ್ಯಾರ್ಥಿಗಳು ಪತ್ರಪುಸ್ತಕಗಳೊಂದಿಗೆ ಕುಳಿತಿದ್ದರು. ಕೆಲವೇ ಜನ ಪುಸ್ತಕಗಳನ್ನು ಓದುತ್ತಿದ್ದರು.

ಮಿಕ್ಕವರೆಲ್ಲಾ ಕಥಾಂತ್ಯದಲ್ಲಿನ ದುರಂತ ನಾಯಕರಂತೆ ಬರಲಿರುವ ಭವಿಷ್ಯವನ್ನು ಕಾದಿದ್ದಾರೆ.

ದೇವದಾಸ್ ಎರಡು ಹಾಸ್ಟೆಲ್‌ಗಳ ಮಧ್ಯೆ ಇದ್ದ, ಯಾರಿಗೂ ಪ್ರವೇಶಕ್ಕೆ ಅನುಮತಿ ಇಲ್ಲದ ಸಣ್ಣಗೇಟಿನ ಮೂಲಕ ಹೊರಕ್ಕೆ ಬಂದನು. ಅಲ್ಲಿ ಸೀಬೆ ತೋಟವಿತ್ತು.

ಸೀಬೆಹಣ್ಣಿನ ಕಾಲವಾಗಿತ್ತದು. ಸೀಬೆಹಣ್ಣಿನ ಮತ್ತೇರಿಸುವ ವಾಸನೆಯು ಗಾಳಿಯಲ್ಲಿ ಹರಡಿತ್ತು. ಹಣ್ಣುತಿನ್ನಲು ಬರುವ ಪಕ್ಷಿಗಳನ್ನು ಆ ವೃದ್ಧ ಕಾವಲುಗಾರನು ಗುಂಡುಹಾರಿಸಿ ತನ್ನ ಕೆಲಸವನ್ನು ಮಾಡುತ್ತಿದ್ದನು.

ಒಣಗಿದ ಎಲೆಗಳ ಮೇಲೆ ಕಾಲಹೆಜ್ಜೆಗಳ ಸಪ್ಪಳ ಕೇಳಿದಾಗ ವೃದ್ಧನು ಗುಂಡು ಹಾರಿಸುವುದನ್ನು ನಿಲ್ಲಿಸಿದನು.

ಯಾರೂ ಪ್ರವೇಶಿಸದ ಬಾಗಿಲಿನ ಮೂಲಕ ಬರುತ್ತಿದ್ದ ಈ ಮನುಷ್ಯನನ್ನು ನೋಡಿ ಅವನು ಕೇಳಿದನು.

"ಯಾರು ? ಡಾಕ್ಟರ್ ಸಾಹೇಬರೇ ?"

"ಹೌದು ನಾನೇ."

"ಹೇಳಿ ಡಾಕ್ಟರ್ ? ತಮಗೆ ನಾನು ಹೇಗೆ ಸೇವೆ ಸಲ್ಲಿಸಲಿ ? ಅಪ್ಪಣೆಯಾಗಲಿ ನಾನೇನು ಮಾಡಬೇಕು ?"

"ನನಗೆ ಇಲ್ಲಿ ಸ್ವಲ್ಪ ಹೊತ್ತು ಕುಳಿತುಕೊಳ್ಳಬೇಕು. ಅಪ್ಪಣೆ ಇಲ್ಲದೆ ಗೇಟನ ಮೂಲಕ ನಾನು ಪ್ರವೇಶಿಸಿದ್ದೇನೆ."

"ಪರವಾಗಿಲ್ಲ, ಡಾಕ್ಟರ್ ಸಾಹೇಬ್. ತಾವು ಕುಳಿತುಕೊಳ್ಳಿ. ಎಷ್ಟು ಹೊತ್ತು ಬೇಕಾದರೂ ಕುಳಿತುಕೊಳ್ಳಿ."

ತಲೆಗೆ ದೊಡ್ಡ ರುಮಾಲೂ, ನರೆತ ಉದ್ದನೆಯ ದಾಡಿ, ಮೊಗಲ್‌ರ ಮುಖಛ್ಛಾಯೆಯೂ ಇದ್ದ ಆ ವೃದ್ಧನು ತನ್ನ ನರ್ಸರಿಕೋಣೆಯಲ್ಲಿದ್ದ ಆಸನವನ್ನು ಧೂಳು ಹೊಡೆದು ಶುಚಿ ಮಾಡುತ್ತಾ ಹೇಳಿದನು. ಬಂದೂಕವನ್ನು ತನ್ನ ಭುಜದ ಮೇಲಿಂದ ಕೆಳಗಿಳಿಸಿ ಕೈ ತೊಳೆದುಕೊಂಡನು. ಚೆನ್ನಾಗಿ ಕಳಿತಿದ್ದ, ಒಳ್ಳೆಯ ತಿರುಳಿದ್ದ, ಕೆಂಪಾಗಿದ್ದ ಎರಡು ಮೂರು ಸೀಬೆ ಹಣ್ಣುಗಳನ್ನು ಕತ್ತರಿಸಿ ಮಸಾಲೆ ಹಚ್ಚಿ ಅವುಗಳನ್ನು ಒಂದು ಎಲೆಯ ಮೇಲಿಟ್ಟು ದೇವದಾಸ್‌ಗೆ ಕೊಟ್ಟು ಅವನನ್ನು ಸತ್ಕರಿಸಿದನು.

"ಮುತ್ತುರಾಮನ್‌ನ ರೋಗ ಈಗ ಹೇಗಿದೆ ?" ವೃದ್ಧನು ಕೇಳಿದನು.

"ಇಂಜೆಕ್ಷನ್ ಸರಿಯಾಗಿ ತೆಗೆದುಕೊಳ್ಳುತ್ತಿದ್ದಾನೆ."

ದೇವದಾಸ್‌ಗೆ ಅಷ್ಟೇ ತಿಳಿದಿರುವುದು. ಕ್ಷಯವು ಎಷ್ಟರಮಟ್ಟಿಗೆ ಮುತ್ತುರಾಮನ್ ನನ್ನು ಬಗೆದು ತಿಂದಿದೆ ಎಂಬ ವಿವರವು ಎಕ್ಸ್‌ರೇಯಲ್ಲಿದೆ. ಅವನ ಶ್ವಾಸಕೋಶ ದೊಳಗೂ ಇದೆ. ಆದರೆ, ಅದೊಂದೂ ಲೋಕಕ್ಕೆ ಕಾಣಲು ಸಾಧ್ಯವಿಲ್ಲವಲ್ಲಾ ?

"ರೋಗವು ಬೇಗ ಗುಣವಾಗುತ್ತೆಯೇ ?"

"ಹೇಳೋಕಾಗೋಲ್ಲ. ಎಷ್ಟೇ ಆದರೂ ಟಿ.ಬಿ. ಅಲ್ಲವೇ ?" ಒಬ್ಬ ದೊಡ್ಡ ಪಂಡಿತನಂತೆ ದೇವದಾಸ್ ಹೇಳಿದನು.

ವೃದ್ಧನು ಸ್ವಲ್ಪ ಹೊತ್ತು ಏನೂ ಮಾತನಾಡದೆ ನಿಂತನು. ಅವನ ಮುಖದಲ್ಲಿ ವಿಷಾದವು ನರಳಾಡುತ್ತಿತ್ತು. ಅವನು ಹೇಳಿದನು.

"ನನ್ನ ಮಗನಿಗೂ ಟಿ.ಬಿ.ಯಾಗಿತ್ತು."

"ಅವನೀಗ ಎಲ್ಲಿ ?" ದೇವದಾಸ್ ಕೇಳಿದನು.

ಕಣ್ಣುಗಳನ್ನು ಮುಚ್ಚಿಕೊಂಡು ತಲೆಯನ್ನು ಬಗ್ಗಿಸಿ ನೆಲವನ್ನು ತಟ್ಟುತ್ತಾ ವೃದ್ಧನು ಹೇಳಿದನು.

"ಇದರೊಳಗೆ" ಸ್ವಲ್ಪ ಹೊತ್ತು ಮಾತು ನಿಲ್ಲಿಸಿದ ವೃದ್ಧನು ಮತ್ತೆ ಮುಂದುವರಿಸಿ ಹೇಳಿದನು "ಅವನು ಸುಖವಾಗಿ ನಿದ್ದೆ ಮಾಡಲಿ."

ಸೀಬೆತೋಟದಲ್ಲಿ ನಸುಗತ್ತಲು ಹರಡಲು ಆರಂಭವಾಗಿತ್ತು. ಹಕ್ಕಿಗಳು ಮರಗಳ ಮೇಲಿನ ತಮ್ಮ ತಮ್ಮ ಗೂಡುಗಳನ್ನು ಸೇರಲು ಹೊರಟವು. ವೃದ್ಧನು ಬಂದೂಕವನ್ನು ನರ್ಸರಿಕೋಣೆಯಲ್ಲಿನ ಗೂಟಕ್ಕೆ ತಗುಲಿ ಹಾಕಿದನು.

ಅವನು ಏನನ್ನೂ ಮಾತನಾಡಲಿಲ್ಲ. ಮುತ್ತುರಾಮನ್‌ನ ರೋಗದ ಬಗ್ಗೆ ಯೋಚಿಸಿ ಅವನು ದುಃಖಿಸುತ್ತಿದ್ದಾನೆಯೋ ? ಅಥವಾ ತೀರಿಹೋದ ತನ್ನ ಮಗನ ನೆನಪುಗಳು ಅವನನ್ನು ಕಾಡುತ್ತಿವೆಯೋ ?

ಸೀಬೆಮರದ ಕಾಂಡವನ್ನು ಒರಗಿಕೊಂಡು ಕಾಲುಗಳನ್ನು ಚಾಚಿಕೊಂಡು ಹೇಳಲು ಆರಂಭಿಸಿದನು.

"ಲಕಡಿ ಜಲ್ ಕೋಯಿಲ್ ಭಯಿ
ಕೋಯಿಲ್ ಜಲ್ ಭಯಿ ರಾಖ್
ಮ್ಯೆ ಪಾಪಿನ್ ಐಸೀ ಜಲೀ
ನ ಕೋಯಿಲಾ ಭಯಿ ನ ರಾಖ್...."

(ಇಂಧನ ಉರಿದು ಇದ್ದಿಲಾಯಿತು.... ಇದ್ದಲು ಬರಿಯ ಬೂದಿಯಾಯಿತು.... ಪಾಪಿ ಉರಿದರೆ ಇದ್ದಿಲೂ ಆಗುವುದಿಲ್ಲ. ಬೂದಿಯೂ ಸಿಗುವುದಿಲ್ಲ.)

ದೇವದಾಸ್ ಮೆಲ್ಲನೆ ಎದ್ದು ಒಣಗಿದ ಎಲೆಗಳ ಮೇಲೆ ಹೆಚ್ಚು ಶಬ್ದ ಮಾಡದೆ ನಡೆದು ಹೋದನು. ಅವನು ವೃದ್ಧನಿಗೆ ವಿದಾಯ ಹೇಳಲಿಲ್ಲ. ವೃದ್ಧನು ಗಜಲ್‌ಗಳಲ್ಲಿ ಮುಳುಗಿದ್ದನು.

ಅಭೀ ರಾತ್ ಹ್ಯೆ ಕುಛ್ ಬಾಕಿ
ಜರಾ ನಕಾಬ್ ಉಡಾದೋ ಸಾಕಿ....

ಮನಸ್ಸನ್ನು ಸಮಸ್ಥಿತಿಯಲ್ಲಿ ನಿಲ್ಲಿಸಲು ದೇವದಾಸ್ ಸಾಧ್ಯವಾದಷ್ಟು ಪ್ರಯತ್ನ ಪಡುತ್ತಿದ್ದಾನೆ. ಆದರೆ ಎಷ್ಟೋ ಮನೋದಾರ್ಢ್ಯವಿರುವವನೂ ತಮ್ಮ ಜೀವನದ ಗುಣ ದೋಷಗಳ ಚೌಕಟ್ಟಿನಲ್ಲಿ ಒಂದೊಂದು ಸಲ ನಿಂತುಬಿಡುತ್ತಾನೆ.

ನಿತ್ಯಜೀವನದ ತಾಳಗಳಿಂದ ದೇವದಾಸ್ ದೂರವಾಗಿ ಹೋಗಿದ್ದಾನೆ. ಅವನಿಗೆ ಹಸಿವು ನೀರಡಿಕೆಗಳಿಲ್ಲ. ಶರೀರದ ತೂಕ ಎಷ್ಟೋ ಇಳಿದು ಹೋಗಿದೆ. ಅಲ್ಲದಿದ್ದರೂ ಊಟ ತಿಂಡಿಗಳಲ್ಲಿ ದೇವದಾಸ್‌ಗೆ ಮೊದಲಿನಿಂದಲೂ ಆಸಕ್ತಿ ಕಡಿಮೆಯೇ ಆಗಿತ್ತಲ್ಲವೇ ?

ಮತ್ತೆ ರಾತ್ರಿ ದೇವದಾಸ್ ಓದುವ ಒಂದು ಪ್ರಯತ್ನ ನಡೆಸಿದನು. ಆದರೆ ಅದರಲ್ಲಿ

ಅವನು ಜಯಗಳಿಸಲಿಲ್ಲ. ಗೈನಕಾಲಜಿಯ ಪುಸ್ತಕವನ್ನು ತೆರೆಯುವ ವೇಳೆಗೆ ಲಕ್ಷ್ಮಿಯ ಕಣ್ಣುಗಳು ಸ್ಪಷ್ಟವಾಗಿ ಕಾಣುತ್ತಿದ್ದವು. ಅವಳ ಕಣ್ಣುಗಳಲ್ಲದೆ ಪುಸ್ತಕದಲ್ಲಿ ಮತ್ತೇನನ್ನೂ ಅವನಿಗೆ ಕಾಣಲು ಸಾಧ್ಯವಾಗುತ್ತಿರಲಿಲ್ಲ.

ದೇವದಾಸ್ ಪುಸ್ತಕವನ್ನು ಮೇಜಿನ ಮೇಲೆ ಬಿಸಾಡಿದನು. ಅವನು ಎಸೆದ ಪುಸ್ತಕವು ಮೇಜಿನ ಮೇಲೆ ಬೀಳುವ ಬದಲು ಕೆಳಕ್ಕೆ ಬಿದ್ದಿತ್ತು. ತಪ್ಪುಮಾಡಿದ ಭಾವದಲ್ಲಿ ಅವನು ಬಾಗಿ ಆ ಪುಸ್ತಕವನ್ನು ತೆಗೆದನು. ಪಾಪ, ಲಕ್ಷ್ಮಿಯ ಕಣ್ಣುಗಳಿಗೆ ನೋವಾಯಿತೋ ಏನೋ ? ನೋವಿನಿಂದ ದೇವದಾಸ್ ಪುಸ್ತಕವನ್ನು ತಡವಿದನು.

ಅನಂತರ ಸ್ವಲ್ಪ ಹೊತ್ತು ಕೋಣೆಯಲ್ಲಿ ಅತ್ತಿಂದಿತ್ತ ಅಡ್ಡಾಡಿದನು. ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಎಷ್ಟು ಹೊತ್ತು ನಡೆದನೆಂದು ಹೇಳಲು ಸಾಧ್ಯವಿಲ್ಲ. ಅರ್ಧರಾತ್ರಿಯಾಗಿತ್ತು. ಎಲ್ಲಾ ದೀಪಗಳು ಆರಿಸಲ್ಪಟ್ಟಿದ್ದವು. ಸೀಬೆ ತೋಟದಿಂದ ಬರುತ್ತಿದ್ದ ಗಜಲುಗಳ ಶಬ್ದವು ನಿಂತಿತು. ದೇವದಾಸ್ ನಡೆಯುತ್ತಲೇ ಇದ್ದನು. ನಡೆದು ನಡೆದು ಕೊನೆಗೆ ಅವನು ನಡೆಯುತ್ತಿದ್ದ ದಾರಿಯಲ್ಲಿ ಒಂದು ಕಾಲುವೆಯೇ ನೆಲದಲ್ಲಿ ರೂಪಗೊಂಡಿತು. ಆ ಕಾಲುವೆಯ ಮೂಲಕವಾಗಿತ್ತು ಅನಂತರ ಅವನು ನಡೆದಿದ್ದು. ಅದರೊಂದಿಗೆ ಹೆಜ್ಜೆ ಹಾಕುವುದು ಅನಾಯಾಸ ವಾಯಿತು. ಅನಂತರ ಕಾಲುಗಳನ್ನು ಎತ್ತಿಡಬೇಕಾಗಿ ಬಂದಿಲ್ಲ. ಆ ಕಾಲುವೆಯ ಮೂಲಕ ಅವನು ಅತ್ತಿಂದಿತ್ತ ಇತ್ತಿಂದತ್ತ ನಡೆದಾಡುತ್ತಿದ್ದನು.

ಬೆಳಕು ಹರಿಯಿತು.

ಹಾಸ್ಟೆಲ್ ಶಬ್ದ ಕೋಲಾಹಲವಾಗಿ ಬದಲಾಯಿತು.

ಸೀಬೆಯ ತೋಟದಲ್ಲಿ ಗುಂಡುಹಾರಲು ಆರಂಭವಾಯಿತು.

ಡಾಕ್ಟರ್ ತನುಜರ ಡೆಮಾನ್‌ಸ್ಟ್ರೇಷನ್ ಕ್ಲಾಸಾಗಿತ್ತು. ಅದು ಆಕೆಯ ಕೊನೆಯ ಕ್ಲಾಸಾಗಿತ್ತು. ಇನ್ನು ಈ ಬ್ಯಾಚ್‌ನಲ್ಲಿ ಇರುವ ವಿದ್ಯಾರ್ಥಿಗಳನ್ನು ಮತ್ತೆ ನೋಡುವುದಿಲ್ಲ. ಪರೀಕ್ಷೆಯ ಹಿಂದಿನ ದಿನ ಎಲ್ಲಾ ವಿದ್ಯಾರ್ಥಿಗಳನ್ನು ಅನುಗ್ರಹಿಸಿ, ಆ ಕೊನೆಯ ಅಧ್ಯಾಯವನ್ನು ಮುಗಿಸಲಾಗುತ್ತಿತ್ತು.

ದೇವದಾಸ್ ಕ್ಲಾಸನ್ನು ಪ್ರವೇಶಿಸುವ ವೇಳೆಗೆ ಕ್ಲಾಸ್ ಪ್ರಾರಂಭವಾಗಿ ಹೋಗಿತ್ತು.

"ವೈ ಆರ್ ಯು ಲೇಟ್, ಡಾಕ್ಟರ್ ದೇವದಾಸ್.... ?" ತಮ್ಮ ಶಾಂತವಾದ ಧ್ವನಿಯಲ್ಲಿ ಡಾಕ್ಟರ್ ತನುಜ ಕೇಳಿದರು.

"ಅವನ ಜೊತೆಗಾರಳು ಬಿಟ್ಟು ಹೋದಳಲ್ಲವೇ ? ಇನ್ನೂ ಬೇಗ ಬಂದು ಅವನೇನು ಮಾಡಬೇಕು ?" ಯಾರೋ ಕಾಮೆಂಟ್ ಮಾಡಿದರು.

"ಓ.ಕೆ. ವಿ ವಿಲ್ ಕಂಟಿನ್ಯೂ.... ಪ್ಲೀಸ್ ಟೇಕ್ ಯುವರ್ ಸೀಟ್ ಡಾಕ್ಟರ್ ದೇವದಾಸ್...." ಅಂತಹ ಕಾಮೆಂಟ್‌ಗಳಿಗೆ ಡಾಕ್ಟರ್ ತನುಜ ಬೆಲೆ ಕೊಡುವುದಿಲ್ಲ. ಆಕೆಗೆ ಅಂತಹುದರಲ್ಲಿ ಯಾವ ಆಸಕ್ತಿಯೂ ಇಲ್ಲ. ಎಷ್ಟೋ ಕಾಮೆಂಟ್‌ಗಳನ್ನು ಕೇಳಿ ಆಕೆಯ ಮನಸ್ಸು ಜಡ್ಡುಗಟ್ಟಿ ಹೋಗಿತ್ತು.

ಕ್ಲಾಸ್‌ನ ಎದುರಿಗೆ ಒಬ್ಬ ಗರ್ಭಿಣಿಯನ್ನು ಮಲಗಿಸಿದ್ದರು.

"ಡಾಕ್ಟರ್ ದೇವದಾಸ್, ವಿಲ್ ಯು ಪ್ಲೀಸ್ ಎಕ್ಸಾಮಿನ್ ದಿಸ್ ಪೇಷಂಟ್ ?" ತನ್ನ ಸೀಟ್‌ನಲ್ಲಿ ಕುಳಿತಿದ್ದ ದೇವದಾಸ್‌ನೊಂದಿಗೆ ಡಾಕ್ಟರ್ ತನುಜ ಕೇಳಿದರು.

ದೇವದಾಸ್ ಎದ್ದು ಮುಂದೆ ಬಂದನು.

"ಆಕೆಯ ಹಿಸ್ಟರಿಯ ಬಗ್ಗೆ ಕೇಳಲು ಹೋಗಬೇಡಿ. ಆಕೆಯನ್ನು ನೀವು ಸುಮ್ಮನೆ ಪರೀಕ್ಷಿಸಿದರೆ ಸಾಕು. ರಿಪೋರ್ಟ್‌ಗಳನ್ನು ನೋಡಬಹುದು. ಅನಂತರ ನಿಮ್ಮ ಕಾಮೆಂಟ್‌ಗಳನ್ನು ನಾನು ಕೇಳಬೇಕು " ಡಾಕ್ಟರ್ ತನುಜ ಹೇಳಿದರು.

ದೇವದಾಸ್ ಗರ್ಭಿಣಿಯನ್ನು ನೋಡಿದನು.

ಕಣ್ಣುಗಳಲ್ಲಿ ನೀರಿತ್ತು. ಮುಖವು ಬಿಳಿಚಿಕೊಂಡಿತ್ತು. ಕಣ್ಣಿನ ರೆಪ್ಪೆಗಳು ಉಬ್ಬಿ ಊರಿಕೊಂಡಿದ್ದವು. ಕಣ್ಣಿನ ಕೆಳಗೆ ಕಪ್ಪಾಗಿ ದಪ್ಪಗಾಗಿತ್ತು. ಮುಖವು ಬಿಳಿಚಿಕೊಂಡಿತ್ತು. ತುಟಿಗಳು ಬಿಳಿಚಿಕೊಂಡಿದ್ದವು. ಮೂಗಿನ ತುದಿಯಲ್ಲಿ ಒಂದು ಜಿಪರಿನ ಹನಿ. ತೋಳಿನ ಮೂಳೆಗಳು ಎದ್ದು ನಿಂತಿದ್ದವು. ಹಾಲನ್ನು ಸುರಿಸಲು ಅವಸರ ಪಡುತ್ತಿರುವ ಕೊಬ್ಬಿ ದಪ್ಪವಾಗಿದ್ದ ವಕ್ಷಸ್ಥಳ. ಎದೆಯ ಮೂಳೆಯವರೆಗೆ ಉಬ್ಬಿ ಹೊರಕ್ಕೆ ಚಾಚಿ ನಿಂತಿರುವ ಹೊಟ್ಟೆ. ಬೆಲೂನ್‌ನಂತೆ ನುಣುಪಾಗಿ ಉಬ್ಬಿದ ಹೊಟ್ಟೆಯ ಮೇಲೆ ಕಿಟಕಿಯ ಮೂಲಕ ಬರುತ್ತಿದ್ದ ಬೆಳಕು ಪ್ರತಿಬಿಂಬಿಸುತ್ತಿತ್ತು. ಒಳಗಣ್ಣಿನಂತೆ, ಗರ್ಭಕೋಶದಲ್ಲಿ ಮುದುಡಿಕೊಂಡು ಮಲಗಿರುವ ಲೋಕವನ್ನು ಕಾಣಲು ಕಾತುರದಿಂದಿರುವ ಶಿಶುವು. ಗರ್ಭಿಣಿಯ ಕೈಗಳು ಸೋತಂತಾಗಿ ಹಾಸಿಗೆಯಲ್ಲಿ ಬಿದ್ದಿದ್ದವು. ತೊಡೆಗಳ ಮೂಳೆ ಎದ್ದು ಕಾಣುತ್ತಿತ್ತು. ಪಾದಗಳಲ್ಲಿ ನೀರು ಸೇರಿತ್ತು. ಕೊಳೆ ತುಂಬಿದ್ದ ಉಗುರುಗಳಲ್ಲಿ ರಕ್ತ ಹೀನತೆ ಇರುವ ವಿವರ್ಣತೆ ಕಾಣುತ್ತಿತ್ತು.

ಹೈಬ್ಲಡ್ ಪ್ರೆಷರ್.

ದೇವದಾಸ್ ರಿಪೋರ್ಟ್‌ಗಳನ್ನು ಪರೀಕ್ಷಿಸಿದನು.

ಆದರೆ ಅವನ ಬಾಯಿಂದ ಒಂದಕ್ಷರ ಹೊರಡಲಿಲ್ಲ. ರಿಪೋರ್ಟ್‌ಗಳನ್ನು ಕೆಳಗಿಟ್ಟು ಅವನು ಕೈಕಟ್ಟಿ ನಿಂತನು.

"ಹೇಳಿ, ಏನಾದರೂ ಹೇಳಿ" ಡಾಕ್ಟರ್ ತನುಜ ದೇವದಾಸ್‌ನನ್ನು ಉತ್ಸಾಹಗೊಳಿಸಲೆತ್ನಿಸಿದರು.

ದೇವದಾಸ್ ತಲೆತಗ್ಗಿಸಿ ನಿಂತನು.

"ಡೋಂಟ್ ಸ್ಪಾಯಿಲ್ ಮೈ ಟೈಂ, ಹರಿಹಪ್."

ಕೆಳಗೆ ನೋಡುತ್ತಾ ದೇವದಾಸ್ ಹೇಳಿದನು:

"ಐ ಆಮ್ ಸಾರಿ ಮೇಡಂ ಐ ಆಮ್ ವೆರಿ ಸಾರಿ."

"ಬಟ್ ವೈ ?"

"ಐ ಡೋಂಟ್ ನೋ ಎನಿಥಿಂಗ್."

"ಇಟ್ ಈಸ್ ಸರ್ಪ್ರೈಸಿಂಗ್. ನಾವಿದ್ದಲ್ಲವೇ ಪರೀಕ್ಷೆ. ಹೋಗಿ ಕುಳಿತುಕೊಳ್ಳಿ" ಕೋಪದಿಂದ ಡಾಕ್ಟರ್ ತನುಜ ದೇವದಾಸ್‌ನನ್ನು ನೋಡಿದರು.

ಆಗ ರೋಗಿಯ ಕಣ್ಣುಗುಡ್ಡೆಗಳು ಮೇಲೇರಿದವು. ಅವಳ ತಲೆಯು ಒಂದು ಪಕ್ಕಕ್ಕೆ ವಾಲಿತು. ಕತ್ತು ಸೆಟೆದು ನಿಂತಿತು. ಕೈಕಾಲುಗಳು ಬಿಲ್ಲಿನಂತೆ ಬಾಗಿದವು. ಗರ್ಭಿಣಿ ನರಳುತ್ತಾ ಮುದುಡಿಕೊಂಡಳು. ಅನಂತರ ಕೈಕಾಲುಗಳನ್ನು ಮಂಚದ ಮೇಲೆ ಬಡಿಯಲು ಆರಂಭಿಸಿದಳು. ಮಂಚದ ಕಾಲುಗಳು ಅಲ್ಲಾಡಿದವು. ಮಂಚವೇ

ಅಲ್ಲಾಡತೊಡಗಿತು. ಆ ಸಮಯದಲ್ಲಿ ಗರ್ಭಿಣಿಯ ಹೊಟ್ಟೆಯಲ್ಲಿನ ಶಿಶುವು ಅಪ್ಪಚ್ಚಿಯಾಗುತ್ತೇನೋ ಅನ್ನಿಸಿತು.

"ಇದೇ ರೋಗವು. ಪ್ರಸವಕ್ಕಿಂತ ಮುಂಚೆ ಬರುವ ಅಪಸ್ಮಾರ ರೋಗ."

ಡಾಕ್ಟರ್ ತನುಜ ತಮ್ಮ ಆ ವರ್ಷದ ಕೊನೆಯಪಾಠವನ್ನು ಹೇಳಿಕೊಡ ಲಾರಂಭಿಸಿದರು.

ಆಕೆ ಹೇಳಿಕೊಟ್ಟದ್ದೊಂದೂ ದೇವದಾಸ್‌ಗೆ ಕೇಳಿಸಲಿಲ್ಲ. ಅವನ ಕಿವಿಯೊಳಕ್ಕೆ ಆಕೆಯ ಒಂದು ಮಾತು ಸಹ ಪ್ರವೇಶಿಸಲಿಲ್ಲ. ಇಂತಹ ಒಂದು ಸ್ಪೆಷಲ್ ಕ್ಲಾಸಿನಲ್ಲಿ ಕುಳಿತುಕೊಳ್ಳಬೇಕಾದ ಅವಸ್ಥೆ ತನಗೆ ಬರುತ್ತೆಂದು ದೇವದಾಸ್ ಅಂದುಕೊಂಡಿರ ಲಿಲ್ಲ. ಲಕ್ಷ್ಮಿಯಿಲ್ಲದ ಮೊದಲನೆಯ ಕ್ಲಾಸ್ ಅದು. ಅದೇ ಕೊನೆಯದೂ ಆಗಿತ್ತು.

ಕ್ಲಾಸ್ ಮುಗಿದಾಗ ಮೆಡಿಕೋಗಳು ಡಾಕ್ಟರ್ ತನುಜರ ಸುತ್ತಲೂ ಗುಂಪುಗೂಡಿದರು. ಡಾಕ್ಟರ್ ತನುಜ ಪ್ರೊಫೆಸರೇ ಆಗಿದ್ದರೂ, ಗರ್ವ ಗಾಂಭೀರ್ಯ ಗಳನ್ನು ಶಿಷ್ಯರ ಬಳಿ ಒಮ್ಮೆಯೂ ತೋರಿಸಿಕೊಳ್ಳದ ಅಧ್ಯಾಪಕಿ ಆಗಿದ್ದರು. ವಿದ್ಯಾರ್ಥಿಗಳು ಆಕೆಗೆ ಯಾವಾಗಲೂ ಮಿತ್ರರೇ ಆಗಿದ್ದರು.

"ಮೇಡಂ, ಒಂದೇ ಒಂದು ಪ್ರಶ್ನೆಯನ್ನು ಹೇಳಿಕೊಡಿ ಮೇಡಂ" ಒಬ್ಬ ಮೆಡಿಕೋ ತನುಜರನ್ನು ಬೇಡಿಕೊಂಡನು. ಪರೀಕ್ಷೆಯ ಪ್ರಶ್ನೆಪತ್ರಿಕೆಯನ್ನು ತಯಾರಿಸುವುದು ಆಕೆಯೇ ಅಲ್ಲವೇ ?

ಡಾಕ್ಟರ್ ತನುಜ ಮುಗುಳ್ನಕ್ಕರು.

"ನನಗೆ ಯಾವುದೂ ಜ್ಞಾಪಕವಿಲ್ಲ."

"ಹಾಗಾದರೆ ಒಂದು ಪಾರ್ಟ್ ನೋಟಾದರೂ...."

"ಯಾರೂ ಹೆದರಬೇಡಿ" ತನುಜ ತಮ್ಮ ವಿದ್ಯಾರ್ಥಿಗಳಿಗೆ ಧೈರ್ಯ ನೀಡುತ್ತಾ ಹೇಳಿದರು "ಎಲ್ಲರನ್ನೂ ನಾನು ಪಾಸ್ ಮಾಡಿಸುತ್ತೇನೆ. ಆಲ್ ದಿ ಬೆಸ್ಟ್."

ಮೆಡಿಕೋಗಳು ಆಕೆಯೊಂದಿಗೆ ಆಕೆಯ ಹಿಂದೆಯೇ ನಡೆದರು.

ದೇವದಾಸ್ ಮಾತ್ರ ತನ್ನ ಸೀಟಿನಲ್ಲಿ ಹಾಗೆಯೇ ಕುಳಿತಿದ್ದನು. ಏನನ್ನೋ ಚಿಂತಿಸುತ್ತಾ, ಎಲ್ಲೋ ನೋಡುತ್ತಾ ಕುಳಿತಿದ್ದನು.

ನಡೆದು ಹೋಗುವಾಗ ಡಾಕ್ಟರ್ ತನುಜ ದೇವದಾಸ್‌ನನ್ನು ಓರೆಗಣ್ಣಿನಿಂದ ಗಮನಿಸಿದರು.

ಎರಡು ಹಗಲು ಎರಡು ರಾತ್ರಿಗಳು ಕಳೆದ ನಂತರ ಕೊನೆಯದಿನದ ಪರೀಕ್ಷೆಗೆಂದು ದೇವದಾಸ್ ಹೊರಟನು.

ಪರೀಕ್ಷೆಯ ಹಾಲ್‌ನ ಹೊರಗೆ ಮೆಡಿಕೋಗಳು ಕೊನೆಯ ನಿಮಿಷದ ಉದ್ವೇಗದಲ್ಲಿದ್ದರು. ಎಲ್ಲಾ ಓದಿ ಕಂಠಪಾಠ ಮಾಡಿದ್ದವರು, ಒಂದು ವಿಧದಲ್ಲಿ ಚೆನ್ನಾಗಿ ಓದಿ ಅದೃಷ್ಟದಲ್ಲಿ ನಂಬಿಕೆಯನ್ನರ್ಪಿಸಿದವರೂ, ಏನೂ ಓದದ ಪರೀಕ್ಷೆಯಲ್ಲಿ ಫೈಲ್ ಆಗಲು ನಿಶ್ಚಯಿಸಿಕೊಂಡೇ ಬಂದಿದ್ದವರೂ ಆ ಸಮಯದಲ್ಲಿ ಉದ್ವಿಗ್ನರಾಗಿ ನಿಂತಿದ್ದರು.

ದೇವದಾಸ್ ಎಲ್ಲರಿಗಿಂತ ಮುಂಚೆಯೇ ಪರೀಕ್ಷೆಯ ಹಾಲ್‌ನಲ್ಲಿ ಬಂದು ಕುಳಿತಿದ್ದನು.

ಮೆಡಿಕೋಗಳು ಅವಸರವಸರವಾಗಿ ಹಾಲ್ ಅನ್ನು ಪ್ರವೇಶಿಸಿ ತಮ್ಮ ತಮ್ಮ ನಂಬರ್ ಇದ್ದ ಸೀಟ್‌ಗಳಲ್ಲಿ ಬಂದು ಕುಳಿತರು.

ಗಂಟೆ ಹೊಡೆಯಿತು.'

ಇನ್‌ವಿಜಿಲೇಟರ್ಸ್ ಪ್ರಶ್ನೆಪತ್ರಿಕೆಗಳನ್ನು ಹಂಚಲು ಪ್ರಾರಂಭಿಸಿದರು.

ದೇವದಾಸ್‌ಗೆ ಪ್ರಶ್ನೆಪತ್ರಿಕೆ ಸಿಕ್ಕಿತು. ಅದನ್ನು ತೆಗೆದುಕೊಂಡಾಗ ಭಯವೋ, ಆಕಾಂಕ್ಷೆಯೋ ಅವನಿಗೆ ಉಂಟಾಗಲಿಲ್ಲ.

ಅವನು ಪ್ರಶ್ನೆಪತ್ರಿಕೆಯನ್ನು ನೋಡಿದನು. ಅದರಲ್ಲಿ ಅವನಿಗೆ ಏನೂ ಕಾಣಿಸಲಿಲ್ಲ. ಪ್ರಶ್ನೆಗಳೋ ಷಾರ್ಟ್ ನೋಟ್‌ಗಳೋ ಒಂದೂ ಆ ಪತ್ರಿಕೆಯಲ್ಲಿ ಕಾಣಲಿಲ್ಲ. ಮತ್ತೆ ಮತ್ತೆ ನೋಡಿದಾಗ ಆ ಬಿಳಿಯ ಪೇಪರ್‌ನಲ್ಲಿ ಎರಡು ಕಣ್ಣುಗಳು ಪ್ರತ್ಯಕ್ಷವಾದವು. ಆ ಕಣ್ಣುಗಳು ಸ್ಪಷ್ಟವಾಗಿ ಕಾಣುತ್ತಿದ್ದವು.

ಮನೋಹರವಾದ, ಆಳವಾದ, ನೀಲಿ ಬಣ್ಣದಲ್ಲಿರುವ ಅರಳಿದ, ತೋಯ್ದು ಎರಡು ಕಣ್ಣುಗಳು. ಲಕ್ಷ್ಮಿಯ ಕಣ್ಣುಗಳು. ಹೌದು ಲಕ್ಷ್ಮಿಯ ಕಣ್ಣುಗಳೇ.

ವಿಶ್ವವನ್ನೆಲ್ಲಾ ಪ್ರತಿಬಿಂಬಿಸುವ ಲಕ್ಷ್ಮಿಯ ಕಣ್ಣುಗಳು.

ಸುಮ್ಮನೆ, ಹೌದು ಸುಮ್ಮನೆ ದೇವದಾಸ್ ಲಕ್ಷ್ಮಿಯ ಸೀಟಿನತ್ತ ನೋಡಿದನು. ಸೀಟೂ ಡೆಸ್ಕೂ ಖಾಲಿಯಾಗಿ ಬಿದ್ದಿದ್ದವು. ಡೆಸ್ಕಿನ ಮೇಲೆ ಲಕ್ಷ್ಮಿಯ ನಂಬರ್ ಮಾತ್ರವಿತ್ತು. ಆದರೆ ಆ ಸೀಟಿನ ಮೇಲೆ ಅವನಿಗೆ ಎರಡು ಕಣ್ಣುಗಳು ಪ್ರತ್ಯಕ್ಷವಾದವು. ಶರೀರವೇ ಇಲ್ಲದ ಎರಡು ಕಣ್ಣುಗಳು ಮಾತ್ರ ಅಂತರಿಕ್ಷದಲ್ಲಿ ನಿಂತಿದ್ದವು.

ದೇವದಾಸ್‌ಗೆ ಕಣ್ಣುಗಳನ್ನು ತೆರೆದಿರಲು ಶಕ್ತಿಯಿಲ್ಲದಂತಾಯಿತು. ಅವನು ತನ್ನ ಕಣ್ಣುಗಳನ್ನು ಮುಚ್ಚಿದನು. ಅವನ ತಲೆ ಬಾಗಿತು. ಡೆಸ್ಕಿನ ಮೇಲೆ ಎರಡು ಕೈಗಳನ್ನೂ ಹೆಣೆದು ಹಿಡಿದುಕೊಂಡನು. ಹೆಣೆದು ಹಿಡಿದ ಕೈಗಳ ಮೇಲೆ ತಲೆ ಬಗ್ಗಿಸಿಟ್ಟು ಕುಳಿತನು.

ಇನ್‌ವಿಜಿಲೇಟರ್ಸ್‌ರ ಪೈಕಿ ಯಾರೋ ಒಬ್ಬರು ಹತ್ತಿರ ಬಂದು ದೇವದಾಸ್‌ನ ಹೆಗಲನ್ನೊಮ್ಮೆ ತಟ್ಟಿದರು. ಅವನು ತಲೆ ಎತ್ತಿದನು.

ಆತನು ಏನೋ ಕೇಳಿದನು.

ಆತನ್ಯಾರೆಂದು ದೇವದಾಸ್‌ಗೆ ಗೊತ್ತಾಗಲಿಲ್ಲ. ಒಬ್ಬ ಮನುಷ್ಯನ ಎತ್ತರದ ಮಟ್ಟದಲ್ಲಿ ಎರಡು ಕಣ್ಣುಗಳು ಮಾತ್ರ ಅವನಿಗೆ ಕಂಡವು.

ದೇವದಾಸ್ ಭಯದಿಂದ ಜೋರಾಗಿ ಕೂಗಿ ಕೊಂಡನು. ಅದು ಒಂದು ದೆವ್ವದ ಕೂಗಿನಂತಿತ್ತು. ಸಂಪೂರ್ಣವಾಗಿ ಪರೀಕ್ಷೆಯ ಹಾಲನ್ನೇ ಅದು ನಡುಗಿಸಿತು.

ಪರೀಕ್ಷೆ ಬರೆಯುತ್ತಿದ್ದ ವಿದ್ಯಾರ್ಥಿಗಳೂ, ಇನ್‌ವಿಜಿಲೇಟರ್ಸ್‌ಗಳು, ಸೂಪರ್ ವೈಸರ್‌ಗಳು ಎಲ್ಲರೂ ದೇವದಾಸ್‌ನನ್ನು ನೋಡಿದರು.

ಆದರೆ ದೇವದಾಸ್‌ಗೆ ಅಲ್ಲಿ ಯಾರೂ ಕಾಣಿಸಲಿಲ್ಲ. ಯಾರನ್ನು ನೋಡಲೂ ಅವನಿಗೆ ಸಾಧ್ಯವಾಗಲಿಲ್ಲ. ಹಾಲ್‌ನಲ್ಲಿ ಅಂತರಿಕ್ಷದಲ್ಲಿ ಹಲವಾರು ಜೋಡಿ ಕಣ್ಣುಗಳು ಮಾತ್ರ ಅವನಿಗೆ ಕಾಣುತ್ತಿದ್ದವು. ಆ ಜೋಡಿ ಕಣ್ಣುಗಳು ಉದ್ವಿಗ್ನರಾಗಿ ಅವನನ್ನು ದಿಟ್ಟಿಸಿ ನೋಡುತ್ತಿದ್ದವು. ಕೆಲವು ಅವನ ಬಳಿಗೆ ಚಲಿಸುತ್ತಾ ಬರುತ್ತಿದ್ದವು.

ದೇವದಾಸ್ ಚಿಟ್ಟೆಂದು ಚೀರುತ್ತಾ ಪರೀಕ್ಷೆಯ ಹಾಲ್‌ನಿಂದ ಹೊರಕ್ಕೋಡಿದನು. ವರಾಂಡದ ಆಚೆಗಿರುವ ಹುಲ್ಲುಗಾವಲಿನ ಮೇಲೆ ಮುಳ್ಳುಗಿಡಗಳ ಮಧ್ಯೆ ದೇವದಾಸ್ ತನ್ನ ಮುಖವನ್ನು ನೆಲಕ್ಕೆ ಅಪ್ಪಳಿಸುವಂತೆ ಬಿದ್ದನು.

# ಮೂವತ್ತೈದು

'ಅನಾಯಾಸವಾದ ಸಾವಿ' (ದಯಾಮರಣ)ನ ಬಗ್ಗೆ ಒಂದು ಸೆಮಿನಾರ್ ನಡೆಯುತ್ತಿತ್ತು ಬ್ರಿಗೇಡಿಯರ್ ತಾಜುದ್ದೀನ್, ಡಾಕ್ಟರ್ ಕ್ವಾಜ, ಮಿಸ್ಟರ್ ಆಚಾರಿ, ಡಾಕ್ಟರ್ ಸಂತುಕುಮಾರ್, ಡಾಕ್ಟರ್ ರವೀಂದ್ರನಾಥ್ ಮೊದಲಾದವರು ಸೆಮಿನಾರಿನಲ್ಲಿ ಭಾಗವಹಿಸುತ್ತಿದ್ದರು.

ಕಾನ್ಫರೆನ್ಸ್ ಹಾಲ್‌ನಲ್ಲಿ ಅಂದು ಎಂದೂ ಇಲ್ಲದ ಜನ ಸಂದಣಿಯಾಗಿತ್ತು. 'ದಯಾಮರಣ' (ಯೂತನೇಸ್ಸಿಯ) ಎಂಬ ವಿಷಯವಾದ್ದರಿಂದ ಶ್ರೋತೃಗಳಲ್ಲಿ ಅದು ಕುತೂಹಲವನ್ನುಂಟು ಮಾಡಿತ್ತು. ಬಹಳ ಸಂಕೀರ್ಣವಾದ ಒಂದು ವಿಷಯವಲ್ಲವೇ ಅದು ? ಒಂದು ಭಾಗದಲ್ಲಿ ಕಾನೂನಿನ ಪುಸ್ತಕಗಳು, ಇನ್ನೊಂದು ಭಾಗದಲ್ಲಿ ಜೀವಚ್ಛವವಾಗಿ ಕಳೆಯುವ, ಇಂಚಿಂಚಾಗಿ ಸಾಯುತ್ತಿರುವ ರೋಗಿಗಳ ಮೇಲೆ ದಯೆ ತೋರುವುದು, ಇವೆರಡನ್ನೂ ಹೋಲಿಸಿ ಒಂದು ಒಮ್ಮತಕ್ಕೆ ಬರಲು ಹಲವಾರು ಅಡಚಣೆಗಳು ಅಡ್ಡವಾಗಿವೆ.

ಡಾಕ್ಟರ್ ಕ್ವಾಜರೂ, ಬ್ರಿಗೇಡಿಯರ್ ತಾಜುದ್ದೀನರೂ, ಸ್ಟೇಜಿನ ಎರಡೂ ಕೊನೆಗಳಲ್ಲಿ ಕುಳಿತಿದ್ದರು.

ತಾಜುದ್ದೀನ್ ನೆಕ್‌ಟೈಯನ್ನೂ ಬೂದಿ ಬಣ್ಣದಲ್ಲಿರುವ ಸೂಟನ್ನೂ ಧರಿಸಿದ್ದರು. ಡಾಕ್ಟರ್ ಕ್ವಾಜ ಖದ್ದರನ್ನು ಹೋಲುವ ಒಂದು ಒರಟು ಷರಟನ್ನು, ಮೃದುವಾದ ಒಂದು ಪ್ಯಾಂಟನ್ನೂ ಧರಿಸಿದ್ದರು. ಅವರ ಕಣ್ಣುಗಳು ಹೊಳೆಯುತ್ತಿದ್ದವು. ಸ್ಟೇಜ್ ಮೇಲೆ ಕುಳಿತಿರುವಾಗಲೂ ಡಾಕ್ಟರ್ ಸಂತುಕುಮಾರ್ ತನ್ನ ಬಲಗೈಯನ್ನು ಆಗಾಗ ಮಡಿಸುತ್ತಾ ತಮ್ಮ ತೋಳಿನ ಮಾಂಸಖಂಡಗಳನ್ನು ಉಬ್ಬಿಸುತ್ತಿದ್ದರು. ಮಿಸ್ಟರ್ ಆಚಾರಿ ಮ್ಲಾನವದನರಾಗಿದ್ದರು. ಕಷ್ಟಾದರೂ ಅವರ ಮುಖದಲ್ಲಿನ ಕಾಂತಿ ಒಮ್ಮೆಯೂ ಮಾಸುತ್ತಿರಲಿಲ್ಲ. ಅವರ ಮುಖದಲ್ಲಿ ಕೋಪ ಉರಿಯುತ್ತಿದ್ದರೂ ಯಾವುದೋ ಒಂದು ತಿಳಿಯಾದ ಪ್ರಕಾಶವು ಎಲ್ಲೋ ಅಡಗಿರುವಂತೆ ಕಾಣಬಹುದು ಆದರೆ ಇಂದು ಅವರು ಕುಳಿತಿರುವುದನ್ನು ಕಂಡರೆ ನಿರಾಶೆಗೊಂಡಂತಿತ್ತು.

ಡಾಕ್ಟರ್ ರವೀಂದ್ರನಾಥ್‌ನ ಎದುರಿಗೆ ಬಹಳ ದಪ್ಪ ದಪ್ಪ . ಪುಸ್ತಕಗಳೂ, ಫೈಲ್‌ಗಳೂ, ಒಂದು ರಾಶಿಯಾಗಿ ಬಿದ್ದಿದ್ದವು. ಆತನ ಮುಖದಲ್ಲಿ ಯಾವಾಗಲೂ ವೈರಾಗ್ಯವನ್ನು ಕಾಣಬಹುದು. ಇಗೋ ಈಗ ಆತನು ಸಿದ್ಧ ಮಾಡಿಬಿಡುವನು ಎಂಬ ರೀತಿಯಲ್ಲಿ ಅವನ ಚಲನವಲನಗಳು ಇರುತ್ತಿದ್ದವು. ಆತನ ಚಲನವಲನಗಳಲ್ಲಿ ಒಂದು ತಾಳವೋ ಕ್ರಮವೋ ಇರಲಿಲ್ಲ.

ಒಂದು ವ್ಹೀಲ್ ಚೇರ್ ಸೆಮಿನಾರ್ ಹಾಲನ್ನು ಪ್ರವೇಶಿಸಿತು. ಜಾನ್ ಬಲ್‌ದೇವ್

ಮಿರ್ಜಾನನ್ನು ಚೇರ್‌ನಲ್ಲಿ ಕುಳ್ಳಿರಿಸಿ ಅದನ್ನುರುಳಿಸಿಕೊಂಡು ಆಯಾ ಬಂದಳು.

ಜಾನ್ ಬಲ್‌ದೇವ್ ಮಿರ್ಜಾನ ಮುಖ ಮೊದಲಿಗಿಂತ ಬಿಳಿಚಿಕೊಂಡಿತ್ತು. ಅವನ ತಲೆಯಲ್ಲಿದ್ದ ನಾಲ್ಕಾರು ಕೂದಲುಗಳೂ ಸಹ ಉದುರಿ ಹೋಗಿದ್ದವು. ಕಣ್ಣುಗಳಲ್ಲಿ ಶೂನ್ಯತೆಯೂ, ಆಸೆಯೂ ಒಂದರ ನಂತರ ಪ್ರತಿಬಿಂಬಿಸುತ್ತಿದ್ದವು. ಆಗಾಗ್ಗೆ ಭ್ರಮೆಯಿಂದ ಅವನು ನಾಲ್ಕೂ ದಿಕ್ಕುಗಳನ್ನು ದಿಟ್ಟಿಸುತ್ತಿದ್ದನು.

ಅನಂತರ ಒಂದು ಸ್ಟ್ರೆಚರ್ ಪ್ರವೇಶಿಸಿತು. ಆರ್ಟಿಫಿಷಿಯಲ್ ರೆಸ್ಪಿರೇಷನ್ ಯಂತ್ರದೊಂದಿಗೆ ಸ್ಟ್ರೆಚರ್ ಒಳ ಬಂದಿತ್ತು. ಅದರಲ್ಲಿ ಪ್ರಜ್ಞೆಯಿಲ್ಲದ ಒಬ್ಬ ರೋಗಿ ಮಲಗಿದ್ದನು. ರೋಗಿಯ ತಲೆಯನ್ನು ಮುಂಡನ ಮಾಡಿಸಿದ್ದರು. ಮಿಂಚುತ್ತಿರುವ ಬೋಳುತಲೆಯಲ್ಲಿ ನೀಲಿ ಪೆನ್ಸಿಲ್‌ನಿಂದ ಕೆಲವು ಗುರುತುಗಳನ್ನು ಮಾಡಿಟ್ಟಿದ್ದರು.

ಮಾಡರೇಟರಾದ ಮಿಸ್ಟರ್ ಆಚಾರಿ ಭಾಷಣ ವೇದಿಕೆಯ ಮೇಲೆ ಬಂದು ನಿಂತು ಮಾತನಾಡಲು ಪ್ರಾರಂಭಿಸಿದರು. ಘನವಾದ ಧ್ವನಿಯ ಒಡೆಯರಾದ ಆಚಾರಿಗೇನಾಯಿತು ? ಅವರ ಮಾತುಗಳು ಒಂದು ರೇಡಿಯೋವಿನಿಂದ ಮೊಳಗುತ್ತಿರುವಂತೆ ಸಾಧಾರಣವಾಗಿ ಕೇಳಿಬರುತ್ತಿತ್ತು. ಒಂದೊಂದು ಅಕ್ಷರವೂ ಸ್ಫುಟವಾಗಿ ಹೊರಬೀಳುತ್ತಿತ್ತು. ಈಗಲೋ ಬಾಯೊಳಗಿಂದ ಧ್ವನಿ ಹೊರಬರುವಾಗ ಗಂಟಲಿನಲ್ಲಿ ಏನೋ ಗಡ್ಡೆ ಸಿಕ್ಕಿಕೊಂಡಂತೆ ಕಾಣುತ್ತಿತ್ತು.

ಪುರಾತನ ಕಾಲದ ಒಂದು ಗ್ರಾಮಫೋನ್ ರೆಕಾರ್ಡ್‌ನಲ್ಲಿ ಹಳೆಯ ಸೂಜಿಯನ್ನಿಟ್ಟು ಹಾಕಿದರೆ ಕೇಳುವ ಹಾಡಿನಂತೆ ಆಚಾರಿಯ ಮಾತುಗಳು ಅಪಶ್ರುತಿಯಲ್ಲಿ ಕೇಳಿಸುತ್ತಿದ್ದವು. ಅವರ ತುಟಿಗಳು ನಡುಗುತ್ತಿದ್ದವು. ಕತ್ತು ಸೆಟೆದುಕೊಂಡಂತಿತ್ತು.

ಯುದ್ಧರಂಗದಲ್ಲಿ ಹೊಡೆದಾಡಿ ನಿಶ್ಶಕ್ತನಾದ ಒಬ್ಬ ಯೋಧನಂತೆ ಮಿಸ್ಟರ್ ಆಚಾರಿ ನಿಂತಂತೆ ಇತ್ತು. ಅವರು ಮಾತುಗಳಿಗೋಸ್ಕರ ಕಾಯುತ್ತಾ ನಿಂತಿದ್ದಾರೆಯೋ ? ಅಥವಾ ಅವರ ಮಾತುಗಳಿಗೆ ಗರಬಡಿದಿದೆಯೋ ? ಏನೋ, ಏನೇ ಆಗಲಿ ಆಚಾರಿ ಮೂರು ನಾಲ್ಕು ನಿಮಿಷಗಳೊಂದಿಗೆ ಮಾಡರೇಟರ್ ಎಂಬ ನೆಲೆಯಲ್ಲಿ ತಮ್ಮ ಮೊದಲ ಕರ್ತವ್ಯವನ್ನು ನಿರ್ವಹಿಸಿ ಬ್ರಿಗೇಡಿಯರ್ ತಾಜುದ್ದೀನ್‌ರವರನ್ನು ಭಾಷಣ ನೀಡಲು ವೇದಿಕೆಗೆ ಆಹ್ವಾನಿಸಿದರು.

ಒಬ್ಬ ಸಿನಿಮಾನಟನ ವಿಶಿಷ್ಟ ರೀತಿಯ ನಡೆಯೊಡನೆ ಬ್ರಿಗೇಡಿಯರ್ ತಾಜುದ್ದೀನ್ ಮೈಕ್‌ನ ಮುಂದೆ ಬಂದು ನಿಂತರು. ತರುಣಿಯೊಬ್ಬಳನ್ನು ನೇವರಿಸುವಂತೆ ಅವರು ಮೈಕ್‌ನ ಕತ್ತನ್ನು ಹಿಡಿದಿದ್ದರು. ಮಂದಹಾಸವು ಅವರ ತುಟಿಗಳಲ್ಲಿ ಸ್ಪಷ್ಟವಾಗಿ ಕಾಣುತ್ತಿತ್ತು. ಆ ಮಂದಹಾಸದಲ್ಲಿ ಒಂದು ಗಾಂಭೀರ್ಯ ಅಡಗಿತ್ತು.

ಅವರು ಮಾತನಾಡಲು ಪ್ರಾರಂಭಿಸಿದರು:

"ನಮ್ಮ ಮುಂದೆ ಎರಡು ದೇಹಗಳನ್ನು ಕಾಣಬಹುದು. ಎರಡು ಜೀವಚ್ಛವಗಳು. ಒಂದು ಸಂಪೂರ್ಣವಾಗಿ ಶವವಾಗಿ ಹೋಗಿದೆಯೆಂದೇ ಹೇಳಬಹುದು. ಆದರೆ ಇವರು ಮನುಷ್ಯರಾಗಿ ಹೋಗಿರುವುದರಿಂದ ಜೀವದಲ್ಲಿ ಕೊನೆಯುಸಿರು ಇರುವವರೆಗೂ ಅದನ್ನು ಹಿಡಿದು ನಿಲ್ಲಿಸುವುದು ವೈದ್ಯಲೋಕದ ಕರ್ತವ್ಯವಾಗಿದೆ.

“ಪಾರ್ಶ್ವವಾಯು ಬಾಧಿಸಿರುವ ಜಾನ್ ಬಲದೇವ್ ಮಿರ್ಜಾ ಎಂಬ ರೋಗಿಯು ಅನೇಕ ತಿಂಗಳುಗಳಿಂದ ಈ ಆಸ್ಪತ್ರೆಯಲ್ಲಿ ಚಿಕಿತ್ಸೆಯಲ್ಲಿದ್ದಾನೆ. ಆ ಜೀವವನ್ನು ಕಾಪಾಡಲು ಖರ್ಚು ಮಾಡಿದ ಹಣಕ್ಕೂ, ಕೊಟ್ಟ ಔಷಧಿಗೂ, ನರ್ಸುಗಳಿಂದ ದೊರಕಿದ ವಾತ್ಸಲ್ಯಯುತ ಶುಶ್ರೂಷೆಗೂ, ರಾತ್ರಿ ಹಗಲೆನ್ನದೆ ಹೌಸ್ ಸರ್ಜನ್‌ಗಳು ಕಟ್ಟಿದ ನಿದ್ರೆಗೂ, ಡಾಕ್ಟರ್‌ಗಳು ಸೇರಿ ಬಿಸಾಡಿದ ಸಿಗರೇಟುಗಳಿಗೂ ಲೆಕ್ಕವಿಲ್ಲ. ಬಹು ತಿಂಗಳುಗಳಿಂದ ಆ ಮನುಷ್ಯನು ಒಂದು ಯಂತ್ರದಂತಿದ್ದಾನೆ. ಅವನು ಒಂದು ಟ್ಯೂಬ್ ಮೂಲಕ ಕೊಡುವ ಪಾನೀಯಗಳನ್ನು ಮತ್ತೊಂದು ಟ್ಯೂಬ್ ಮೂಲಕ ಮೂತ್ರವನ್ನಾಗಿ ಮಾರ್ಪಡಿಸಿ ಬಿಡುವ ಒಂದು ಯಂತ್ರವಾಗಿದ್ದಾನೆ. ಇಷ್ಟು ತಿಂಗಳುಗಳೂ ಹಾಸಿಗೆಯಲ್ಲಿ ನಿಶ್ಚಲನಾಗಿ ಮಲಗಿದ್ದೂ, ಒಂದು ಬೆಡ್‌ಸೋರ್ ಸಹ ಅವನನ್ನು ಬಾಧಿಸಿಲ್ಲ. ಈ ಸಂದರ್ಭದಲ್ಲಿ ನಮ್ಮ ಸ್ಟಾಫ್ ಅನ್ನು ನಾನು ಬಾಯಿ ತುಂಬ ಹೊಗಳುತ್ತೇನೆ. ಒಂದು ವಿಧದಲ್ಲಿ ಅವರನ್ನು ಹೊಗಳಬೇಕಾದ ಆವಶ್ಯಕತೆ ಇಲ್ಲ. ಏಕೆಂದರೆ, ಅವರು ಮಾಡುತ್ತಿರುವುದು ಅವರ ಕರ್ತವ್ಯವಷ್ಟೆ. ಆದರೂ ಅವರ ಈ ಅಪಾರಕರುಣೆಯ ಮುಂದೆ ನಾನು ಕೈಜೋಡಿಸಿ ನಿಂತು ಅವರಿಗೆ ನಮಸ್ಕರಿಸುತ್ತೇನೆ. ಒಂದು ಶುಭ ದಿನ ದೇವರ ದಯೆಯಿಂದ ಜಾನ್ ಬಲ್‌ದೇವ್ ಮಿರ್ಜಾಗೆ ಪ್ರಜ್ಞೆ ಬಂತು. ಔಷಧಿಯ ಮಾಯಾಲೋಕದಿಂದ ಬೇರೆಯಾದ ಯಾವುದೋ ಒಂದು ಅಜ್ಞಾತಶಕ್ತಿಯು ಕೆಲಸ ಮಾಡುತ್ತಿದೆ. ಮಧ್ಯೆ ಮಧ್ಯೆ ಆ ಶಕ್ತಿಯು ಡಾಕ್ಟರುಗಳನ್ನು ರಕ್ಷಿಸಲೆಂದು ಬರುತ್ತದೆ. ಆ ಶಕ್ತಿಯ ಮುಂದೆ ನಾನು ಸಾಷ್ಟಾಂಗ ಪ್ರಣಾಮ ಮಾಡುತ್ತೇನೆ.

“ಬಲದೇವ್ ಮಿರ್ಜಾಗೆ ಪ್ರಜ್ಞೆ ಬಂದಿತಾದರೂ ಅವನ ಮಾತನಾಡುವ ಶಕ್ತಿ ಎಂದೆಂದಿಗೂ ನಷ್ಟವಾಗಿ ಹೋಗಿದೆ. ತಾನಾಗಿ ತಾನೇ ಎದ್ದೇಳಲೋ ನಡೆಯಲೋ ಅವನಿಂದ ಆಗುತ್ತಿಲ್ಲ. ಇನ್ನು ಅವನು ಬದುಕಿರುವಷ್ಟು ಕಾಲವೂ ಅವನು ಇನ್ನೊಬ್ಬರ ಶುಶ್ರೂಷೆಯಲ್ಲೇ ಕಳೆಯಬೇಕಾಗಿ ಬರುತ್ತೆ. ಇನ್ನೊಂದು ಮಾತು ಹೇಳಬೇಕೆಂದರೆ ಈ ಶುಶ್ರೂಷೆಯನ್ನು ಅವನ ಅಸ್ತಿತ್ವವು ಅವಲಂಬಿಸಿರುತ್ತೆ. ಬೆಲೆಬಾಳುವ ಔಷಧಿಗಳನ್ನೂ, ಶ್ರದ್ಧೆಯಿಂದ ಕೂಡಿದ ಶುಶ್ರೂಷೆಯನ್ನೂ ನೀಡಿ, ಸುಟ್ಟು ಬದನೇಕಾಯಿಯಂತಿರುವ ಈ ಶರೀರವನ್ನು ಸಂರಕ್ಷಿಸಿ ಅವನನ್ನು ಬದುಕಲು ಬಿಟ್ಟು ನಾವು ಏನನ್ನು ಗಳಿಸಲಿದ್ದೇವೆ? ಅಥವಾ ಜಾನ್ ಬಲ್‌ದೇವ್ ಮಿರ್ಜಾಗೆ ತಾನೇ ಇದರಿಂದ ಏನು ಲಾಭ? ಅಥವಾ ಅವನಿಂದ ಈ ಸಮಾಜಕ್ಕೇನಾದರೂ ಲಾಭವಿದೆಯೇ? ಇದನ್ನೆಲ್ಲಾ ಯೋಚಿಸಿದಾಗ ಇದು ಯಾವುದೇ ಲಾಭವಿಲ್ಲದ, ನಷ್ಟ ತುಂಬಿರುವ ವ್ಯಾಪಾರದಂತೆ ಈ ರೋಗಿಯನ್ನು ನಾವು ಕಾಪಾಡುತ್ತಿದ್ದೇವೆ ಎನ್ನಿಸುತ್ತದೆ. ಆದರೆ ಪ್ರಜ್ಞಾಹೀನ ಸ್ಥಿತಿಯಲ್ಲಿದ್ದ ಈ ರೋಗಿಯು ದೇವರ ದಯೆಯಿಂದ ಪ್ರಜ್ಞೆಯನ್ನು ಪಡೆದದ್ದು ಚಿಕಿತ್ಸಾಕ್ರಮದಲ್ಲಿನ ಒಂದು ಪ್ರಗತಿಯಾಗಿದೆ. ಎ ಗುಡ್ ಪ್ರೊಗ್ರೆಸ್.

“ಇನ್ನೂ ಎರಡನೆಯ ರೋಗಿಯ ವಿಷಯವನ್ನು ತೆಗೆದುಕೊಳ್ಳೋಣ. ಕೃತಕ ಶ್ವಾಸೋಚ್ಛ್ವಾಸ ಯಂತ್ರದೊಂದಿಗೆ ಅಥವಾ ಆ ಯಂತ್ರದ ಒಂದು ಭಾಗವಾಗಿಯೇ ಅವನು ತನ್ನ ಜೀವವನ್ನು ಅಸ್ತಿತ್ವದಲ್ಲಿಟ್ಟುಕೊಂಡು ಬಂದಿದ್ದಾನೆ. ಅವನ ಹೆಸರೋ

ಊರೋ ಯಾರಿಗೂ ಏನೂ ತಿಳಿಯದು. ಪ್ರಯಾಣಿಕರನ್ನು ತುಂಬಿಸಿಕೊಂಡು ಬಸ್ಸೊಂದು ಯಾತ್ರಾಸ್ಥಳಗಳಿಗೆ ಹೋಗುತ್ತಿದ್ದಾಗ ಅದು ದಾರಿಯ ಮಧ್ಯೆ ಹೊಳೆಗೆ ಬಿದ್ದು ಅದರಲ್ಲಿದ್ದ ಎಷ್ಟೋ ಪ್ರಯಾಣಿಕರು ಸತ್ತರು. ಅವರು ಅದೃಷ್ಟವಂತರು. ದೇವರ ಸನ್ನಿಧಿಯನ್ನು ತಲುಪುವುದಕ್ಕಿಂತ ಮುಂಚೆಯೇ ಅವರು ಮೋಕ್ಷವನ್ನು ಪಡೆದರು. ಆದರೆ ಈ ದುರಾದೃಷ್ಟವಂತನು ಮಾತ್ರ ತಲೆಗೆ ಪ್ರಾಣಾಂತಿಕವಾದ ಏಟು ಬಿದ್ದು ಪ್ರಜ್ಞೆ ಕಳೆದುಕೊಂಡು ಈ ಸ್ಥಿತಿಯಲ್ಲಿದ್ದಾನೆ. ಇವನಿಗೆ ಚಲನಶಕ್ತಿಯು ಸ್ವಲ್ಪವೂ ಇಲ್ಲ. ಇವನಿಗೆ ದೃಷ್ಟಿಯು ಹಿಂದಿರುಗುವಂತೆ ತೋಚುತ್ತಿಲ್ಲ. ಇನ್ನು ಇವನ ಬಾಯಿಂದ ಒಂದಕ್ಷರ ಸಹ ಹೊರಡುವುದಿಲ್ಲ. ಶ್ವಾಸೋಚ್ಛ್ವಾಸವೇ ಹೆಚ್ಚು ಕಡಿಮೆ ನಿಂತೇ ಹೋಗಿದೆ. ಆರ್ಟಿಫಿಷಿಯಲ್ ರೆಸ್ಪಿರೇಟರಿ ಯಂತ್ರದಿಂದ ಇವನು ಇನ್ನೂ ತನ್ನ ಜೀವವನ್ನು ಇರಿಸಿಕೊಂಡಿದ್ದಾನಷ್ಟೆ. ಇವನು ಎಷ್ಟು ದಿನಗಳು ಈ ಯಂತ್ರದ ಸಹಾಯದಿಂದ ಬದುಕಿರಬಲ್ಲ? ಅಥವಾ ಹಾಗೆ ಬದುಕಿದ್ದರೂ ಅದರಿಂದೇನು, ಯಾರಿಗೆ, ಪ್ರಯೋಜನ? ಭೂಮಿಗೆ ಭಾರವಾಗಿರಲು ಹೀಗೆ ಬದುಕಿರಬೇಕೇನು? ಆದ್ದರಿಂದ ಆದಷ್ಟು ಬೇಗ ಈ ಯಂತ್ರವನ್ನು ಇವನ ದೇಹದಿಂದ ತೆಗೆದೊಗೆದು, ಇವನನ್ನು ಇದಕ್ಕೆ ಮುಂಚೆ ಸತ್ತು ಸ್ವರ್ಗಕ್ಕೇರಿದ ಪ್ರಯಾಣಿಕರೊಂದಿಗೆ ಮೋಕ್ಷಮಾರ್ಗದತ್ತ ಕಳುಹಿಸಿಕೊಡುವುದೇ ಒಳ್ಳೆಯದು."

ಬ್ರಿಗೇಡಿಯರ್ ತಾಜುದ್ದೀನ್ ತಾವು ಹಾಕಿಕೊಂಡಿದ್ದ ಕನ್ನಡಕವನ್ನು ತೆಗೆದು, ಕೈಯಿಂದಲೇ ಮುಖವನ್ನೊರೆಸಿ ಸಭೆಯತ್ತ ಒಮ್ಮೆ ನೋಡಿ ನಮಸ್ಕರಿಸಿದ ನಂತರ ತಮ್ಮ ಸೀಟಿನಲ್ಲಿ ಹೋಗಿ ಕುಳಿತರು.

ಅನಂತರ ಮಿಸ್ಟರ್ ಆಚಾರಿ, ಡಾಕ್ಟರ್ ಕ್ವಾಜ ಅವರನ್ನು ಮಾತಾಡಬೇಕೆಂದು ಆಹ್ವಾನ ನೀಡಿದರು.

ಡಾಕ್ಟರ್ ಕ್ವಾಜ ಮೆಲ್ಲನೆದ್ದು ಶಬ್ದ ಮಾಡದೆ ಹೆಜ್ಜೆ ಹಾಕುತ್ತಾ ಬಂದು ಮೈಕ್‌ನ ಮುಂದೆ ನಿಂತರು. ಅವರ ನವಿರಾದ ತುಟಿಗಳಲ್ಲಿ ಸಭೆಯ ಜನರ ಮೇಲಿನ ಪ್ರೀತ್ಯಾದರಗಳು ಬಿರಿದವು.

ಅವರು ಮಾತನಾಡಲಾರಂಭಿಸಿದರು:

"ಪ್ರಿಯ ವಿದ್ಯಾರ್ಥಿಗಳೇ, ಮಾನ್ಯರೇ,"

"ಬಹಳ ಅಮೂಲ್ಯವಾದ ಒಂದು ಶುಭಘಳಿಗೆಯಲ್ಲಿ ನಾನು ನಿಮ್ಮ ಮುಂದೆ ನಿಂತಿದ್ದೇನೆ. ವೈದ್ಯಶಾಸ್ತ್ರದಲ್ಲಿನ ಒಂದು ಸಂಕೀರ್ಣವಾದ ಸಮಸ್ಯೆಗೆ ನನ್ನ ಒಂದು ಕೊನೆಯ ತೀರ್ಮಾನವು ಈ ಶುಭಸಮಯದಲ್ಲಿ ಉಂಟಾಗಬೇಕೆಂಬುದೇ ಈ ನಿಮಿಷದ ಪ್ರಧಾನ ವಿಷಯವು."

"ನೀನು ಕೊಲ್ಲಬೇಡ ಎಂದು ಪ್ರವಾದಿ ಹೇಳಿದ್ದಾನೆ. ನೀನು ಯಾರನ್ನೂ ಕೊಲ್ಲಬೇಡ ಎಂಬುದೇ ಪ್ರವಾದಿಯ ಉದ್ದೇಶವಿತ್ತು. ಆದರೆ ಅವನ ಶಿಷ್ಯರು ಅದಕ್ಕೆ ಹೊಸ ವ್ಯಾಖ್ಯಾನವನ್ನು ಕಂಡು ಹಿಡಿದರು. ನೀನು ಕೊಲ್ಲಬೇಡ ಎಂದರೆ ನೀನು ಮನುಷ್ಯನನ್ನು ಕೊಲ್ಲಬೇಡ ಎಂದವರು ವ್ಯಾಖ್ಯಾನಿಸಿದರು. ಮನುಷ್ಯನನ್ನು ಬಿಟ್ಟು ಬೇರೆ ಯಾವ ಪ್ರಾಣಿಯನ್ನಾದರೂ ಬೇಕಾದರೂ ಕೊಲ್ಲಲಿರುವ ಅಧಿಕಾರವನ್ನು ಈ ಹೊಸ ವ್ಯಾಖ್ಯಾನದ ಮೂಲಕ ಅವರು ಪಡೆದುಕೊಂಡರು. ಹಾಗೆ ಆ ವ್ಯಾಖ್ಯಾನದ

ಸಹಾಯದಿಂದ ಪಕ್ಷಿಮೃಗಾದಿಗಳನ್ನು ಕೊಂದು ತಿಂದು ದುಂಡಗಾಗಿ ಕೊಬ್ಬುತ್ತಿರುವ ಈ ಶಿಷ್ಯ ಪರಂಪರೆಯೂ ಮನುಷ್ಯನನ್ನು ಕೊಲ್ಲಬೇಡಿ ಎಂಬ ಮರ್ಕಟ ಮುಷ್ಠಿ ಹಿಡಿದಿದ್ದಾರೆ. ಹಾಗಿರುವಾಗ ಮನುಷ್ಯ ಜೀವವನ್ನು ಕಾಪಾಡಲು ದೇವರು ನಿಯಮಿಸಿದ ವೈದ್ಯರುಗಳು ಅನಿವಾರ್ಯವಾದ ಘಟ್ಟದಲ್ಲಿ ಮನುಷ್ಯರನ್ನು ಕೊಲ್ಲಬಹುದೆಂದು ವಾದಿಸಿ ನಿಶ್ಚಯಿಸಿದ್ದಾರೆ. ಇದೆಂತಹ ವಿರೋಧಾಭಾಸ ? ಎಂತಹ ಕ್ರೂರ ಮನೋಭಾವ ? ಇದೆಂತಹ ದಯನೀಯ ಅವಸ್ಥೆ ?

"ದೇವರ ದಯೆ ಎಂದಾಗಿದ್ದರೆ, ದೇವರ ದಯೆಯಿಂದಲೇ ಆಗಲಿ. ಜಾನ್ ಬಲ್‌ದೇವ್ ಮಿರ್ಜಾಗೆ ಒಂದು ಶುಭ ದಿನ ಆತನು ಕಳೆದುಕೊಂಡಿದ್ದ ಪ್ರಜ್ಞೆ ಹಿಂದಿರುಗಿತು. ತಿಂಗಳುಗಟ್ಟಲೆ ಟ್ಯೂಬ್‌ಗಳೊಂದಿಗೆ ಆ ರೋಗಿಯು ಮಂಚದ ಮೇಲೆ ಮಲಗಿರುವಾಗ ಇವನನ್ನು ಕೊಂದರೆ ಎಷ್ಟೋ ಚೆನ್ನಾಗಿರುತ್ತೆ ಎಂದು ಹೇಳಿದವರು, ದೇವರಲ್ಲಿ ನಂಬಿಕೆ ಇಲ್ಲದವರು, ಇವನಿಗೆ ಪ್ರಜ್ಞೆ ಬಂದಾಗ ದೇವರ ದಯೆ ಎನ್ನುತ್ತಾರೆ. ಪರವಾಗಿಲ್ಲ, ಏನೇ ಆದರೂ ಜಾನ್ ಬಲ್‌ದೇವ್ ಮಿರ್ಜಾ ಬಚಾವ್ ಆದನು. ಅವನನ್ನು ಅನಾಯಾಸ ಸಾವಿನ ಅಧೀನಕ್ಕೊಳಪಡಿಸುವುದರಿಂದ ದೇವರು ಕಾಪಾಡಿದನು. ಅವನು ಇನ್ನೂ ವೈದ್ಯರ ಭಯವಿಲ್ಲದ ಒಂದು ಲೋಕದಲ್ಲಿ ಸ್ವತಂತ್ರವಾಗಿ ಜೀವಿಸಬಹುದು.

"ಎರಡನೆಯ ಪ್ರಯಾಣಿಕನು, ಇದೋ ಕೃತ್ರಿಮ ಶ್ವಾಸೋಚ್ಛ್ವಾಸ ಯಂತ್ರಗಳ ಸಹಾಯದೊಂದಿಗೆ ಜೀವದ ಕೊನೆಯ ಉಸಿರಿನೊಂದಿಗೆ ಚೆಂಡಾಟವಾಡುತ್ತಿದ್ದಾನೆ. ಈ ಚೆಂಡಾಟದಲ್ಲಿ ಅವನು ತನ್ನ ಅಮೂಲ್ಯವಾದ ಜೀವವನ್ನು ಕಾಪಾಡಿಕೊಂಡಿದ್ದಾನೆ. ವೈದ್ಯರೆನಿಸಿದ ನಮ್ಮ ಸಹಾಯವು ಅವನಿಗೆ ಲಭಿಸುತ್ತೆಂಬ ವಾಸ್ತವವನ್ನು ಆಧಾರವಾಗಿಟ್ಟುಕೊಂಡು ನಾನು ಹೀಗೆ ಮಾತನಾಡುತ್ತಿಲ್ಲ. ಯಾರದೋ, ಯಾವುದೋ ಸಹಾಯದೊಂದಿಗೆ ಮೋಕ್ಷಮಾರ್ಗಕ್ಕೆ ಜಾರಿ ಬೀಳುವ ಈ ಪಯಣಿಗನು ನಮ್ಮ ಮಧ್ಯೆ ಉಸಿರಾಡುತ್ತಾ ಜೀವಿಸಿದ್ದಾನೆಂದು ವಿಷಯವು ನನಗೆ ಸಂಬಂಧಿಸಿದಂತೆ, ನನ್ನ ಬಾಳಿನಲ್ಲಿ ಒಂದು ಬಹು ದೊಡ್ಡ ಆಹ್ಲಾದಕರವಾದ ಸಂಭವವು.

"ಈ ಪಯಣಿಗನೆನಿಸಿದ ರೋಗಿಗೆ ತನ್ನ ರೋಗದ ಸ್ಥಿತಿಯಲ್ಲಿ ಪ್ರಗತಿ ಉಂಟಾಗುವುದಿಲ್ಲವೆಂದು ಯಾರು ಖಚಿತವಾಗಿ ಹೇಳಬಲ್ಲರು ? ಔಷಧಿಯೂ ಪ್ರಕೃತಿಯೂ ಸೇರಿ ತಮ್ಮ ಕಾರುಣ್ಯವನ್ನೆಲ್ಲಾ ಇವನ ಮೇಲೆ ಇರಿಸಿದರೆ ಈತನು ರಕ್ಷಿಸಲ್ಪಡುವುದಿಲ್ಲವೆಂದು ಯಾರು ಖಚಿತವಾಗಿ ಹೇಳಬಲ್ಲರು ? ಹಾಗೆ ಅವನು ಬಚಾವ್ ಆದರೂ ಆ ಸಂಭವವನ್ನು ಒಂದು ಪವಾಡವೆಂದು ದಾಖಲೆ ಮಾಡಬಹುದು. ತಿಂಗಳಾನುಗಟ್ಟಲೆ ಜ್ಞಾನವಿಲ್ಲದೆ ಇದ್ದ ಬಲ್‌ದೇವ್ ಮಿರ್ಜಾಗೆ ಒಂದು ಶುಭ ಮುಹೂರ್ತದಲ್ಲಿ ಜ್ಞಾನ ಬಂತು. ಈಗ ತಿಂಗಳುಗಳೋ, ವರ್ಷಗಳೋ ಆಗಿ ಅವನು ಚಲನಶಕ್ತಿ ಇಲ್ಲದೆ ಮಾತಾಡಲು ಶಕ್ತಿ ಇಲ್ಲದೆ ಕಾಲವನ್ನು ಕಳೆಯುತ್ತಿದ್ದಾನೆ. ಯಾರಿಗೆ ಗೊತ್ತು ಇನ್ನೂ ಒಳ್ಳೆಯ ದಿನಗಳು ಬರುವುದಿಲ್ಲವೆಂದು ? ಅಂತಹ ಶುಭದಿನ ಮರಳಿ ಬಂದರೆ ಬಹುಶಃ ಅವನು ಮಾತಾಡಬಹುದು. ಅಥವಾ ಅವನಿಗೆ ಚಲನಶಕ್ತಿ ಮರಳಿ ದೊರಕಿ ನಮ್ಮ ಈ

ಅಂತರಿಕ್ಷದಿಂದ ಅವನು ನಡೆದು ನಡೆದು ದೂರ ಸರಿಯಬಹುದು.''

ಡಾಕ್ಟರ್ ಕ್ವಾಜ ಉದ್ವೇಗಭರಿತರಾಗುತ್ತಿದ್ದರು. ಅವರ ಮುಖವು ಹೆಚ್ಚು ಕೆಂಪೇರಿತ್ತು. ಹುಬ್ಬುಗಳು ಮೇಲಕ್ಕೇರಿದವು. ಕಣ್ಣುಗಳು ಮುಂಚಿನದಕ್ಕಿಂತ ತೀಕ್ಷ್ಣಗೊಂಡವು. ಅವರು ತುಟಿಗಳನ್ನು ಒದ್ದೆ ಮಾಡಿಕೊಂಡರು. ಅವರು ಮಾತುಗಳನ್ನು ಮುಂದುವರೆಸಿದರು.

"ನಾನು ಈಗ ನನ್ನ ವಾದದ ಗತಿಯನ್ನು ಬದಲಾಯಿಸುತ್ತಿದ್ದೇನೆ. ಈ ಪ್ರಯಾಣಿಕನು ಹೀಗೆ ಜೀವಿಸಿರುವುದರಿಂದ, ಸಮಾಜಕ್ಕೋ ಅವನಿಗೋ ಯಾವ ಪ್ರಯೋಜನವೂ ಇಲ್ಲ ಎನ್ನುವುದು ಯಥಾರ್ಥವಾದ ವಿಷಯವು. ಆದರೆ ಈ ಪ್ರಯಾಣಿಕನನ್ನು ಕೊಲ್ಲಲು ನಮಗೆ ಅಧಿಕಾರ ಯಾರು ನೀಡಿದರು? ಯಾರೂ ನಮಗೆ ನೀಡಿಲ್ಲ. ಆದ್ದರಿಂದ ಜೀವದ ಕೊನೆಯ ಅಣುವು ಬಾಕಿ ಇರುವರೆಗೂ ಈ ಪ್ರಯಾಣಿಕನನ್ನು ರಕ್ಷಿಸಬೇಕಾದ ಜವಾಬ್ದಾರಿ ವೈದ್ಯಲೋಕಕ್ಕೆ ಸೇರಿದೆ. ಜೀವವನ್ನು ಕೊಡಲು ವೈದ್ಯಲೋಕಕ್ಕೆ ಅಧಿಕಾರವಿದೆಯೇ ಹೊರತು ಜೀವ ಕಿತ್ತುಕೊಳ್ಳುವ ಅಧಿಕಾರವನ್ನು ವೈದ್ಯಲೋಕಕ್ಕೆ ಯಾರೂ ಕೊಟ್ಟಿಲ್ಲ. ಆದ್ದರಿಂದ ನಾನೀ ಮಾತನ್ನೇ ಹೇಳುತ್ತೇನೆ. 'ನೀ ಕೊಲ್ಲಬೇಡ, ಪ್ರವಾದಿಯು ಉದ್ದೇಶಿಸಿದಂತೆ ಮನುಷ್ಯರನ್ನು ಎಂದರಲ್ಲ, ನೀನು ಯಾರನ್ನೂ ಕೊಲ್ಲಬೇಡ.''

ಡಾಕ್ಟರ್ ಕ್ವಾಜ ಕರುಣೆಯನ್ನು ಸುರಿಸುತ್ತ ಮುಖಭಾವದೊಂದಿಗೆ ಸಭೆಯನ್ನು ನೋಡಿದ ನಂತರ ತಮ್ಮ ಕುರ್ಚಿಯಲ್ಲಿ ಹೋಗಿ ಕುಳಿತರು.

ಎಲ್ಲಾ ಭಾಷಣಗಳೂ ಕಳೆದ ನಂತರ ಮಾಡರೇಟರ್ ಮಿಸ್ಟರ್ ಆಚಾರಿ ಎದ್ದರು. ಅವರು ಬಹು ಸುಸ್ತಾದಂತೆ ಕಂಡರು. ಸಿಂಪೋಸಿಯಂ ಕಳೆಯುವ ವೇಳೆಗೆ ಅವರು ಮೊದಲಿಗಿಂತ ಬಹಳ ಸುಸ್ತಾಗಿ ಹೋಗಿದ್ದರು.

ಅವರು ಮಾತುಗಳಿಗೆ ಚಿನ್ನದ ಬೆಲೆ ಕೊಡುವಂತ ಮಾತನಾಡತೊಡಗಿದರು.

"ನಾನು ಎಲ್ಲರನ್ನೂ ಗಮನಿಸಿ ಕೇಳಿದೆ. ಜಾನ್ ಬಲ್‌ದೇವ್ ಮಿರ್ಜಾ ಜೀವಿಸಿರಲಿ. ಆದರೆ ಯಂತ್ರದ ಸಾಧು ಮನುಷ್ಯನನ್ನು ಇನ್ನೂ ಹೀಗೆ ಎಳೆದೊಯ್ಯಬೇಕಿಲ್ಲ. ಒಂದು ನಿಮಿಷವೂ ತಡಮಾಡದೆ ಆ ಯಂತ್ರವನ್ನು ತೆಗೆದುಹಾಕುವುದು ಒಳ್ಳೆಯದು.

"ನಾನು ಮತ್ತೊಮ್ಮೆ ಅದಕ್ಕೆ ಬೆಂಬಲ ನೀಡುತ್ತೇನೆ." ಬ್ರಿಗೇಡಿಯರ್ ವಿಜಯಿ ಭಾವದಲ್ಲಿ ತಮ್ಮ ಕುರ್ಚಿಯಿಂದ ಕೂಗಿ ಹೇಳಿದರು.

"ಬೇಡ ಅದು ತಪ್ಪು." ಅಟ್ಟಹಾಸದಿಂದ ಡಾಕ್ಟರ್ ಕ್ವಾಜ ಕುಳಿತಲ್ಲೇ ಮೇಜನ್ನು ಕುಟ್ಟಿ ಹುಯ್ಲೆಬ್ಬಿಸಿದರು. ಅವರು ತಮ್ಮ ಜೀವನದಲ್ಲೇ ಹಾಗೆ ಗಲಾಟೆ ಎಬ್ಬಿಸಿ ಮಾತನಾಡಿದ್ದಿಲ್ಲ.

ಬ್ರಿಗೇಡಿಯರ್ ತಾಜುದ್ದೀನ್ ಸ್ಟೇಜ್ ಮೇಲಿಂದ ಕೆಳಕ್ಕಿಳಿದರು. ಅವರ ಬೂಟುಗಳು ಶಬ್ದವು ಸೆಮಿನಾರ್ ಹಾಲ್‌ನಲ್ಲಿ ಮೊಳಗಿತು. ಅವರು ಆ ಪ್ರಯಾಣಿಕನ ಬಳಿ ಬಂದರು. ಹಾಲ್ ನಿಶ್ಶಬ್ದವಾಗಿತ್ತು. ಒಂದು ಉದ್ಘಾಟನಾ ಸಮಾರಂಭದಲ್ಲಿ ಬಟನ್ ಒತ್ತುವ ಕೌಶಲದಿಂದ ಅವರು ಕೃತಕ ಶ್ವಾಸೋಚ್ಛ್ವಾಸ ಯಂತ್ರವನ್ನು ಆ ಪ್ರಯಾಣಿಕನಿಂದ ಬೇರ್ಪಡಿಸಿದರು.

ಬ್ರಿಗೇಡಿಯರ್ ತಮ್ಮ ನೆಕ್ಟೈಯನ್ನು ಮತ್ತೊಮ್ಮೆ ಬಿಗಿಮಾಡಿ ನಿಲ್ಲಿಸಿದರು. ವಿಜಯದ ಲಹರಿ ಅವನ ಕಣ್ಣುಗಳಲ್ಲಿ ಸ್ಪಷ್ಟವಾಗಿ ಕಂಡಿತು.

ನಾಲ್ಕೈದು ನಿಮಿಷಗಳು ಕಳೆದವು.

ಪ್ರಯಾಣಿಕನ ಶರೀರವು ಸಣ್ಣದಾಗಿ ಒಮ್ಮೆ ಅಲ್ಲಾಡಿತು.

ಆ ಪ್ರಯಾಣಿಕನು ಮೂರು ನಾಲ್ಕು ಬಾರಿ ದೀರ್ಘವಾಗಿ ಉಸಿರೆಳೆದುಕೊಂಡನು. ಅನಂತರ ಅವನ ಎದೆಯಗೂಡು ಪಾತಾಳಕ್ಕೆ ಇಳಿಯುವಂತೆ ಒತ್ತಲ್ಪಟ್ಟಿತು. ಒತ್ತಲ್ಪಟ್ಟಿರುವ ಎದೆಯ ಗೂಡು ಸ್ವಲ್ಪ ಸ್ವಲ್ಪವಾಗಿ ಮೇಲಕ್ಕೆದ್ದು ಅನಂತರ ನಿಶ್ಚಲವಾಗಿ ಹೋಯಿತು. ಅದು ಸ್ಥಾಯಿಯಾದ ನಿಶ್ಚಲತೆಯಾಗಿ ಮಾರ್ಪಟ್ಟಿತು. ಮುಖದಲ್ಲಿ ಒಂದು ವಿವರ್ಣತೆಯು ಹರಡಲು ಆರಂಭವಾಯಿತು. ಅರ್ಧ ಮುಚ್ಚಿದ್ದ ಕಣ್ಣುಗಳು ಮತ್ತೊಮ್ಮೆ ಪೂರ್ಣವಾಗಿ ಮುಚ್ಚಿಕೊಂಡವು.

ಒಂದು ದೊಡ್ಡ ನೊಣ ತಕ್ಷಣ ಹಾರಿ ಬಂದು ಪ್ರಯಾಣಿಕನ ಹಣೆಯ ಮೇಲೆ ಕುಳಿತುಕೊಂಡಿತು. ಅನಂತರ ಅದು ಅವನನ್ನೊಮ್ಮೆ ಸುತ್ತು ಹಾಕಿ ಹೊರಕ್ಕೆ ಹಾರಿಹೋಯಿತು.

ಬ್ರಿಗೇಡಿಯರ್ ತಾಜುದ್ದೀನ್ ಒಂದು ಬಿಳಿಯ ಬಟ್ಟೆಯನ್ನು ತೆಗೆದುಕೊಂಡು ಸತ್ತುಹೋದ ಪ್ರಯಾಣಿಕನಿಗೆ ಮುಚ್ಚಿದರು.

ಜಾನ್ ಬಲದೇವ್ ಮಿರ್ಜಾ ಒಬ್ಬ ಪುಟ್ಟ ಹುಡುಗನ ಕುತೂಹಲದಿಂದ ಎಲ್ಲವನ್ನೂ ನೋಡಿದನು. ಅವನ ಕಣ್ಣಿನಲ್ಲಿ ಪ್ರಕಾಶವು ಹೊಳೆಯುತ್ತಿತ್ತು.

ಜಾನ್ ಬಲ್‌ದೇವ್ ಮಿರ್ಜಾನ ವೀಲ್‌ಚೇರನ್ನು ಉರುಳಿಸುತ್ತಾ ಆಯಾ ಸೆಮಿನಾರ್ ಹಾಲ್‌ನಿಂದ ಹೊರಕ್ಕೆ ಹೊರಟುಹೋದರು.

# ಮೂವತ್ತಾರು

ಸರ್ಜರಿ ಡಿಪಾರ್ಟ್‌ಮೆಂಟ್‌ನಲ್ಲಿನ ವಿಶಾಲವಾದ ತಮ್ಮ ಕೋಣೆಯಲ್ಲಿ ಮಿಸ್ಟರ್ ಆಚಾರಿ ಕುಳಿತಿದ್ದರು. ರೂಢಿಯಂತೆ ಬನಿಯನ್ ಮೇಲೆ ಏಪ್ರನ್ ಧರಿಸಿದ್ದರು. ಅವರು ಬಹಳ ಸುಸ್ತಾಗಿ ಬಿಟ್ಟಿದ್ದರು. ಕತ್ತಿನ ಮೇಲಿನ ನರಗಳು ಸ್ಪಷ್ಟವಾಗಿ ಸುತ್ತಿಕೊಂಡು ಬಿದ್ದಿವೆ. ತೋಳಿನ ಮೂಳೆಗಳ ಮಧ್ಯದ ಗುಳಿಯು ಇನ್ನಷ್ಟು ಗುಳಿಯಾಗಿತ್ತು.

ಕ್ಲಿನಿಕಲ್ ಕ್ಲಾಸ್ ಕೇಳಲೆಂದು ಮೆಡಿಕೋಗಳು ಆಚಾರಿಯ ಕೋಣೆಗೆ ಬಂದರು. ಆಚಾರಿ ಕೈನಿಂದ ಸನ್ನೆ ಮಾಡುತ್ತಾ ಅವರೊಂದಿಗೆ ಕುಳಿತುಕೊಳ್ಳಲು ಹೇಳಿದರು.

ಲವ್ ಅಂಡ್ ಬೆಲ್ಲಿಯ ಪುಸ್ತಕವು ಆಚಾರಿಯ ಮೇಜಿನ ಮೇಲೆ ತೆರೆದು ಬಿದ್ದಿತ್ತು. ಸ್ವಲ್ಪ ಹೊತ್ತು ಅವರು ಅದರಲ್ಲಿನ ಪೇಜುಗಳ ಮೇಲೆ ಕಣ್ಣೋಡಿಸಿದರು. ಅನಂತರ ವಿದ್ಯಾರ್ಥಿಗಳನ್ನು ನೋಡುತ್ತಾ ಏನೋ ಹೇಳಲು ಹೋದರು. ಗಂಟಲಿನಲ್ಲಿರುವ ಗೆಡ್ಡೆಯು ಮೇಲಕ್ಕೇರಿತಲ್ಲದೆ ಧ್ವನಿಯು ಹೊರಗೇ ಬರಲಿಲ್ಲ.

ಮಿಸ್ಟರ್ ಆಚಾರಿಯ ಮುಖವು ವಿವರ್ಣವಾಯಿತು. ಅವರ ತುಟಿಗಳು ಕಂಪಿಸುತ್ತಿದ್ದವು. ಅವರು ಮತ್ತೆಯೂ ಏನನ್ನೋ ಹೇಳಲು ಸಿದ್ಧರಾದರು. ಆದರೆ ಧ್ವನಿ ಹೊರಗಡೆಗೆ ಬರದೆ ಅವರು ಪೇಚಾಡಿದರು.

ನಿರಾಶೆಗೊಂಡು ಮಿಸ್ಟರ್ ಆಚಾರಿ ಕೈಗಳನ್ನಾಡಿಸಿ ಮೆಡಿಕೋಗಳೊಂದಿಗೆ ಹೊರ ಹೋಗಲು ಹೇಳಿದರು. ಆಶ್ಚರ್ಯಗೊಂಡ ಮೆಡಿಕೋಗಳು ಭಯದಿಂದಲೂ ಮರ್ಯಾದೆಯಿಂದಲೂ ನಿಧಾನವಾಗಿ ಹೊರಕ್ಕೆ ಹೋಗತೊಡಗಿದರು.

ಆಚಾರಿ ಕೆಮ್ಮಿದರು. ಆ ಕೆಮ್ಮು ಅಪಸ್ವರದಂತೆ ಕೇಳಿಸಿತು. ಆ ಕೆಮ್ಮು ಒಂದು ಮುದಿನಾಯಿಯು ಬೊಗಳುವ ಧ್ವನಿಯಂತಿತ್ತು.

ಅಸ್ವಸ್ಥರಾದ ಮಿಸ್ಟರ್ ಆಚಾರಿ ಸ್ವಲ್ಪ ಹೊತ್ತು ಕೋಣೆಯಲ್ಲಿ ಅತ್ತಿಂದಿತ್ತ ನಡೆದಾಡಿದರು.

ಕೊನೆಗೆ ನಡುಗುವ ಕೈಯಿಂದ ಲೀವ್ ಲೆಟರ್ ಬರೆದು ಮೇಜಿನ ಮೇಲಿಟ್ಟು ಕೋಣೆಗೆ ಬೀಗ ಹಾಕದೆ ಅವರು ಕಾರಿಡಾರ್‌ನಲ್ಲಿ ನಡೆದು ಹೋದರು.

ಅದು ಮಿಸ್ಟರ್ ಆಚಾರಿಯ ಪ್ರಥಮ ಲೀವ್ ಲೆಟರ್ ಆಗಿತ್ತು.

ಕೇಸ್ ರೆಕಾರ್ಡುಗಳನ್ನೂ, ಎಕ್ಸ್‌ರೇ ಪ್ಲೇಟುಗಳನ್ನೂ ತೆಗೆದುಕೊಂಡು ಮೇರಿ ಆಚಾರಿಯ ಕೋಣೆಗೆ ಬಂದಾಗ ಅವರ ಕುರ್ಚಿಯು ಖಾಲಿಯಾಗಿತ್ತು. ಅದು ಮಾತ್ರವಲ್ಲ. ಅವರ ಪರ್ಸನಲ್ ಕೋಣೆಗೆ ಬೀಗ ಹಾಕಲಾಗಿತ್ತು. ಅವರ ಬ್ರೀಫ್‌ಕೇಸ್ ಕಾಣುತ್ತಿರಲಿಲ್ಲ. ಆಗ ಮೇಜಿನ ಮೇಲೆ ಬಿದ್ದಿರುವ ಲೀವ್ ಲೆಟರ್ ಅನ್ನು ಮೇರಿ ಕಂಡಳು.

ಮಿಸ್ಟರ್ ಆಚಾರಿಗೆ ಏನಾಯಿತು ? ಮೇರಿಗೆ ಸ್ವಲ್ಪ ನಿರಾಶೆಯುಂಟಾಯಿತು.

ಬಹು ಮುಖ್ಯವಾದ ಎರಡು ಆಪರೇಷನ್ ಮಾಡಲು ಸಿದ್ಧರಾಗಿ ಬಂದಿದ್ದ ಮಿಸ್ಟರ್ ಆಚಾರಿ ಲೀವ್ ಲೆಟರ್ ಬರೆದಿಟ್ಟು ಅಲ್ಲಿಂದ ಹೊರಟು ಹೋದಾಗ ಸರ್ಜರಿ ಡಿಪಾರ್ಟ್‌ಮೆಂಟ್‌ನವರೆಲ್ಲಾ ಚಿಂತಿತರಾದರು. ಆಚಾರಿ ಮಾಡಬೇಕಾದ ಆಪರೇಷನ್ ಅನ್ನು ಅವರೇ ಮಾಡಬೇಕಾಗುತ್ತದೆ. ಆ ಕೆಲಸವನ್ನು ಇದುವರೆಗೂ ಮತ್ತೊಬ್ಬ ಸರ್ಜನ್ ಮಾಡಿಲ್ಲ. ಅಂತಹ ಒಂದು ಘಟನೆ ಸರ್ಜರಿ ಡಿಪಾರ್ಟ್‌ಮೆಂಟಿನಲ್ಲಿ ಇಲ್ಲಿಯವರೆಗೆ ನಡೆದೇ ಇರಲಿಲ್ಲ.

ಅಂದು ಡಿಪಾರ್ಟ್‌ಮೆಂಟಿನಲ್ಲಿ ನಡೆದ ಮಾತುಕತೆಗಳೆಲ್ಲವೂ ಮಿಸ್ಟರ್ ಆಚಾರಿಯ ಬಗ್ಗೆಯೇ ಆಗಿತ್ತು. ಇತ್ತೀಚೆಗೆ ಅವರಲ್ಲುಂಟಾಗಿದ್ದ ಮಾರ್ಪಾಡುಗಳು, ಅವರ ಶರೀರವನ್ನೂ ಮನಸ್ಸನ್ನು ಬಾಧಿಸಿರುವ ನಿಶ್ಶಕ್ತಿ, ಅವರ ಮೌನ ಅವರ ವೈರಾಗ್ಯ, ನಿರಾಸಕ್ತಿ-ಇವೆಲ್ಲಾ ಸರ್ಜರಿ ಡಿಪಾರ್ಟ್‌ಮೆಂಟ್‌ನಲ್ಲಿ ಚರ್ಚಾವಿಷಯವಾಗಿದ್ದವು.

ಮಿಸ್ಟರ್ ಆಚಾರಿಯ ಮನಸ್ಸಾಕ್ಷಿಯನ್ನು ಕಾಯ್ದಿಡುವ ಒಬ್ಬ ಲೆಕ್ಚರರ್ ಈ ಸಂದರ್ಭದಲ್ಲಿ ಯಾರೂ . ಕಾಣದಂತೆ ತನ್ನ ಯಜಮಾನರಿಗೆ ಏನಾಯಿತೆಂದು ತಿಳಿಯಲೋಸುಗ ಅವರ ಮನೆಗೆ ಹೋದನು. ರಾಣಿಯಮ್ಮ ತೆರೆದು ಕೊಟ್ಟ ಬಾಗಿಲಿನ ಮೂಲಕ ಅವನು ಒಳಕ್ಕೆ ಪ್ರವೇಶಿಸಿದನು. ಆದರೆ ಮಿಸ್ಟರ್ ಆಚಾರಿ ಹೊರಕ್ಕೆ ಬರಲಿಲ್ಲ. ಅವರು ತಮ್ಮ ಕೋಣೆಯ ಬಾಗಿಲು ಹಾಕಿಕೊಂಡು ಮಲಗಿದ್ದರು.

ರಾಣಿಯಮ್ಮನ ಮುಖದಲ್ಲಿ ಸ್ವಲ್ಪವೂ ಆನಂದವಿರಲಿಲ್ಲ. ಅಗಾಧವಾದ ಯಾವುದೋ ಚಿಂತೆ ಆಕೆಯನ್ನು ಬಾಧಿಸುತ್ತಿರುವಂತ ತೋರಿತು. ಆದರೆ ಆಕೆ ತಮ್ಮ ಒಡವೆಗಳನ್ನೆಲ್ಲಾ ಧರಿಸಿದ್ದರು. ಹೌದು ಆಕೆ ಅಸ್ವಸ್ಥರಾಗಿದ್ದರು.

"ಮೂರು ನಾಲ್ಕು ದಿವಸಗಳಿಂದ ಊಟ ತಿಂಡಿ ಏನನ್ನೂ ಅವರು ತೆಗೆದುಕೊಳ್ಳುತ್ತಿಲ್ಲ" ರಾಣಿಯಮ್ಮ ಹೇಳಿದರು. "ಈಗ ನೀರನ್ನೂ ಸಹ ಕುಡಿಯಲು ಕಷ್ಟವಾಗುತ್ತಿದೆ."

"ಏನಾಗಿದೆ ?" ಅವನು ಆಶ್ಚರ್ಯದಿಂದ ಕೇಳಿದನು.

"ಯಾರಿಗೆ ಗೊತ್ತು ? ಕೆಲಸದವನನ್ನು ಕೇಳಬೇಕು. ನನಗಾದರೋ ಸ್ವಲ್ಪವೂ ಕೈಸಾಗುತ್ತಿಲ್ಲ... ಶಿವ.... ಶಿವ... ಎಂತಹ ನಾಚಿಕೆಗೇಡಿದು ?"

ಅವನು ವಿಷಣ್ಣವದನನಾಗಿ ಸ್ವಲ್ಪ ಹೊತ್ತು ಕುಳಿತಲ್ಲೇ ಕುಳಿತಿದ್ದನು.

"ಇನ್ನು ನೀವು ಹೋಗಿ, ನಾನು ಮಲಗಬೇಕು" ರಾಣಿಯಮ್ಮ ಹೇಳಿದರು.

"ನನಗೆ ಒಂದು ಸಲ ಅವರನ್ನು ನೋಡಿದ್ದರೆ ಚೆನ್ನಾಗಿತ್ತು" ತಾನೇ ಹೋಗಲು ಹಿಂತೆಗೆಯುತ್ತಾ ಅವನು ಕೇಳಿದನು.

"ನೋಡಿ, ನೋಡಿ ಅಗೋ ಆ ಕೋಣೆಯಲ್ಲಿದ್ದಾರೆ" ರಾಣಿಯಮ್ಮ ಮಹಡಿ ಮೆಟ್ಟಿಲುಗಳನ್ನು ಹತ್ತುತ್ತಿರುವಾಗ ಹೇಳಿದರು.

ಅವನು ಒಳಕ್ಕೆ ಪ್ರವೇಶಿಸಿ ಮಿಸ್ಟರ್ ಆಚಾರಿಯ ಕೋಣೆಯ ಬಾಗಿಲನ್ನು ತಟ್ಟಿದನು.

ಮಿಸ್ಟರ್ ಆಚಾರಿ ಬಾಗಿಲನ್ನು ತೆರೆದರು.

ಮೂಳೆ ಚಕ್ಕಳ ಬಿಟ್ಟುಕೊಂಡಿದ್ದ ಮಿಸ್ಟರ್ ಆಚಾರಿಯನ್ನು ಅವನು ನೋಡಿದನು. ಆಚಾರಿ ಒಂದು ಪ್ರೇತದಂತಾಗಿದ್ದರು. ಅವರು ಏನೂ ಮಾತಾಡಲಿಲ್ಲ. ಆದರೆ, ಅವರ ಕಣ್ಣುಗಳಲ್ಲಿ ಹಲವಾರು ವರ್ಷಗಳ ಸಂಕಟದ ವಿಷಯಗಳು ತುಂಬಿ ತುಳುಕಾಡುವಂತಿತ್ತು.

ಮಿಸ್ಟರ್ ಆಚಾರಿ ಒಂದಕ್ಷರವೂ ಮಾತನಾಡಲಿಲ್ಲ. ತುಟಿಗಳನ್ನೂ ಚಲಿಸಲೂ ಇಲ್ಲ. ಅವರು ತಲೆದಿಂಬಿನ ಕೆಳಗಿನಿಂದ ಒಂದು ಕವರ್ ತೆಗೆದುಕೊಂಡು ಅವನಿಗೆ ಕೊಟ್ಟರು.

ಅವನು ಕವರ್ ಒಡೆದು ಕಾಗದ ತೆರೆದು ಓದಿದನು. ಆ ಕಾಗದದಲ್ಲಿ ಒಂದು ವಾಕ್ಯವು ಮಾತ್ರವೇ ಇದ್ದದ್ದು:

"ನನ್ನನ್ನು ಆಸ್ಪತ್ರೆಗೆ ಸೇರಿಸಬೇಡಿ."

ಇದೇನು ಅವರ ಕೋರಿಕೆಯೋ ? ಅಥವಾ ಅವರದೇ ಆದ ಒಂದು ಆಜ್ಞೆಯೋ ?

ಅನಂತರ ಅವರು ಕಣ್ಣುಗಳನ್ನು ಮುಚ್ಚಿ ಮಂಚದ ಮೇಲೆ ಮತ್ತೆ ಮಲಗಿದರು. ಅವರು ಹಾಗೆ ಮಲಗಿಯೇ ಎರಡು ದಿವಸಗಳನ್ನು ಕಳೆದರು. ಒಂದು ಹನಿನೀರು ಸಹ ಇಳಿಸಲು ಅವರಿಗೆ ಸಾಧ್ಯವಾಗಲಿಲ್ಲ.

ಮಿಸ್ಟರ್ ಆಚಾರಿಯ ರೋಗ ಉಲ್ಬಣಿಸಿತು.

ಮಿಸ್ಟರ್ ಆಚಾರಿ ರೋಗದೊಂದಿಗೆ ಸೆಣಸುತ್ತಿದ್ದರು. ಅವರ ರೋಗವು ಏನು ? ಯಾರಿಗೂ ಗೊತ್ತಿಲ್ಲ. ಆ ರಹಸ್ಯವು ಅವರಿಗೆ ಮಾತ್ರವೇ ತಿಳಿದಿರುವುದು. ಅದು ಒಂದು ಪ್ರೊಫೆಷನಲ್ ಸೀಕ್ರೆಟ್. ಅಸಂಖ್ಯಾತ ರೋಗಗಳ ಅಪೂರ್ವ ರೋಗ ನಿಧಾನವನ್ನು ಕಂಡುಹಿಡಿದ ಆಚಾರಿಯು ರೋಗವನ್ನು ತಾವೇ ತಿಳಿದುಕೊಂಡಿದ್ದರು. ಇನ್ನೊಬ್ಬ ಸರ್ಜನ್‌ನ ಕೈ ತನ್ನ ದೇಹದ ಮೇಲೆ ಬೀಳಬಾರದೆಂದು ಅವರ ಬಯಕೆಯಾಗಿತ್ತು.

ಮಿಸ್ಟರ್ ಆಚಾರಿಯವರ ಅವಸ್ಥೆ ನೋಡಿದರೆ ಬಹು ಕನಿಕರವಾಗುತ್ತಿತ್ತು. ಅವರ ಶುಶ್ರೂಷೆ ಮಾಡಲು ಯಾರೂ ಇರಲಿಲ್ಲ. ಬಂಧು ಜನಗಳೋ, ಮಿತ್ರರೋ ಆಪ್ತರೋ ಯಾರೂ ಅವರನ್ನು ನೋಡಲು ಬರಲಿಲ್ಲ. ಕೆಲಸದವನೂ ಸಹ ಅವರ ಕೈಬಿಟ್ಟಿದ್ದನು. ಅವರು ಚೆನ್ನಾಗಿದ್ದ ಕಾಲದಲ್ಲಿ ಅವರು ಯಾರೊಂದಿಗೂ ಒಳ್ಳೆಯದಾಗಿ ನಡೆದುಕೊಂಡಿರಲಿಲ್ಲವಲ್ಲ ?

ಒಂದು ಶುಭ ದಿನ ಬೆಳಿಗ್ಗೆ ಆಚಾರಿಯ ರೋಗವು ಇನ್ನಷ್ಟು ಉಲ್ಬಣಿಸಿತು.

ಮಿಸ್ಟರ್ ಆಚಾರಿ ಮರಣದ ಕಬಂಧ ಬಾಹುಗಳಲ್ಲಿ ಸಿಕ್ಕಿ ಬೀಳುತ್ತಿದ್ದಾರೆ. ಉಸಿರಿನ ಏರಿಳಿತ ಕಡಿಮೆಯಾಯಿತು. ಕಣ್ಣುಗಳಲ್ಲಿ ಕತ್ತಲೆ ಕವಿಯಲು ಪ್ರಾರಂಭಿಸಿತು. ಕೊನೆಯ ಬೆಳಕೂ ನಂದುವ ಸಮಯ ಬಂತು. ಮನಸ್ಸು ಪರಮಪದದತ್ತ ಪ್ರಯಾಣ ಮಾಡಿತು. ಆತ್ಮವು ದೇಹವನ್ನು ಉಪೇಕ್ಷಿಸಿತು.

ಹಾಗೆ ಅವರ ಪ್ರಾಣಪಕ್ಷಿಯು ಹಾರಿ ಹೋಯಿತು.

ಆಚಾರಿಯ ಪ್ರಾಣವಿಲ್ಲದ ದೇಹ ಮಂಚದ ಮೇಲೆ ಮಲಗಿತ್ತು. ಆದರೆ ಎಂತಹ ಹವಾಡ ? ಅವರು ಈಗ ಒಬ್ಬ ಪೋಪ್‌ನ ವೇಷದಲ್ಲಿ ಮಂಚದ ಮೇಲೆ ಪ್ರಾಣವಿಲ್ಲದ ಮಲಗಿದ್ದರು.

ಪೋಪ್‌ನ ಸ್ಥಾನಚಿಹ್ನೆಯಾದ ಧರ್ಮದಂಡ, ಶಿರಸ್ಸನ್ನೂ ಅಲಂಕರಿಸುವ ಮೈಟರ್(ಟೋಪಿ), ಸ್ಥಾನಾರೋಹಣ ಸಮಯದಲ್ಲಿ ಧರಿಸುವ ಮೂರು ವಲಯಗಳಿರುವ ಕಿರೀಟವಾದ ಟಿಯಾರೀಗಳನ್ನು ಅವರ ದೇಹದ ಮೇಲಿಂದ ತೆಗೆದು ಹಾಕಲಾಗಿತ್ತು. ದಪ್ಪಗಿದ್ದ ಬಿಳಿ ಹಗ್ಗದಿಂದ ಕಟ್ಟಿದ ಕುರ್ಬಾನಾ ವಸ್ತ್ರವನ್ನು ಅವರಿಗೆ ಉಡಿಸಲಾಗಿತ್ತು. ಸಾಮೂಹಿಕ ಬಲಿಪೂಜೆ ಸಮಯದಲ್ಲಿ ಉಪಯೋಗಿಸಲಾಗುವ ಪರಿಶುದ್ಧ ಪಾತ್ರೆಗಳಾದ ಚ್ಯಾಲಿಸ್ (ಮದ್ಯಪಾತ್ರೆ), ಪ್ಯಾಟೆನ್ (ತಟ್ಟೆ)ಗಳನ್ನು ಅವರು ಕೈಗಳಲ್ಲಿ ಹಿಡಿದಿದ್ದರು.

ಅಷ್ಟು ಹೊತ್ತಿಗೆ ಬಂಧು ಜನಗಳೂ ಮಿತ್ರರೂ ಮಿಸ್ಟರ್ ಆಚಾರಿಯವರ ಮನೆಗೆ ಬಂದು ಸೇರತೊಡಗಿದರು. ಯಾರಾದರೂ ಸತ್ತರೆ, ಅವರು ಮಾಡಿದ ತಪ್ಪುಗಳನ್ನೂ, ಅವರು ಕೊಟ್ಟ ಕಷ್ಟಗಳನ್ನೂ ಎಲ್ಲರೂ ಮರೆಯುತ್ತಾರಲ್ಲವೇ ?

ಅವರೆಲ್ಲಾ ಆಚಾರಿಯ ಗುಣಗಳನ್ನು ಹೊಗಳತೊಡಗಿದರು.

ಆಚಾರಿಯವರ ಮೃತಶರೀರದ ಮೇಲೆ ಹೂಮಾಲೆಗಳು ರಾಶಿರಾಶಿಯಾಗಿ ಬೀಳತೊಡಗಿದವು.

ಈ ಸಮಯದಲ್ಲಿ ರಾಣಿಯಮ್ಮ ಲಕ್ಷ್ಮೀ ದುಃಖಿಸುತ್ತಾ ಕುಳಿತಿದ್ದರು.

ಆಚಾರಿಯವರ ಮನೆಗೆ ಜನರು ಬರುತ್ತಲೇ ಇದ್ದರು. ಮಿತ್ರರೂ, ಬಂಧುಗಳೂ, ಹೆಚ್ಚು ಕಡಿಮೆ ಎಲ್ಲರೂ ಬಂದರು. ಆಸ್ಪತ್ರೆಯ ಸ್ಟಾಫ್, ಮೆಡಿಕೋಗಳು ಎಲ್ಲರೂ ಬಂದಿದ್ದರು.

ಅಂತಿಮ ಸಂಸ್ಕಾರಗಳಿಗೆ ಬೇಕಾದ ಸಿದ್ಧತೆಗಳು ಪ್ರಾರಂಭವಾದವು. ಹೂಮಾಲೆಗಳನ್ನು ರೀತ್‌ಗಳನ್ನೂ ತೆಗೆದು ಹಾಕಲಾಗಿತು.

ಪೋಪ್‌ನ ವೇಷದಲ್ಲಿರುವ ಆಚಾರಿಯವರ ದೇಹವನ್ನು ಹೊತ್ತ ಜನ ಹೊರಟರು.

ಕ್ಯಾಂಪಸ್‌ನೊಳಗಿದ್ದ ಶ್ಮಶಾನವು ಸ್ವಲ್ಪ ದೂರದಲ್ಲಿತ್ತು. ಹೆಣವನ್ನು ಹೊತ್ತ ಜನರೂ ಬಂಧು ಜನಗಳೂ ನಡೆಯುತ್ತಿದ್ದರು. ಅವರೆಲ್ಲಾ ಶ್ಮಶಾನಕ್ಕೆ ಬರುವ ವೇಳೆಗೆ ಗುಂಡಿ ತೋಡಲಾಗಿತ್ತು.

ಅವರೆಲ್ಲರೂ ಸೇರಿ ಆ ದೇಹವನ್ನು ಗುಂಡಿಯೊಳಕ್ಕಿಳಿಸಿದರು.

ಗುಂಡಿಗೆ ಮಣ್ಣು ಹಾಕಿ ಮುಚ್ಚಿದನಂತರ ಈ ಶ್ಮಶಾನ ಯಾತ್ರೆಯಲ್ಲಿ ಭಾಗವಹಿಸಿದ್ದ ಪರಿವಾರದವರೆಲ್ಲಾ ಚೆದುರಿ ಹೋಗಲು ಆರಂಭಿಸಿದರು.

ಆಗ...

ಆಗ..

ಸೆಷನ್ಸ್ ಜಡ್ಜ್‌ನ ತೀರ್ಪಿನ ಕಾಪಿಯೊಂದಿಗೆ ಅಮೀನ್‌ನು, ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿ, ತೀರ್ಪು ಜ್ಯಾರಿಗೆ ತರುವ ಒಬ್ಬನು, ಪೋಲೀಸರು - ಎಲ್ಲರೂ ಅಲ್ಲಿಗೆ ಬಂದರು. ಮಿಸ್ಟರ್ ಆಚಾರಿಯು ಎಸಗಿದ ಅಪರಾಧಗಳಿಗೆ ಶಿಕ್ಷೆಯನ್ನು ವಿಧಿಸಲಾಗಿತ್ತು.

ಪರಿವಾರದವರೆಲ್ಲಾ ಸ್ತಂಭಿತರಾಗಿ ನಿಂತರು.

ಅಮೀನ್ ತೀರ್ಪನ್ನು ಓದಲು ಆರಂಭಿಸಿದನು.

"ರೋಗಿಗಳನ್ನು ಪೀಡಿಸಿದವನೂ, ರೋಗಿಗಳಿಂದ ಲಂಚ ತೆಗೆದುಕೊಂಡವನೂ, ಲಂಚ ಕೊಡದ ರೋಗಿಗಳ ಮರಣಕ್ಕೆ ಕಾರಣನಾದವನೂ, ವ್ಯಭಿಚಾರಿಯೂ, ಬಲಾತ್ಕಾರ ನಡೆಸಿದವನೂ, ದುರ್ಮಾರ್ಗಿಯೂ, ಕುಟುಂಬದವರನ್ನು ಪ್ರೀತಿಸದವನೂ, ಶಿಷ್ಯರೊಂದಿಗೆ ಅನೀತಿಯಿಂದ ನಡೆದುಕೊಂಡವನೂ ಆದ ಮಿಸ್ಟರ್ ಆಚಾರಿ ತಪ್ಪಿತಸ್ಥನೆಂದು ರುಜುವಾತಾಗಿದೆ. ಆದ್ದರಿಂದ ಮಿಸ್ಟರ್ ಆಚಾರಿಯನ್ನು ನೇಣು ಹಾಕಲೂ, ಆತನ ಕೈಕಾಲುಗಳನ್ನು ಕಡಿದು ಯಮುನಾನದಿಗೆ ಎಸೆಯಲೂ ಈ ನ್ಯಾಯಾಲಯವು ಆಜ್ಞೆ ವಿಧಿಸಿರುತ್ತದೆ."

ಶ್ಮಶಾನದಲ್ಲಿ ಥಟ್ಟನೆ ಕತ್ತಲು ಕವಿಯಲು ಆರಂಭವಾಯಿತು.

ಸಬ್ ಇನ್‌ಸ್ಪೆಕ್ಟರ್ ಶರ್ಮಾಜಿಯ ನೇತೃತ್ವದಲ್ಲಿ ಆಗ ತಾನೇ ಮುಚ್ಚಿದ್ದ ಗುಂಡಿಯನ್ನು ತೋಡಿ ಪೋಲೀಸರು ಆಚಾರಿಯ ದೇಹವನ್ನು ಒಳಗಿಂದ ಹೊರಕ್ಕೆಳೆದು ಹಾಕಿದರು.

ಅದೊಂದು ಪ್ರಾಚೀನವಾದ ಶ್ಮಶಾನವಾಗಿತ್ತು. ಅಸಂಖ್ಯಾತ ಮರಗಳೂ, ನೋಚ್ಚಿಲ್* ಪೊದೆಗಳೂ ಇರುವ ಶ್ಮಶಾನವಾಗಿತ್ತದು. ನೂರು ವರ್ಷಗಳು ಹಳೆಯದಾದ ಒಂದು ಮರದ ಕೆಳಗೇ ಆಚಾರಿಯನ್ನು ಹೂತ್ತಿದ್ದ ಗುಂಡಿಯಿತ್ತು.

ಹೊರಕ್ಕೆಳೆದು ಹಾಕಿದ್ದ ಶವದ ಕುತ್ತಿಗೆಗೆ ತೀರ್ಪು ಜಾರಿಗೆ ತರುವವನು ಹಗ್ಗದ ಕುಣಿಕೆಯನ್ನು ಹಾಕಿದನು. ಹಳೆಯದಾದ ಆ ಮರದ ದಕ್ಷಿಣಕ್ಕೆ ಕವಲೊಡೆದು ಹೋಗಿದ್ದ ಒಂದು ಕೊಂಬೆಗೆ ಆಚಾರಿಯ ಶವವನ್ನು ನೇತು ಹಾಕಲಾಯಿತು.

ಆಚಾರಿ ಮತ್ತೊಮ್ಮೆ ಸತ್ತರು.

ಕಾನೂನನ್ನು ಜಾರಿಗೆ ತರಲಾಯಿತು.

ಆ ನೇತು ಹಾಕಿದ್ದ ಶವದ ಕೈಕಾಲುಗಳನ್ನು ತೀರ್ಪು ಜಾರಿಗೆ ತರುವವನು ದೊಡ್ಡ ಕೊಡಲಿಯಿಂದ ಕತ್ತರಿಸಿ ಹಾಕಿದನು.

ಶ್ಮಶಾನದಲ್ಲಿ ಅಲ್ಲೋಲ ಕಲ್ಲೋಲವಾಯಿತು. ಅದು ಒಂದು ಅಸಾಧಾರಣ ವನವಾಗಿ ಬದಲಾಯಿತು. ಆ ಪುರಾತನ ಶ್ಮಶಾನದಲ್ಲಿ ಸ್ಮಾರಕ ಶಿಲೆಗಳು ಎದ್ದುವು. ಭಯಂಕರವಾದ ಒಂದು ವಾತಾವರಣವು ಶ್ಮಶಾನದ ಅಂತರಿಕ್ಷವನ್ನು ಕವಿಯಿತು. ಬೈರಾಗಿಯಂತೆ ನಿಂತ, ನೂರು ವರ್ಷಗಳ ಹಳೆಯದಾದ, ಭಾರಿಯಾಗಿದ್ದ, ತೆಂಕಣ ದಿಕ್ಕಿನಲ್ಲಿದ್ದ ಆ ವೃಕ್ಷದ ದಕ್ಷಿಣಕ್ಕೆ ಕವಲೊಡೆದು ಹೋಗುವ ಕೊಂಬೆಯಲ್ಲಿ ಕೈಕಾಲುಗಳಿಲ್ಲದ ಮಿಸ್ಟರ್ ಆಚಾರಿಯ ದೇಹವು ಮುಂಬರಲಿರುವ ಪಥಿಕರಿಗಾಗಿ ಕಾದಿತ್ತು.

* ನೋಚ್ಚಿಲ್: ಒಂದು ಔಷಧಿ ಗಿಡ.

# ಮೂವತ್ತೇಳು

ರಾಣಿಯಮ್ಮನೂ ಕೆಲಸದವನೂ ಸೇರಿ ಬೀಗ ಹಾಕಿ ಮುಚ್ಚಿದ್ದ ಆಚಾರಿಯ ರೂಮ್‌ನ ಬಾಗಿಲನ್ನು ಒಡೆದು ತೆರೆದರು.

ಮಿಸ್ಟರ್ ಆಚಾರಿ ಅರೆಪ್ರಜ್ಞಾವಸ್ಥೆಯಲ್ಲಿದ್ದರು. ನಿಶ್ಶಕ್ತನೂ, ದೀನನೂ ಆದ ಒಬ್ಬ ಸಾಧಾರಣ ರೋಗಿಯಂತೆ ಅವರು ನರಳಾಡುತ್ತಿದ್ದರು.

ಆ ಅರ್ಧ ಪ್ರಜ್ಞಾವಸ್ಥೆಯಲ್ಲೂ ಯಾರ್‍ಯಾರೋ ಬರುತ್ತಿದ್ದ ಸಪ್ಪಳ ಆಚಾರಿಯವರಿಗೆ ಗೊತ್ತಾಯಿತು. ಅವರನ್ನೆಲ್ಲಾ ಹೊರಕ್ಕೆ ಹೋಗಿರೆಂದು ಅವರು ಮನಸ್ಸಿನಲ್ಲೇ ಆಜ್ಞಾಪಿಸುತ್ತಿದ್ದರು. ಕೈಯನ್ನೆತ್ತಿ ಬೀಸಿ ಅವರನ್ನು ಹೊರಕ್ಕೆ ಹೋಗೆಂದು ಹೇಳಲು ಅವರು ಬಯಸಿದರು. ಆದರೆ ಅವರ ಕೈ ಮೇಲಕ್ಕೇಳುತ್ತಲೇ ಇರಲಿಲ್ಲ. ಬೆಳಕಿಗೂ ಕತ್ತಲೆಗೂ ಮಧ್ಯ ಆಚಾರಿ ತೂಗಾಡುತ್ತಿದ್ದರು.

ಮಿಸ್ಟರ್ ಆಚಾರಿಯ ದೇಹವು ಒಣಗಿ ಬರಡಾಗಿದೆ. ಅವರ ಚರ್ಮವು ಸುಕ್ಕು ಸುಕ್ಕಾಗಿದೆ. ತುಟಿಗಳು ಒಣಗಿ ವಿವರ್ಣವಾಗಿವೆ.

ಬಹಳ ದಿವಸಗಳಿಂದ ಅನ್ನಪಾನೀಯಗಳೊಂದನ್ನೂ ಸೇವಿಸದಿದ್ದರೂ, ಮಿಸ್ಟರ್ ಆಚಾರಿಯ ಭಾರಿಯಾಗಿದ್ದ ಆ ಶರೀರದ ತೂಕವು ಬಹಳ ಕಡಿಮೆಯೇನಾಗಿರಲಿಲ್ಲ. ಅವರೆಲ್ಲರೂ ಸೇರಿ ಬಹಳ ಕಷ್ಟಪಟ್ಟು ಆ ಶರೀರವನ್ನು ಎತ್ತಿ ಆಂಬುಲೆನ್ಸ್‌ನಲ್ಲಿ ಮಲಗಿಸಿದರು.

ಕ್ಯಾನ್ಸರ್ ವಾರ್ಡನ್ನು ಗುರಿಯಾಗಿಟ್ಟುಕೊಂಡು ಆಂಬುಲೆನ್ಸ್ ಓಡಿತು.

ವಿ.ಐ.ಪಿ. ರೂಮಿನಲ್ಲಿ ಮಲಗಿಸಿದ್ದ ಮಿಸ್ಟರ್ ಆಚಾರಿಯನ್ನು ಪರೀಕ್ಷಿಸಲೆಂದು ರೇಡಿಯಾಲಜಿಯ ಮುಖ್ಯಸ್ಥರಾದ ಪ್ರೊಫೆಸರ್ ರಾಮಮೂರ್ತಿ ಬಂದರು.

ಪ್ರೊಫೆಸರ್ ರಾಮಮೂರ್ತಿ ಸ್ವಲ್ಪ ಕುಳ್ಳಾಗಿದ್ದರು. ಸ್ವಲ್ಪ ವಯಸ್ಸೂ ಆಗಿತ್ತು. ಪ್ರಸನ್ನವದನರು, ಸಹೃದಯ ಚಿತ್ತರು, ವಿನೀತ ಸ್ವಭಾವದವರು; ಅವರು ಕ್ಯಾನ್ಸರ್ ವಿಭಾಗದಲ್ಲಿ ತಜ್ಞ ಸರ್ಜನ್ ಆಗಿದ್ದರು. ಆಚಾರಿಯವರು ತಮ್ಮ ರೋಗಿಯಾಗಿ ಬಂದದ್ದು ಅವರಿಗೆ ಮುದವನ್ನಿತ್ತಿತ್ತು.

ಒಂದು ಹಾರ್ದಿಕ ಸತ್ಕಾರಕ್ಕಾಗಿ ಬಂದಂತ ಪ್ರೊಫೆಸರ್ ರಾಮಮೂರ್ತಿ ಮಿಸ್ಟರ್ ಆಚಾರಿಯ ಮಂಚದ ಬಳಿ ಇದ್ದ ಕುರ್ಚಿಯಲ್ಲಿ ಅವರನ್ನು ಪರೀಕ್ಷಿಸಲೆಂದು ಕುಳಿತರು.

ರತ್ನಗಂಬಳಿ ಹಾಸಿದ್ದ ಚೆಚ್ಚಗಿನ ಕೋಣೆಯ ವಾತಾವರಣದಲ್ಲಿ ಎದುರಿಗಿರುವ ಕಿಟಕಿಯ ಗಾಜಿನ ಮೂಲಕ ಬರುವ ಚಳಿಗಾಲದ ಸೂರ್ಯರಶ್ಮಿಯಂತೆ ಶಾಂತವಾಗಿ ಮಿಸ್ಟರ್ ಆಚಾರಿಯ ಅರ್ಧನಗ್ನವಾದ ಆ ದೇಹವನ್ನು ರಾಮಮೂರ್ತಿ ಪರೀಕ್ಷಿಸತೊಡಗಿದರು.

ತಮ್ಮ ಜೀವನದ ಬಯಕೆಗಳಿಗೂ ಇಚ್ಛೆಗೂ ವಿರುದ್ಧವಾಗಿ, ತಮ್ಮ ದೇಹದ ಮೇಲೆ ಇನ್ನೊಬ್ಬ ತಜ್ಞ ವೈದ್ಯನ ಕೈಗಳು ಬಿದ್ದಾಗ, ಅರ್ಧ ಪ್ರಜ್ಞಾವಸ್ಥೆಯಲ್ಲಿದ್ದ ಮಿಸ್ಟರ್ ಆಚಾರಿ ಒಮ್ಮೆ ನರಳಿದರು. ಕಣ್ಣುಗಳನ್ನು ತೆರೆದರು. ಅನಂತರ ಅವು ನಿಧಾನವಾಗಿ ಮುಚ್ಚಿಕೊಂಡವು.

ಡಾಕ್ಟರ್ ರಾಮಮೂರ್ತಿ ಮಿಸ್ಟರ್ ಆಚಾರಿಯನ್ನು ಪರೀಕ್ಷೆ ಮಾಡಿ ಮುಗಿಸಿದ ನಂತರ ಬಹಳ ಮರುಕದೊಂದಿಗೆ ರಾಣಿಯಮ್ಮನನ್ನು ದಿಟ್ಟಿಸಿ ನೋಡಿದರು. ಆ ನೋಟವು ಬಹಳ ಅರ್ಥಪೂರ್ಣವಾಗಿತ್ತು. ರಾಣಿಯಮ್ಮಳ ಕಣ್ಣುಗಳು ಹನಿಗೂಡಿದವು. ತನ್ನ ಹಡಗು ಮುಳುಗಿ ಹೋಗುತ್ತಿರುವಾಗಿನ ಒಬ್ಬ ಕ್ಯಾಪ್ಟನ್‌ನ ಮನೋಭಾವದೊಂದಿಗೆ ಕೋಣೆಯ ಒಂದು ಮೂಲೆಯಲ್ಲಿ ಕುಳಿತುಕೊಂಡಿದ್ದರು.

"ಮಿಸ್ಟರ್ ಆಚಾರಿ ಒಬ್ಬ ಮಹಾನ್ ಪುರುಷರು." ಪ್ರೊಫೆಸರ್ ರಾಮಮೂರ್ತಿ ಹೇಳಿದರು: "ಅವರು ಇದುವರೆಗೆ ತಮ್ಮ ನೋವನ್ನು ಅದುಗಿಸಿಕೊಂಡಿದ್ದರು. ನೋವನ್ನು ಸಹಿಸುವುದರಲ್ಲೂ ಒಂದು ವಿಶಿಷ್ಟ ಸುಖವಿದೆ. ಅದು ಸಂಪತ್ತಿನಿಂದ ಗಳಿಸುವ ಸುಖಕ್ಕಿಂತ ಬಹು ದೊಡ್ಡದು. ತಮ್ಮ ನೋವನ್ನು ತಮ್ಮಲ್ಲೇ ಇಟ್ಟುಕೊಂಡು ಅದನ್ನು ಸಹಿಸುವಾಗ ಉಂಟಾಗುವ ಸುಖವದು. ಸ್ವಾಮಿ ಪರಮಹಂಸರು ಹೀಗೇ ಮಾಡಿದ್ದರು. ಮಲದ್ವಾರದಲ್ಲಿ ಕ್ಯಾನ್ಸರ್ ಬಂದು, ಆ ರೋಗವು ಉಲ್ಬಣಿಸು ವವರೆಗೂ ಅವರು ನೋವನ್ನು ಸಹಿಸಿಯೇ ಸಹಿಸಿದರು. ಆದರೆ ಅಂತ್ಯದಲ್ಲಿ ಸ್ವಾಮೀಜಿಯೂ ಒಮ್ಮೆ ಅತ್ತರು. ಆದರೆ, ಮಿಸ್ಟರ್ ಆಚಾರಿ ಇದುವರೆಗೂ ಒಮ್ಮೆಯೂ ಅತ್ತಿಲ್ಲ. ಇಷ್ಟು ಸಹನಾಶಕ್ತಿಯಿರುವ ಒಬ್ಬ ಮನುಷ್ಯನನ್ನು ನಾನು ಇದುವರೆಗೆ ನೋಡಿಯೇ ಇಲ್ಲ. ಮಿಸ್ಟರ್ ಆಚಾರಿ ಒಬ್ಬ ಆಚಾರ್ಯರೇ ಸರಿ.

"ಸರಿ, ಇನ್ನು ನಾನು ನನ್ನ ಕೆಲಸದಲ್ಲಿ ತೊಡಗುತ್ತೇನೆ" ರಾಮಮೂರ್ತಿ ಮತ್ತೆ ಹೇಳಿದರು.

ಆಚಾರಿಯವರನ್ನು ಥಿಯೇಟರ್‌ಗೆ ಕರೆದುಕೊಂಡು ಹೋದರು.

ಉದ್ವೇಗದಿಂದ ರಾಣಿಯಮ್ಮ ಅದನ್ನೇ ನೋಡುತ್ತಾ ನಿಂತರು.

ಎರಡುಗಂಟೆಗಳಾದ ಮೇಲೆ ಮಿಸ್ಟರ್ ಆಚಾರಿಯನ್ನು ವಿ.ಐ.ಪಿ. ಕೋಣೆಗೇನೇ ಕರೆದುಕೊಂಡು ಬಂದರು.

ಅವರಿಗೆ ಆಸ್ಪತ್ರೆಯ ಯೂನಿಫಾರಂ ಹಾಕಲಾಗಿತ್ತು. ಬಿಳಿಯ ಬಟ್ಟೆಮೇಲೆ ನೀಲಿ ಗೆರೆಗಳಿರುವ ಪೈಜಾಮ ಷರ್ಟು. ಆರಾಮವಾಗಿ ಉಸಿರಾಡಲೆಂದು ಗಂಟಲನ್ನು ಕುಯ್ದು ಟ್ರೆಕಿಯೋಸ್ಟಮಿ ಟ್ಯೂಬ್ ಅನ್ನು ಗಂಟಲಿನೊಳಗೆ ಇಳಿಬಿಟ್ಟಿದ್ದರು. ನೆಕ್ ಟೈ ಕಟ್ಟಿದ್ದ ಜಾಗದಲ್ಲಿ ಈಗ ಆ ಟ್ಯೂಬ್ ಇತ್ತು. ಮೂಗಿನಲ್ಲೂ ಮೂತ್ರನಾಳದಲ್ಲೂ ಬೇರೆ ಬೇರೆ ಟ್ಯೂಬ್‌ಗಳನ್ನು ಹಾಕಲಾಗಿತ್ತು. ಎರಡು ಕೈಗಳಿಗೂ ಒಂದರಲ್ಲಿ ರಕ್ತವನ್ನು ಇನ್ನೊಂದರಲ್ಲಿ ಗ್ಲೂಕೋಸ್ ಅನ್ನು ಟ್ಯೂಬ್ ಮೂಲಕ ಏರಿಸಲಾಗುತ್ತಿತ್ತು. ಆದರೂ ಸಹ ಅವರಿಗೆ ಜ್ಞಾನವಿತ್ತು. ಕಣ್ಣುಗಳು ನೀರಿನ ಚಿಲುಮೆಗಳಾಗಿದ್ದವು.

ಮಿಸ್ಟರ್ ಆಚಾರಿ ವಿಸ್ಮಯದಿಂದ ನಾಲ್ಕೂ ದಿಕ್ಕುಗಳನ್ನು ನೋಡಿದರು. ಬಂಧುಜನಗಳನ್ನೂ, ಸ್ನೇಹಿತರನ್ನೂ ಅವರು ಗುರುತು ಹಿಡಿದರು. ಅವರು ತಮ್ಮ ನೋಟವನ್ನು ಅವರೆಲ್ಲರಿಂದ ಬೇರೆ ಕಡೆಗೆ ತಿರುಗಿಸಿದರು. ಅವರಿಗೆ ಏನೇನೋ

ಮಾತನಾಡಲು ಆಸೆಯಾಗುತ್ತಿತ್ತು. ತುಟಿಗಳು ಕಂಪಿಸಿದವು. ವಕ್ರವಾದವು. ಟ್ರೆಕಿಯೋಸ್ಟಮಿ ಟ್ಯೂಬ್ ಮೂಲಕ ಅವರಿಗೆ ವಾಂತಿಯಾಯಿತು. ಬದಿಯಲ್ಲಿದ್ದ ಕಿಟಕಿಯ ಗಾಜಿನ ಮೂಲಕ ಅವರು ಹೊರಕ್ಕೆ ನೋಡಿದರು. ಚಳಿಗಾಲದ ಸೂರ್ಯನನ್ನೂ, ಎಲೆಗಳು ಉದುರಿಹೋದ ಆಕಾಶದತ್ತ ಕೈಗಳನ್ನು ಚಾಚಿ ನಿಂತಿರುವ ಮರಗಳನ್ನೂ ಅವರು ಕಂಡರು. ಆ ಮರದ ಕೊಂಬೆಯಲ್ಲಿ ಒಂದು ಗಿಣಿಯನ್ನು ನೋಡಲು ಅವರು ಆಸೆಪಟ್ಟರು.

ಅನಂತರ ಅವರು ಕಣ್ಣು ಮುಚ್ಚಿದರು.

ಆಗಲೇ ಅವನು ಒಳ ಪ್ರವೇಶಿಸಿದ್ದು.

ಅವನನ್ನು ಯಾರೂ ನೋಡಲಿಲ್ಲ.

ಆದರೆ ಅವನು ಎಲ್ಲರನ್ನೂ ನೋಡಿದನು.

ಕಾರಿಡಾರ್ ಮೂಲಕ ಅವನು ಅತ್ತಿಂದಿತ್ತ ನಡೆದನು. ನಿಸ್ಸಹಾಯಕರೂ, ದೀನರೂ ಆದ ರೋಗಿಗಳನ್ನೇ ತನ್ನ ಲಕ್ಷ್ಯವಾಗಿಟ್ಟುಕೊಂಡು ಅವನು ನಡೆದನು. ವೈದ್ಯರು ಎದುರಾಗಿ ಬರುವಾಗ ಅವನು ಅವರಿಗೆ ದಾರಿಬಿಟ್ಟು ಪಕ್ಕಕ್ಕೆ ಸರಿದನು. ಅವರ ಕಾಲಸಪ್ಪಳ ದೂರ ದೂರವಾಗಿ ಹೋದಾಗ ಅವನು ದಾರಿಗಿಳಿದು ಮತ್ತೆ ನಡೆದನು.

ಇಂದೇನಾದರೂ ಮಾಡಬೇಕು. ಯಾರೂ ಪರೀಕ್ಷಿಸದ ಒಂದು ಕೆಲಸ ತಾನಿಂದು ಮಾಡಬೇಕು-ಅವನೆಂದುಕೊಂಡನು.

ಅವನು ಅಲ್ಲಲ್ಲಿ ಅಡಗಿಕೊಳ್ಳುತ್ತಾ ಮೆಡಿಕಲ್ ವಾರ್ಡಿನೊಳಗೆ ಹೊಕ್ಕನು. ಡ್ಯೂಟಿ ರೂಮ್‌ನಲ್ಲಿ ಸಿಸ್ಟರ್ ಇಂಜೆಕ್ಷನ್ ಟ್ಯೂಬ್ ಸಿದ್ಧ ಮಾಡಿಕೊಳ್ಳುತ್ತಿದ್ದಳು. ಅವನು ವ್ಯಸನದಿಂದಲೇ ಟೇಬಲ್‌ನ ಕೆಳಗಿನಿಂದ ಅಂಬೆಗಾಲಿಟ್ಟುಕೊಂಡು ಬಂದು ಮೆಲ್ಲನೆ ಮೇಲ್ಭಾಗಕ್ಕೆ ಹತ್ತಿ ಪೆನ್ಸಿಲಿನ್ ಇಂಜೆಕ್ಷನ್‌ನ ಒಂದು ಸೀಸೆಯೊಳಕ್ಕೆ ನುಸುಳಿದನು. ಇನ್ನೂ ಎಲ್ಲಾ ಭದ್ರವೇ.

ಸಿಸ್ಟರ್ ಇಂಜೆಕ್ಷನ್‌ನೊಂದಿಗೆ ಆರನೆಯ ನಂಬರ್ ಮಂಚದ ಬಳಿ ಬಂದಳು. ಆ ರೋಗಿಯನ್ನು ನ್ಯುಮೋನಿಯಾ ಬಾಧಿಸಿತ್ತು. ಅವನ ರೋಗ ಬಹಳಷ್ಟು ಸುಧಾರಿಸಿತ್ತು. ಒಂಭತ್ತು ಇಂಜೆಕ್ಷನ್‌ಗಳನ್ನು ಅವನಿಗೆ ಕೊಟ್ಟಾಗಿತ್ತು.

ಹತ್ತನೆಯ ಇಂಜೆಕ್ಷನ್ ಅನ್ನು ಆ ರೋಗಿಗೆ ನರ್ಸ್ ಕೊಟ್ಟಳು. ಇದ್ದಕ್ಕಿದ್ದಂತೆ ರೋಗಿಗೆ ಜ್ಞಾನ ತಪ್ಪಿತು. ಅವನ ಕಣ್ಣಾಲಿಗಳು ಮೇಲಕ್ಕೆದ್ದವು. ಮುಖವು ವಿವರ್ಣವಾಯಿತು. ಶರೀರದಲ್ಲಿನ ರೋಮಕೂಪಗಳು ಮೇಲಕ್ಕೆದ್ದವು. ಶರೀರವು ಕೆಂಪಗೆ ಊದಿಕೊಂಡಿತು. ಥಟ್ಟನೆ ಅವನ ಗಂಟಲಿನಿಂದ ನರಳುವಿಕೆ ಹೊರ ಹೊಮ್ಮಿತು. ಉಸಿರು ಮಂದಗತಿಯಲ್ಲಾಗಿ ಬದಲಾಯಿತು.

"ಪೆನ್‌ಸಿಲಿನ್ ರಿಯಾಕ್ಷನ್. ಡಾಕ್ಟರ್ ಓಡಿ ಬನ್ನಿ" ಸಿಸ್ಟರ್ ಜೋರಾಗಿ ಕೂಗಿ ಹೇಳಿದಳು.

ಹೌಸ್ ಸರ್ಜನ್‌ನೂ ರೆಸಿಡೆಂಟೂ ಓಡಿಬಂದರು.

ತುರ್ತು ಶುಶ್ರೂಷೆಗೆ ಬೇಕಾದ ಸಿದ್ಧತೆಗಳು ಒಂದು ನಿಮಿಷದಲ್ಲಿ ನಡೆದವು. ವಿಷ ಹಾರಿ ಮದ್ದುಗಳು, ಆಕ್ಸಿಜನ್, ರೋಗಿಯ ದೇಹದೊಳಕ್ಕೆ ಪ್ರವೇಶಿಸಿದವು. ಒಂದು

ಗಂಟೆಯ ಕಾಲ ನಡೆಸಿದ ಅವಿರತ ಪ್ರಯತ್ನಗಳಿಂದಾಗಿ ರೋಗಿ ಬಚಾವ್ ಆದನು.

ನಿರಾಶನಾದ ಅವನು ಮೆಲ್ಲಗೆ ಹೊರಕ್ಕಿಳಿದನು.

ಸಾಯಂಕಾಲದ ಸಮಯವಾಗಿತ್ತು. ದೀಪಗಳು ಪ್ರಕಾಶಿಸುತ್ತಿದ್ದವು.

ಮಿಸ್ಟರ್ ಆಚಾರಿ ಮಲಗಿದ್ದರೂ ಅವರಿಗೆ ಎಚ್ಚರವಿದ್ದೇ ಇತ್ತು. ದೀಪಗಳು ಹೊತ್ತಿಕೊಂಡಾಗ ಅವರೊಳಗೆ ಸಣ್ಣ ಸಂದೇಹವೆದ್ದಿತು. ದೀಪ ಎರಡೆರಡಾಗಿ ಕಾಣುತ್ತಿದೆಯೇ? ಅವರ ಕಣ್ಣುಗಳಲ್ಲಿನ ಭಾವನೆಯನ್ನು ಗೊತ್ತುಹಚ್ಚಿದ ರಾಣಿಯಮ್ಮ ಅವರ ಹತ್ತಿರ ಬಂದರು. ಗೋಡೆಯ ಮೇಲೆ ಹರಡಿದ ರಾಣಿಯಮ್ಮನ ನೆರಳು ಅವರಿಗೆ ತುಂಡು ತುಂಡಾಗಿ ಕಾಣುತ್ತಿತ್ತು. ಆಚಾರಿಯ ಹೃದಯವು ಕರಗಿ ನೀರಾಯಿತು. ಪ್ರಾಣವು ವಿಲವಿಲನೆ ಒದ್ದಾಡತೊಡಗಿತು. ಆಚಾರಿಯವರ ತುಟಿಗಳಲ್ಲಿ ಮಂತ್ರದಂತೆ ಒಂದು ವಾಕ್ಯವು ಬಂದು ನಿಂತಿತು. "ರಾಣಿಯಮ್ಮ ನನ್ನನ್ನು ಹೂತುಬಿಡಬೇಡ."

ಆದರೆ ಅವರ ಧ್ವನಿಯು ಹೊರಬರಲೇ ಇಲ್ಲ. ಟ್ರೆಕ್ಕಿಯೋಸ್ಟಮಿ ಟ್ಯೂಬ್‌ನ ಮೂಲಕ ಸಣ್ಣ ಸಣ್ಣ ಗುಳ್ಳೆಗಳು ಪ್ರತ್ಯಕ್ಷವಾದವು. ನಿಮಿಷಾರ್ಧದಲ್ಲಿ ಅವು ಒಡೆದು ಹೋದವು.

ಆಚಾರಿಯವರ ಕಣ್ಣುಗಳು ಮತ್ತೊಮ್ಮೆ ಅರಳಿದವು. ಕಣ್ಣುಗಳಲ್ಲಿ ಘನವಾದ ಮಂಜು ಹರಡುತ್ತಿತ್ತು. ರಾಣಿಯಮ್ಮಳೊಂದಿಗೆ ಅವರು ವಿದಾಯ ಹೇಳುತ್ತಿದ್ದರು. 'ಹೋಗಿ ಬರುತ್ತೇನೆ. ಹೋಗಿ ಬರುತ್ತೇನೆ. ಹೋಗಿ ಬರುತ್ತೇನೆ.'

ಅವನು ವಿ.ಐ.ಪಿ. ರೂಮಿನಿಂದ ಹೊರಬಂದನು. ಅವನಿಗೆ ಸ್ವಲ್ಪವಾದರೂ ತೃಪ್ತಿಯಾಗಿರಲಿಲ್ಲ. ಒಂದು ಶವವನ್ನು ಕೊಲ್ಲುವುದರಿಂದೇನು ಪ್ರಯೋಜನ? ಕ್ರಿಯಾತ್ಮಕವಾದ ಒಂದು ಚರಮಗಾನಕ್ಕಾಗಿ ಅವನು ಕಿವಿ ನಿಮಿರಿಸಿಕೊಂಡು ನಿಂತನು. ಅಗೋ, ಅಲ್ಲಿ ಬಹುದೂರದಿಂದ ಆ ಹಾಡು ಹರಿದು ಬರುತ್ತಿದೆ:

ಮೃತ್ಯುವನ್ನು ಕಣ್ಣಾರೆ ಕಂಡೆನು ನಿನ್ನೆ; ಏನನ್ನೋ ಹುಡುಕಿ
ಆತುರ ಪಡುವ ಕಣ್ಣುಳ್ಳವರಾಗಿ, ಕಣ್ಣಿನಲ್ಲಿ ಕತ್ತಲೆ ತುಂಬಿಕೊಂಡು
ಎಂಭತ್ತು ವರ್ಷಗಳ ಹಾಳು ಇಬ್ಬನಿಯಿಂದ ಮರಗಟ್ಟಿ
ತಳ್ಳಿದ ಒಂದಸ್ಥಿಪಂಜರದ ದೇಹವುಳ್ಳವರಾಗಿ, ಭಯದಿಂದ
ಮುತ್ತಜ್ಜಿ ನರಳುತ್ತಾ ಮಲಗಿರುವ ಆ
ಮಂಚದ ಬಳಿ ನಾ ಕುಳಿತು ನಿದ್ರಿಸದೇ ಇರಲು,
ಅರ್ಧರಾತ್ರಿಯಲ್ಲಿದರ ಘಂಟಾಶಬ್ದವು ಜಲ ಮೇಲ್ಮೈ
ಯಲ್ಲೆಲ್ಲೋ ಬೀಳುವ ಬಂಡೆಚೂರಿನಂತೆ ಭಯ
ದಲೆಗಳು ಬೀಸಿಸುತ್ತ ಅಡಗದೆ ಯಾವುದೋ ದೂರ
ತೀರದಲ್ಲಿ ಮುಟ್ಟಿ ಮರಳಿ ನನ್ನಲ್ಲಿಗೆ ಬಂದಪ್ಪಳಿಸಿದಾಗ,
ಪ್ರಾಣವು ರೆಕ್ಕೆ ಬಡಿಯಲು, ನಿಶ್ಶಕ್ತ ಕೈಯನ್ನು ಚಾಚಿ
ಶಕ್ತವಾದ ನನ್ನ ಬಲಗೈಯನ್ನು ಭದ್ರವಾಗಿ ಹಿಡಿದು
ಅತ್ಯಗಾಧಾಕ್ಕೆ ಕಾಣದೆ ಅದು ಜಾರುವಾಗ
'ಏನು ಮಾಡಲಿ ನಾನು' ಎಂದು ದುಃಖತಪ್ತನಾಲಿಗೆಯಿಂದ

ಪಾಪ, ನನ್ನ ಯೌವನದೊಂದಿಗೆ ಜೊತೆ ಸೇರಿಕೊಳ್ಳಲು ಬೇಡಿದರು.
(ಏನು ಮಾಡಲು ಸಾಧ್ಯ ನನಗೆ ಪ್ರಯಾಣಿಕರೇ,
ನಿನ್ನ ದಾರಿ ಸುಗಮವಾಗಿ ಕಳೆಯಲು ಪ್ರಾರ್ಥಿಸುವುದಲ್ಲದೆ ?)
ಸಂಶಯದಿಂದಲ್ಲವೇ ನಾನೆಂದದ್ದು 'ಜಪಿಸುವರಾಗಿ
ದೇವರನಾಮದ ದುಃಖವೆಲ್ಲಾ ತಾನೇ ಸರಿಯುವುದು.'
ಕದಡಿ ಹರಿಯುವ ಜಲಪಾತದಲ್ಲಿ ಒಣಹುಲ್ಲು
ಜೋರನ್ನೆಸೆದು ಬಿಟ್ಟ ನಾನು ಮೂಕನಾಗಿರಲು
ಘನ ಹಿಮದಂತೆ ರಾತ್ರಿಯಲ್ಲಿ ಗುಪ್ತವಾದ ಗಹನತೆ
ಓಡಿ ಬರುತ್ತದೆ, ಕಣ್ಣಿನಲ್ಲಿ ಭಯವು ತಾಂಡವವಾಡುತ್ತದೆ.
ಮೆಲ್ಲ ಮೆಲ್ಲನೆ ಮತ್ತಾವುದೋ ಲೋಕದಲ್ಲಿನ
ತಂಪು ಅಂಗೈಯಲ್ಲಂತಾದಾಗ ಕೈ ಭಾರವಾಗಿ
ನಡುಗಲು, ತುಟಿಗಳಲ್ಲಿ ರಾಮನಾಮ ಜಪಿಸಲು ಆಕೆ
ಪ್ರಯತ್ನಿಸುವಾಗ ಥಟ್ಟನೆ ನಾನು ಕಂಡೆ-ನಾನು ಏಕಾಕಿಯಲ್ಲ
ಮೃತ್ಯುವನ್ನು ಕಣ್ಣಾರೆ ಕಂಡೆ ನಿನ್ನೆ, ಮುಖ ತಗ್ಗಿಸಿ
ಕನ್ಯೆಯೋರ್ವಳು ಕುಳಿತಿರುವಳು ಶಿರಸ್ಸಿನಲ್ಲಿ
ಕೆಂಪುಸೀರೆ ಉಟ್ಟು, ಕೆಂಪು ತಲೆಗೂದಲನ್ನು ಗಾಳಿಯಲ್ಲಿ ಚಲಿಸುತ್ತಾ
ಸಂಕಟದಿಂದಿರಬೇಕು ಮುಖತಗ್ಗಿಸಿ ಕುಳಿತಿರುವಳಲ್ಲ.
ಯಾರು ನೀ ? ಒಣಗಿದ ನನ್ನ ತುಟಿಯಿಂದಲ್ಲ, ಆ ಭಯ
ರೋದನವು, ಅದು ನನಾತ್ಮದೊಳಗಿಂದಲ್ಲವೇ ಉಕ್ಕಿದ್ದು,
ಕೇಳಲಿಲ್ಲವೆಂದೇ ? ಕೇಳಲಾಗುವುದಿಲ್ಲವೆಂದೇ ? ಕೈ
ಚಾಚಿ ನಾನು ಹುಡುಕಾಡಿಯೂ ಕಾಣಲಿಲ್ಲ! ಕಾಣುವುದಿಲ್ಲವೆಂದೇ ?
ಮತ್ತ ? ಹಾ ಅತಿಭಾರವಾದ ಕಪ್ಪು ಪರದೆ-
ಎಂಬಂತೆ ಕತ್ತಲೆಯುಂಟಾಗಿ, ಸುತ್ತಲೂ ದುಃಖವಾವರಿಸಿರಲು
ಸ್ವಲ್ಪವಾಗಿ ಮುಖವೊಮ್ಮೆ ಮೇಲೆದ್ದಿತು. ಕಂಡೆ ನಾನು ಆಹಾ!
ದೃಷ್ಟಿ ಶೂನ್ಯವದು ಸ್ಥಿರ ತಿಳಿಕೆಂಪು ನಯನಗಳು!
ಚಕಿತನಾಗುವೆ, ಗುರುತಿಸುವೆ ನಾನು. ಇವಳಲ್ಲವೇ
ಸೃಷ್ಟಿಕರ್ತನ ಪ್ರಿಯ ಮಾನಸಪುತ್ರಿ!
ಯಾರ ಮಡಿಲಲ್ಲಿ ತಾಯಿಯ ಎದೆಯ ಮೇಲೆಂಬಂತೆ
ಸೇರುವಳು; ನೋವಿಲ್ಲದೆ ಒರಗಿ ನಿದ್ರಿಸುವಳು
ಯಾರ ತಂಪಿನಿಂದ ತನ್ನ ಕೈಗಳಲ್ಲಿ ಆರ್ದ್ರತೆಯುಂಟಾಗಿ
ಗುಣವಾಗುವುದು ವೇದನೆಯು, ಮಹಾರೋಗವು, ಅಪಮಾನ
ಭೀತಿಯೂ ಪ್ರಣಯವ್ಯಾಧಿಯೂ ಮನುಷ್ಯನಾತ್ಮದ
ನೂರು ನೂರು ಸಂತೃಪ್ತ ದಾಹಗಳ ಖಿಲವೂ.
(ಈ ಕನ್ಯ ಅಳುತ್ತಾ ಬಂದಳು ಕಾಲದ
ಬೆಳಗಿನಲ್ಲಿ ಪಿತೃ ಸನ್ನಿಧಿಗೆ.)

"ಆಗದೆನಗೆ, ಕೊಟ್ಟ ಕೆಲಸ ಮಾಡಲು ಆಗದು"
ಎಂದು ಕಣ್ಣೀರಿಡುತ್ತಾ ಕೈ ಜೋಡಿಸಿ ಅಪೇಕ್ಷಿಸಿದಳು
"ತಂದೆಯ ಮಡಿಲಿನಲ್ಲಿನ ಮಗುವನ್ನು, ಗಂಡನ
ಕೈಗಳಿಂದ ಪ್ರಾಣತುಲ್ಯಳಾದ ಮಧುವನ್ನು, ತಾಯಿಯ
ಎದೆಯ ಮೇಲಿಂದ ಮಗುವನ್ನೂ, ಪತಿಯ
ಆಲಿಂಗನದಿಂದ ಪತಿಯನ್ನು,
ಓಡಿದೆಳೆದು ನಾನು ಅವರನ್ನು ಬೇರೆ ಮಾಡಲು, ಕಾಣಲಸಾಧ್ಯವು.
ನರಳಿ ನಿಶ್ಯಕ್ತರಾಗಿ ಬೀಳುವಾ ದುಃಖಿಗಳನ್ನೂ!"
'ಹೋಗು' ತಂದೆ ಹೇಳಿದನು. "ಮಾಡುವಂತಹವಳಾಗು ನಿನಗಾಗಿ
ದೇವನಿರ್ಮಿತವಾದೊಂದೀ ಮಹಾಯತ್ನವನು
ಕೊಡುವೆನು ನಾ ವರವನು, ಕಾಣುವುದು ಬೇಡ ನೀನು ಬಂಧಗಳ
ಕಣ್ಣೀರನ್ನು ನಿನ್ನ ನೇತ್ರಗಳನ್ನು ಮೇಲೆ ಕಾಣುವುದಿಲ್ಲೊಂದನ್ನು"
ಹಾಗೆ ನಿತ್ಯಾಂಧಳಾಗಿ ಮೃತ್ಯು ಹೋದಳು ಮತ್ತೆ
ಮಣ್ಣಿಗೆ, ಪ್ರಾಣದ ಕುಯ್ಲು ಗದ್ದೆಗೆ
ಮತ್ತೆಯೂ ಒಂದು ದಿನ, ಪಿತೃಸನ್ನಿಧಿಗೆ ಕನ್ಯೆ ತಂದೆಯನು ಹುಡುಕುತ್ತಾ
ಬಂದಳು ಕಣ್ಣೀರಿನೊಂದಿಗೆ.
"ಇನ್ನೂ ಏಕೆ ಕಣ್ಣೀರು ಮಗಳೇ?" "ಆಗದು, ನಾನೊಮ್ಮೆ
ತಬ್ಬಿಕೊಂಡಾಗ ಏಳುವುದು ಆರ್ತನಾದಗಳು, ಬಿಕ್ಕಿ ಬಿಕ್ಕಿ
ಅಳುವುದನ್ನು ಕೇಳುವುದು ದಾರುಣವೆನಿಸುತ್ತೆ, ಸತ್ತವರು ತನ್ನ
ಹೆಸರನ್ನೂ ಕೇಳಿ ಕೂಗಲು, ಬಹು ವ್ಯಸನವು ಆ ಕೂಗು ಕೇಳಲು"
ಕರುಣಾತರಂಗದಿಂದ ಕೂಡುವ ಕಣ್ಣಿನೊಂದಿಗೆ
ಹೇಳಿದನಾ ಪಿತನು "ಕೇಳುವುದಿಲ್ಲ ನೀನಿನ್ನೊಂದು"
ಹಾಗೆ ಕಿವುಡಿಯಾಗಿ, ಅಂಧಳಾಗಿ ನಡೆದಳು. ಆ
ಕನ್ಯೆ ಮುಖ ತಗ್ಗಿಸಿ ಕೆಂಪು ತಲೆಗೂದಲನ್ನು ಗಾಳಿಯಲ್ಲಿ
ಚಲಿಸುತ್ತಾ ಕಣ್ಣೀರನ್ನೂ, ಅಳುವುದನ್ನು ಕಾಣುವುದಿಲ್ಲ, ಕೇಳುವುದಿಲ್ಲ ಅವಳು
ಒಂದು ನಿಶ್ಶಬ್ದವಾಗಿ ಕರೆದುಕೊಂಡು ಹೋಗುವಳು ದೂರಕ್ಕೆ.
ರೆಪ್ಪೆ ಹೊಡೆಯದೆ, ಹೃದಯ ಬಡಿತವನ್ನರಿಯದೆ-
ಅಲ್ಲಿ ನಾನೊಬ್ಬಳು ಶಿಲಾರೂಪದಂತೆ ಸ್ತಂಭಿತಳಾಗಿರಲು
ಭ್ರಾಂತವಾದ ಕಣ್ಣುಗಳಿಂದ ಕಂಡನೇನು? ಮುತ್ತಜ್ಜಿ ತನ್ನ
ಕ್ಷೀಣವಾದ ಹಣೆಯನ್ನು ಮೆಲ್ಲನೆ ಸವರಿ,
ಕಣ್ಣುಗಳನ್ನು ಸವರಿ ಮುಟ್ಟಿ, ಗಾಬರಿಗೊಂಡ ಎದೆಯಲ್ಲಿ
ತನ್ನ ಬಾಹುಬಂಧನದಿಂದ ಉಂಟಾದ ಬಿಸಿಯನ್ನು ತಣ್ಣಗಾಗಿಸಿ,
ಮೆಲ್ಲಮೆಲ್ಲನೆ ತೈಲದಲ್ಲಿದ್ದ ಉರಿದುಹೋದ ಕಪ್ಪು ಬತ್ತಿಯ
ನ್ನೆಳೆದು ಆರಿಸುವಂತೆ ದಯೆಯಿಂದ
ಶಾಂತವಾಗಿ, ಅವಳು ನಡುಗುತ್ತಿರುವ ಆ ಸಾಧುವಿನ

ಕ್ಷೀಣಗೊಂಡ ಕೈ ಹಿಡಿದು ತಿರುಗಿ ನಡೆದಳು.
ತಂದೆಯು ಸಮೀಪಕ್ಕಾಗಿರಬಹುದು. ಕಣ್ಣು ಕಾಣದೆ
ಹುಡುಕಾಡಿಕೊಂಡು ಕನ್ಯೆ ನಡೆಯುವಾಗ
ಆ ಕೈಯನ್ನು ಗ್ರಹಿಸಿ ಅಲ್ಪ ಸಂಭ್ರಾಂತಭಾವದಿಂದ
ಜೊತೆಗೆ ನನ್ನ ಮುತ್ತಜ್ಜಿಯೂ ನೆರಳಿನಂತೆ ದೂರವಾಗುವಳು.

ಅವನು ನಡೆಯತೊಡಗಿದನು. ನಡೆಯುವಾಗ ಭೂತಕಾಲದಲ್ಲಿನ ಪರ್ಪಾಡಿನಿಂದ ಅವಿಚ್ಛಿನ್ನವಾಗಿ ಸಂಭವಿಸಿದ ಸಾವನ್ನು ಅವನು ಮತ್ತೆ ಮತ್ತೆ ಜ್ಞಾಪಿಸಿಕೊಂಡನು. ಅಂತ್ಯವೂ ಆದಿಯೂ ಇಲ್ಲದ ಸಾವುಗಳು. ಸಾವನ್ನು ಪ್ರತ್ಯಕ್ಷವಾಗಿ ಯಾರೂ ಕಾಣುವುದಿಲ್ಲ. ತಾಯಿ ಸತ್ತಾಗ ಮಕ್ಕಳು ಅದರ ಗಂಭೀರತೆಯನ್ನು ತಿಳಿಯದೆ ನಗುವುದುಂಟು. ಬಹಳ ದಿನಗಳಿಂದ ರೋಗ ಬಂದು ಮಲಗಿರುವವರ ಅಂತ್ಯವು ಹತ್ತಿರ ಹತ್ತಿರ ಬರಲೆಂದು ಸ್ವಬಾಂಧವರು ಬಯಸುವುದೂ ಉಂಟು. ಅವನಿಗೆ ಎಲ್ಲವೂ ಅರ್ಥವಾಗಿದೆ. ರೋಗ ಬಂದು ನರಳುತ್ತಿರುವವರು ಬೋಟ್‌ನಲ್ಲಿ ಹತ್ತಿ ಗಂಗಾನದಿಯಲ್ಲಿ ವಿಹರಿಸುವುದನ್ನು ಅವನು ಕಂಡಿರುವುದುಂಟು. ಕೆಲವರು ಮತ್ತೆ ಮನೆಗೆ ಮರಳಿದುಂಟು: ಆದರೆ ಕೆಲವರು ಗಂಗಾತೀರದಲ್ಲೇ ಬಿದ್ದು ಅವನ ಇಂಗಿತಕ್ಕೆ ಶರಣಾಗುತ್ತಿದ್ದರು. ಆದರೆ ಅವರೊಂದಿಗೆ ಅವನು ಮಮತೆ ತೋರುತ್ತಿರಲಿಲ್ಲ. ಎದ್ದು ನಿಂತು ಹೋರಾಡುವ ಮನುಷ್ಯನಿಗೆ ಅವನು ಮರ್ಯಾದೆ ತೋರಿಸುತ್ತಿದ್ದನು. ಅವರ ಮೇಲೆ ಕೃಪಾಕಲೇ ಅವನು ಭಯಪಡುತ್ತಿದ್ದನು. ಯಾರಾದರೊಬ್ಬರು ತೀರಿಕೊಂಡರೆ 'ನಿಮ್ಮ ಸರ್ವಸ್ವವೂ ಸೂರೆಯಾಗಿ ಹೋಯಿತಲ್ಲಾ' ಎಂದು ಹೇಳಿ ಆಶ್ರಿತರನ್ನೂ ಬಂಧುಗಳನ್ನೂ ಕರೆದು ಹೇಳಿ ಅವರನ್ನು ಚಿಂತಾವ್ಯಾಕುಲರನ್ನಾಗಿ ಮಾಡುವನು. ರಾತ್ರಿಯಲ್ಲಿ ಸಮಯವಲ್ಲದ ಸಮಯದಲ್ಲಿ ಸಾವಿನ ಸುದ್ದಿಯನ್ನು ಕೇಳಿದಾಗ ಅವರೆಲ್ಲಾ ಆಘಾತಕ್ಕೊಳಗಾಗಿ ಬಿಡುವುದನ್ನು ಅವನು ಕಂಡಿದ್ದಾನೆ. ಆಗೆಲ್ಲಾ ಅವನಿಗೆ ಬಲು ಆನಂದವಾಗುತ್ತಿತ್ತು. ದೀಪದ ಮಂದ ಪ್ರಕಾಶದಲ್ಲಿ ಸಾವಿನ ಸುದ್ದಿಯನ್ನು ಕೇಳಿ ಚಕಿತರಾಗಿ ಏಳುವವರನ್ನು ನೋಡಿ ಅವನು ಸಂತೋಷಪಡುವುದುಂಟು. ಮರಣವಾರ್ತೆಯ ತೀವ್ರತೆಯನ್ನು ಅರ್ಥ ಮಾಡಿಕೊಳ್ಳದ ಮಕ್ಕಳ ನಿಷ್ಕಳಂಕವಾದ ಮನಸ್ಸಿನೆದುರಿಗೆ ಅವನು ನರ ಮಸ್ತಕನಾಗಿ ನಿಂತಿದ್ದುಂಟು. ಚಿಕ್ಕ ಮಕ್ಕಳಿಗೆ ತಾಯಿಯ ಸಾವಿನ ಸುದ್ದಿ ಕೇಳಿದರೆ ಏನೆನ್ನಿಸುತ್ತದೆ ? ಏನೂ ಅನ್ನಿಸುವುದಿಲ್ಲ. ಸ್ವಲ್ಪ ಸಂಕಟವೇನೋ ಆಗುತ್ತೆ. ಆದರೆ ಮೃತ್ಯುವಿನ ರೂಪವು ಸುಖನಿದ್ರೆಯಂತೆ ಪ್ರಶಾಂತವೂ ಮನೋಹರವೂ ಆಗಿರುತ್ತದೆ. ಆ ಸುಂದರ ಕಲ್ಪನೆಯು ಅವನನ್ನು ಉತ್ತೇಜಿಸುತ್ತದೆ. ಜೀವನದ ಆರಂಭವೂ ಜೀವನದ ಅಂತ್ಯವೂ-ಇವೆರಡರಲ್ಲಿರುವ ಭೇದದೃಷ್ಟಿಯಲ್ಲಿ ಸ್ವಲ್ಪವೂ ಅಚ್ಚೊತ್ತುವುದಿಲ್ಲ. ಮೃತದೇಹವನ್ನು ತಲೆಬಾಗಿಲಿನಿಂದಾಚೆ ತೆಗೆದುಕೊಂಡು ಹೋದಾಗ, ಬಂಧುಗಳು ಅದರ ಹಿಂದೆ ಅನುಸರಿಸಿ ಶ್ಮಶಾನಕ್ಕೆ ಹೋದಾಗ, ಒಂದು ಬಿರುಗಾಳಿಯಂತೆ ದುಃಖವು ಬಂಧುಬಾಂಧವರನ್ನು ಆಕ್ರಮಿಸುವ ಆ ನೋಟವು ಅವನಲ್ಲಿ ವ್ಯಾಕುಲತೆಯನ್ನುಂಟು ಮಾಡಿದ್ದುದುಂಟು.

ಶ್ಮಶಾನಕ್ಕೆ ಹೋದವರು ಮತ್ತೆಯೂ ಮನೆಗೆ ಬಂದ ಮೇಲೆ ಗೃಹಕೃತ್ಯಗಳನ್ನು

ಮಾಡಲಾಗುವುದಿಲ್ಲವೆಂಬುದನ್ನು ನೆನೆಯುವಾಗ ಬಂಧುಗಳು ಮೊದಲಿಗಿಂತ ಹೆಚ್ಚಾಗಿ ದುಃಖಿತರಾಗುತ್ತಾರೆ. ಇದು ಕಷ್ಟವೇ. ಆದರೆ ಒಟ್ಟಿನಲ್ಲಿ ಚಿಕ್ಕಮಕ್ಕಳು ಭಾಗ್ಯವಂತರು. ಸಾವು ಎಂಬುದು ಅವರ ಮನಸ್ಸಿನಲ್ಲಿ ಯಾವುದೇ ರೀತಿ ಗಾಢವಾಗಿ ನಿಲ್ಲುವುದಿಲ್ಲ. ಆದ್ದರಿಂದ ಆ ವಿಷಯದಲ್ಲಿ ಅವನು ಸಂತುಷ್ಟನು. ಶೈಶವ ಜೀವನದ ಲಾಘವವು ಕಠಿಣವಾದ ಸಾವಿನ ದುಃಖವನ್ನು ಅನಾಯಾಸವಾಗಿ ಎದುರಿಸುತ್ತದೆ. ಆದರೆ ವಯಸ್ಸಾಗುವಾಗ ದುಃಖವನ್ನು ಎದುರಿಸುವುದು ಅಷ್ಟು ಸುಲಭವಲ್ಲ. ಅನಿರೀಕ್ಷಿತವಾಗಿ ಸಾವು ಸಂಭವಿಸಿದಾಗ, ಅದು ಪ್ರತ್ಯಕ್ಷ ಜೀವನದ ಒಂದು ಭಾಗದಲ್ಲಿ ಇದ್ದಕ್ಕಿದ್ದಂತೆ ಒಂದು ಬಿರುಕನ್ನು ಸೃಷ್ಟಿಸಲು, ಮನುಷ್ಯನು ಬಹು ದಿಗ್ಭ್ರಾಂತ ನಾಗುತ್ತಾನೆ. ಆಗ ಅವನು ಯಾರಿಗೂ ಕೇಳಿಸದಂತೆ ಚಪ್ಪಾಳೆ ತಟ್ಟಿ ಜೋರಾಗಿ ನಕ್ಕು ತಪ್ಪಿಸಿಕೊಳ್ಳುತ್ತಾನೆ. ದೇಹ, ಪ್ರಾಣ, ಹೃದಯ, ಮನಸ್ಸು ಎಲ್ಲಾ ಸ್ವಾಧೀನ ದಲ್ಲಿಟ್ಟುಕೊಂಡಿರುವ ಮನುಷ್ಯನು, ತಾನು ಸ್ಥಿರವೆಂದು ಭಾವಿಸುವ ಮನುಷ್ಯನು, ಇದ್ದಕ್ಕಿದ್ದಂತೆ ಒಂದು ಸ್ವಪ್ನದಲ್ಲಿ ಎಂಬಂತೆ ನಂದಿ ಹೋಗುತ್ತಾನೆ. ನಾಮಾವಶೇಷ ವಾಗಿ ಅಳಿದಿದ್ದನ್ನೂ, ನಷ್ಟವಾಗಿ ಹೋಗಿದ್ದನ್ನೂ ಒಂದಕ್ಕೊಂದು ಹೊಂದಿಸಿ ನೋಡಲು ಅವನು ಸತತವಾಗಿ ಪ್ರಯತ್ನಿಸುವುದುಂಟು. ಜೀವನದಲ್ಲಿನ ದ್ವಾರಗಳ ಮೂಲಕ ಅವನು ಕಾಣಲು ಸಾಧ್ಯವಾಗುವ ಅಗಾಧವಾದ ಅಂಧಕಾರವು ಅವನನ್ನು ರಾತ್ರಿ ಹಗಲು ಆಕರ್ಷಿಸುತ್ತಿತ್ತು. ಸ್ಥಿರವಾಗಿಲ್ಲದೆ ಅತ್ತಿಂದಿತ್ತ ಚಲಿಸುತ್ತಾ ಅವನು ಅಲ್ಲಿಯೇ ಹೋಗಿ ನಿಂತು ಆ ಅಂಧಕಾರದತ್ತ ನೋಡುತ್ತ ನಷ್ಟವಾದುದರ ಸ್ಥಾನದಲ್ಲಿ ಏನಿರುವುದೆಂದು ಚಿಂತಿಸುವುದನ್ನು ಅಭ್ಯಾಸಮಾಡಿಕೊಂಡನು. ಶೂನ್ಯತೆಯನ್ನು ಯಾವುದೇ ವಿಧದಲ್ಲೂ ಮನಸಾ ನಂಬುವುದು ಸಾಧ್ಯವಿಲ್ಲ. ಯಾವುದು ಇಲ್ಲವೋ ಅದು ಮಿಥ್ಯೆಯು. ಮಿಥ್ಯೆಯಾಗಿರುವುದು ಇಲ್ಲದ್ದೂ ಆಗಿರುತ್ತದೆ. ಏನೂ ಇಲ್ಲದ ದಿಕ್ಕಿನಲ್ಲಿ ಏನನ್ನಾದರೂ ಕಾಣಲಿರುವ ಯತ್ನವನ್ನು ಅವನು ನಡೆಸುತ್ತಲೇ ಇರುತ್ತಾನೆ. ಆ ಪ್ರಯತ್ನ ಮುಂದುವರೆಯುತ್ತಲೇ ಇರುತ್ತದೆ. ಕತ್ತಲೆಯಲ್ಲಿ ನೆಟ್ಟ ಒಂದು ಗಿಡವು ಕತ್ತಲೆಯನ್ನು ಭೇದಿಸಿ ಹೇಗಾದರೂ ಬೆಳಕಿಗೆ ತಲೆ ಎತ್ತಿಹಿಡಿಯಲು ಯತ್ನಿಸುವಂತೆ ಅದು ಸತತವಾಗಿ ನಡೆಯುತ್ತಿರುತ್ತದೆ. ಸಾವೆನ್ನುವುದೂ ಹೀಗೇ ನಡೆಯುತ್ತದೆ. ಬಾಳಿನಲ್ಲಿ ಚಲನವೇ ಇಲ್ಲದೆ ಇರುವ ದೃಢವಾಗಿರುವಂತಹುದು ಯಾವುದೂ ಇಲ್ಲವೆಂಬ ನಗ್ನಸತ್ಯವನ್ನು ಮನುಷ್ಯನು ಅರ್ಥಮಾಡಿಕೊಳ್ಳುವುದಿಲ್ಲ ಎಂಬ ಪರಮ ಸತ್ಯವು ಅವನನ್ನು ಉತ್ಕಂಠನನ್ನಾಗಿ ಮಾಡುತ್ತದೆ. ವಿಶ್ವವ್ಯಾಪಿಯೂ ಅತಿವಿಪುಲವೂ ಆದ ಕುಟುಂಬಭಾರವನ್ನು ತಾನೇ ನಿಯಂತ್ರಿಸಬಲ್ಲೆನೆಂದು ಮನುಷ್ಯನು ಸುಮ್ಮನೆ ಅಂದುಕೊಳ್ಳುತ್ತಾನೆ. ಆದುದರಿಂದಲೇ ಅವನು ಆಗಾಗ ಮನುಷ್ಯರ ಮೇಲೆ ಬೀಳುವುದೂ ಅವರನ್ನು ಶಾಶ್ವತವಾದ ಅಂಧಕಾರಕ್ಕೆ ಎಳೆದು ಹಾಕುವುದು. ವೈರಾಗ್ಯದೊಂದಿಗೆ ಪ್ರಕೃತಿಯ ಸೌಂದರ್ಯವನ್ನು ಮನುಷ್ಯನು ಮೊದಲಿಗಿಂತ ಹೆಚ್ಚಾಗಿ ಆಸ್ವಾದಿಸುವನು. ಜೀವನದೊಂದಿಗಿರುವ ಮನುಷ್ಯನ ಅಂಥ ಆಸಕ್ತಿಯನ್ನು ವರ್ಧಿಸುವಂತೆ ಮಾಡಲು ಅವನು ಮನುಷ್ಯನಿಗೆ ತಡೆಮಾಡುತ್ತಾನೆ. ಲೋಕವನ್ನು ಸಂಪೂರ್ಣವಾಗಿಯೂ, ಸುಂದರವಾಗಿಯೂ ಕಾಣಲು ಎಷ್ಟು ಕೆಟ್ಟತನವು ಆವಶ್ಯವೋ ಅಷ್ಟು ಕೆಟ್ಟತನವನ್ನು ಮರಣವು ಉಂಟು ಮಾಡುವುದಿಲ್ಲವೆಂಬ

ವಾಸ್ತವವು ಮನುಷ್ಯನಿಗೆ ತಿಳಿಯುದು. ಅವನಿಗೆ ಸ್ವಲ್ಪ ಹೊತ್ತು ಅಳಬೇಕೆನಿಸಿತು. ಮರಣದ ದುಃಖಕ್ಕಿಂತ ಸಂಸಾರದ ದುಃಖವು ಬಹಳ ಹೆಚ್ಚೆಂದು ಮನುಷ್ಯನು ಅಂದುಕೊಳ್ಳುವುದಿಲ್ಲ. ಇವೆಲ್ಲವನ್ನೂ ಸಾರಿ ಸಾರಿ ಹೇಳಲು ಅವನು ಇಚ್ಛಿಸಿದನು.

ಅವನು ಮೆಡಿಕಲ್ ವಾರ್ಡನ್ನು ಪ್ರವೇಶಿಸಿದನು.

ಹೌಸ್ ಸರ್ಜನ್, ಸಿಸ್ಟರ್, ಆಯಾ ಎಲ್ಲರೂ ಸೇರಿ ಜಾನ್ ಬಲ್‌ದೇವ್ ಮಿರ್ಜಾನನ್ನು ಬೇರೊಂದು ಮಂಚಕ್ಕೆ ಸ್ಥಳಾಂತರ ಮಾಡುತ್ತಿದ್ದರು. ಎಷ್ಟೋ ವರ್ಷಗಳಿಂದ ತಮ್ಮನ್ನು ಬಾಧಿಸುತ್ತಿರುವ ಈ ಪೀಡೆ ಕಳೆದರೆ ಸಾಕೆಂದು ಅವರು ಇಚ್ಛಿಸುತ್ತಿರಬಹುದೇ ? ಏನೋ ? ಯಾರಿಗೆ ಗೊತ್ತು ? ಕೃತ್ಯ ನಿರ್ವಹಣೆಯಲ್ಲೂ, ಕರ್ತವ್ಯದಲ್ಲೂ, ಧರ್ಮದಲ್ಲೂ ನಂಬಿಕೆ ಇರುವ ಆಸ್ಪತ್ರೆಯ ಸಿಬ್ಬಂದಿಯವರು ಅವರ ಮನಸ್ಸಿನಲ್ಲೇನೇ ಇದ್ದರೂ ಕರ್ಮವು ದೊಡ್ಡದೆಂದು ನಂಬುತ್ತಾರೆ. ಆದ್ದರಿಂದ ಬಹು ಕಾಲದಿಂದ ಅವರೆಲ್ಲರೂ ಸೇರಿ ಜಾನ್ ಬಲ್‌ದೇವ್ ಮಿರ್ಜಾನ ಶುಶ್ರೂಷೆ ಮಾಡುತ್ತಿದ್ದಾರೆ.

ಬಲ್‌ದೇವ್ ಮಿರ್ಜಾ ಬಹು ಸುಸ್ತಾಗಿದ್ದನು. ಒಂದು ಸುವರ್ಣಾವಕಾಶವಿದು. ಅವನು ಮಿರ್ಜಾನ ಮಂಚದ ಬಳಿ ಬಂದು ನಿಂತನು. ಮಂಚದ ಆಚೆಕಡೆ, ತಲೆ ನೆರೆಯಲು ಆರಂಭಿಸಿದ್ದ ಆಯಾ ಒಂದು ಸ್ಟೂಲ್‌ನಲ್ಲಿ ಕುಳಿತಿದ್ದು ಬೈಬಲ್ ಓದಿ ಕೇಳಿಸುತ್ತಿದ್ದಳು. ಸುವಾರ್ತೆಗಳಲ್ಲಿನ ಭಕ್ತಿಪೂರಿತವಾದ ವಿಷಯಗಳನ್ನೂ ವಚನಗಳನ್ನೂ ಕೇಳಿ ಬಲ್‌ದೇವ್ ಮಿರ್ಜಾ ಬಲು ಸಂತೋಷ ಪಡುತ್ತಿದ್ದನು. ಮಿರ್ಜಾ ತನ್ನ ಶರೀರದ ನಿಶ್ಶಕ್ತಿಯನ್ನು ಭಕ್ತಿಮಾರ್ಗದ ಮೂಲಕ ನಿವಾರಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಾನೆ.

ಆಯಾ ಉದ್ವೇಗಭರಿತಳಾಗಿ ಓದುವುದರಲ್ಲಿ ಮಗ್ನಳಾಗಿ ತುಟಿಗಳಲ್ಲಿ ಶಬ್ದಗಳನ್ನು ಹೊರಡಿಸುತ್ತಿದ್ದಾಳೆ:

"ಅಯ್ಯೋ ! ಜನನಿಬಿಡವಾಗಿದ್ದ ನಗರ*
ಏಕಾಂತವಾಗಿ ಬಿಟ್ಟರೆ !
ಜನರಲ್ಲಿ ಅತಿ ಬೇಡಿಕೆಯಿದ್ದವಳು
ವಿಧವೆಯಂತಾದಳು !
ನಗರಗಳಿಗೆ ರಾಣಿಯಾಗಿದ್ದವಳು
ದಾಸಿಯಾದಳು !
ಅವಳು ರಾತ್ರಿಯಲ್ಲಿ ಬಿಕ್ಕಿ ಬಿಕ್ಕಿ ಅಳುವಳು.
ಅವಳ ಕೆನ್ನೆಗಳ ಮೇಲೆ ನೀರು !
ಸಮಾಧಾನ ಪಡಿಸಲು ಅವಳಿಗೆ ಆಪ್ತರು
ಯಾರೂ ಇಲ್ಲ.
ಅವಳ ಸಕಲ ಮಿತ್ರರೂ

*ಶ್ರೀಮತಿ ಸುಗತ ಕುಮಾರಿಯವರ 'ಮೃತ್ಯುವನ್ನು ಕಣ್ಣಾರೆ ಕಂಡನು' ಎಂಬ ಕವಿತೆ. ಅಂಧ, ಮೂಕ ಕನ್ಯೆಯೊಬ್ಬಳ ಕತೆ. ಮೂಲ ಬಂಗಾಳಿಯಿಂದೆಂದು ಆಕೆ ಹೇಳುತ್ತಾರೆ.

ಅವಳನ್ನು ವಂಚಿಸಿದರು.

ಅವರು ಶತ್ರುಗಳಾಗಿ ಬದಲಾದರು...."

ಅವನು ಒಂದು ನಿಮಿಷ ಸಂದೇಹಿಸುತ್ತಾ ನಿಂತನು.

ಅನಂತರ ಅವನು ಜಾನ್ ಬಲ್‌ದೇವ್ ಮಿರ್ಜಾನ ಕಣ್ಣುಗಳನ್ನು ನೋಡಿದನು. ಆ ಕಣ್ಣುಗಳಲ್ಲಿ ಪ್ರಕೃತಿ ಸೌಂದರ್ಯವನ್ನು ಮರೆಸಲೆತ್ನಿಸುವ ವೈರಾಗ್ಯವನ್ನು ಅವನು ಕಂಡನು.

ಆಗಿಲ್ಲ, ಸಮಯವಾಗಿಲ್ಲ.

ಮರಣ ಲೋಕದ ಬಾವುಟವನ್ನು ಕೈಯಲ್ಲಿ ಹಿಡಿದುಕೊಂಡು ಮುಖ್ಯ ದ್ವಾರದ ಮೇಲಿರುವ ಸುಷಿರದ ಮೂಲಕ ಅವನು ಹೊರಕ್ಕೆ ಹೋದನು.

ಮಾರನೆಯ ದಿನ ಜಾನ್ ಬಲ್‌ದೇವ್ ಮಿರ್ಜಾನ ಹಾಸಿಗೆಯಲ್ಲಿ ಬೆಳಗಿನ ಜಾವದ ಪ್ರಥಮ ಕಿರಣಗಳು ಮತ್ತೆ ಕಾಣಿಸಿಕೊಂಡವು.

# ಮೂವತ್ತೆಂಟು

ನರ್ಸ್ ಹಾಸ್ಟೆಲ್‌ನ ಗೇಟಿನ ಎದುರಿಗೆ ಒಂದು ರಿಕ್ಷಾ ಬಂದು ನಿಂತಿತು. ಕಪ್ಪು ಬುರ್ಖಾ ಧರಿಸಿದ್ದ ಸ್ತ್ರೀಯೊಬ್ಬಳು ಅದರಿಂದ ಇಳಿದಳು.

"ನಾನು ಮೇರಿಯನ್ನು ನೋಡಬೇಕು."

ಆ ಬುರ್ಖಾದೊಳಗಿಂದ ಬಂದ ಧ್ವನಿಯನ್ನು ಕೇಳಿದ ಗೇಟ್‌ಮೆನ್‌ಗೆ ಗಾಬರಿಯಾಯಿತು. ಎಲ್ಲೋ ಕೇಳಿದ್ದ ಬಹಳ ಪರಿಚಯವಿರುವಂತಹ ಧ್ವನಿಯಾಗಿತ್ತದು. ವಯಸ್ಸಾಗುತ್ತಾ ಬಂದಂತೆ ಅವನ ಕಿವಿಗ ಶ್ರವಣಶಕ್ತಿ ಕಡಿಮೆಯಾಗಿದ್ದರೂ, ಅದರಲ್ಲಿ ಆ ಧ್ವನಿಯು ಉದ್ಭವಸ್ಥಾನವೇನೂ ಒಣಗಿ ಹೋಗಿರಲಿಲ್ಲ. ಅವನು ಗಮನವಿಟ್ಟು ಕೇಳುತ್ತಿರುವಾಗ ಭೂತಕಾಲದ ಜೇಡರ ಬಲೆಯ ಎಳೆಗಳ ಮಧ್ಯೆ ಆ ಧ್ವನಿ ಮತ್ತೆಯೂ ಕೇಳಿಬಂತು.

"ಮೇರಿ ಇಲ್ಲಿದ್ದಾಳೆಯೇ ?

"ಇದ್ದಾರೆ. ಯಾರು ಬಂದಿರುವುದೆಂದು ಹೇಳಬೇಕು ?" ಗೇಟ್‌ಮೆನ್ ಕೇಳಿದನು. ಅವನ ಜ್ಞಾಪಕಶಕ್ತಿ ಅವನನ್ನು ತ್ವರಿತಗೊಳಿಸುತ್ತಿದ್ದವು.

"ಇಲ್ಲಿಗೆ ಕರೆದುಕೊಂಡು ಬನ್ನಿ."

"ಒಳಗೆ ಬಂದು ಕುಳಿತುಕೊಳ್ಳಿ. ವಿಸಿಟರ್ಸ್ ರೂಮ್ ಇದೆ" ಕ್ಷಮೆ ಯಾಚಿಸುವವನಂತೆ ಗೇಟ್ ಮೆನ್ ಹೇಳಿದನು.

"ಬೇಡ ನಾನಿಲ್ಲೇ ನಿಂತಿರುತ್ತೇನೆ. ಮೇರಿಯನ್ನು ನಾನು ಇಲ್ಲೇ ನೋಡುತ್ತೇನೆ."

ಬುರ್ಖಾ ಧರಿಸಿ ಕಂಕುಳಲ್ಲಿ ಒಂದು ಕಾಗದದ ಕಂತೆಯನ್ನಿಟ್ಟುಕೊಂಡು ನಿಂತಿರುವ ಆ ರೂಪವನ್ನು ನೋಡಿ ಮೇರಿ ಕೇಳಿದಳು.

"ಯಾರು ?"

"ಗೊತ್ತಾಗಲಿಲ್ಲವೇ ?"

ಮೇರಿಯ ಮನಸ್ಸಿನಲ್ಲಿ ಚರ್ಚ್‌ನ ಗಂಟೆ ಮೊಳಗಿತು. ಆಕಾಶದಿಂದ ಓಶಾನಾ* ಹಬ್ಬದ ಗಾನವು ಕೇಳಿ ಬಂದಿತು.

ಮೇರಿ ಕೇಳಿದಳು

"ಯಾರು, ಅಕ್ಕನೇನು ?"

"ಹೌದು ತಂಗಿ."

ಕುಞ್ಞಮ್ಮ ಬುರ್ಖಾವನ್ನೆತ್ತಿದಳು.

ಅವರಿಬ್ಬರೂ ಒಳಗೆ ಹೋದರು.

---

*ಓಶಾನಾ: ಒಂದು ಕ್ರಿಶ್ಚಿಯನ್ ಹಬ್ಬ.

ಆಗ ತಾನೆ ಜನಿಸಿದ ಒಂದು ಮಗುವಿನಂತೆ ಕುಞ್ಞಮ್ಮ ಲೋಕವನ್ನು ಕಾಣುತ್ತಿದ್ದಳು. ಎಷ್ಟೋ ರಾತ್ರಿ ಹಗಲುಗಳನ್ನು ಕಳೆದ ಅವಳ ಪುಟ್ಟ ಲೋಕವಾಗಿತ್ತದು. ಅದೇ ಗೇಟ್. ಅದೇ ಗೇಟ್‌ಮ್ಯಾನ್ ಅದೇ ಲಾನ್, ಅದೇ ವರಾಂಡ, ಅದೇ ವಿಸಿಟರ್ಸ್ ರೂಮ್.

ಕುಞ್ಞಮ್ಮ ಮೇರಿಯ ಮಂಚದ ಮೇಲೆ ಕುಳಿತಳು. ಅವಳು ಎಷ್ಟೋ ದಿನಗಳು ಮಲಗಿ ನಿದ್ದೆ ಮಾಡಿದ್ದ, ಎಚ್ಚರವಾಗಿ ಕಳೆದಿದ್ದ ಅವಳ ಮಂಚದ ಮೇಲೆ ಈಗ ಬೇರೊಬ್ಬಳು ಹೆಂಗಸು ಇದ್ದಳು. ರೂಮಿನೊಳಕ್ಕೆ ಇವರಿಬ್ಬರೂ ಪ್ರವೇಶಿಸಿದ ವಿಷಯವನ್ನು ತಿಳಿಯದ ಅವಳು ತನ್ನ ಪಾಡಿಗೆ ತಾನು ಕೀರ್ತನೆಗಳನ್ನು ಹಾಡುತ್ತಾ ಆನಂದ ಲಹರಿಯಲ್ಲಿ ಮುಳುಗಿ ಮೀಯುತ್ತಿದ್ದಳು.

ಕುಞ್ಞಮ್ಮ ಬುರ್ಖಾವನ್ನು ತೆಗೆದಿಟ್ಟಳು.

ಮೇರಿ ಕುಞ್ಞಮ್ಮಳನ್ನು ಆಪಾದಮಸ್ತಕ ದಿಟ್ಟಿಸಿ ನೋಡಿದಳು. ಕುಞ್ಞಮ್ಮ ತನ್ನ ತಲೆಯನ್ನು ಮುಂಡನ ಮಾಡಿಸಿಕೊಂಡಿದ್ದಾಳೆ. ಅವಳ ಕಣ್ಣುಗಳಲ್ಲಿ ಈಗ ಕಾಮದ ಪ್ರಕಾಶವಿಲ್ಲ. ಕುಞ್ಞಮ್ಮಳ ಬಿರಿದ ಆ ಕಣ್ಣುಗಳು ಈಗ ವಿಶ್ವವನ್ನು ನೋಡುತ್ತಲಿವೆ. ತುಟಿಗಳಲ್ಲಿ ಮುಗುಳು ನಗೆಯೋ, ಕುಚೇಷ್ಟೆಯ ನಗುವೋ ಇಲ್ಲ. ಮುಖವು ಸ್ವಲ್ಪ ಬಿಳಿಚಿಕೊಂಡಿತ್ತಷ್ಟೆ. ಶರೀರಕ್ಕೆ ದೊಡ್ಡ ಕ್ಷೀಣವೇನೂ ತೋರುತ್ತಿಲ್ಲವಾದರೂ ದೇಹಕ್ಕೆ ಒಟ್ಟಿನಲ್ಲಿ ದೊಡ್ಡ ಆಘಾತವಾದಂತಿದೆ. ಯಾವಾಗಲೂ ಉಬ್ಬಿ ಮುಂದಕ್ಕೆ ಚಾಚಿಕೊಂಡಿರುತ್ತಿದ್ದ ಅವಳ ಎದೆಯು ಈಗ ಚಪ್ಪಟೆಯಾದಂತಿತ್ತು.

"ಜೈಲುವಾಸ ಹೇಗಿತ್ತು ? ಬಹಳ ಕಷ್ಟವೆನಿಸಿತೆ ?" ಮೇರಿ ಕೇಳಿದಳು.

"ನಾನು ಅಲ್ಲಿ ಸುಖವಾಗಿದ್ದೆ" ಕಂಕುಳಲ್ಲಿದ್ದ ಕಾಗದಗಳ ಕಟ್ಟನ್ನು ಮಂಚದ ಮೇಲಿಡುತ್ತಾ ಕುಞ್ಞಮ್ಮ ಹೇಳಿದಳು.

"ಇದೇನು ಅಕ್ಕ ?" ಕಾಗದಗಳ ಕಂತೆಯನ್ನು ತೋರಿಸುತ್ತಾ ಮೇರಿ ಕೇಳಿದಳು.

"ನನ್ನ ಆತ್ಮಕಥೆ, ಜೈಲ್‌ನಲ್ಲಿ ನನ್ನ ಸಮಯ ನಾನು ಕಳೆದದ್ದೇ ಹೀಗೆ."

"ಬರೆದು ಮುಗಿಸಿಯಾಯಿತೇ ?"

"ಇಲ್ಲ ಮುಗಿದಿಲ್ಲ."

"ಇಷ್ಟು ದಿನಗಳಾದರೂ ?" ಮೇರಿ ಆಶ್ಚರ್ಯದಿಂದ ಕೇಳಿದಳು.

"ಇನ್ನೂ ನನ್ನ ಜೀವನವು ಉಳಿದಿದೆಯಲ್ಲಾ ? ನಡೆದು ಬಂದಿರುವ ದಾರಿಯನ್ನು ಬದಲಾಯಿಸಿ ಬಿಡಬೇಕೆಂದಿದ್ದೇನಲ್ಲವೆ ?"

"ಅಕ್ಕ, ಹೋಗಿ ಸ್ನಾನ ಮಾಡಿ ಬಾ. ಆಮೇಲೆ ನಾವು ಹೋಗಿ ಏನನ್ನಾದರೂ ತಿನ್ನೋಣ"

"ಸ್ನಾನವೇನೂ ಬೇಡ, ನನಗದೆಲ್ಲಾ ರೂಢಿಯಾಗಿ ಹೋಗಿದೆ. ಇನ್ನು ಅದನ್ನೆಲ್ಲಾ ರೂಢಿ ಮಾಡಿಕೊಳ್ಳಬೇಕಲ್ಲವೇ ?"

"ಅಕ್ಕ, ನೀನು ಇಲ್ಲಿಂದ ಹೋಗಿ ಎಷ್ಟು ದಿನಗಳಾದವು" ಥಟ್ಟನೆ ಮೇರಿ ಕೇಳಿದಳು.

"ದಿನಗಳೇನು ನನಗೆ ಜ್ಞಾಪಕವಿಲ್ಲ. ನಾನು ಲೆಕ್ಕ ಮಾಡುವುದನ್ನು ಮರೆತು ಬಹಳ ದಿನಗಳಾದವು" ಕುಞ್ಞಮ್ಮ ಹೇಳಿದಳು.

"ಜೀವನದಲ್ಲಿ ಒಂದು ನಿಮಿಷವು ಕಳೆಯಿತು. ಇನ್ನು ಒಂದು ನಿಮಿಷ ಉಳಿದಿದೆ."

ಸಣ್ಣಪುಟ್ಟ ಸಮಾಚಾರಗಳನ್ನು ಹೇಳುತ್ತಲಿರುವ ಕುಞ್ಞಮ್ಮಳನ್ನು ಮೇರಿ ಬಹಳ ಹೊತ್ತು ನೋಡಿದಳು.

"ಬಾ, ಮೊದಲು ನಾನು ಒಂದು ಸಲ ಮೇಟ್ರನ್‌ರವರನ್ನು ನೋಡಬೇಕು" ಕುಞ್ಞಮ್ಮ ಹೇಳಿದಳು.

ಮೇಟ್ರನ್‌ದ ಕೋಣೆಯನ್ನು ಅವರು ಪ್ರವೇಶಿಸಿ ನೋಡಿದಾಗ ಕುಞ್ಞಮ್ಮ ಆಶ್ಚರ್ಯಚಕಿತಳಾದಳು. ಮೇಟ್ರನ್ ಕುಳ್ಳಾದ ಹೆಂಗಸಾಗಿದ್ದರು. ಜೀರುಂಡೆ ಜಿರ್ರೆಂದು ಶಬ್ದ ಮಾಡುವಂತೆ ಮಾತನಾಡುವ ಮಿಸೆಸ್ ಜೋಸೆಫ್.

"ಓ, ನೀನು ಬಂದುಬಿಟ್ಟೆಯಾ? ನಿನ್ನ ಜೈಲ್‌ವಾಸ ಕಳೆಯಿತೇ?" ಮಿಸೆಸ್ ಜೊಸೇಫ್ ಕೇಳಿದರು.

ಆ ಕೋಣೆ ಒಟ್ಟಿನಲ್ಲಿ ಬದಲಾಗಿ ಹೋಗಿತ್ತು. ಹಳೆಯ ಪ್ರತಾಪ ಆರ್ಭಟಗಳ್ಯಾವುವೂ ಅಲ್ಲಿ ಕಾಣಿಸುತ್ತಿರಲಿಲ್ಲ. ಆ ಕೋಣೆಯು ಒಂದು ಹಳೆಯ ಸ್ಟೋರ್‌ರೂಮ್‌ನಂತಿದೆ.

"ಕುಞ್ಞಮ್ಮ ಒಂದು ಸಂತೋಷ ಸುದ್ದಿ. ನಿನ್ನನ್ನು ಮತ್ತೆ ಸರ್ವೀಸ್‌ನಲ್ಲಿ ತೆಗೆದುಕೊಳ್ಳಲು ಕಾಲೇಜ್ ಆಡಳಿತ ಸಮಿತಿಯು ತೀರ್ಮಾನಿಸಿದೆ. ಅವರು ನಿನ್ನನ್ನು ಕ್ಷಮಿಸಿದ್ದಾರೆ. ಕಂಗ್ರಾಚ್ಯುಲೇಷನ್ಸ್, ಕುಞ್ಞಮ್ಮ" ಮಿಸೆಸ್ ಜೋಸೆಫ್ ದೊಡ್ಡ ಒಂದು ಬಹುಮಾನವನ್ನು ನೀಡುತ್ತಿರುವಂತೆ ಹೇಳಿದಳು.

ಆದರೆ ಕುಞ್ಞಮ್ಮಳಲ್ಲಿ ಯಾವುದೇ ಭೇದಭಾವ ಕಾಣಿಸಲಿಲ್ಲ. ಅವಳು ಅಗಾಧವಾದ ಒಂದು ಚಿಂತೆಯಲ್ಲಿ ಮುಳುಗಿದ್ದಳು.

"ಏನು ಯೋಚನೆ ಮಾಡುತ್ತಿದ್ದೀ?" ಮಿಸೆಸ್ ಜೋಸೆಫ್ ಕೇಳಿದಳು.

"ಮೇಟ್ರನ್ ಹೆಲೆನ್ ಸಿಂಗ್ ಎಲ್ಲಿ?"

ಮಿಸೆಸ್ ಜೋಸೆಫ್ ಗಹಗಹಿಸಿ ನಕ್ಕರು. ಪರಿಹಾಸವೂ ಹಗೆಯೂ ಮಿಶ್ರಿತವಾದ ನಗೆಯಾಗಿತ್ತದು.

"ಆಕೆ ಬಹಳ ಆಟವಾಡಿದ್ರು, ಕುಞ್ಞಮ್ಮ. ಸುಂದರವಾದ ದೇಹವಿದ್ದರೆ ಏನು ಬೇಕಾದರೂ ಗಳಿಸಬಹುದೆಂದು ಆಕೆ ಬಯಸಿದರು. ಜೀವನದೊಂದಿಗೆ ಆಕೆ ಜೂಜಾಡಿದರು. ಮೊದ ಮೊದಲೇನೋ ಜಯ ಆಕೆಯದಾಯಿತು. ಆ ಶರೀರವನ್ನು ತಿನ್ನಲು ಬೇಕಾದಷ್ಟು ಹದ್ದುಗಳು ಬಂದವು. ಲೋಕವನ್ನು ಗೆದ್ದು ತಮ್ಮದಾಗಿಸಿ ಕೊಳ್ಳಲು ತಮ್ಮ ಆ ಕಣ್ಣುಗಳೇ ಸಾಕೆಂದು ಆಕೆ ಆಗಾಗ್ಗೆ ತಮ್ಮನ್ನು ತಾವೇ ಪ್ರಶಂಸಿಸಿಕೊಳ್ಳುತ್ತಿದ್ದುದು. ತಮ್ಮ ಕಣ್ಣಿನಲ್ಲಿ ಒಂದು ಸಾಮ್ರಾಜ್ಯವೇ ಅಡಗಿದೆಯೆಂದು ಆಕೆ ಯಾವಾಗಲೂ ಹೇಳುತ್ತಿದ್ದರು. ಕೊನೆಗೆ ಆ ಕಣ್ಣುಗಳು ಒಂದು ಸತ್ತ ಮೀನಿನ ಕಣ್ಣುಗಳಂತಾಗಿ ಹೋದವು.

"ಮೊದಲು ಆಕೆ ಮದ್ಯವನ್ನು ಸೇವಿಸತೊಡಗಿದರು. ಅನಂತರ ಮತ್ತುಬರುವ ಔಷಧಿಗಳನ್ನು ಸೇವಿಸತೊಡಗಿದರು. ಪೆತಡಿನ್‌ನ ದಾಸಿಯಾಗಿ ಆಕೆ ಅವನತಿ ಗೀಡಾದರು. ಆಸ್ಪತ್ರೆಯ ಅಡ್‌ಮಿನಿಸ್ಟ್ರೇಷನ್ ಒಟ್ಟಿನಲ್ಲಿ ತಕರಾರಿನಲ್ಲಾಯಿತು. ಮತ್ತೆ

ಬ್ರಿಗೇಡಿಯರ್ ತಡ ಮಾಡಲಿಲ್ಲ. ಒಂದು ದಿನ ಆಕೆ ಇಲ್ಲಿಂದ ಮೂಟೆ ಕಟ್ಟಿಕೊಂಡು ಹೋಗುವಂತೆ ಮಾಡಿದರು.

"ಕಾಲುಗಳಿಗೆ ಶಕ್ತಿ ಕಡಿಮೆಯಾಗಿ ಆಕೆ ಸಾವಧಾನದಿಂದ ಇಲ್ಲಿಂದ ಹೊರಟುಹೋದರು. ಈಗ ಆಕೆ ಯಾವುದೋ ಮಠದಲ್ಲಿ ಸನ್ಯಾಸಿನಿಯಾಗಿದ್ದಾರಂತೆ.

"ಆಟ ಮಿತಿಮೀರಿದರೆ ಹಾಗೇನೇ. ಅದರಲ್ಲೂ ಶರೀರದೊಂದಿಗೆ ಆಡಬಾರದು. ನನ್ನ ಈ ಶರೀರ ಸೀಳಿದ ಸೌದೆಯ ಕೊರಡಿನಂತಿದೆ. ನನ್ನನ್ನು ಒಬ್ಬ ಗಂಡಸೂ ತಿರುಗಿ ನೋಡುವುದಿಲ್ಲ. ಆದರೂ ನಾನು ಎಲ್ಲವನ್ನೂ ಸಂಪಾದಿಸಿಕೊಂಡೆ. ಸತ್ಯ, ನಿಸ್ವಾರ್ಥತೆ, ಕಠಿಣ ಪರಿಶ್ರಮ ಇವೇ ನನ್ನ ಬಂಡವಾಳವಾಗಿದ್ದವು.

"ಹೋಗಲಿ, ನೀನು ಯಾವಾಗ ಜಾಯಿನ್ ಆಗುತ್ತೀ ಹೇಳು ? ಸ್ಟಾಫ್‌ನ ಕೊರತೆ ಇದೆ."

"ಹೇಳುತ್ತೇನೆ ಮೇಡಂ, ನಾನೀಗ ಹೋಗಲೇ ?"

ಹೊರಕ್ಕಿಳಿದಾಗ ಕುಞ್ಞಮ್ಮ ಹೇಳಿದಳು.

"ಮೆಡಿಕಲ್ ಕಾಲೇಜಿಗೆ, ಆಸ್ಪತ್ರೆಗೆ ಒಂದು ಸಲ ಹೋಗಿ ಬರಬೇಕು. ನಾನು ಎಲ್ಲರನ್ನೂ ನೋಡಬೇಕು."

ಗೇಟ್ ಮ್ಯಾನ್ ಪ್ಯಾರೇಲಾಲ್‌ಗೆ ಕುಞ್ಞಮ್ಮಳ ಗುರುತು ಸಿಗಲಿಲ್ಲ. ಆದರೂ ಅವನು ಒಮ್ಮೆ ನಕ್ಕನು. ಅವನ ಆ ನಗುವಿನಲ್ಲಿ ಸೌಹಾರ್ದವೂ ಪರಿಚಯವೂ ಕಾಣದಿದ್ದಾಗ ಕುಞ್ಞಮ್ಮ ಕೇಳಿದಳು.

"ನಾನು ಯಾರೆಂದು ಗೊತ್ತಾಗಲಿಲ್ಲವೇ, ಪ್ಯಾರೇಲಾಲ್ ? ನಾನೇ ನಿನ್ನ ಸಿಸ್ಟರ್, ಕುಞ್ಞಮ್ಮ."

ಪ್ಯಾರೇಲಾಲ್ ಆಶ್ಚರ್ಯ ತುಂಬಿದ ಕಣ್ಣುಗಳಿಂದ ಕುಞ್ಞಮ್ಮಳನ್ನು ನೋಡಿದನು. ಏನೋ ಹೇಳಲು ನೋಡಿದನು. ಮಾತುಗಳು ಹೊರಬೀಳುವುದಕ್ಕಿಂತ ಮುಂಚೆಯೇ ಕುಞ್ಞಮ್ಮ ಮುಂದೆ ನಡೆದಳು.

ಅವರು ಮೊದಲು ಅನಾಟಮಿ ಡಿಪ್ಪಾರ್ಟ್‌ಮೆಂಟಿಗೆ ಹೋದರು.

ಹೆಣಗಳ ಟ್ಯಾಂಕ್‌ನಲ್ಲಿದ್ದ ಶವಗಳು ಈಜಾಡುತ್ತಿವೆ. ಸೋನನೂ ಅವನ ಜೊತೆಗಾರನೂ ಕೊಳದಲ್ಲಿ ಮರದ ದಿಮ್ಮಿಗಳನ್ನು ಕದಲಿಸುವಂತೆ ಶವಗಳನ್ನು ಟ್ಯಾಂಕ್‌ನಲ್ಲಿ ಕದಲಿಸುತ್ತಿದ್ದಾರೆ. ಫಾರ್ಮಲ್‌ನ ವಾಸನೆಯು ಗಾಳಿಯಲ್ಲಿ ಹರಡಿದೆ. ನಾಸಾ ರಂಧ್ರಗಳು ಹೊಗೆಯಾಡುತ್ತಿವೆ.

ಡಾಕ್ಟರ್ ಕುಮಾರ್ ಗ್ರೇಸ್ ಬರೆದ ಅನಾಟಮಿಯ ಮುಂದೆ ಪ್ರಣಾಮ ಮಾಡುತ್ತಾ ಕುಳಿತಿದ್ದರು. ಅವರ ತಲೆ ಇನ್ನಷ್ಟು ನೆರೆತಿತ್ತು. ಮುಖವು ಪ್ರಸನ್ನವಾಗಿದೆ. ಆ ಕೋಣೆಯ ಮೂಲೆಯಲ್ಲಿ ಡಾಕ್ಟರ್ ಹಸನ್‌ರ ಅಸ್ಥಿಪಂಜರವು ವಿಭ್ರಾಂತಿಯಿಂದ ನೇತಾಡುತ್ತಿತ್ತು. ತಲೆಬುರುಡೆಯಲ್ಲಿನ ಕಣ್ಣುಗಳಲ್ಲಿ ಗಂಧಕದ ಪ್ರಕಾಶವು ಸ್ಪಷ್ಟವಾಗಿದೆ.

ಅವರು ಕಾರಿಡಾರ್‌ಗೆ ಬಂದರು.

ರೋಗಿಗಳ ಪ್ರವಾಹಕ್ಕೆದುರಾಗಿ ಅವರು ನಡೆದರು. ಮಿಸ್ಟರ್ ಆಚಾರಿಯ ಕೋಣೆಯು ಖಾಲಿಯಾಗಿಯೇ ಇತ್ತು. ಒಂದು ಅಶರೀರವಾಣಿಯಂತೆ ಗಜಲ್‌ಗಳು

ಅದರೊಳಗಿಂದ ಮೊಳಗುತ್ತಿರುವಂತಿತ್ತು. ಆಚಾರಿಯವರಿಗೆ ಬದಲಾಗಿ ಇನ್ನೂ ಯಾರೂ ಬಂದಿಲ್ಲ. ಅವರಂತಹ ಒಬ್ಬರು ಬೇಕೆಂದು ಬ್ರಿಗೇಡಿಯರ್ ಪ್ರಯತ್ನಿಸುತ್ತಿದ್ದಾರೆ.

ಗರ್ಭಿಣಿಯರ ಆಕ್ರಂದನಗಳೂ, ಆಕ್ರೋಶಗಳೂ ಕೇಳಿಬರುತ್ತಿವೆ. ಅವುಗಳ ಮಧ್ಯೆ ಡಾಕ್ಟರ್ ತನುಜರ ಸಮಾಧಾನದ ಮಾತುಗಳನ್ನು ಕುಞ್ಞಮ್ಮ ಕೇಳಿದಳು.

ಡಾಕ್ಟರ್ ಕ್ವಾಜರ ಧ್ವನಿ ಮಾತ್ರ ಕೇಳಿಸಲಿಲ್ಲ.

"ಏನಾದರು ?" ಕುಞಮ್ಮ ಕೇಳಿದಳು.

"ಅವರು ಲಂಡನ್‌ಗೆ ವಾಪಸ್ ಹೊರಟುಹೋದರು. ಅವರಿಗೆ ಬ್ರಿಗೇಡಿಯರ್‌ರೊಂದಿಗೆ ಹೊಂದಿಕೊಂಡು ಹೋಗಲು ಸಾಧ್ಯವಾಗಲಿಲ್ಲ. ಇನ್ನು ಅವರು ವಾಪಸ್ ಬರುವುದಿಲ್ಲವೆಂದೇ ಕೇಳಿದ್ದು. ಮೆಡಿಕೋಗಳಿಗೆ ಬಹಳ ನಷ್ಟವನ್ನುಂಟು ಮಾಡಲೆಂದೇ ಅವರನ್ನು ಕಳಿಸಿದಂತೆ. ಕೆಲ ಮೆಡಿಕೋಗಳು ನಿರಾಹಾರ ಸಮರದವರೆಗೂ ತಮ್ಮ ಪ್ರತಿರೋಧವನ್ನು ಪ್ರಕಟಿಸಲೆತ್ನಿಸಿದರು. ಆದರೆ ಡಾಕ್ಟರ್ ಕ್ವಾಜ ನಮ್ಮ ದೇಶವನ್ನೇ ಬಿಟ್ಟುಹೋದರು."

"ಸರಿ ನಾವು ಹೋಗೋಣ" ನೋಡಿ ನೋಡಿ ಬೇಜಾರಾದಂತೆ ಕುಞ್ಞಮ್ಮ ಹೇಳಿದಳು.

ಮೈನ್‌ಗೇಟ್ ದಾಟಿ ಮುಖ್ಯ ರಸ್ತೆಯನ್ನು ಹಿಂದೆ ಹಾಕಿ ಪಶ್ಚಿಮ ದಿಕ್ಕಿಗೆ ಹೋಗುವ ರಸ್ತೆಯಲ್ಲಿ ಅವರು ನಡೆಯತೊಡಗಿದರು.

"ಬಾ, ನಾವು ಹಾಸ್ಟೆಲ್‌ಗೆ ಹೋಗೋಣ" ಮೇರಿ ಹೇಳಿದಳು.

"ಇಲ್ಲ ತಂಗಿ, ಇಲ್ಲ, ಎಲ್ಲಾ ನೋಡಿಯಾಯಿತಲ್ಲ, ಇನ್ನು ನನಗೆ ಸಮಯವಿಲ್ಲ. ನನಗೆ ಟ್ರೈನ್‌ಗೆ ಸಮಯವಾಯಿತು. ನಾನಿನ್ನು ಹೊರಡುತ್ತೇನೆ."

ಇದೇನು ಕಥೆ ಎನ್ನುವಂತೆ ಮೇರಿ ಮಿಕಮಿಕ ನೋಡುತ್ತಾ ನಿಂತಾಗ ಕುಞ್ಞಮ್ಮ ಹೇಳಿದಳು.

"ನಾನು ಬದರೀನಾಥ್‌ಗೆ ಹೋಗುತ್ತಿದ್ದೇನೆ. ಇನ್ನು ನನ್ನ ಶೇಷಜೀವಿತವನ್ನು ಅಲ್ಲೇ ಕಳೆಯುತ್ತೇನೆ. ಅಲ್ಲೇ ಅನಂತರ ನಾನು ನನ್ನ ಆತ್ಮಕಥೆಯನ್ನು ಮುಂದುವರಿಸುತ್ತೇನೆ. ಮುಂದಿನ ನಿಮಿಷದ ಆತ್ಮಕಥೆ."

"ನಾನೂ ಬರುತ್ತೇನೆ."

"ಎಲ್ಲಿಗೆ ? ಬದರೀನಾಥ್‌ಗೇನು ?"

"ಅಲ್ಲ. ರೈಲ್ವೆ ಸ್ಟೇಷನ್‌ಗೆ."

"ಸರಿ."

ರೈಲ್ವೆ ಸ್ಟೇಷನ್‌ನಲ್ಲಿ ಜನಜಂಗುಳಿ ಕಡಿಮೆಯಿತ್ತು. ಟ್ರೈನ್ ಬರಲು ಇನ್ನೂ ಸಮಯವಿತ್ತು. ಆ ವಿರಾಮ ವೇಳೆಯಲ್ಲಿ ದೇವದಾಸ್ ಲಕ್ಷ್ಮಿಯ ಕಥೆ ಮೇರಿ ಹೇಳುತ್ತಿದ್ದಳು. ಅದನ್ನು ಕೇಳಿ ಕುಞ್ಞಮ್ಮಳ ಕಣ್ಣುಗಳು ನೆನೆದು ಹೋದುವು.

ದೀರ್ಘವಾಗಿ ರೋಧಿಸುವಂತೆ ಟ್ರೈನ್ ಜೋರಾಗಿ ಸಿಳ್ಳೆ ಹಾಕುತ್ತಾ ಬಂದು ನಿಂತಿತು.

ನಿಶ್ಚಿತವಾದುದನ್ನು ಅನಿಶ್ಚಯದತ್ತ ಬಿಟ್ಟುಕೊಂಡು ಟ್ರೈನ್ ಹೊರಟಿತು.

ಕುಞ್ಞಮ್ಮಳ ಕೈ ಮರೆಯಾಗುವವರೆಗೂ ಮೇರಿ ನೋಡುತ್ತಾ ನಿಂತಳು. ಕೊನೆಗೊಂದು ಕಪ್ಪು ಚುಕ್ಕೆಯಂತೆ ಟ್ರೈನ್ ಅದೃಶ್ಯವಾಯಿತು.

ಮೇರಿಯ ಹೃದಯವು ಕರಗಿ ನೀರಾಯಿತು.

ಸಂಜೆಗತ್ತಲು ಆವರಿಸಿಕೊಳ್ಳುತ್ತಿತ್ತು.

ಯಾವಾಗಲೂ ಇರುವುದಕ್ಕಿಂತ ಸ್ಟೇಷನ್ ಪರಿಸರವು ಅಂದು ಸ್ವಲ್ಪ ಶಾಂತವಾಗಿರುವಂತಿತ್ತು.

ಮೇರಿ ಸ್ಟೇಷನ್‌ನಿಂದ ಹೊರಬಂದಳು.

ಕ್ಯಾಂಪಸ್‌ಗೆ ಬಂದಾಗ ಹಾಸ್ಟೆಲ್‌ಗೆ ಹಿಂದಿರುಗಲು ಮೇರಿಗೆ ಮನಸ್ಸು ಬರಲಿಲ್ಲ. ಮೇರಿ ರೇಡಿಯಾಲಜಿ ಡಿಪಾರ್ಟ್‌ಮೆಂಟ್‌ನ ಎದುರಿನಿಂದ ಮೋರ್ಚರಿಯನ್ನು ದಾಟುತ್ತಿದ್ದಾಗ ಮೋರ್ಚರಿಯ ಎದುರಿಗೆ ಜನರ ಚಿಕ್ಕ ಗುಂಪೊಂದನ್ನು ಕಂಡಳು.

ಮೋರ್ಚರಿಯಲ್ಲಿ ಒಂದು ಶವವು ಅಲುಗಾಡುತ್ತಿದೆಯಂತೆ. ಹೌದು, ಅದು ಸತ್ತಿಲ್ಲ. ಅದನ್ನು ಹೊರಕ್ಕೆ ತೆಗೆಯುವ ಗಲಾಟೆಯಲ್ಲಿ ಜನರ ಗುಂಪು ತೊಡಗಿತ್ತು.

"ರಕ್ಷಿಸಲ್ಪಟ್ಟಿದ್ದು ಆಶ್ಚರ್ಯವೇ. ಪಾದಚಾರಿಯು ನೋಡದೇ ಇದ್ದಿದ್ದರೆ ಮುಗಿದೇ ಹೋಗುತ್ತಿತ್ತು."

"ಅದೃಷ್ಟವಂತ."

"ಎರಡನೆಯ ಜನ್ಮ ಎತ್ತಿದಂತಾಯಿತು ಅವನಿಗೆ"

ಗಿಜಿಗಿಜಿ ಗುಟ್ಟುತ್ತಿರುವ ಜನರ ಗುಂಪಿನ ಮಧ್ಯೆ ಮೋರ್ಚರಿಯ ಹಿಂಭಾಗದ ಕಪ್ಪು ಕಲ್ಲಿನ ಮೆಟ್ಟಲುಗಳನ್ನಿಳಿದು ಮೇರಿಯು ಯಮುನಾನದಿಯ ದಡಕ್ಕೆ ಬಂದಳು.

ಮರಳಿನ ಮೇಲೆ ನಡೆದುಹೋಗುತ್ತಿರಬೇಕಾದರೆ ಮೇರಿ ಯಾವುದೋ ಬೂದಿಯ ರಾಶಿಯ ಮೇಲೆ ಕಾಲಿಟ್ಟಳು. ಆ ಬೂದಿ ಆಚಾರಿಯ ಚಿತಾಭಸ್ಮವಾಗಿತ್ತು. ಆಚಾರಿಯ ಭೌತಿಕಾದೇಹದ ಭಸ್ಮವಾಗಿತ್ತು. ಅದು ಆಚಾರಿಯನ್ನು ದಹಿಸಿದ್ದ ಸ್ಥಳವೆಂದು ಗೊತ್ತಾಗಿದ್ದರೆ ಮೇರಿಯ ಕಾಲುಗಳು ಖಂಡಿತ ಸುಟ್ಟು ಭಸ್ಮ ವಾಗುತ್ತಿದ್ದವು. ಆ ವಾಸ್ತವವನ್ನು ತಿಳಿಯದ ಅವಳು ಕಾಲುಗಳನ್ನು ಒಂದಾದ ಮೇಲೊಂದರಂತೆ ಆ ಬೂದಿಯಲ್ಲಿ ಊದುತ್ತಾ ನಡೆಯುತ್ತಿದ್ದಳು.

ಕಾಲುಗಳಡಿಯಲ್ಲಿ ಸಿಕ್ಕಿಕೊಂಡ ಚಿತಾಭಸ್ಮವನ್ನು ಮರಳಿನಲ್ಲಿ ಒದರುತ್ತಾ ಅವಳು ಮುಂದೆ ನಡೆದಳು.

ಶೀತಲವಾದ ಒಂದು ತಂಗಾಳಿ ಬೀಸುತ್ತಿತ್ತು.

ನದಿ ಕಪ್ಪಗೆ ಹರಿಯುತ್ತಿತ್ತು. ಒಂದು ಚಿಕ್ಕ ಹಡಗು ಅಲ್ಲಿ ಲಂಗರು ಹಾಕಲ್ಪಟ್ಟು ನಿಂತಿತ್ತು. ಅದರ ದೀಪಗಳು ಧಗಧಗನೆ ಉರಿಯುತ್ತಿದ್ದವು. ಹಡಗಿನ ಪ್ರಕಾಶವು ನೀರಿನಲ್ಲಿ ಮಂಕಾಗಿ ಪ್ರತಿಬಿಂಬಿಸುತ್ತಿತ್ತು. ದೂರದಲ್ಲಿದ್ದ ಸಣ್ಣ ದೋಣಿಗಳಲ್ಲಿ ಮಿನುಗುತ್ತಿರುವ ಲ್ಯಾಂಟೀನ್ ದೀಪಗಳು ಮಿಣುಕು ಹುಳುಗಳಂತೆ ತೋರಿದವು.

ಮೇರಿ ನದಿಯನ್ನು ಮತ್ತೆ ಸೂಕ್ಷ್ಮವಾಗಿ ದಿಟ್ಟಿಸಿ ನೋಡಿದಳು. ಅವಳ ತುಟಿಗಳು ಕಂಪಿಸಿದವು. ಅವಳು ಮೆಲ್ಲನೆ ಹೆಜ್ಜೆ ಹಾಕುತ್ತಾ ನೀರಿನ ಬಳಿ ಬಂದಳು. ನೀರಿನ ಅಲೆಗಳು ನಿಧಾನವಾಗಿ ಅವಳ ಪಾದಗಳ ಮಧ್ಯೆ ಪ್ರವಹಿಸಿ ಆಡುತ್ತಿದ್ದವು.

ಮೇರಿ ನದಿಯೊಂದಿಗೆ ಮಾತ್ರವೆಂಬಂತೆ ಏನನ್ನೋ ಮೆಲ್ಲನೆ ಹೇಳಿದಳು. ಅವಳು

ಇನ್ನೂ ಸ್ವಲ್ಪ ನದಿಯಲ್ಲಿಳಿದಳು. ಅವಳು ನದಿಯ ನೀರನ್ನು ಮುಟ್ಟಲು ಬಗ್ಗಿದಳು. ಎರಡು ಕೈಗಳಲ್ಲಿ ನೀರನ್ನು ತೆಗೆದುಕೊಂಡು ಅವಳು ತನ್ನ ಮುಖಕ್ಕೆ ಎರಚಿಕೊಂಡಳು. ಅವಳ ಮೈ ಜುಮ್ಮೆಂದಿತು. ಅನಂತರ ಒಂದು ಬೊಗಸೆ ನೀರನ್ನು ತೆಗೆದುಕೊಂಡು ಅವಳು ಕುಳಿತಳು.

ಕತ್ತಲಾಗುತ್ತಿತ್ತು. ಕಾರ್ಮೋಡಗಳು ನದಿಯನ್ನು ಮುಟ್ಟುವಂತೆ ಬಾಗುತ್ತಿದ್ದವು. ಜಲಚರಗಳು ತಮ್ಮ ತಮ್ಮ ಬಿಲದೊಳಕ್ಕೆ ಹೋಗಿ ರಕ್ಷಣೆ ಪಡೆಯುತ್ತಿದ್ದವು.

ಮೇರಿ ಮತ್ತೆಯೂ ದಡದತ್ತ ನಡೆದಳು. ಮರಳಿನ ಹರವಿನಲ್ಲಿ ಅವಳು ನಡೆಯಲಾರಂಭಿಸಿದಳು.

ಕುಞ್ಞಮ್ಮ ಮಗುವನ್ನು ಹೆತ್ತು ಮಲಗಿದ್ದ ಮರಳಿನ ಮೇಲೆ ಮೇರಿ ಕುಳಿತಳು.

ನದಿಯ ಗಾಳಿ ಭರ್ರನೆ ಬೀಸಿದಾಗ ಅದರಲ್ಲಿ ಕುಞ್ಞಮ್ಮಳ ವಾಸನೆ ತುಂಬಿದಂತಿತ್ತು.

ಇದ್ದಕ್ಕಿದ್ದಂತೆ ಆಗತಾನೇ ಹುಟ್ಟಿದ ಒಂದು ಮಗುವಿನ ಅಳುವು ಅವಳಿಗೆ ಕೇಳಿಸಿದಂತಾಯಿತು. ಆ ಅಳು ಅತಿ ಸನಿಹದಿಂದಲೇ ಕೇಳಿಬರುತ್ತಿತ್ತು. ಆ ನಸುಗತ್ತಲೆಯಲ್ಲಿ ಮೇರಿ ಮಗುವನ್ನು ತಡಕಾಡಲು ಆರಂಭಿಸಿದಳು. ಆಗ ಅಕಸ್ಮಾತ್ತಾಗಿ ಅವಳ ಕೈಗಳು ಎಳೆಯ ಬಿಸಿಯಿರುವ ಮೃದುವಾದ ಒಂದು ಪುಟ್ಟ ಶರೀರದ ಮೇಲೆ ಬಿದ್ದವು.

ಹೌದು, ಅದು ಆಗತಾನೇ ಹುಟ್ಟಿದ ಒಂದು ಮಗುವಾಗಿತ್ತು.

ಆವೇಶದೊಂದಿಗೂ, ವಾತ್ಸಲ್ಯದೊಂದಿಗೂ ಮೇರಿ ಆ ಮಗುವನ್ನೆತ್ತಿ ತನ್ನ ಮಡಿಲಲ್ಲಿ ಮಲಗಿಸಿಕೊಂಡಳು.

ಮೇರಿ ನದಿಗಭಿಮುಖವಾಗಿ ಕುಳಿತು ತನ್ನ ಕುಪ್ಪಸದ ಗುಂಡಿಗಳನ್ನು ಬಿಚ್ಚಿದಳು. ಮಾಂಸಲವಾದ, ಅಂದವಾದ ಅವಳ ಮೊಲೆಗಳಿಗೆ ತೇವ ಮಿಶ್ರಿತವಾದ ಗಾಳಿ ತಾಕಿತು. ಅವು ಇನ್ನಷ್ಟು ವಿಜೃಂಭಿಸಿದವು.

ಮಗುವನ್ನು ಎದೆಗಪ್ಪಿಕೊಂಡು ವಯಲೆಟ್ ಬಣ್ಣದ ತನ್ನ ಮೊಲೆತೊಟ್ಟನ್ನು ಮಗುವಿನ ಬಾಯಿಯೊಳಕ್ಕೆ ತುರುಕಿದ ಮೇರಿ ತನ್ನ ತಲೆ ಬಗ್ಗಿಸಿ ಆ ಪುಟ್ಟಮಗುವಿನ ಕಣ್ಣುಗಳನ್ನು ವಿಸ್ಮಯದಿಂದ ದಿಟ್ಟಿಸಿ ನೋಡತೊಡಗಿದಳು.

ಯಮುನಾನದಿಯು ಅದನ್ನೇ ನೋಡುತ್ತಾ ನಿಟ್ಟುಸಿರಿಡುವಂತೆ ಹರಿಯ ತೊಡಗಿತ್ತು.

Printed at Shivam Offset Press, A-12/1 Naraina Indl. Area, Phase-I, New Delhi-110 028